# ಕರ್ನಾಟಕದಲ್ಲಿ ಭಾಷಾಯೋಜನೆ ಮತ್ತು ಭಾಷಾನೀತಿ : ಸಮಸ್ಯೆ ಮತ್ತು ಸಾಧ್ಯತೆಗಳು

ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕ
ಮಂಜುನಾಥ ಕೆ.ಆರ್.

ಮಾರ್ಗದರ್ಶಕರು
ಡಾ|| ಅಶೋಕ ಕುಮಾರ ರಂಜೇರೆ
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ



ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೧೫

# ಕರ್ನಾಟಕದಲ್ಲಿ ಭಾಷಾಯೋಜನೆ ಮತ್ತು ಭಾಷಾನೀತಿ : ಸಮಸ್ಯೆ ಮತ್ತು ಸಾಧ್ಯತೆಗಳು

ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕ
ಮಂಜುನಾಥ ಕೆ.ಆರ್.



ಮಾರ್ಗದರ್ಶಕರು
ಡಾ|| ಅಶೋಕ ಕುಮಾರ ರಂಜೇರೆ
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ




ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೧೫

<u>ಪ್ರಮಾಣಪತ್ರ</u>

**ಕರ್ನಾಟಕದಲ್ಲಿ ಭಾಷಾಯೋಜನೆ ಮತ್ತು ಭಾಷಾನೀತಿ : ಸಮಸ್ಯೆ ಮತ್ತು ಸಾಧ್ಯತೆಗಳು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ॥ ಅಶೋಕ ಕುಮಾರ ರಂಜೇರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಭಾಷಾನಿಕಾಯದ ಕನ್ನಡ ಭಾಷಾಧ್ಯಯನ ವಿಭಾಗದ ಮೂಲಕ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 29.12.2015

(ಮಂಜುನಾಥ ಕೆ.ಆರ್)
ಸಂಶೋಧಕ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ದೃಢೀಕರಣ ಪತ್ರ

ಶ್ರೀ ಮಂಜುನಾಥ ಕೆ.ಆರ್. ಇವರು **ಕರ್ನಾಟಕದಲ್ಲಿ ಭಾಷಾಯೋಜನೆ ಮತ್ತು ಭಾಷಾನೀತಿ : ಸಮಸ್ಯೆ ಮತ್ತು ಸಾಧ್ಯತೆಗಳು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಭಾಷಾನಿಕಾಯದ ಕನ್ನಡ ಭಾಷಾಧ್ಯಯನ ವಿಭಾಗದ ಮೂಲಕ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೯-೧೨-೨೦೧೧

**(ಡಾ॥ ಅಶೋಕ ಕುಮಾರ ರಂಜೇರೆ)**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

# ಅಧ್ಯಾಯ-೧

## ಪ್ರಸ್ತಾವನೆ

೧.೧ ಸಮುದಾಯದ ಉಸಿರು ಭಾಷೆ

೧.೨ ಬಹುಭಾಷಿಕ ಪರಿಸರ ಮತ್ತು ಭಾಷಾಸಮಸ್ಯೆ

೧.೩ ಜಾಗತಿಕ ಪ್ರಪಂಚದ ಉಗಮ ಮತ್ತು ಭಾಷೆ

೧.೪ ಭಾಷಾಯೋಜನೆ ಮತ್ತು ಭಾಷಾನೀತಿ: ಸ್ವರೂಪ ಮತ್ತು ಸಮಸ್ಯೆಗಳು

೧.೫ ಭಾಷೆಗಳ ನಾಶ: ಮಾನವನ ಜನಾಂಗಕ್ಕೆ ನಷ್ಟ

೧.೬ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ

## ಅಧ್ಯಾಯ-೧

# ಪ್ರಸ್ತಾವನೆ

### ೧.೧ ಸಮುದಾಯದ ಉಸಿರು ಭಾಷೆ

ಭಾಷೆ ಎಂಬುದಕ್ಕೆ ಸ್ಟುರ್ಟೆವಾಂಟ್, ಬ್ಲಾಕ್ ಮತ್ತು ಟ್ರೇಗರ್ ಮುಂತಾದ ವಿದ್ವಾಂಸರ ಒಂದು ಸೂತ್ರವು ಬಹುಜನರ ಮೆಚ್ಚುಗೆಯನ್ನು ಪಡೆದಿರುವುದಲ್ಲದೆ ಉಳಿದ ಸೂತ್ರಗಳಿಗಿಂತ ಹೆಚ್ಚು ಸಮರ್ಪಕವಾಗಿದೆ. "ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ಸಂವಹನಕ್ಕಾಗಿ ಬಳಸುವ ಯಾದೃಚ್ಛಿಕ ಧ್ವನಿಸಂಕೇತಗಳ ವ್ಯವಸ್ಥೆಯೇ ಭಾಷೆ"[೧] ಎನ್ನುತ್ತಾರೆ ಎಂ. ಚಿದಾನಂದಮೂರ್ತಿರವರು. ಈ ಪ್ರಕಾರ ಒಂದು ಸಮುದಾಯದ ಜನರು ತಮ್ಮ ಅನಿಸಿಕೆ, ಅಭಿಪ್ರಾಯ, ಅನುಭವಗಳನ್ನು ಧ್ವನಿಗಳ ಮೂಲಕ ವ್ಯಕ್ತಪಡಿಸಲು ಇರುವ ಒಂದು ಸಂವಹನ ಮಾಧ್ಯಮ ಭಾಷೆ. ಸಂವಹನದ ಸಂದರ್ಭದಲ್ಲಿ ವ್ಯಕ್ತಗೊಳ್ಳುವ ಧ್ವನಿ ಮತ್ತು ಆ ಧ್ವನಿಗಳು ಕೊಡುವ ಅರ್ಥ ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿದೆ. "ಈ ಭಿನ್ನತೆಯನ್ನು ಕಾಯ್ದುಕೊಳ್ಳಲು ಅನುಕೂಲವಾಗುವ ರೀತಿಯಲ್ಲಿ ಪ್ರಾಕೃತಿಕ ಸನ್ನಿವೇಶಗಳು ನಿರ್ಮಾಣವಾಗಿವೆ. ನದಿಗಳು, ಬೆಟ್ಟಗಳು, ದ್ವೀಪಗಳು, ಕಣಿವೆಗಳು, ಭಿನ್ನಸ್ತರದ ನೆಲೆಗಳು ಜನಸಮುದಾಯಗಳು ತಂತಮ್ಮ ಸೀಮಿತ ಸ್ವಯಂಪೂರ್ಣ ಪರಿಸರದಲ್ಲಿ ತಮ್ಮ ಜೀವನ ಕ್ರಮಗಳನ್ನು ರೂಪಿಸಿಕೊಳ್ಳುವ ಒತ್ತಾಯಗಳನ್ನು ರೂಪಿಸಿವೆ. ಅವರ ಭಾಷೆಗಳು ಈ ಸ್ವಯಂಪೂರ್ಣತೆ ಮತ್ತು ಪರಿಸರ ಬದ್ಧತೆಗಳನ್ನು ಬಿಂಬಿಸುವ ರೀತಿಯಲ್ಲಿ ಬೆಳೆದಿವೆ. ಹೀಗಾಗಿ ಜೀವವೈವಿಧ್ಯಕ್ಕೂ ಭಾಷಾವೈವಿಧ್ಯಕ್ಕೂ ನಿಕಟವಾದ ಬಿಡಿಸಲಾಗದ ನಂಟು ರೂಪುಗೊಂಡಿದೆ."[೨] ಹೀಗಾಗಿ ಭಾಷೆಗಳ ನಡುವೆ ಉಚ್ಚಾರಣೆ, ಅರ್ಥಗಳಲ್ಲಿ ಭೇದ ಕಾಣಿಸಿಕೊಂಡು ಹೊಸ ಭಾಷೆಗಳು ರೂಪುಗೊಂಡಿವೆ.

ಭಾಷೆಗಳು ಹೊಸದಾಗಿ ರೂಪುತಳೆದಾಗ ಅವು ಆ ಸಮುದಾಯಗಳ ಜನರು ತಮ್ಮ ಭಾವನೆ, ಅಭಿಪ್ರಾಯ, ಅನುಭವಗಳನ್ನು ಧ್ವನಿಗಳ ಮೂಲಕ ವ್ಯಕ್ತಪಡಿಸಲು ಇದ್ದ ಒಂದು ಸಂವಹನ ಮಾಧ್ಯಮ ಮಾತ್ರ ಆಗಿದ್ದಿರಬಹುದು. ಆದರೆ ಮನುಷ್ಯ ಬೌದ್ಧಿಕವಾಗಿ, ಭೌತಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಅಭಿವೃದ್ಧಿಯಾದಂತೆಲ್ಲ ಅವನು ಬಳಸುವ ಭಾಷೆ ಬದಲಾಗುತ್ತಾ ಬಂದಿದೆ. ಏಕೆಂದರೆ ಭಾಷೆ ಆ ಭಾಷೆಯನ್ನಾಡುವ ಜನರ ಕಲೆ, ಸಾಹಿತ್ಯ, ಸಂಗೀತ, ನೃತ್ಯ, ವಾಸ್ತುಶಿಲ್ಪ, ವಿಜ್ಞಾನ, ನಂಬಿಕೆಗಳು, ಆಚರಣೆ, ಸಂಪ್ರದಾಯ, ವಿಧಿವಿಧಾನ, ಶಿಕ್ಷಣ, ಉದ್ಯೋಗ, ಕ್ರೀಡೆ, ಜೀವನಶೈಲಿ, ಅರಿವು, ತಿಳುವಳಿಕೆ, ಬದುಕಿನಕ್ರಮ ಇತ್ಯಾದಿಗಳನ್ನು ಒಳಗೊಂಡು ರೂಪುಗೊಂಡಿದೆ. ಹೀಗಾಗಿ ಭಾಷೆ ಮತ್ತು ಆ ಭಾಷೆಯನ್ನಾಡುವ ಜನರ ನಡುವಿನ ಸಂಬಂಧ ಮೇಲೆ ಹೇಳಿದ ಹಾಗೆ ಸಂವಹನಕ್ಕೆ ಮಾತ್ರ ಸೀಮಿತಗೊಂಡಿಲ್ಲ. ಅದು ಮತ್ತಷ್ಟು ಮುಂದುವರಿದು ಆ ಭಾಷೆಯನ್ನಾಡುವ ಜನರ ಸಮಸ್ತ ಸಂಸ್ಕೃತಿಯನ್ನು, ಜೀವಂತಿಕೆಯನ್ನು ಪ್ರತಿನಿಧಿಸುವ ಶಕ್ತಿಯಾಗಿದೆ. ಆದುದರಿಂದ ಭಾಷೆ ಸಂಸ್ಕೃತಿ ವಾಹಕವಾಗಿಯೂ ಕೆಲಸ ಮಾಡುತ್ತಿದೆ. ಜೊತೆಗೆ "ಭಾಷೆ ಒಂದು ಮಾಧ್ಯಮ, ಒಂದು ಅಸ್ತ್ರ, ಅದರ ಸಹಾಯದೊಂದಿಗೆ ಜನತೆ ತಮ್ಮತಮ್ಮಲ್ಲೇ ಸಂಪರ್ಕಿಸುತ್ತಾರೆ, ಚಿಂತನೆಗಳ ವಿನಿಮಯ ನಡೆಸುತ್ತಾರೆ ಹಾಗೂ ಒಬ್ಬರನ್ನೊಬ್ಬರು ಅರಿತುಕೊಳ್ಳುತ್ತಾರೆ. ಭಾಷೆ ಚಿಂತನಾ

ಸಂಪರ್ಕ ಮಾಧ್ಯಮ ಅಷ್ಟೇ ಅಲ್ಲ. ಅದು ಚಿಂತನೆಯ ವಾಹಕವೂ ಹೌದು. ಮಾನವ ಶೂನ್ಯತೆಯಲ್ಲಿ ಯೋಚಿಸುವುದಿಲ್ಲ. ಅವನು ಭಾಷೆಯ ಸಹಾಯದಿಂದಲೇ ಯೋಚಿಸುತ್ತಾನೆ. ಮಾನವನ ಮನಸ್ಸಿನಲ್ಲಿ ಏನೇ ಚಿಂತನೆಗಳು ಉದ್ಭವಿಸಿದರೂ ಅವೆಲ್ಲವೂ ಭಾಷಾ ಸಾಮಗ್ರಿ, ಶಬ್ದಭಂಡಾರ ಹಾಗೂ ವಾಕ್ಸರಣಿಗಳ ಆಧಾರದಲ್ಲೇ ಉದ್ಭವಿಸುತ್ತವೆ ಮತ್ತು ಉಳಿಯುತ್ತವೆ. ಭಾಷಾ ಸಾಮಗ್ರಿಯಿಂದ ಸ್ವತಂತ್ರವಾದ ಬರಿ ಚಿಂತನೆಯ ಅಸ್ತಿತ್ವ ಅಸಾಧ್ಯ. ಭಾಷೆ ಚಿಂತನೆಯ ನೇರವಾದ ವಾಸ್ತವಿಕತೆ."[೩]

ಹೀಗಾಗಿ ಮನುಷ್ಯರಲ್ಲಿ ಏನೇ ಚಿಂತನೆಗಳು ಉದ್ಭವಿಸಿದರೂ ಅವು ಭಾಷೆಯ ಮೂಲಕವೇ ಉದ್ಭವಿಸುತ್ತವೆ ಮತ್ತು ವ್ಯಕ್ತಗೊಳ್ಳುತ್ತವೆ. ಭಾಷೆಯಿಲ್ಲದೆ ಯಾವ ಚಿಂತನೆಗಳು, ಆಲೋಚನಾ ಕ್ರಮಗಳು ಬೆಳೆಯುವುದಿಲ್ಲ. ಭಾಷೆ "ಮನುಷ್ಯರ ಒಂದು ವಿಶೇಷವಾದ ಮಾನಸಿಕ ಸಾಮರ್ಥ್ಯ. ಇದು ಸಂವಹನದ ಸಾಧ್ಯತೆಯನ್ನು ಮೀರಿದ ಸಾಮರ್ಥ್ಯ. ಮಾನವರ ಇಂತಹ ವಿಶೇಷವಾದ ಸಾಮರ್ಥ್ಯ (ಸಂವಹನರೂಪಿಯಾದ ಭಾಷೆ) ಇಲ್ಲದಿದ್ದರೆ ಬಹುಶಃ ಮಾನವ ಸಮುದಾಯವೂ ಪ್ರಾಣಿ ಸಮುದಾಯಗಳಂತೆ ಜೀವಿಸಬೇಕಿತ್ತೇನೋ? ಅಂತಹ ಚೈತನ್ಯ ಇರದಿದ್ದರೆ ಮಾನವ ಸಮುದಾಯ ಈವರಗೆ ಸಾಧಿಸಿರುವ ಭೌತಿಕ, ಬೌದ್ಧಿಕ ಸಾಧನೆಗಳೆಲ್ಲವು ಶೂನ್ಯವಾಗಿರುತ್ತಿದ್ದವೇನೋ? ಈ ಪ್ರಶ್ನೆಗಳು ಏನೇ ಇರಲಿ, ಇಂದು ಭಾಷೆಯೆಂಬುದು ಮಾನವ ಸಮಾಜದ ಸ್ವಾಭಾವಿಕ ಕ್ರಿಯೆ. ಉಸಿರಾಟದಷ್ಟು ಸಹಜವಾಗಿದೆ."[೪] ಇದು ಒಬ್ಬಬ್ಬರಿಗೂ ಒಂದೊಂದು ರೀತಿಯಲ್ಲಿ ಬಳಕೆಯಾಗುತ್ತಿದೆ. "ಶರೀರವಿಜ್ಞಾನಿಗೆ 'ಅರ್ಥವನ್ನು ರವಾನಿಸುವ ನಿರ್ದಿಷ್ಟ ಶಬ್ದ ಘಟಕಗಳಿಂದ ಕೂಡಿದ ಜೈವಿಕ ಸಾಧನ'. ಪುರಾತತ್ವಶಾಸ್ತ್ರಜ್ಞನಿಗೆ ಅದು 'ಸಾಂಸ್ಕೃತಿಕವಾಗಿ ಅಂತರ್ಗತವಾದ ಲಕ್ಷಣ'. ಸಮಾಜವಿಜ್ಞಾನಿಗೆ ಅದು 'ಕಲ್ಪನೆಗಳು, ಅರಿವು, ಭಾವನೆಗಳು, ಸಂಸ್ಕೃತಿ ಪ್ರಸಾರದ ಮಾಧ್ಯಮ. ಅದು ಸಂಪರ್ಕದ ಮಾಧ್ಯಮ, ಸಾಮಾಜಿಕ ಕೊಂಡಿ. ಅದು ವ್ಯಕ್ತಿಯ ವ್ಯಕ್ತಿತ್ವ ಮತ್ತು ಸಂಸ್ಕೃತಿಯನ್ನು ಬಿಂಬಿಸುತ್ತದೆ'. ಚಿಂತನೆಯನ್ನು ಕೃತಿಗಿಳಿಸಲು ಭಾಷೆಯೇ ಮಾಧ್ಯಮ."[೫] ಹೀಗಾಗಿ ಭಾಷೆಯನ್ನು ಬಿಟ್ಟು ಆ ಭಾಷೆಯನ್ನಾಡುವ ಜನರ ಇತಿಹಾಸ, ಅಭಿವೃದ್ಧಿ ಮತ್ತು ಶ್ರೀಮಂತಿಕೆಯನ್ನು ಗುರುತಿಸುವುದು ಕಷ್ಟ. ಆದುದರಿಂದ ಭಾಷೆ ಒಂದು ಸಮುದಾಯದ ಜನರ ಇತಿಹಾಸ, ಶ್ರೀಮಂತಿಕೆ, ಅಸ್ತಿತ್ವವನ್ನು ನಿರ್ಧರಿಸುವ ಶಕ್ತಿ ಹಾಗೂ ಉಸಿರು.

**೧.೨ ಬಹುಭಾಷಿಕ ಪರಿಸರ ಮತ್ತು ಭಾಷಾಸಮಸ್ಯೆ**

ಒಂದೇ ಭೂಪ್ರದೇಶದಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನಾಡುವ ಜನರು ವಾಸಿಸುತ್ತಿದ್ದರೆ ಅದನ್ನು ಬಹುಭಾಷಿಕ ಪರಿಸರ ಎಂದು ಕರೆಯುತ್ತೇವೆ. ಹೊಸ ಭೂಪ್ರದೇಶಗಳ ಅನ್ವೇಷಣೆ, ಕೈಗಾರಿಕೆಗಳ ಅಭಿವೃದ್ಧಿ, ವ್ಯಾಪಾರ, ಉದ್ಯೋಗ, ಶಿಕ್ಷಣ ಹಾಗೂ ವಿವಾಹ-ಸಂಬಂಧ ಇತ್ಯಾದಿಗಳ ಕಾರಣದಿಂದಾಗಿ ಹತ್ತೊಂಭತ್ತನೇ ಶತಮಾನದ ನಂತರ ಜನರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಿ ನೆಲೆನಿಲ್ಲುವುದು ಹೆಚ್ಚಾಗಿದೆ. ಇದರಿಂದಾಗಿ ಹತ್ತೊಂಭತ್ತನೇ ಶತಮಾನದ ನಂತರ ಏಕಭಾಷಿಕ ಪ್ರದೇಶಗಳು ಬಹುಭಾಷಿಕ ಪ್ರದೇಶಗಳಾಗಿ ಬದಲಾಗಿವೆ. ಬಹುಭಾಷಿಕ ಪ್ರದೇಶದಲ್ಲಿ ಆ ಪ್ರದೇಶದ ಎಲ್ಲಾ ಭಾಷೆಗಳನ್ನು ಸಮನಾಗಿ ಬಳಸದೆ ಕೆಲವು ಭಾಷೆಗಳು ಹೆಚ್ಚಾಗಿಯು ಮತ್ತು ಕೆಲವು ಭಾಷೆಗಳು ಕಡಿಮೆಯಾಗಿಯು ಬಳಸಲಾಗುತ್ತಿದೆ. ಇದಕ್ಕೆ ರಾಜಕೀಯವಾದ,

ಆರ್ಥಿಕವಾದ, ಸಾಮಾಜಿಕವಾದ, ಧಾರ್ಮಿಕವಾದ, ತಾಂತ್ರಿಕವಾದ ಬೇರೆಬೇರೆ ಕಾರಣಗಳು ಇವೆ. ಇವುಗಳನ್ನು ಈ ಪ್ರಬಂಧದ ಮುಂದಿನ ಅಧ್ಯಾಯಗಳಲ್ಲಿ ಅಗತ್ಯಕ್ಕೆ ಅನುಗುಣವಾಗಿ ಬಳಸಿಕೊಂಡು ಚರ್ಚಿಸಲಾಗಿದೆ.

ಬಹುಭಾಷಿಕ ಪರಿಸರದಲ್ಲಿ ಕೆಲವು ಭಾಷೆ ಅಥವಾ ಭಾಷೆಗಳನ್ನು ಹೆಚ್ಚಾಗಿ ಮತ್ತು ಕೆಲವು ಭಾಷೆ ಅಥವಾ ಭಾಷೆಗಳನ್ನು ಕಡಿಮೆಯಾಗಿ ಬಳಸುವುದರ ಹಿಂದಿರುವ ಕಾರಣಗಳು ಏನೇ ಆದರೂ ಭಾಷೆಗಳ ಬಳಕೆ ಕಡಿಮೆಯಾಗುವುದರಿಂದ ಭಾಷೆಗಳು ತಮ್ಮ ಅಸ್ತಿತ್ವ ಕಳೆದುಕೊಳ್ಳುತ್ತವೆ. ಅಲ್ಲದೆ ಬಹುಭಾಷಿಕ ಪ್ರದೇಶದಲ್ಲಿ ಹೆಚ್ಚಾಗಿ ಬಳಕೆಯಾಗುವ ಭಾಷೆ ಅಥವಾ ಭಾಷೆಗಳು ಮೇಲರಿಮೆಗೆ ಒಳಗಾಗಿವೆ. ಹಾಗೆಯೇ ಆ ಭಾಷೆಗಳನ್ನಾಡುವ ಜನರು ಮೇಲರಿಮೆಗೆ ಒಳಗಾಗಿದ್ದಾರೆ. ಇದೇ ರೀತಿಯಲ್ಲಿ ಕಡಿಮೆ ಬಳಕೆ ಆಗುವ ಭಾಷೆ ಅಥವಾ ಭಾಷೆಗಳು ಮತ್ತು ಈ ಭಾಷೆಗಳನ್ನಾಡುವ ಜನರು ಕೀಳರಿಮೆಗೆ ಒಳಗಾಗಿದ್ದಾರೆ. ಈ ತರತಮಗಳು ಭಾಷಿಕ ವಿಚಾರಕ್ಕೆ ಮಾತ್ರ ಸೀಮಿತವಾಗಿಲ್ಲ. ಇವು ಮತ್ತಷ್ಟು ಮುಂದುವರಿದು ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ, ಸಾಂಸ್ಕೃತಿಕ ಆಯಾಮ ಪಡೆದಿವೆ. ಹೀಗಾಗಿ ಬಹುಭಾಷಿಕ ಪ್ರದೇಶದಲ್ಲಿ ಕೀಳರಿಮೆಗೆ ಒಳಗಾಗಿರುವ ಜನರು ತಮ್ಮ ಮಾತೃಭಾಷೆ, ಮಾತೃಸಂಸ್ಕೃತಿಯನ್ನು ಕಲಿತು, ಬಳಸುವುದು ಮತ್ತು ಆಚರಿಸುವುದಕ್ಕಿಂತ ಆ ಪ್ರದೇಶದ ಮೇಲರಿಮೆಗೆ ಒಳಗಾಗಿರುವ ಭಾಷೆ ಅಥವಾ ಭಾಷೆಗಳನ್ನು ಕಲಿತು, ಬಳಸುವುದರ ಕಡೆಗೆ ಆಸಕ್ತಿ ವಹಿಸಿದ್ದಾರೆ. ಆ ಮೂಲಕ ಕೀಳರಿಮೆಗೆ ಒಳಗಾಗಿರುವ ಜನರು ಈ ಕೀಳರಿಮೆಯಿಂದ ಹೊರಬರಲು ಪ್ರಯತ್ನಿಸಿದ್ದಾರೆ. ಈ ಪ್ರಕ್ರಿಯೆ ಈಗಲೂ ಚಾಲ್ತಿಯಲ್ಲಿದೆ. ಹೀಗಾಗಿ ಬಹುಭಾಷಿಕ ಪರಿಸರದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ ಪ್ರಬಲವಲ್ಲದ ಭಾಷಿಕ ಸಮುದಾಯಗಳು ತಮ್ಮ ಅಸ್ತಿತ್ವ ಕಳೆದುಕೊಳ್ಳುವ ಭೀತಿ ಎದುರಿಸುತ್ತಿವೆ.

ಏಕೆಂದರೆ ಯಾವ ಭಾಷೆಗಳು ಜನರ ದಿನನಿತ್ಯದ ಬದುಕಿನಲ್ಲಿ ಹೆಚ್ಚು ಬಳಕೆಗೊಳ್ಳುವುದಿಲ್ಲವೋ ಆ ಭಾಷೆಗಳು ಜೀವಂತವಾಗಿ ಉಳಿಯುವುದು ಕಷ್ಟ. ಭಾಷೆಗಳು ಜೀವಂತಿಕೆಯನ್ನು ಕಳೆದುಕೊಂಡರೆ ಆ ಭಾಷೆಯನ್ನಾಡುವ ಜನರ ಸಮಸ್ತ ವಿಶೇಷತೆಗಳು ನಾಶ ಹೊಂದುತ್ತವೆ. ಹೀಗಾಗಿ ಇಂದು ಜಗತ್ತಿನ ಎಲ್ಲಾ ಭಾಷಿಕ ಸಮುದಾಯಗಳಿಗು ತಮ್ಮ ಸಮುದಾಯದ ಸಮಸ್ತ ವಿಶೇಷತೆಗಳನ್ನು ಪ್ರತಿನಿಧಿಸುವ ಮಾತೃಭಾಷೆಯನ್ನು ಜೀವಂತವಾಗಿ ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಜನಸಮುದಾಯಗಳು ಇವೆ. ಆದರೆ ಒಂದು ಭಾಷೆಯನ್ನು ಜೀವಂತವಾಗಿ ಉಳಿಸಿಕೊಳ್ಳಬೇಕಾದರೆ ಆ ಭಾಷೆ ಸಂವಹನ ಮತ್ತು ಬರವಣಿಗೆ ಎರಡು ರೂಪಗಳಲ್ಲಿ ಬಳಕೆಗೊಳ್ಳುತ್ತಿರಬೇಕು. ಸಂವಹನದಲ್ಲಿ ಬಳಕೆಯಲ್ಲಿದ್ದು ಬರವಣಿಗೆಯಲ್ಲಿ ಬಳಕೆಯಲ್ಲಿಲ್ಲದಿದ್ದರೆ ಅಥವಾ ಬರವಣಿಗೆಯಲ್ಲಿ ಬಳಕೆಯಲ್ಲಿದ್ದು ಸಂವಹನದಲ್ಲಿ ಬಳಕೆಯಲ್ಲಿಲ್ಲದಿದ್ದರೆ ಭಾಷೆ ಉಳಿಯುವುದು ಕಷ್ಟ. ಏಕೆಂದರೆ ಕೇವಲ ಸಂವಹನ ರೂಪದಲ್ಲಿದ್ದ ಹಲವಾರು ಬುಡಕಟ್ಟು ಭಾಷೆಗಳು ಮತ್ತು ಬರವಣಿಗೆಯಲ್ಲಿದ್ದು ಸಂವಹನ ರೂಪ ಕಳೆದುಕೊಂಡ ಸಂಸ್ಕೃತ ಮೃತಭಾಷೆಗಳ ಪಟ್ಟಿ ಸೇರಿರುವುದನ್ನು ನಾವಿಲ್ಲಿ ಗಮನಿಸಬಹುದು. ಹೀಗಾಗಿ ಭಾಷೆಯ

ಮಹತ್ವವನ್ನು ಅರಿತಿರುವ ಜಗತ್ತಿನ ಎಲ್ಲಾ ಭಾಷಿಕ ಸಮುದಾಯಗಳು ಇಂದು ತಮ್ಮ ಭಾಷೆಗಳನ್ನು ಸಂವಹನ ಮತ್ತು ಬರವಣಿಗೆ ಎರಡೂ ರೂಪಗಳಲ್ಲಿ ಅಭಿವೃದ್ಧಿಪಡಿಸಿಕೊಳ್ಳುವ ಪ್ರಯತ್ನದಲ್ಲಿವೆ.

ಬಹುಭಾಷಿಕ ಪರಿಸರದಲ್ಲಿ ಭಾಷಿಕ ಸಮುದಾಯಗಳು ಮಾಡುವ ಇಂತಹ ಪ್ರಯತ್ನಗಳು ಭಾಷಿಕ ಸೇರಿದಂತೆ ಇತರ ಬಿಕ್ಕಟ್ಟುಗಳ ಸೃಷ್ಟಿಗೆ ಕಾರಣವಾಗಿದೆ. ಹೇಗೆಂದರೆ ಒಂದೇ ಭೂಪ್ರದೇಶದಲ್ಲಿ ಹಲವು ಭಾಷಿಕರು ವಾಸಿಸುತ್ತಿದ್ದಾಗ ಪರಸ್ಪರ ಸಂಪರ್ಕ, ಸಂಬಂಧಗಳು ಏರ್ಪಡುವುದು ಸಹಜ. ಇಂತಹ ಸಂದರ್ಭದಲ್ಲಿ ಪರಸ್ಪರರು ಸಂವಹನಕ್ಕಾಗಿ ಭಾಷೆಯನ್ನು ಬಳಸಬೇಕಾಗುತ್ತದೆ. ಏಕಕಾಲದಲ್ಲಿ ಎರಡೂ ಭಾಷಿಕರು ಒಂದೇ ಉದ್ದೇಶಕ್ಕಾಗಿ ತಮ್ಮ ತಮ್ಮ ಭಾಷೆಗಳನ್ನು ಬಳಸಲು ಸಾಧ್ಯವಿಲ್ಲ. ಆಗ ಆ ಇಬ್ಬರು ಭಾಷಿಕರ ಭಾಷೆಯಲ್ಲಿ ಒಂದು ಭಾಷೆ ಮಾತ್ರ ಬಳಕೆಯಾಗುತ್ತದೆ. ಆ ಭಾಷೆಯು ಸಂವಹನದ ಸಂದರ್ಭದಲ್ಲಿ ಭಾಗವಹಿಸಿರುವ ಆ ಇಬ್ಬರು ವ್ಯಕ್ತಿಗಳ ಭಾಷಾಸಾಮರ್ಥ್ಯದ ಮೇಲೆ ನಿರ್ಧರಿತವಾಗಿದೆ. ಅದು ಆ ಇಬ್ಬರು ವ್ಯಕ್ತಿಗಳು ಬಹಳ ಸುಲಭವಾಗಿ ವ್ಯವಹರಿಸಲು ಸಾಧ್ಯವಾಗುವಂತಹ ಭಾಷೆಯಾಗಿದೆ. ಆದರೆ ಬಹುಭಾಷಿಕ ಪ್ರದೇಶದಲ್ಲಿ ಭಾಷಿಕ ಸಮುದಾಯಗಳ ಜನರಿಗೆ ಸಂವಹನ ಸಂದರ್ಭದಲ್ಲಿ ಇರುವ ಈ ಭಾಷಾಆಯ್ಕೆಯ ಸ್ವಾತಂತ್ರ್ಯ ಆಡಳಿತ, ಶಿಕ್ಷಣ, ಉದ್ಯೋಗ ಸೇರಿದಂತೆ ಇತರ ಕ್ಷೇತ್ರಗಳಲ್ಲಿ ಭಾಷೆಯನ್ನು ಬಳಸುವಾಗ ಇಲ್ಲ. ಏಕೆಂದರೆ ಈ ಎಲ್ಲಾ ಕ್ಷೇತ್ರಗಳಲ್ಲಿ ಬಳಕೆಯಾಗುವ ಭಾಷೆಯನ್ನು ನಿರ್ಧರಿಸುವುದು ಆ ಪ್ರದೇಶದ ಸಾಮಾನ್ಯ ಜನರಲ್ಲ. ಬದಲಾಗಿ ಆ ಪ್ರದೇಶದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ ಪ್ರಭುತ್ವ ಹೊಂದಿರುವ ವರ್ಗ.

ಇದು ಯಾವಾಗಲೂ ತನ್ನ ಪರವಾಗಿಯೇ ಇರುತ್ತದೆ. ತನ್ನ ಆಡಳಿತದ ವ್ಯಾಪ್ತಿಗೆ ಒಳಪಡುವ ಜನಸಮುದಾಯಗಳ ಭಾಷೆಗಳಿಗೆ ಸಾಧ್ಯವಾದಷ್ಟು ಸಮಾನ ಅವಕಾಶ ಕಲ್ಪಿಸಿಕೊಡಬಹುದಾದ ಅವಕಾಶ ಇದ್ದಾಗಲು ಅದಕ್ಕೆ ಅವಕಾಶ ಮಾಡಿಕೊಡುವುದಿಲ್ಲ. ಬದಲಾಗಿ ತನ್ನ ಸಮುದಾಯದ ಭಾಷೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಕಲೆ, ಸಂಗೀತ,, ಜೀವನಕ್ರಮಗಳ ಬಳಕೆಗೆ ಪೂರಕವಾದ ನೀತಿಗಳನ್ನು ರೂಪಿಸಿಕೊಳ್ಳುತ್ತದೆ. ಹೀಗೆ ರೂಪಿಸಿಕೊಳ್ಳುವಾಗ ಆ ಪ್ರದೇಶದ ಇತರ ಭಾಷಾಸಮುದಾಯಗಳ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಅಂತಹದೇ ಅವಕಾಶಗಳನ್ನು ಕಲ್ಪಿಸಿಕೊಡದೇ ಇರುವುದಕ್ಕೆ ತನ್ನದೇ ಆದ ಸಮರ್ಥನೆಗಳನ್ನು ನೀಡಿದೆ. ಇದರಲ್ಲಿ ಮುಖ್ಯವಾಗಿ ಭಾಷೆಯ ವಿಚಾರಕ್ಕೆ ಸಂಬಂಧಿಸಿದಂತೆ ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯ, ಬ್ಯಾಂಕು, ಪತ್ರಿಕೋದ್ಯಮ ಮುಂತಾದ ಕ್ಷೇತ್ರಗಳಲ್ಲಿ ಒಂದು ಭಾಷೆಯನ್ನು ಬಳಸಬೇಕಾದರೆ ಆ ಭಾಷೆ ಬರಹದ ರೂಪ ಪಡೆದಿರಬೇಕು. ಆ ಭಾಷೆಯನ್ನಾಡುವ ಜನರು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತರಾಗಿರಬೇಕು. ಜೊತೆಗೆ ಒಂದು ನಿರ್ದಿಷ್ಟ ಸಂಖ್ಯೆಯ ಜನರು ಒಂದು ಸೀಮಿತ ಪ್ರದೇಶದಲ್ಲಿ ವಾಸಿಸುತ್ತಿರಬೇಕು ಎಂಬ ಅಂಶಗಳು ಸೇರಿವೆ. ಆದರೆ ಬಹುಭಾಷಿಕ ಪ್ರದೇಶದಲ್ಲಿ ಬಳಕೆಯಾಗುತ್ತಿರುವ ಎಲ್ಲಾ ಭಾಷೆಗಳಿಗೆ ಬರಹದ ರೂಪ ಇಲ್ಲ. ಎಲ್ಲಾ ಜನಸಮುದಾಯಗಳು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತವಾಗಿಲ್ಲ. ಒಂದು ನಿರ್ದಿಷ್ಟ ಸಂಖ್ಯೆಯ ಜನರು ಸೀಮಿತ ಪ್ರದೇಶದಲ್ಲಿ

ನೆಲೆನಿಂತಿಲ್ಲ. ವಿವಿಧ ಉದ್ದೇಶಗಳಿಗಾಗಿ ಚದುರಿ ಹೋಗಿದ್ದಾರೆ. ಆದರೂ ಬಹುಭಾಷಿಕ ಪ್ರದೇಶದಲ್ಲಿ ಕೆಲವು ಭಾಷೆ ಅಥವಾ ಭಾಷೆಗಳಿಗೆ ಮಾತ್ರ ಅಧಿಕೃತ ಭಾಷೆಯ ಸ್ಥಾನ ನೀಡಿಲಾಗಿದೆ.

ಹೀಗಾಗಿ ಬಹುಭಾಷಿಕ ಪ್ರದೇಶದಲ್ಲಿ ಅಧಿಕೃತ ಭಾಷೆಯ ಸ್ಥಾನ ಪಡೆದಿರುವ ಭಾಷೆ ಅಥವಾ ಭಾಷೆಗಳು ಮಾತ್ರ ಆ ಪ್ರದೇಶದ ಆಡಳಿತ, ಶಿಕ್ಷಣದ, ನ್ಯಾಯಾಲಯ, ಉದ್ಯೋಗ ಸೇರಿದಂತೆ ಇತರ ಎಲ್ಲಾ ಕ್ಷೇತ್ರಗಳಲ್ಲಿ ಬಳಕೆಯಾಗುವ ಅವಕಾಶ ಪಡೆದಿವೆ. ಯಾವ ಭಾಷೆ ಅಥವಾ ಭಾಷೆಗಳು ಒಂದು ಪ್ರದೇಶದಲ್ಲಿ ಅಧಿಕೃತ ಭಾಷೆಯ ಸ್ಥಾನ ಪಡೆದಿಲ್ಲವೋ ಆ ಭಾಷೆ ಅಥವಾ ಭಾಷೆಗಳು ಮೇಲೆ ಪ್ರಸ್ತಾಪಿಸಲಾಗಿರುವ ಕ್ಷೇತ್ರಗಳಲ್ಲಿ ಬಳಕೆಯಾಗುವುದರಿಂದ ವಂಚಿತವಾಗಿವೆ. ಇದರಿಂದಾಗಿ ಬಹುಭಾಷಿಕ ಪ್ರದೇಶದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಖಿಕವಾಗಿ, ಸಾಹಿತ್ಯಕವಾಗಿ ಪ್ರಬಲವಾಗಿರುವ ಸಮುದಾಯಗಳ ಭಾಷೆಗೆ ಮಾತ್ರ ಪ್ರಾಧಾನ್ಯತೆ ಲಭ್ಯವಾಗಿದೆ. ಇದರಿಂದಾಗಿ ಬಹುಭಾಷಿಕ ಪ್ರದೇಶದಲ್ಲಿ ಪ್ರಬಲ ಸಮುದಾಯಗಳ ಭಾಷೆಯ ಕಲಿಕೆ ಮತ್ತು ಬಳಕೆಯ ವ್ಯಾಪ್ತಿ ವಿಸ್ತರಿಸಿದ್ದರೆ, ಪ್ರಬಲವಲ್ಲದ ಸಮುದಾಯಗಳ ಭಾಷೆಗಳ ಕಲಿಕೆ ಮತ್ತು ಬಳಕೆಯ ವ್ಯಾಪ್ತಿ ಆ ಸಮುದಾಯಗಳ ಜನಸಂಖ್ಯೆಯ ಬೆಳವಣಿಗೆಯ ಪ್ರಮಾಣದೊಂದಿಗೆ ಲೆಕ್ಕಹಾಕಿದರೆ ಕುಸಿದಿದೆ. ಹೀಗಾಗಿ ಬಹುಭಾಷಿಕ ಪ್ರದೇಶದಲ್ಲಿ ಭಾಷಾಸಮುದಾಯಗಳ ನಡುವೆ ಮೇಲು–ಕೀಳು, ಶ್ರೇಷ್ಟ–ಕನಿಷ್ಟ, ಪ್ರಬಲ ಮತ್ತು ದುರ್ಬಲ ಎಂಬ ಭಾವನೆ ಬೆಳೆದಿದೆ. ಭಾಷಿಕ ಸಮುದಾಯಗಳಿಗೆ ಈ ಪ್ರಬಲ ಮತ್ತು ದುರ್ಬಲ ಎನ್ನುವ ಭಾವನೆ ತಂತಾನೆ ಒದಗಿ ಬಂದಿರುವುದಲ್ಲ. ಅದು ಭಾಷಿಕ ಸಮುದಾಯಗಳ ಜನಸಂಖ್ಯೆ, ಆ ಪ್ರದೇಶದಲ್ಲಿ ಆ ಭಾಷೆಯನ್ನಾಡುವ ಜನರು ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ ಕ್ಷೇತ್ರಗಳಲ್ಲಿ ನಿರ್ವಹಿಸುವ ಪಾತ್ರ, ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿ, ವಿಜ್ಞಾನ, ಕ್ರೀಡೆ ಇತ್ಯಾದಿ ಕ್ಷೇತ್ರಗಳಲ್ಲಿ ಸಾಧಿಸಿರುವ ಪ್ರಗತಿ ಮತ್ತು ಅಭಿವೃದ್ಧಿಯ ಆಧಾರದಲ್ಲಿ ಒದಗಿದೆ.

ಇದರಿಂದಾಗಿ ಬಹುಭಾಷಿಕ ಪರಿಸರದಲ್ಲಿ ಬಳಕೆಯಲ್ಲಿರುವ ಭಾಷೆಗಳ ನಡುವಿನ ಭಾಷಾಶಕ್ತಿಯಲ್ಲಿ ವ್ಯತ್ಯಾಸ ಉಂಟಾಗಿದೆ. ಹಾಗೂ ದುರ್ಬಲ ಎಂದು ಹಣೆಪಟ್ಟಿ ಹೊತ್ತಿರುವ ಭಾಷಾಸಮುದಾಯಗಳು ಒಂದು ಕಡೆ ತಮ್ಮ ಮಾತೃಭಾಷೆ ರಕ್ಷಿಸಿಕೊಳ್ಳಬೇಕಾದ ಮತ್ತೊಂದು ಕಡೆ ಅನ್ಯಭಾಷೆಯನ್ನು ಕಲಿಯಬೇಕಾದ ಒತ್ತಡಕ್ಕೆ ಒಳಗಾಗಿವೆ. ಏಕೆಂದರೆ ಈಗಾಗಲೇ ಚರ್ಚಿಸಿರುವ ಹಾಗೆ ಮಾತೃಭಾಷೆ ಆ ಸಮುದಾಯದ ಶಕ್ತಿ ಮತ್ತು ಉಸಿರು. ಅದನ್ನು ಕಲಿಯದೆ, ಬಳಸದೆ ಇದ್ದರೆ ಭಾಷೆ ನಶಿಸುತ್ತದೆ. ಭಾಷೆ ನಶಿಸಿದರೆ ಆ ಸಮುದಾಯದ ಸಮಸ್ತ ವಿಶೇಷತೆಗಳು ಮರೆಯಾಗಿ ಹೋಗುತ್ತವೆ. ಹೀಗಾಗಿ ಮಾತೃಭಾಷೆಗಳನ್ನು ಕಲಿಸುವುದಕ್ಕೆ ಪೂರಕವಾದ ನಿಯಮಗಳನ್ನು ತಂದು ಅದಕ್ಕೆ ವ್ಯವಸ್ಥೆ ಮಾಡುವಂತೆ ಸರ್ಕಾರಗಳ ಒತ್ತಡ ಹೇರಿವೆ. ಆದರೆ ಆ ಪ್ರದೇಶಗಳ ಪ್ರಬಲ ಭಾಷಿಕ ಸಮುದಾಯಗಳು ಮತ್ತೊಂದು ಕಡೆಗೆ ಈಗಾಗಲೇ ಚರ್ಚಿಸಿರುವ ಕಾರಣಗಳಿಂದಾಗಿ ಬಹುಭಾಷಿಕ ಪ್ರದೇಶಗಳಲ್ಲಿ ಎಲ್ಲಾ ಭಾಷೆಗಳನ್ನು ಕಲಿಸುವುದಕ್ಕೆ, ಬಳಸುವುದಕ್ಕೆ ಅವಕಾಶ ಕಲ್ಪಿಸಲು ಸಾಧ್ಯವಿಲ್ಲವೆಂದು ತಮ್ಮ ಭಾಷೆಯಲ್ಲಿ ಮಾತ್ರ ಕಲಿಸಬೇಕು ಎಂದು ಅಲ್ಪಸಂಖ್ಯಾತರ ಭಾಷೆಗಳಲ್ಲಿ ಕಲಿಸುವುದಕ್ಕೆ ವಿರೋಧ ವ್ಯಕ್ತಪಡಿಸಿವೆ. ಸರ್ಕಾರಗಳು ಬೇರೆಬೇರೆ ಕಾರಣಗಳಿಂದಾಗಿ ಇವುಗಳ ಕಲಿಕೆ

ಮತ್ತು ಬಳಕೆಗೆ ಸರ್ಕಾರಗಳು ಪೂರಕ ವ್ಯವಸ್ಥೆ ಕಲ್ಪಿಸಿಲ್ಲ. ಹೀಗಾಗಿ ಮಾತೃಭಾಷೆಯಲ್ಲಿ ಕಲಿತರೆ ಆಧುನಿಕ ಜಗತ್ತಿನಲ್ಲಿ ಬದುಕು ಕಟ್ಟಿಕೊಳ್ಳುವುದು ಅಸಾಧ್ಯ ಮತ್ತು ನಾವು ಕೀಳರಿಮೆಗೆ ಒಳಗಾಗುತ್ತೇವೆ ಎಂಬ ಭಯ ಜನರನ್ನು ಕಾಡಿದೆ. ಈಗಲೂ ಕಾಡುತ್ತಿದೆ. ಇದರಿಂದಾಗಿ ಬಹುಭಾಷಿಕ ಪ್ರದೇಶಗಳಲ್ಲಿ ಪ್ರಬಲವಲ್ಲದ ಭಾಷಿಕ ಸಮುದಾಯಗಳ ಜನರು ಅನಿವಾರ್ಯವಾಗಿ ಆ ಪ್ರದೇಶದ ಪ್ರಬಲಭಾಷಿಕ ಸಮುದಾಯಗಳ ಜನರ ಭಾಷೆ ಅಥವಾ ಭಾಷೆಗಳನ್ನು ಕಲಿಯುತ್ತಿದ್ದಾರೆ. ತಮ್ಮ ಬದುಕಿಗಾಗಿ ಪ್ರಬಲವಲ್ಲದ ಸಮುದಾಯಗಳ ಜನರು ಕಲಿಯುವುದು ಅನಿವಾರ್ಯವೂ ಆಗಿದೆ. ಇದರಿಂದ ಪ್ರಬಲವಲ್ಲದ ಸನುದಾಯಗಳ ಜನರು ಎರಡು ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಒಂದು ತಮ್ಮ ಮಾತೃಭಾಷೆಗಳ ಕಲಿಕೆ ಮತ್ತು ಬಳಕೆಯಿಂದ ದೂರ ಸರಿಯುತ್ತಿರುವುದು. ಎರಡು ಅನ್ಯಭಾಷೆಯ ಕಲಿಕೆ ಮತ್ತು ಬಳಕೆಯ ಒತ್ತಡಗಳು.

ಸಾಮಾನ್ಯವಾಗಿ ಯಾವುದೇ ಒಬ್ಬ ವ್ಯಕ್ತಿ ಒಂದು ಭಾಷೆಯನ್ನು ಕಲಿಯಬೇಕಾದರೆ ಅದಕ್ಕೆ ಪೂರಕ ಭಾಷಾಪರಿಸರ ಇರಬೇಕಾಗುತ್ತದೆ. ಅದರಲ್ಲೂ ಎರಡು ಅಥವಾ ಅದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುವಾಗ ಇದರ ಅಗತ್ಯತೆ ಹೆಚ್ಚಾಗಿರುತ್ತದೆ. ಆದರೆ ಭಾರತದಲ್ಲಿ ಇಲ್ಲಿನ ಅಗತ್ಯಗಳಿಗೆ ಅನುಗುಣವಾಗಿ ಭಾಷೆಗಳನ್ನು ಕಲಿಯಲು ಪೂರಕ ಭಾಷಾಪರಿಸರ ಇಲ್ಲ. ಹೀಗಿದ್ದರೂ ರಾಜಕೀಯವಾದ, ಆರ್ಥಿಕವಾದ, ಸಾಮಾಜಿಕವಾದ ಕಾರಣಗಳಿಗಾಗಿ ಕೆಲವು ಭಾಷೆ ಅಥವಾ ಭಾಷೆಗಳನ್ನು ಕಲಿಯುವುವಂತೆ, ಬಳಸುವಂತೆ ಒತ್ತಡಗಳನ್ನು ಹೇರಲಾಗಿದೆ. ಇದರಿಂದ ಜನರು ಸಹಜವಾಗಿಯೇ ಒತ್ತಡಕ್ಕೆ ಒಳಗಾಗಿದ್ದಾರೆ. ಜೊತೆಗೆ ಈ ರೀತಿಯ ಅನ್ಯಭಾಷೆಗಳ ಕಲಿಕೆ, ಬಳಕೆ ಮಗುವಿನ ಮಾತೃಭಾಷೆಯ ಕಲಿಕೆಯ ಮೇಲೆ ವ್ಯತಿರಿಕ್ತ ಪರಿಣಾಮ ಉಂಟುಮಾಡಿ ಮಗುವಿನ ಇತರ ಕಲಿಕೆಯ ಆಸಕ್ತಿಗಳನ್ನೇ ನಾಶಗೊಳಿಸಿದೆ. ಇದರಿಂದಾಗಿ ಯಾವ ಭಾಷೆಯ ಕಲಿಕೆ ಮಗುವಿನ ಬದುಕಿಗೆ ಪೂರಕವೆಂದು ಭಾವಿಸಲಾಗಿದೆಯೋ ಅದೇ ಭಾಷೆ ಮಗುವಿನ ಬದುಕಿಗೆ ಮಾರಕವಾಗಿ ಪರಿಣಮಿಸಿದೆ. ಜೊತೆಗೆ ಈ ಅನ್ಯಭಾಷಾಮಾಧ್ಯಮದ ಕಲಿಕೆ ಪ್ರಬಲವಲ್ಲದ ಸಮುದಾಯಗಳಲ್ಲಿ ತನ್ನ ಮಾತೃಭಾಷೆಗಳನ್ನೇ ನಾಶಗೊಳಿಸುವ ಭಯ ಉಂಟುಮಾಡಿದೆ.

ಬಹುಭಾಷಿಕ ಪ್ರದೇಶಗಳಲ್ಲಿ ದುರ್ಬಲ ಎಂಬ ಹಣೆಪಟ್ಟಿ ಹೊತ್ತಿರುವ ಭಾಷಾಸಮುದಾಗಳಲ್ಲಿ ಒಂದು ವರ್ಗ ತನ್ನ ಭಾಷೆಯ ಪರವಾಗಿ ಮತ್ತು ಅನ್ಯಭಾಷೆಗೆ ವಿರುದ್ಧವಾಗಿ, ಅವುಗಳ ಕಲಿಕೆ ಮತ್ತು ಬಳಕೆಗೆ ಮಿತಿಯನ್ನು ಹೇರುವಂತೆ ಪ್ರತಿಭಟನೆ, ಹೋರಾಟಗಳನ್ನು ಮಾಡಿವೆ. ಆದರೆ ಸಾಮಾನ್ಯಜನರು ತಮ್ಮ ಭಾಷೆಯ ಪರವಾದ ಹೋರಾಟ, ಭಾಷಾಯೋಜನೆ, ಭಾಷಾನೀತಿಗಳ ಬಗೆಗೆ ಅಷ್ಟು ಆಸಕ್ತಿ ವಹಿಸಿಲ್ಲ. ಏಕೆಂದರೆ ಈಗಾಗಲೇ ಚರ್ಚಿಸಿರುವ ಹಾಗೆ ಜನಸಾಮಾನ್ಯರಲ್ಲಿ ತಮ್ಮ ಮಾತೃಭಾಷೆಗಳನ್ನು ಮಾತ್ರ ಕಲಿತರೆ ಬದುಕನ್ನು ಕಟ್ಟಿಕೊಳ್ಳಲು ಸಾಧ್ಯವಿಲ್ಲ. ತಮ್ಮ ಮಾತೃಭಾಷೆಯ ಜೊತೆಗೆ ಇತರ ಭಾಷೆಗಳನ್ನು ಕಲಿಯುವುದು ಅನಿವಾರ್ಯ. ಅದರಲ್ಲೂ ಭಾರತದಲ್ಲಿ ಇಂಗ್ಲಿಶ್ ಕಲಿಯದೇ ಬದುಕೇ ಇಲ್ಲ ಎಂಬ ಪರಿಸ್ಥಿತಿ ನಿರ್ಮಾಣವಾಗಿದೆ. ಇದರಿಂದಾಗಿ ಸಾಮಾನ್ಯ ಜನರು ತಮ್ಮ ಭಾಷೆ, ಭಾಷೆಯ ಪರ ಅಥವಾ ವಿರೋಧಿ ಹೋರಾಟಗಳನ್ನು ಅಷ್ಟು ಸೂಕ್ಷ್ಮವಾಗಿ ತೆಗೆದುಕೊಂಡಿಲ್ಲ. ಅವರೆಲ್ಲರು ತಮ್ಮ

ಶಕ್ತಿಗೆ ನಿಲುಕಿದ ಹಾಗೆ ಭಾಷೆಗಳನ್ನು ಕಲಿತು ಅಥವಾ ತಮ್ಮ ಮಕ್ಕಳಿಗೆ ಕಲಿಸಿ ಆ ಮೂಲಕ ತಮ್ಮ ಬದುಕನ್ನು ಕಟ್ಟಿಕೊಳ್ಳುವ ಪ್ರಯತ್ನ ಮಾಡಿದ್ದಾರೆ. ಇದರಿಂದಾಗಿ ಯಾವುದೇ ಒಂದು ಭಾಷೆಯ ಪರ ಅಥವಾ ವಿರೋಧಿ ಪ್ರತಿಭಟನೆ, ಹೋರಾಟಗಳು ಆ ಸಮುದಾಯಗಳ ಸಾಮಾನ್ಯ ಜನರಿಂದ ಹುಟ್ಟಿರುವಂತಹವಲ್ಲ. ಬದಲಾಗಿ ಆಯಾ ಜನಸಮುದಾಯಗಳ ಶಿಕ್ಷಿತ, ಚಿಂತಕ ಮತ್ತು ಭಾಷಾಪರವಾದ ಹೋರಾಟಗಾರರಿಂದ ಹುಟ್ಟಿರುವಂತಹದ್ದು.

ಸಾಮಾನ್ಯವಾಗಿ ಇಂತಹ ಹೋರಾಟಗಳು ಆರಂಭವಾಗುವುದೇ ಅನ್ಯಭಾಷೆಗಳನ್ನು ಕಲಿಯುವ, ಬಳಸುವ ಒತ್ತಡ ಹೆಚ್ಚಾದಾಗ ಅಥವಾ ಅಂತಹ ಅನಿವಾರ್ಯ ಪರಿಸ್ಥಿತಿ ನಿರ್ಮಾಣವಾದಾಗ. ಆದರೆ ಭಾರತದಲ್ಲಿ ಅನ್ಯಭಾಷೆಗಳನ್ನು ಕಲಿಯುವ, ಬಳಸುವ ಅನಿವಾರ್ಯ ಪರಿಸ್ಥಿತಿ ನಿರ್ಮಾಣವಾಗಿರುವುದು ಭಾಷೆಯ ಕಾರಣದಿಂದಲ್ಲ. ಬದಲಾಗಿ ಹಣಗಳಿಸುವ ಉದ್ದೇಶದಿಂದ. ಇಲ್ಲಿ ಅನ್ಯಭಾಷೆ, ಭಾಷೆಗಳನ್ನು ಕಲಿಯಬಾರದು ಎಂದು ಅರ್ಥವಲ್ಲ. ಆದರೆ ಅನ್ಯಭಾಷೆಗಳ ಕಲಿಕೆ ಮತ್ತು ಬಳಕೆ ಸ್ಥಳೀಯ ಭಾಷಾಸಮುದಾಯಗಳ ಜನರಿಗೆ ಭಾಷಿಕ ಸಮಸ್ಯೆಗಳಾಗಿ ಪರಿಣಮಿಸಬಾರದು. ಆದರೆ ಭಾರತದಲ್ಲಿ, ಕರ್ನಾಟಕದಲ್ಲಿ ಅನ್ಯಭಾಷೆಗಳ ಕಲಿಕೆ ಮತ್ತು ಬಳಕೆ ಭಾಷಿಕ ಸೇರಿದಂತೆ ಇತರ ಸಮಸ್ಯೆಗಳಾಗಿ ಪರಿಣಮಿಸಿವೆ. ಏಕೆಂದರೆ ಅನ್ಯಭಾಷೆಗಳ ಕಲಿಕೆಯನ್ನು ಕಡ್ಡಾಯ ಪರೀಕ್ಷಾ ವಿಷಯವನ್ನಾಗಿಸಿ ಉತ್ತೀರ್ಣವಾಗಲು ಕನಿಷ್ಟ ಅಂಕಗಳನ್ನು ನಿಗದಿಪಡಿಸಲಾಗಿದೆ. ಇಲ್ಲಿ ಕನಿಷ್ಟ ಅಂಕಗಳನ್ನು ಗಳಿಸಲು ಸಾಧ್ಯವಾಗದಿರುವ ವಿದ್ಯಾರ್ಥಿಗಳು ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಸ್ಥಳೀಯ ಭಾಷಿಕ ಸಮುದಾಯಗಳಿಗೆ ಅನ್ಯಭಾಷೆಗಳ ಕಲಿಕೆ ಮತ್ತು ಬಳಕೆಯನ್ನು ಕಡ್ಡಾಯಗೊಳಿಸುವುದು ಅನಿವಾರ್ಯವೇ? ಎಂಬುದು ಮರುಪರಿಶೀಲಿಸಬೇಕಾದ ಪ್ರಶ್ನೆ. ಇದರ ಜೊತೆಗೆ ಈಗಾಗಲೇ ಚರ್ಚಿಸಿರುವ ಕಾರಣಗಳಿಂದಾಗಿ ಸ್ಥಳೀಯ ಸಮುದಾಯಗಳಿಗೆ ತಮ್ಮ ಮಾತೃಭಾಷೆ ಉಳಿಸಿಕೊಳ್ಳುವ ಬಹುದೊಡ್ಡ ಜವಾಬ್ದಾರಿ ಎದುರಾಗಿದೆ. ಇದಕ್ಕನುಗುಣವಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಭಾಷಾನೀತಿಗಳನ್ನು ಜಾರಿಗೆ ತಂದು ಶಿಕ್ಷಣದಲ್ಲಿ ಹಲವು ಭಾಷೆಗಳನ್ನು ಕಲಿಯುವಂತೆ ಮಾಡಿವೆ. ಆದರೂ ಸರ್ಕಾರಗಳ ಉದ್ದೇಶಿತ ಭಾಷಾನೀತಿಗೆ ಅನುಗುಣವಾಗಿ ಕರ್ನಾಟಕದಲ್ಲಿ ಭಾಷೆಗಳ ಆಯ್ಕೆಯ ಪ್ರಕ್ರಿಯೆ ಮತ್ತು ಭಾಷೆಗಳ ಕಲಿಕೆ ಆಗಿಲ್ಲ. ಈಗಲೂ ಆಗುತ್ತಿಲ್ಲ. ಇದಕ್ಕೆ ಹಲವು ಕಾರಣಗಳು ಇವೆ. ಇವುಗಳನ್ನು **'ಶಿಕ್ಷಣ ಮತ್ತು ಭಾಷೆ'** ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಇಲ್ಲಿ ಭಾಷಾಆಯ್ಕೆ ಮತ್ತು ಅವುಗಳ ಕಲಿಕೆಯ ಹಿಂದಿನ ಸಮಸ್ಯೆಗಳು ಏನೇ ಇದ್ದರೂ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯ ಬದಲಿಗೆ ಮತ್ತು ಮಾತೃಭಾಷೆಯ ಜೊತೆಗೆ ಅನ್ಯಭಾಷೆಯನ್ನು ಕಲಿಯುವುದು ಕಡ್ಡಾಯವಾಗಿದೆ. ಇದು ಕೇವಲ ಮತೃಭಾಷೆಗಳನ್ನು ಮಾತ್ರ ಕಲಿತಿರುವ ಅನ್ಯಭಾಷೆ ಅಥವಾ ಭಾಷೆಗಳನ್ನು ಕಲಿಯಲು ಪೂರಕ ವಾತಾವರಣ ಇಲ್ಲದಿರುವ ವಿದ್ಯಾರ್ಥಿಗಳ ಭವಿಷ್ಯದ ಶಿಕ್ಷಣಕ್ಕೆ ಮಾರಕವಾಗಿದೆ. ಈ ರೀತಿ ಅನ್ಯಭಾಷೆಯ ಕಡ್ಡಾಯಕಲಿಕೆ ಮತ್ತು ಬಳಕೆ ನಮ್ಮ ಭಾಷೆಯ

ಬೆಳವಣಿಗೆಗೆ ಪೆಟ್ಟು ಬೀಳುತ್ತಿದೆ. ಇದು ನಮ್ಮ ಸಮುದಾಯದ ಮೇಲೆ ಅನ್ಯಭಾಷಾಸಮುದಾಯ ಪ್ರಭುತ್ವ ಹೊಂದಲು ನಡೆಸುತ್ತಿರುವ ಪ್ರಯತ್ನ. ಇದು ಹೀಗೇ ಮುಂದುವರೆದರೆ ನಮ್ಮ ಸಮುದಾಯದ ಅಸ್ತಿತ್ವ ನಾಶವಾಗುತ್ತದೆ ಎಂಬ ಭಯ ಸ್ಥಳೀಯ ಸಮುದಾಯಗಳಲ್ಲಿ ಹುಟ್ಟಿದೆ. ಇಂತಹ ಸಂದರ್ಭಗಳಲ್ಲಿ ಸ್ಥಳೀಯ ಭಾಷಾಸಮುದಾಯಗಳು ತನ್ನ ಭಾಷೆಯ ಪರ ಪ್ರತಿಭಟನೆ, ಚಳವಳಿಗಳನ್ನು ಆರಂಭಿಸಿವೆ. ಇಂತಹ ಚಳವಳಿಗಳು ಆರಂಭವಾದ ಸಂದರ್ಭದಲ್ಲಿ ಅಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು, ಸ್ಥಳೀಯ ಭಾಷಾಸಮುದಾಯಗಳ ಭಾಷಿಕಹಿತ ಕಾಪಾಡುವ ನಿಟ್ಟಿನಲ್ಲಿ ಸ್ಥಳೀಯ ಭಾಷಾಸಮುದಾಯಗಳು ಯಾವ ಬೇಡಿಕೆಗಳನ್ನು ಮುಂದಿಟ್ಟು ಹೋರಾಟ ಮಾಡಿವೆಯೋ, ಅವುಗಳಲ್ಲಿ ನ್ಯಾಯಯುತವಾದ ಬೇಡಿಕೆಗಳನ್ನು ಈಡೇರಿಸಲು ಸರ್ಕಾರಗಳು ಸಮಿತಿಯನ್ನು ರಚಿಸಿ ವರದಿ ನೀಡಲು ಸೂಚಿಸಿವೆ. ಹೀಗೆ ರಚನೆಯಾದ ಸಮಿತಿಗಳು ನೀಡಿರುವ ವರದಿಯ ಆಧಾರದಲ್ಲಿ ಭಾಷಾನೀತಿಗಳನ್ನು ಜಾರಿಗೆ ತಂದಿವೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಭಾಷಾಯೋಜನೆ ರೂಪಿಸುವುದರ ಹಿಂದೆ ಭಾಷಿಕ ಸಮುದಾಯಗಳ ಹಿತ ಮತ್ತು ಭಾಷಾಅಗತ್ಯಗಳನ್ನು ಪೂರೈಸುವ ಉದ್ದೇಶವು ಇರುವುದು ಸ್ಪಷ್ಟವಾಗುತ್ತದೆ. ಜೊತೆಗೆ ಹೀಗೆ ರೂಪಿತವಾಗುವ ಭಾಷಾಯೋಜನೆ ಮತ್ತು ಜಾರಿಯಾಗುವ ಭಾಷಾನೀತಿಗಳು ಪ್ರಬಲ ಭಾಷಿಕ ಸಮುದಾಯಗಳಿಗೆ ತನ್ನ ಭಾಷಾ ಬಳಕೆಯ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುವ ದಾರಿಯಾದರೆ ದುರ್ಬಲ ಭಾಷಿಕ ಸಮುದಾಯಗಳಿಗೆ ತಮ್ಮ ಭಾಷೆಯ ರಕ್ಷಣೆಯಾಗಿದೆ. ಇಂತಹ ಸಂದರ್ಭದಲ್ಲಿಯೇ ಜಾಗತಿಕ ಪ್ರಪಂಚ ಉಗಮವಾಗಿದ್ದು, ಇದು ಅಂತರಾಷ್ಟ್ರೀಯ ಮಟ್ಟದಲ್ಲಿ ತಮ್ಮ ವ್ಯವಹಾರಕ್ಕೆ ಇಂಗ್ಲಿಶ್‌ನ್ನು ಪ್ರಧಾನವಾಗಿಸಿಕೊಂಡಿದೆ. ಇಂತಹ ಪರಿಸ್ಥಿತಿ ನಿರ್ಮಾಣವಾಗುವ ಪೂರ್ವದಲ್ಲಿಯೇ ಭಾರತ ಸ್ವತಂತ್ರಗೊಂಡು, ಇಲ್ಲಿನ ಕೇಂದ್ರ ಸರ್ಕಾರ ಭಾರತದ ಆಡಳಿತ ಮತ್ತು ವಿವಿಧ ರಾಜ್ಯಗಳು ನಡುವಿನ ವ್ಯವಹಾರದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆಯನ್ನು ಬಳಕೆಗೆ ತರುವ ಉದ್ದೇಶದಿಂದ ಹಿಂದಿಗೆ ವಿಶೇಷ ಪ್ರಾತಿನಿಧ್ಯ ಕೊಟ್ಟಿದೆ. ಇದು ಭಾರತದ ಇತರ ಪ್ರಬಲ ಭಾಷಾಸಮುದಾಯಗಳ ಅಸಮಾಧಾನಕ್ಕೆ ಕಾರಣವಾಗಿದೆ. ಇದರಿಂದ ಕೇಂದ್ರ ಸರ್ಕಾರದ ಈ ಭಾಷಾನಿಲುವಿಗೆ ಹಿಂದಿಯೇತರ ರಾಜ್ಯಗಳು ವ್ಯಾಪಕ ವಿರೋಧ ವ್ಯಕ್ತಪಡಿಸಿವೆ. ಅದರಲ್ಲೂ ದಕ್ಷಿಣ ಭಾರತದ ರಾಜ್ಯಗಳಾದ ತಮಿಳುನಾಡು, ಕರ್ನಾಟಕ ರಾಜ್ಯಗಳಲ್ಲಿ ಇದಕ್ಕೆ ತೀವ್ರ ವಿರೋಧ ವ್ಯಕ್ತವಾಗಿದೆ. ಹೀಗಾಗಿ ಭಾರತ ಸ್ವತಂತ್ರಗೊಂಡ ನಂತರ ದೇಶದಲ್ಲಿ ಹಿಂದಿ ವಿರೋಧಿ ಚಳುವಳಿ ಹುಟ್ಟಿಕೊಂಡಿದೆ.

ಹೀಗೆ ಭಾರತ ಸ್ವತಂತ್ರಗೊಂಡ ನಂತರ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆಯನ್ನೇ ದೇಶದ ಸಂಪರ್ಕ ಭಾಷೆಯನ್ನಾಗಿಸುವ ಉದ್ದೇಶದಿಂದ ಕೇಂದ್ರಸರ್ಕಾರ ಹಿಂದಿಯನ್ನು ದೇಶದ ಆಡಳಿತ ಭಾಷೆಯನ್ನಾಗಿಸುವ ಪ್ರಯತ್ನಕ್ಕೆ ದೇಶಿ ಭಾಷಿಕ ಸಮುದಾಯಗಳಲ್ಲಿ ಹುಟ್ಟಿಕೊಂಡ ವಿರೋಧ ಸ್ವಾತಂತ್ರ್ಯಾನಂತರದ ಭಾರತದಲ್ಲಿ ಇಂಗ್ಲಿಶ್‌ನ ಬಳಕೆಯನ್ನು ಕಡಿಮೆ ಮಾಡಲು ಸಾಧ್ಯವಾಗಿಲ್ಲ. ಇದಕ್ಕೆ ಮತ್ತಷ್ಟು ಪುಷ್ಟಿನೀಡುವಂತೆ ಈಗಾಗಲೇ ಚರ್ಚಿಸಿರುವ ಹಾಗೆ ಜಾಗತಿಕ ಪ್ರಪಂಚದ ಇಂಗ್ಲಿಶ್‌ನ್ನು ತನ್ನ

ವ್ಯವಹಾರದ ಪ್ರಧಾನ ಭಾಷೆಯಾಗಿಸಿಕೊಂಡಿರುವುದರಿಂದ ಹಿಂದಿಯನ್ನು ದೇಶದ ಆಡಳಿತ ಭಾಷೆಯಾಗಿ ಬಳಸಿದರೆ, ಮತ್ತೆ ಅಂತರಾಷ್ಟ್ರೀಯ ವ್ಯವಹಾರಕ್ಕೆ ಇಂಗ್ಲಿಶ್‌ನ್ನು ಬಳಸಬೇಕಾಗುತ್ತದೆ. ದೇಶದ ಆಡಳಿತದಲ್ಲಿ ಇಂಗ್ಲಿಶ್‌ನ್ನು ಮುಂದುವರಿಸುವುದರಿಂದ ದೇಶದೊಳಗೆ ಹಾಗೂ ಹೊರಗಿನ ಎರಡೂ ವ್ಯವಹಾರಕ್ಕೆ ಒಂದೇ ಭಾಷೆಯನ್ನು ಬಳಸಲು ಸಾಧ್ಯವಾಗುತ್ತದೆ. ಇದರಿಂದ ದೇಶದ ಜನತೆ ಹೆಚ್ಚಿನದಾಗಿ ಹಿಂದಿಯನ್ನು ಕಲಿಯಬೇಕಾದ ಒತ್ತಡ ತಪ್ಪುತ್ತದೆ. ಇಲ್ಲದಿದ್ದರೆ ರಾಷ್ಟ್ರದ ವ್ಯವಹಾರಕ್ಕೆ ಒಂದು ಭಾಷೆ, ಅಂತರಾಷ್ಟ್ರೀಯ ಮಟ್ಟದ ವ್ಯವಹಾರಕ್ಕೆ ಮತ್ತೊಂದು ಭಾಷೆಯೆಂದು ಹಿಂದಿ ಮತ್ತು ಇಂಗ್ಲಿಶ್ ಎರಡು ಭಾಷೆಗಳನ್ನು ಕಲಿಯಬೇಕಾಗುತ್ತದೆ ಮತ್ತು ಬಳಸಬೇಕಾಗುತ್ತದೆ ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ. ಇಂತಹ ವಿರೋಧಗಳ ನಡುವೆಯೇ ಭಾರತ ಸ್ವಾತಂತ್ರ್ಯಾನಂತರದಲ್ಲಿ ಕೇಂದ್ರ ಸರ್ಕಾರದಲ್ಲಿ ಪ್ರಾಬಲ್ಯ ಹೊಂದಿರುವ ಹಿಂದಿ ಭಾಷಿಕರು ತಮ್ಮ ಭಾಷೆಯ ಬಳಕೆಗೆ ಹೆಚ್ಚಿನ ಆದ್ಯತೆ ನೀಡಿದ್ದಾರೆ. ಇದಕ್ಕಾಗಿ ತೆರೆಮರೆಯ ಪ್ರಯತ್ನಗಳ ಮೂಲಕ ರಾಷ್ಟ್ರದ ಎಲ್ಲಾ ಕೇಂದ್ರಸರ್ಕಾರಿ ಸಂಸ್ಥೆಗಳಲ್ಲಿ ಹಿಂದಿಯ ಬಳಕೆಯನ್ನು ಹೆಚ್ಚಿಸಿದ್ದಾರೆ.

ಇದರಿಂದಾಗಿ ಭಾರತ ಸ್ವತಂತ್ರಗೊಂಡ ನಂತರ ಮಾತೃಭಾಷೆ, ರಾಜ್ಯಭಾಷೆ, ರಾಷ್ಟ್ರಭಾಷೆ, ಅಂತರಾಷ್ಟ್ರೀಯ ಭಾಷೆಯ ಹೆಸರಿನಲ್ಲಿ ಹಲವು ಭಾಷೆಗಳನ್ನು ಕಲಿಯಬೇಕಾದ, ಬಳಸಬೇಕಾದ ಒತ್ತಡದಲ್ಲಿ ದೇಶದ ಜನತೆ ಇದ್ದಾರೆ. ಆದರೆ ದೇಶದಲ್ಲಿ ಈ ಎಲ್ಲಾ ಭಾಷೆಗಳನ್ನು ಕಲಿಯಲು ಅಗತ್ಯವಾದ ಪೂರಕ ಭಾಷಾಪರಿಸರ ಇಲ್ಲ. ಇದರಿಂದಾಗಿ ಭಾರತ ಸ್ವತಂತ್ರಗೊಂಡ ನಂತರ ಭಾಷಾಕಲಿಕೆ ಮತ್ತು ಬಳಕೆ ಒಂದು ದೊಡ್ಡ ಸಮಸ್ಯೆಯಾಗಿದೆ. ಈ ಸಮಸ್ಯೆ ಕೇವಲ ಭಾಷಾಸಮಸ್ಯೆಯಾಗಿ ಮಾತ್ರ ಉಳಿಯದೆ ಮಕ್ಕಳ ಕಲಿಕೆಯ ಹಕ್ಕನ್ನು ಕಸಿದುಕೊಂಡು ಬೋಧನಾ ಮಾಧ್ಯಮದಲ್ಲಿ ಬಳಕೆಯಾಗುತ್ತಿರುವ ಭಾಷೆಯ ಕಾರಣದಿಂದಾಗಿ ವಿದ್ಯಾರ್ಥಿಗಳು ತಮ್ಮ ಆಸಕ್ತ ಕಲಿಕೆಯ ವಿಷಯಗಳಿಂದ ವಂಚಿತವಾಗಿ ಶೈಕ್ಷಣಿಕ ಹಿಂದುಳಿವಿಕೆಗೆ ಕಾರಣವಾಗಿದೆ. ಇದು ಜನರನ್ನು ಆರ್ಥಿಕ ಸಂಕಷ್ಟಕ್ಕೆ ಒಳಗು ಮಾಡಿದೆ. ಅಲ್ಲದೆ ಈಗಾಗಲೇ ಚರ್ಚಿಸಿರುವ ಹಾಗೆ ಭಾಷಾಸಮುದಾಯಗಳ ನಡುವೆ ಪ್ರಬಲ-ದುರ್ಬಲ, ಮೇಲು-ಕೀಳು, ಶ್ರೇಷ್ಠ-ಕನಿಷ್ಠ ಎಂಬ ಭಾವನೆ ಬೆಳೆಸಿದೆ. ಹೀಗಾಗಿ ಜನರು ಕೆಲವು ಭಾಷೆ ಅಥವಾ ಭಾಷೆಗಳ ಪರ ಹಾಗೂ ವಿರೋಧವಾಗಿ ಹೋರಾಟಗಳನ್ನು ಮಾಡಿದ್ದಾರೆ. ಇವು ಈಗಲೂ ಮುಂದುವರಿದಿವೆ.

**೧.೩ ಜಾಗತಿಕ ಪ್ರಪಂಚದ ಉಗಮ ಮತ್ತು ಭಾಷೆ**

ಇಪ್ಪತ್ತನೇ ಶತಮಾನದ ಕೊನೆಯಲ್ಲಿ ವಿಶ್ವದಲ್ಲಿ ಆರ್ಥಿಕವಾಗಿ ಬಲಿಷ್ಠವಾದ ದೇಶಗಳು ತಮ್ಮ ವ್ಯಾಪಾರದ ನೆಲೆಗಳನ್ನು ವಿಸ್ತರಿಸಿಕೊಳ್ಳಲು, ಹಿಂದುಳಿದ ಮತ್ತು ಅಭಿವೃದ್ಧಿ ಹೊಂದುತ್ತಿದ್ದ ದೇಶಗಳಲ್ಲಿ, ಅಭಿವೃದ್ಧಿಯ ಹೆಸರಲ್ಲಿ ಕೈಗಾರಿಕೆ, ಬಹುರಾಷ್ಟ್ರೀಯ ಕಂಪನಿಗಳ ಘಟಕಗಳನ್ನು ಸ್ಥಾಪಿಸಿವೆ. ಈ ಘಟಕಗಳ ಸ್ಥಾಪನೆಗೆ ಆಗಿರುವ ಖರ್ಚು, ಉತ್ಪಾದನೆಯಾಗುತ್ತಿರುವ ವಸ್ತುಗಳು, ಅವುಗಳ ಪ್ರಮಾಣ, ಕೈಗಾರಿಕಾ ಘಟಕಗಳನ್ನು ಸ್ಥಾಪಿಸಿರುವುದರಿಂದ ಆಗಿರುವ ಲಾಭ, ನಷ್ಟ, ಆರ್ಥಿಕ ಅಭಿವೃದ್ಧಿ ಇತ್ಯಾದಿಗಳ ಬಗೆಗಿನ ಮಾಹಿತಿ ಆ ಕೈಗಾರಿಕೆ ಅಥವಾ ಕಂಪನಿಗಳ ಮಾಲೀಕರಿಗೆ ಅಗತ್ಯವಿದೆ. ಹೀಗಾಗಿ

ವಿಶ್ವದ ಯಾವುದೇ ಭಾಗದಲ್ಲಿ ಕೈಗಾರಿಕೆ ಅಥವಾ ಕಂಪನಿಯ ಘಟಕಗಳು ಸ್ಥಾಪನೆಯಾದರೂ ಅಲ್ಲಿನ ಮಾಹಿತಿಗಳನ್ನು ಒದಗಿಸಲು ಮತ್ತು ಸ್ಥಳೀಯ ಘಟಕಗಳನ್ನು ಸಮರ್ಥವಾಗಿ ಮುನ್ನಡೆಸಲು ಪ್ರತಿಯೊಂದು ಘಟಕಕ್ಕು ಕನಿಷ್ಟ ಒಬ್ಬ ವ್ಯವಸ್ಥಾಪಕರು ಮತ್ತು ಅವರ ಕೆಳಗಿನ ಅಧಿಕಾರಿಗಳನ್ನು ನೇಮಕ ಮಾಡಿದ್ದಾರೆ. ಇವರು ಆಯಾ ಘಟಕಗಳ ಮಾಹಿತಿಯನ್ನು ಮಾಲೀಕರಿಗೆ ಅಥವಾ ಆ ಕೈಗಾರಿಕೆ, ಕಂಪನಿಗಳ ಕೇಂದ್ರಕಚೇರಿಯ ಅಧಿಕಾರಿಗಳಿಗೆ ಒದಗಿಸಬೇಕಿದೆ. ಅದೂ ಮಾಲೀಕರ ಅಥವಾ ಕೇಂದ್ರಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುವ ಅಧಿಕಾರಿಗಳ ಭಾಷೆಯಲ್ಲಿ. ಹೀಗಾಗಿ ಜಾಗತೀಕರಣ ಪರಿಣಾಮವಾಗಿ ಸ್ಥಾಪನೆಯಾದ ಕೈಗಾರಿಕೆ, ಕಂಪನಿಗಳಲ್ಲಿನ ಉನ್ನತ ಹುದ್ದೆಗಳಿಗೆ ವಿದೇಶಿಯರನ್ನು, ಇಲ್ಲವೆ ಸ್ಥಳೀಯ ಪ್ರದೇಶದ ಇಂಗ್ಲಿಶ್ ಬಲ್ಲವರನ್ನು ಅಧಿಕಾರಿಗಳನ್ನಾಗಿ ನೇಮಕ ಮಾಡಿದ್ದಾರೆ. ಏಕೆಂದರೆ ಎರಡನೇ ಮಹಾಯುದ್ಧದ ನಂತರ ವಿಶ್ವದ ಬಲಿಷ್ಠರಾಷ್ಟ್ರವಾಗಿ ರೂಪುಗೊಂಡ ಅಮೇರಿಕಾ ಮತ್ತು ವಿಶ್ವದ ಆರ್ಥಿಕ ಶ್ರೀಮಂತ ರಾಷ್ಟ್ರಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿದ್ದ ಭಾಷೆ ಇಂಗ್ಲಿಶ್. ಹೀಗಾಗಿ ಜಾಗತೀಕರಣದ ನಂತರ ಸ್ಥಾಪನೆಯಾದ ಪ್ರತಿಯೊಂದು ಕೈಗಾರಿಕೆ, ಕಂಪನಿಗಳ ಆಡಳಿತ ಇಂಗ್ಲಿಶ್‌ಮಯವಾಗಿದೆ.

ಆದರೆ ಜಾಗತೀಕರಣದ ಪರಿಣಾಮವಾಗಿ ಹಿಂದುಳಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಸ್ಥಾಪನೆಯಾಗಿರುವ ಕೈಗಾರಿಕೆ ಮತ್ತು ಬಹುರಾಷ್ಟ್ರೀಯ ಕಂಪನಿಗಳಲ್ಲಿ ದುಡಿಯುತ್ತಿರುವ ಕಾರ್ಮಿಕರು ವಿದೇಶಗಳಿಂದ ಬಂದವರಲ್ಲ. ಅವರೆಲ್ಲರೂ ಸ್ಥಳೀಯ ಪ್ರದೇಶಗಳಲ್ಲಿಯೇ ಹುಟ್ಟಿ ಬೆಳೆದು, ತಮ್ಮ ಮಾತೃಭಾಷೆ ಇಲ್ಲವೆ ಸ್ಥಳೀಯ ಭಾಷೆಗಳನ್ನು ಕಲಿತವರು. ತಮ್ಮ ಬದುಕಿಗಾಗಿ ಜಾಗತೀಕರಣದ ಪರಿಣಾಮವಾಗಿ ಸ್ಥಾಪನೆಯಾದ ಕೈಗಾರಿಕೆಗಳು, ಬಹುರಾಷ್ಟ್ರೀಯ ಕಂಪನಿಗಳಲ್ಲಿ ಸೃಷ್ಟಿಯಾದ ಉದ್ಯೋಗಗಳನ್ನು ಪಡೆದವರು. ಹೀಗಾಗಿ ಜಾಗತೀಕರಣ ಪರಿಣಾಮವಾಗಿ ನಿರ್ಮಾಣವಾಗಿರುವ ಬಹುರಾಷ್ಟ್ರೀಯ ಕಂಪನಿಗಳು, ಕಾರ್ಖಾನೆ, ಉದ್ದಿಮೆಗಳಲ್ಲಿ ಏಕಭಾಷಿಕರಿಲ್ಲ. ಬೇರೆಬೇರೆ ಭಾಷೆಗಳನ್ನು ಮಾತೃಭಾಷೆಯಾಗುಳ್ಳ ಜನರು ಕೆಲಸ ಮಾಡುತ್ತಿದ್ದಾರೆ. ಹೀಗಾಗಿ ಇವರೆಲ್ಲರ ಭಾಷೆಯನ್ನು ಬಹುರಾಷ್ಟ್ರೀಯ ಕಂಪನಿ, ಕಾರ್ಖಾನೆ, ಉದ್ದಿಮೆಗಳಲ್ಲಿ ಬಳಸಲು ಸಾಧ್ಯವಿಲ್ಲವೆಂದು ಮತ್ತು ಈಗಾಗಲೇ ಚರ್ಚಿಸಿರುವ ಹಾಗೆ ವಿಶ್ವದ ಯಾವುದೇ ಭಾಗದಲ್ಲಿ ಸ್ಥಾಪನೆಯಾದ ಕಂಪನಿ, ಕೈಗಾರಿಕೆ, ಉದ್ದಿಮೆಗಳಲ್ಲಿನ ಮಾಹಿತಿಯನ್ನು ಮಾಲೀಕರಿಗೆ ಅವರ ಭಾಷೆಯಲ್ಲಿಯೇ ಒದಗಿಸಬೇಕಾದ್ದರಿಂದ ಇಂಗ್ಲಿಶ್‌ನ್ನು ತಮ್ಮ ವ್ಯವಹಾರದ ಭಾಷೆಯಾಗಿ ಬಳಸಿದ್ದಾರೆ. ಅದರಲ್ಲೂ ಭಾರತದಲ್ಲಿ ಇದರ ಬಳಕೆ ಇತರ ಹಿಂದುಳಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳಿಗೆ ಹೋಲಿಸಿದರೆ ಸ್ವಲ್ಪ ಹೆಚ್ಚಾಗಿಯೇ ಇದೆ. ಏಕೆಂದರೆ ಭಾರತದಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಆರಂಭಗೊಳ್ಳುವ ಪೂರ್ವದಲ್ಲೇ ಇಲ್ಲಿನ ಆಡಳಿತ, ಶಿಕ್ಷಣ, ಉದ್ಯೋಗ ಇತ್ಯಾದಿ ಕ್ಷೇತ್ರಗಳಲ್ಲಿ ಇಂಗ್ಲಿಶ್ ಬಳಕೆಯಲ್ಲಿತ್ತು. ಇದರ ಕಲಿಕೆ ಮತ್ತು ಬಳಕೆಗೆ ಮಿತಿ ಇರಲಿಲ್ಲ. ಜೊತೆಗೆ ಈಗಾಗಲೇ ಚರ್ಚಿಸಿರುವ ಹಾಗೆ ಜಾಗತೀಕರಣ ಪರಿಣಾಮವಾಗಿ ಸ್ಥಾಪನೆಯಾದ ಬಹುರಾಷ್ಟ್ರೀಯ ಕಂಪನಿಗಳಲ್ಲಿ, ಖಾಸಗಿ ಕೈಗಾರಿಕೆ, ಉದ್ದಿಮೆ, ವ್ಯವಹಾರ ಕ್ಷೇತ್ರಗಳಲ್ಲಿ ಮಾತ್ರವಲ್ಲ ಸರ್ಕಾರದ ಉನ್ನತ ಹುದ್ದೆಗಳಲ್ಲು ಇಂಗ್ಲಿಶ್ ಬಳಸುವುದರಿಂದ ಉದ್ಯೋಗದ ಹೆಚ್ಚಿನ

ಅವಕಾಶ, ಉನ್ನತ ಹುದ್ದೆ, ಹಣಗಳಿಕೆ, ಸಮಾಜದಲ್ಲಿ ಗೌರವಯುತ ಸ್ಥಾನ ಲಭ್ಯವಾಗುತ್ತಿದ್ದವು. ಸಮಾಜದಲ್ಲಿ ಬದುಕುವ ಪ್ರತಿಯೊಬ್ಬ ವ್ಯಕ್ತಿಯಲ್ಲಿಯು ಈ ಎಲ್ಲವನ್ನು ಪಡೆಯಬೇಕೆಂಬ ಹಂಬಲ ಇದ್ದೇ ಇರುತ್ತದೆ. ಇದರಿಂದಾಗಿ ಭಾರತದಲ್ಲಿ ಇಂಗ್ಲಿಶ್‌ನ ಕಲಿಕೆ ಮತ್ತು ಬಳಕೆಗೆ ವಿಶೇಷ ಆದ್ಯತೆ ನೀಡಿದ್ದಾರೆ. ಇದು ವಿಶ್ವದ ಎಲ್ಲಾ ಹಿಂದುಳಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳಿಗೂ ವ್ಯಾಪಿಸಿದೆ.

ಇದರಿಂದಾಗಿ ವಿಶ್ವದ ಎಲ್ಲಾ ಭಾಗಗಳ ಜನರಿಗೆ ತಮ್ಮ ಮಾತೃಭಾಷೆಯನ್ನು ಕಳೆದುಕೊಳ್ಳುತ್ತಿದ್ದೇವೆ ಎಂಬ ಭಯ ಕಾಡತೊಡಗಿದೆ. ಈ ಭಯ ಭಾರತದಲ್ಲಿ ಸ್ವಲ್ಪ ಹೆಚ್ಚಾಗಿಯೇ ಇದೆ. ಏಕೆಂದರೆ ಇಂಗ್ಲಿಶ್ ಈಸ್ಟ್ ಇಂಡಿಯಾ ಕಂಪನಿಯ ಮೂಲಕ ಭಾರತವನ್ನು ಪ್ರವೇಶಿಸಿ ಜಾಗತೀಕರಣಕ್ಕು ಮೊದಲೇ ಭಾರತದಲ್ಲಿ ಭದ್ರಬುನಾದಿಯನ್ನು ಕಂಡಿತ್ತು. ಅಲ್ಲದೆ ಭಾರತದ ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯ ಸೇರಿದಂತೆ ಇತರ ಕ್ಷೇತ್ರಗಳಲ್ಲಿ ಬಳಕೆಯಾಗಿ ಭಾಷಿಕ ಬಿಕ್ಕಟ್ಟುಗಳನ್ನು ಸೃಷ್ಟಿಸಿತ್ತು. ಹೀಗಾಗಿ ಭಾರತೀಯ ಭಾಷಿಕ ಸಮುದಾಯಗಳು ಆಂಗ್ಲರ ಆಡಳಿತದಲ್ಲಿ ಇಂಗ್ಲಿಶ್ ವಿರೋಧಿಸಿ ಪ್ರತಿಭಟನೆಗಳನ್ನು ಮಾಡಿದ್ದವು. ಇದರಿಂದ ಆಂಗ್ಲರು ಭಾರತವನ್ನು ಬಿಟ್ಟು ಹೋದ ನಂತರ ಭಾರತದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆ ಅಥವಾ ಭಾಷೆಗಳನ್ನು ಬಳಕೆಗೆ ತರುವ ಪ್ರಯತ್ನ ಮಾಡುತ್ತಿದ್ದವು. ಇಂತಹ ಸಂದರ್ಭದಲ್ಲಿ ಈಗಾಗಲೇ ಚರ್ಚಿಸಿರುವ ಹಾಗೆ ಇಂಗ್ಲಿಶ್ ಬಹುರಾಷ್ಟ್ರೀಯ ಕಂಪನಿಗಳ ಮೂಲಕ ಮರುಹುಟ್ಟು ಪಡೆದಿದೆ. ಆ ಮೂಲಕ ಭಾರತ ಮತ್ತು ಕರ್ನಾಟಕದ ಭಾಷಿಕ ಬಿಕ್ಕಟ್ಟನ್ನು ಮತ್ತಷ್ಟು ತೀವ್ರಗೊಳಿಸಿದೆ. ಏಕೆಂದರೆ ಇಂದಿನ ಕರ್ನಾಟಕ ಭೂಪ್ರದೇಶ ಭಾರತಕ್ಕೆ ಇಂಗ್ಲಿಶ್ ಪ್ರವೇಶ ಕೊಡುವ ಪೂರ್ವದಲ್ಲೆ ಬಹುಭಾಷಿಕರಿಂದ ಕೂಡಿತ್ತು. ಇಂಗ್ಲಿಶ್ ಬಳಕೆಯ ಆರಂಭ ಇಲ್ಲಿನ ಸ್ಥಳೀಯ ಭಾಷೆಗಳ ಬಳಕೆ ಮತ್ತು ಅಭಿವೃದ್ಧಿಗೆ ದೊಡ್ಡಪೆಟ್ಟನ್ನು ನೀಡಿತ್ತು. ಇದರಿಂದಾಗಿ ಕರ್ನಾಟಕ ಏಕೀಕರಣಗೊಂಡ ನಂತರ ಇಂಗ್ಲಿಶ್‌ಗೆ ಪರ್ಯಾಯವಾಗಿ ಕನ್ನಡವನ್ನು ಬಳಕೆಗೆ ತರುವ ಪ್ರಯತ್ನ ಮಾಡುತ್ತಿದ್ದಾಗಲೇ ಜಾಗತೀಕರಣದ ಹೆಸರಿನಲ್ಲಿ ಇಂಗ್ಲಿಶ್ ಭಾರತದಲ್ಲಿ ಮರುಜೀವ ಪಡೆದದ್ದು ಕರ್ನಾಟಕದ ಜನರ ಬದುಕನ್ನು ಮತ್ತಷ್ಟು ಅತಂತ್ರ ಸ್ಥಿತಿಗೆ ಸಿಲುಕಿಸಿದೆ.

ಹೀಗೆ ಜಾಗತೀಕರಣದ ನಂತರ ರೂಪುಗೊಂಡ ಬಹುಭಾಷಿಕ ಪ್ರದೇಶಗಳ ಆಡಳಿತ, ಶಿಕ್ಷಣ, ಉದ್ಯೋಗ, ವ್ಯವಹಾರ ಮುಂತಾದ ಕಾರ್ಯಗಳಿಗೆ ಯಾವ ಭಾಷೆಯನ್ನು ಬಳಸಬೇಕು ಎಂಬ ಸಮಸ್ಯೆ ಉದ್ಭವವಾಗಿದೆ. ಆ ಪ್ರದೇಶದಲ್ಲಿ ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಬಲಿಷ್ಠವಾಗಿರುವ ಸಮುದಾಯಗಳ ಭಾಷೆಗಳನ್ನು ಆಡಳಿತ, ಶಿಕ್ಷಣ, ಉದ್ಯೋಗ, ವ್ಯವಹಾರಗಳಲ್ಲಿ ಬಳಕೆಮಾಡಲು ಆರಂಭಿಸಿವೆ. ಇದರಿಂದ ಆ ಪ್ರದೇಶದಲ್ಲಿನ ಪ್ರಬಲವಲ್ಲದ ಸಮುದಾಯಗಳ ಭಾಷೆಗಳ ಕಲಿಕೆ ಮತ್ತು ಬಳಕೆ ಹಂತಹಂತವಾಗಿ ಕಡಿಮೆಯಾಗಿದೆ. ಭಾಷೆಗಳು ದಿನನಿತ್ಯದ ಬಳಕೆಯಲ್ಲಿ ಕಡಿಮೆಯಾಗುತ್ತಾ ಹೋದರೆ ಕೊನೆಗೆ ನಶಿಸಿ ಹೋಗುತ್ತವೆ. ಇದರಿಂದ ಈ ಹಿಂದೆಯೇ ಪ್ರಸ್ತಾಪಿಸಿರುವ ಹಾಗೆ ಭಾಷೆಯ ಬಳಕೆ ನಿಂತು ಹೋದರೆ ಆ ಭಾಷೆಯನ್ನಾಡುವ ಜನರ ವಿಶೇಷಗಳು

ನಾಶವಾಗಿ, ಸಮುದಾಯಗಳು ತಮ್ಮ ಸ್ವತಂತ್ರ ಅಸ್ತಿತ್ವ ಕಳೆದುಕೊಳ್ಳುತ್ತವೆ. ಹೀಗಾಗಿ ಪ್ರತಿಯೊಂದು ಭಾಷಿಕ ಸಮುದಾಯಗಳಿಗೂ ತನ್ನ ಸಮುದಾಯದ ಆಸ್ತಿ, ಅಸ್ತಿತ್ವವನ್ನು ನಿರ್ಧರಿಸುವ ಶಕ್ತಿಯಾದ ಭಾಷೆಯನ್ನು ರಕ್ಷಿಸಿಕೊಳ್ಳುವುದು ಮುಖ್ಯವಾಗಿದೆ.

ಹೀಗಾಗಿ ಜಗತ್ತಿನ ಎಲ್ಲಾ ಭಾಷಿಕ ಸಮುದಾಯಗಳು ತಮ್ಮ ತಮ್ಮ ಭಾಷೆಗಳನ್ನು ಉಳಿಸಿಕೊಳ್ಳಲು ಒದ್ದಾಡುತ್ತಿವೆ. ಇದು ಕೇವಲ ಭಾರತ ದೇಶವೊಂದರ ಅಥವಾ ಕರ್ನಾಟಕ ರಾಜ್ಯವೊಂದರ ಸಮಸ್ಯೆಯಲ್ಲ. ಇದು ಜಗತ್ತಿನ ಎಲ್ಲಾ ದೇಶಗಳ, ಎಲ್ಲಾ ಭಾಷೆಗಳ ಸಮಸ್ಯೆಯು ಆಗಿದೆ. ಆದ್ದರಿಂದ "ಭಾಷೆಯೊಂದನ್ನು, ಭಾಷಿಕ ಜನಾಂಗವೊಂದನ್ನು ಬಲಿಷ್ಠವಾಗಿಸುವ ಕ್ರಮಗಳು ಹೇಗೆ ಎಂಬ ಪ್ರಶ್ನೆ ೨೦ನೇ ಶತಮಾನದ ಪ್ರಮುಖ ಸಮಸ್ಯೆಗಳಲ್ಲಿ ಒಂದು. ಜಗತ್ತಿನ ಎಲ್ಲ ಭಾಷಿಕ ಕುಲಗಳು ಈ ಬಗೆಗೆ ತಲೆ ಕೆಡಿಸಿಕೊಂಡು ಒದ್ದಾಡುತ್ತಿವೆ. ಯೂರೋಪಿನಲ್ಲಿಯೂ ಕೂಡ ಸ್ವೀಡಿಷ್, ಡ್ಯಾನಿಷ್ ಕುಲಗಳಿಗೆ ಈ ಸಮಸ್ಯೆ ಬೃಹದಾಕಾರವಾಗಿ ಬೆಳೆದು ನಿಂತಿದೆ. ಇಂಗ್ಲಿಷ್, ಫ್ರೆಂಚ್, ಜರ್ಮನ್ ಮುಂತಾದವರ ನಡುವೆ ತಾವು ಸಾಂಸ್ಕೃತಿಕವಾಗಿ ಕುಗ್ಗಿಹೋಗುತ್ತಿದ್ದೇವೆ ಎಂಬ ಭಯ ಆ ಭಾಷಿಕ ಕುಲಗಳಿಗೆ. ಇಂಗ್ಲಿಷ್ ಹಿಂದಿಗಳ ಎದುರಿಗೆ ಕನ್ನಡಿಗರದೂ ಇದೇ ರೀತಿಯ ಭಯ"[೬] ಎಂದಿದ್ದಾರೆ ಡಾ. ಡಿ.ಆರ್. ನಾಗರಾಜ್. ಒಂದು ಪ್ರದೇಶದಲ್ಲಿ ಬಹುಭಾಷೆಗಳು ಬಳಕೆಯಲ್ಲಿದ್ದ ಸಂದರ್ಭದಲ್ಲಿ ಡಿ.ಆರ್. ನಾಗರಾಜ್ ಗುರುತಿಸುವ ಹಾಗೆ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಪ್ರಬಲವಲ್ಲದ ಸಮುದಾಯಗಳಿಗೆ ಈ ಭಯ, ಆತಂಕಗಳು ಇರುತ್ತವೆ. ಕರ್ನಾಟಕದ ಭಾಷಾಸಮುದಾಯಗಳು ಇವುಗಳಿಂದ ಹೊರತಾದವೇನು ಆಗಿಲ್ಲ. ಕರ್ನಾಟಕದ ಭಾಷಿಕ ಸಮುದಾಯಗಳಲ್ಲಿರುವ ಈ ಭಯ ಮತ್ತು ಆತಂಕಗಳನ್ನು ದೂರಮಾಡಿ ರಾಜ್ಯ ಹಾಗೂ ದೇಶದ ಆಡಳಿತ, ಶಿಕ್ಷಣ ಮುಂತಾದವುಗಳಿಗೆ ಅನುಕೂಲ ಮಾಡಿಕೊಳ್ಳುವ ಉದ್ದೇಶದಿಂದ ಕರ್ನಾಟಕದಲ್ಲಿ ಭಾಷಾಯೋಜನೆಗಳನ್ನು ರೂಪಿಸಲಾಗಿದೆ. ಇವುಗಳ ಆಧಾರದಲ್ಲಿ ಭಾಷಾನೀತಿಗಳನ್ನು ಜಾರಿಗೆ ತರಲಾಗಿದೆ.

### ೧.೪ ಭಾಷಾಯೋಜನೆ ಮತ್ತು ಭಾಷಾನೀತಿ: ಸ್ವರೂಪ ಮತ್ತು ಸಮಸ್ಯೆಗಳು

"ಭಾಷಾ ಸಮಸ್ಯೆಯ ಪರಿಹಾರಕ್ಕಾಗಿ ಉದ್ದೇಶಪೂರ್ವಕವಾಗಿ ರೂಪಿಸುವ ಕಾರ್ಯತಂತ್ರವೇ ಭಾಷಾಯೋಜನೆ".[೭] ಈ ಕಾರ್ಯತಂತ್ರವನ್ನು ರೂಪಿಸುವ ಕೆಲಸಗಳನ್ನು ಆ ಪ್ರದೇಶದಲ್ಲಿ ಆಡಳಿತ ನಡೆಸುವ ಸರ್ಕಾರ ಅಥವಾ ಸರ್ಕಾರದಿಂದ ನೇಮಕವಾದ ಸಮಿತಿ ಅಥವಾ ಆಯೋಗಗಳು ಮಾಡುತ್ತವೆ. ಈ ಸಮಿತಿ ಅಥವಾ ಆಯೋಗಗಳು ಸ್ವತಂತ್ರವಾಗಿರುವುದಿಲ್ಲ. ಅವು ಸರ್ಕಾರ ಮತ್ತು ಪ್ರಭುತ್ವಗಳ ತತ್ವ ಮತ್ತು ಸಿದ್ಧಾಂತಗಳಿಂದ ನಿಯಂತ್ರಿತವಾಗಿರುತ್ತವೆ. ಇದು ಇನ್ನೂ ಸ್ವಲ್ಪ ಮುಂದುವರಿದು ಡಾ.ರಂಗನಾಥ ಕಂಟನಕುಂಟೆ ಅವರು ಗುರುತಿಸುವ ಹಾಗೆ "ಜಾಗತೀಕರಣದ ಪ್ರಸ್ತುತ ಸಂದರ್ಭದಲ್ಲಿ ಮಕ್ಕಳು ಯಾವ ಭಾಷೆಯನ್ನು ಕಲಿಯಬೇಕು-ಕಲಿಯಬಾರದು ಎಂಬುದನ್ನು ನಿರ್ಧರಿಸುವುದು ಅಮೇರಿಕನ್ ಸಾಮ್ರಾಜ್ಯಶಾಹಿ ಮಾರುಕಟ್ಟೆಯ ಆರ್ಥಿಕತೆ. ಅಂತಹ ಆರ್ಥಿಕತೆಯನ್ನು ನಿಯಂತ್ರಿಸುವುದು ಉದ್ಯಮ ವರ್ಗ, ಸರಕುಗಳ ಉತ್ಪಾದನೆಗೆ ಬೇಕಾದ ಮಾನವ ಸಂಪನ್ಮೂಲದ ಅಭಿವೃದ್ಧಿಗಾಗಿ, ತನ್ನ ಮಾರುಕಟ್ಟೆಯ ಸಂವಹನಕ್ಕಾಗಿ, ಮತ್ತು ಇವತ್ತು ಸಂವಹನ ಕ್ಷೇತ್ರ ಮತ್ತು ಶಿಕ್ಷಣ

ಕೂಡ ಒಂದು ಲಾಭದ ಉದ್ಯಮ ಕ್ಷೇತ್ರವೇ ಆಗಿರುವುದರಿಂದ ಅಲ್ಲಿ ಬಳಸಲಾಗುವ ಭಾಷೆಗೆ ವಿಶೇಷವಾದ ಮಹತ್ವ ಪ್ರಾಪ್ತವಾಗುತ್ತದೆ. ಆದ್ದರಿಂದ ಇಂದು ಭಾಷೆಯ ಕಲಿಕೆಯಲ್ಲಿ ಮಾರುಕಟ್ಟೆ ಆರ್ಥಿಕತೆ ಪ್ರಧಾನವಾದ ಪಾತ್ರವನ್ನು ವಹಿಸುತ್ತದೆ."[೮]

ಸಾಮಾನ್ಯವಾಗಿ ಪ್ರಭುತ್ವಶಕ್ತಿಗಳಿಗೆ ಭಾಷೆ, ಭಾಷಿಕ ಸಮುದಾಯಗಳ ಹಿತಬೇಕಿಲ್ಲ. ಅವುಗಳಿಗೆ ಆರ್ಥಿಕ ಲಾಭವೇ ಪ್ರಧಾನ. ಹೀಗಾಗಿ ತಮ್ಮ ಅನುಕೂಲಕ್ಕೆ ತಕ್ಕನಾಗೆ ಎಲ್ಲವೂ ಇರಬೇಕು ಎಂದು ಬಯಸುತ್ತವೆ. ಇದಕ್ಕಾಗಿ ಆ ಪ್ರದೇಶಗಳಲ್ಲಿ ಆಡಳಿತ ನಡೆಸುವ ಸರ್ಕಾರಗಳಿಗೆ ತನಗೆ ಅನುಕೂಲ ಆಗುವ ಭಾಷಾಕಲಿಕೆ ಮತ್ತು ಬಳಕೆಗೆ ಹೆಚ್ಚಿನ ಪ್ರೋತ್ಸಾಹ ನೀಡುವಂತೆ ಒತ್ತಡಗಳನ್ನು ಹೇರಿವೆ. ಇದು ಸಾಧ್ಯವಾಗದಿದ್ದಾಗ ಆ ಪ್ರದೇಶಗಳ ಜನರಲ್ಲಿ ಉನ್ನತ ಸ್ಥಾನಮಾನ, ಉದ್ಯೋಗ, ಹೆಚ್ಚಿನ ಹಣದ ಆಸೆಗಳನ್ನು ತೋರಿಸಿ ತನ್ನ ಭಾಷೆಯನ್ನು ಕಲಿಯುವಂತೆ ಮಾಡಿವೆ. ಹೀಗೆ ಬಹುಭಾಷಿಕ ಪರಿಸರದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಮತ್ತು ಅಧಿಕಾರ ಶಕ್ತಿಗಳು ಎಲ್ಲಾ ಭಾಷೆಗಳಿಗೆ ಸಮಾನವಾದ ಅವಕಾಶ ನೀಡಿಲ್ಲ. ಪ್ರಜಾಪ್ರಭುತ್ವವಿರುವ ದೇಶಗಳಲ್ಲಿ ಭಾಷಾನೀತಿ ರೂಪಿಸುವಾಗ ಎಲ್ಲಾ ಭಾಷೆಗಳಿಗೆ ಸೂಕ್ತ ಸ್ಥಾನಮಾನ ನೀಡಿದಂತೆ ಕಂಡುಬಂದರೂ, ಅನುಷ್ಠಾನದ ಸಂದರ್ಭದಲ್ಲಿ ಅದು ತನ್ನ ಭಾಷೆಯ ಅಭಿವೃದ್ಧಿಗೆ ಅಗತ್ಯವಾದ ಪರಿಕರಗಳನ್ನು ಒದಗಿಸಿ ಉಳಿದ ಭಾಷೆಗಳ ಕಲಿಕೆ ಮತ್ತು ಬಳಕೆಯ ಬಗೆಗೆ ನಿರ್ಲಕ್ಷ್ಯ ವಹಿಸಿವೆ. ಹೀಗಾಗಿ ಸಾಮ್ರಾಜ್ಯಶಾಹಿಯ ವ್ಯಾಪಕ ಪರಿಸರದಲ್ಲಿ ಭಾಷಾದ್ವೇಷ ಕಾಣಿಸಿಕೊಂಡಿದೆ.

ಏಕೆಂದರೆ ಸಾಮ್ರಾಜ್ಯಶಾಹಿಯ ಧೋರಣೆಯು ಭಾಷೆಯೊಂದಕ್ಕೆ ಸಂಬಂಧಿಸಿದಂತೆ ಭಾಷಿಕ ಸಾಮ್ರಾಜ್ಯಶಾಹಿ ರೂಪವನ್ನು ತಾಳಬಹುದು. ಭಾಷಿಕ ಸಾಮ್ರಾಜ್ಯಶಾಹಿಯು ಇರುವ ಎಡೆಗಳಲ್ಲಿ ಒಂದು ನಿರ್ದಿಷ್ಟ ಭಾಷೆಗೆ ಮಹತ್ವ ಪ್ರಾಪ್ತವಾಗುತ್ತದೆ. ಸಾಮಾಜಿಕ ವ್ಯವಸ್ಥೆಯ ಸ್ಥಾಪಿತ ಹಿತಾಸಕ್ತಿಗಳು ಆ ನಿರ್ದಿಷ್ಟ ಭಾಷೆಯ ಉಳಿವು ಮತ್ತು ಪ್ರಸಾರಕ್ಕೆ ಎಲ್ಲಾ ಬಗೆಯ ನೆರವು, ಪ್ರಚೋದನೆ, ಮತ್ತು ಪ್ರೋತ್ಸಾಹ ನೀಡುತ್ತವೆ. ಇದರಿಂದ ಆ ನಿರ್ದಿಷ್ಟ ಭಾಷೆಯನ್ನು ಆಡುವವರ ಮತ್ತು ಇತರ ಭಾಷೆಗಳನ್ನು ಆಡುವವರ ನಡುವೆ ಸಾಂಸ್ಥಿಕವಾದ ಮತ್ತು ಸಾಂಸ್ಕೃತಿಕವಾದ ಅಸಮಾನತೆಗಳು ಉಂಟಾಗತೊಡಗುತ್ತವೆ. ಈ ಮಾತಿನಲ್ಲಿ ಸಾಂಸ್ಥಿಕ ಎಂಬುದು ಭೌತಿಕ ಗುಣಲಕ್ಷಣಗಳನ್ನೂ ಸಾಂಸ್ಕೃತಿಕ ಎಂಬುದು ಐಡಿಯಾಲಜಿಯ ಗುಣಲಕ್ಷಣಗಳನ್ನೂ ಹೊಂದಿದೆ. ಸಾಂಸ್ಥಿಕ ಮತ್ತು ಸಾಂಸ್ಕೃತಿಕ ಅಸಮಾನತೆಗಳಿಂದಾಗಿ ನಿರ್ದಿಷ್ಟ ಭಾಷೆಯೊಂದಕ್ಕೆ ಎಲ್ಲಾ ಬಗೆಯ ಸಂಪನ್ಮೂಲಗಳು ದೊರೆಯುವಂತಾಗಿ ಇತರ ಭಾಷೆಗಳ ಏಳಿಗೆಗೆ ಸಂಪನ್ಮೂಲಗಳ ಕೊರತೆ ಕಾಡತೊಡಗುತ್ತದೆ. ಇದರಿಂದ ನಿರ್ದಿಷ್ಟ ಭಾಷೆಯ ಸಾಮರ್ಥ್ಯವನ್ನು ಪಡೆದವರಿಗೆ ಮಾತ್ರ ಎಲ್ಲಾ ಬಗೆಯ ಸವಲತ್ತುಗಳು, ಲಾಭಗಳು ದೊರೆಯುತೊಡಗುತ್ತವೆ. ಇತರ ಭಾಷಿಕರು "ವಂಚಿತ"ರಾಗುತ್ತಾರೆ. ಭಾಷಾ ದ್ವೇಷವು ಯಾವಾಗಲು ಪ್ರಬಲ ಭಾಷೆಗಳನ್ನು (ಇಂಗ್ಲಿಷ್, ಫ್ರೆಂಚ್, ಸ್ಪ್ಯಾನಿಷ್ ಇತ್ಯಾದಿ) ಮತ್ತಷ್ಟು ಪ್ರಬಲಗೊಳಿಸುತ್ತದೆ. ಅಂತರಾಷ್ಟ್ರೀಯವಾಗಿ ನೋಡಿದರೆ ರಾಜ್ಯಶಕ್ತಿಯು ಅಧಿಕೃತ ಆಡಳಿತ ಭಾಷೆಗೆ

ನೀಡುವ ಪ್ರೋತ್ಸಾಹವು ಆಡಳಿತ ಭಾಷೆಗಳಲ್ಲದ ಇತರ ಭಾಷೆಗಳ ಮಟ್ಟಿಗೆ ಭಾಷಾದ್ವೇಷದ ಪರಿಣಾಮವನ್ನೇ ಉಂಟುಮಾಡಿರುವುದು ತಿಳಿಯುತ್ತದೆ.[೯]

ಇಲ್ಲಿ ಅಲ್ಪಸಂಖ್ಯಾತರ ಭಾಷೆಗಳಿಗೆ ಯಾವ ಮನ್ನಣೆ, ಸವಲತ್ತುಗಳು ಸಿಗುವುದಿಲ್ಲ. ಎಲ್ಲವೂ ಆ ಪ್ರದೇಶದ ಬಹುಸಂಖ್ಯಾತರ ಇಲ್ಲವೆ ಪ್ರಭುತ್ವಶಕ್ತಿಯ ಭಾಷೆಗಳಿಗೆ ದೊರಕುತ್ತದೆ. ಇದರಿಂದಾಗಿ ಆ ಪ್ರದೇಶದ ಉಳಿದ ಎಲ್ಲಾ ಭಾಷೆಗಳು ಭಾಷಾಯೋಜನೆ ಮತ್ತು ಭಾಷಾನೀತಿಗಳಿಂದ ಅಭಿವೃದ್ಧಿಯನ್ನು ಹೊಂದಲು ಸಾಧ್ಯವಾಗುತ್ತಿಲ್ಲ. ದುರ್ಬಲ ಭಾಷಿಕ ಸಮುದಾಯಗಳು ಪ್ರಬಲ ಭಾಷಿಕ ಸಮುದಾಯಗಳ ಭಾಷೆಗಳನ್ನು ಕಲಿಯಬೇಕೇ ಹೊರತು ಪ್ರಬಲ ಭಾಷಿಕ ಸಮುದಾಯಗಳು ದುರ್ಬಲ ಭಾಷಿಕ ಸಮುದಾಯಗಳ ಭಾಷೆಗಳನ್ನು ಕಲಿಯುವುದಿಲ್ಲ. ಹಾಗೆ ಕಲಿಯಬೇಕಾದ ಅಗತ್ಯವೂ ಪ್ರಬಲ ಭಾಷಿಕ ಸಮುದಾಯಗಳಿಗೆ ಉಂಟಾಗಿಲ್ಲ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಒಂದು ಪ್ರದೇಶದ ಪ್ರಬಲ ಭಾಷಿಕ ಸಮುದಾಯಗಳು ಭಾಷಾಯೋಜನೆ ಮತ್ತು ಭಾಷಾನೀತಿಗಳ ಮೂಲಕ ಆ ಪ್ರದೇಶದ ದುರ್ಬಲ ಭಾಷಿಕ ಸಮುದಾಯಗಳ ಭಾಷಾಕಲಿಕೆ ಮತ್ತು ಬಳಕೆಗೆ ಯಾವುದೇ ತೊಂದರೆ ಇಲ್ಲ. ಅವರ ಭಾಷಾಕಲಿಕೆ ಮತ್ತು ಬಳಕೆಗೆ ಅವಕಾಶಗಳು ಇವೆ ಎಂದು ಹೇಳುತ್ತಲೇ ಅವರು ತನ್ನ ಭಾಷೆ ಕಲಿಯುವಂತೆ ಮಾಡಿ ಕೊನೆಗೆ ಅವರನ್ನು ತನ್ನೊಳಗೆ ವಿಲೀನ ಮಾಡಿಕೊಳ್ಳುವ ಹುನ್ನಾರ ಇರುವುದು ಸ್ಪಷ್ಟವಾಗುತ್ತದೆ. ಹೀಗಾಗಿ ಭಾಷಾನೀತಿಗಳಲ್ಲಿ ಒಂದು ಪ್ರದೇಶದ ದುರ್ಬಲ ಭಾಷಾಸಮುದಾಯಗಳ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಅವಕಾಶಗಳು ದೊರೆತರೂ, ಅವುಗಳ ಅನುಷ್ಠಾನಕ್ಕೆ ಪ್ರೋತ್ಸಾಹ ಇಲ್ಲದೆ ಬಳಕೆಗೆ ಬಂದಿರುವುದು ಕಡಿಮೆ. ಇದಕ್ಕೆ ಉದಾಹರಣೆಯಾಗಿ ಕರ್ನಾಟಕದಲ್ಲಿ ಉರ್ದು, ಮರಾಠಿ, ತಮಿಳು ಮುಂತಾದ ಭಾಷೆಗಳಲ್ಲಿ ನಡೆದಿರುವ ಪತ್ರವ್ಯವಹಾರಗಳನ್ನು ಗಮನಿಸಬಹುದು.

ಇದರಿಂದಾಗಿ ಅಲ್ಪಸಂಖ್ಯಾತ ಭಾಷಿಕ ಸಮುದಾಯಗಳು ಈಗಲೂ ಭಾಷಿಕವಾಗಿ ಸಮಸ್ಯೆಗಳನ್ನು ಎದುರಿಸುತ್ತಿವೆ. ಸಕಲ ಸೌಲಭ್ಯ ಮತ್ತು ಸವಲತ್ತುಗಳು ಪ್ರಬಲ ಹಾಗೂ ಬಹುಸಂಖ್ಯಾತರ ಭಾಷೆಗಳಿಗೆ ದೊರಕಿರುವುದರಿಂದ ಅಲ್ಪಸಂಖ್ಯಾತರ ಭಾಷೆಗಳು ಅಭಿವೃದ್ಧಿ ಹೊಂದಲು ಸಾಧ್ಯವಾಗಿಲ್ಲ. ಇದರಿಂದಾಗಿ ಇಂದು ಜಗತ್ತಿನಲ್ಲಿರುವ ೬೭೫೦ ಭಾಷೆಗಳಲ್ಲಿ ೬೫೦೦ ಭಾಷೆಗಳು ಬಹುಜನರ ಭಾಷೆಗಳಲ್ಲ. ಶೇಕಡ ೯೫ರಷ್ಟು ಭಾಷೆಗಳು ಪ್ರಪಂಚದ ೪% ರಷ್ಟು ಜನರಾಡುವ ಭಾಷೆಗಳು. ಜಗತ್ತಿನ ೪%ರಷ್ಟು ಭಾಷೆಗಳು, ಅಂದರೆ ಸುಮಾರು ೨೫೦ ಭಾಷೆಗಳು ೯೬%ರಷ್ಟು ಜನರು ವ್ಯವಹರಿಸುವ ದೊಡ್ಡ ಭಾಷೆಗಳು. ಈ ಅಂಕಿಅಂಶದ ಸಾರಾಂಶವೆಂದರೆ ೬೭೫೦ ರಲ್ಲಿ ೬೫೦೦ ಭಾಷೆಗಳನ್ನು ಬಳಸುವವರು ಅಲ್ಪಸಂಖ್ಯಾತರು.[೧೦] ಈ ಅಂಕಿಅಂಶಗಳನ್ನು ಗಮನಿಸಿದಾಗ ಪ್ರಪಂಚದಲ್ಲಿ ಇಂದು ಭಾಷಾನೀತಿಗಳ ಲಾಭ ಪಡೆಯುತ್ತಿರುವ ಭಾಷಾಸಮುದಾಯಗಳ ಸಂಖ್ಯೆ ಕಡಿಮೆ. ಸಮಸ್ಯೆಗಳ ಸುಳಿಯಲ್ಲಿ ಸಿಕ್ಕು ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಒದ್ದಾಡುತ್ತಿರುವ ಜನಸಮುದಾಯಗಳ ಸಂಖ್ಯೆಯೇ ಹೆಚ್ಚು.

ಇನ್ನು ಭಾಷಾಯೋಜನೆ ಅಥವಾ ಕಾರ್ಯತಂತ್ರ ರೂಪಿಸುವುದರ ಹಿಂದೆ ಜಾಗತಿಕ ಮಾರುಕಟ್ಟೆಯ ಪಾತ್ರ, ಸರ್ಕಾರದ ಮಿತಿ ಮತ್ತು ಸ್ಪಷ್ಟ ನಿರ್ದೇಶನಗಳು ಇರುತ್ತವೆ. ಇದರ ಅಧೀನಕ್ಕೆ ಒಳಗಾಗಿ ಸಮಿತಿಗಳು ಅಥವಾ ಆಯೋಗಗಳು ತಮ್ಮ ವರದಿಯನ್ನು ರೂಪಿಸಬೇಕಾಗುತ್ತದೆ. ಸಂವಿಧಾನದ ೩೪೪ನೇ ಅನುಚ್ಛೇದ ಅಧಿಕೃತ ಭಾಷೆಯ ಮೇಲೆ ಸಂಸತ್ತಿನ ಆಯೋಗದ ನೇಮಕಕ್ಕೆ ಅವಕಾಶವನ್ನು ಕಲ್ಪಿಸುತ್ತದೆ. ಅದೇ ನಿಬಂಧನೆಯ (೨) ನೇ ವಿಧಿ ಈ ಕೆಳಗಿನಂತೆ ಸೂಚಿಸುತ್ತದೆ. ಆಯೋಗವು–

೧. ಒಕ್ಕೂಟದ ಆಡಳಿತ ವ್ಯವಹಾರದಲ್ಲಿ ಹಿಂದಿ ಭಾಷೆಯನ್ನು ಕ್ರಮವಾಗಿ ಹೆಚ್ಚು ಹೆಚ್ಚು ಬಳಸುವ ವಿಚಾರದಲ್ಲಿ,
೨. ಒಕ್ಕೂಟದ ಎಲ್ಲ ಅಥವಾ ಯಾವುದೇ ಆಡಳಿತ ಉದ್ದೇಶಗಳಿಗೆ ಇಂಗ್ಲಿಷ್ ಭಾಷೆಯನ್ನು ಬಳಸುವ ವಿಚಾರದಲ್ಲಿ ನಿರ್ಬಂಧಗಳನ್ನು ವಿಧಿಸುವ ವಿಚಾರದಲ್ಲಿ,
೩. ೩೪೮ನೆಯ ನಿಬಂಧನೆಯಲ್ಲಿ ಸೂಚಿಸಿರುವ ಎಲ್ಲ ಅಥವಾ ನಿರ್ದಿಷ್ಟ ಉದ್ದೇಶಗಳಿಗಾಗಿ ಬಳಸಬೇಕಾದ ಭಾಷೆ ವಿಚಾರದಲ್ಲಿ,
೪. ಒಕ್ಕೂಟದ ಯಾವುದಾದರೊಂದು ಅಥವಾ ಇನ್ನೂ ಹೆಚ್ಚಿನ ನಿರ್ದಿಷ್ಟ ಉದ್ದೇಶಗಳಿಗಾಗಿ ಬಳಸಬೇಕಾದ ಅಂಕಿಗಳ ವಿಚಾರದಲ್ಲಿ
೫. ಒಕ್ಕೂಟದ ಆಡಳಿತ ಭಾಷೆ, ಒಕ್ಕೂಟ ಮತ್ತು ಒಂದು ರಾಜ್ಯದ ಮಧ್ಯೆ ಸಂಪರ್ಕಕ್ಕಾಗಿ ಬಳಸಬೇಕಾದ ಭಾಷೆ, ಮತ್ತು ಬೇರೆ ಬೇರೆ ರಾಜ್ಯಗಳ ಮಧ್ಯೆ ಪರಸ್ಪರ ಸಂಪರ್ಕಕ್ಕಾಗಿ ಬಳಸಬೇಕಾದ ಭಾಷೆ, ಇವುಗಳ ಸಂಬಂಧವಾಗಿ ಮತ್ತು ಭಾಷೆಗಳ ಉಪಯೋಗದ ಸಂಬಂಧವಾಗಿ ರಾಷ್ಟ್ರಪತಿಯವರು ಆಯೋಗಕ್ಕೆ ಕೊಡುವ ಯಾವುದೇ ನಿರ್ದೇಶಗಳ ವಿಚಾರದಲ್ಲಿ,

– ರಾಷ್ಟ್ರಪತಿಗಳಿಗೆ ಸಲಹೆಗಳನ್ನು ಮಾಡುವುದು ಆಯೋಗದ ಕರ್ತವ್ಯವಾಗಿರುತ್ತದೆ.[೧೧]

ಎಂದಿದೆ. ಇದನ್ನು ಗಮನಿಸಿದಾಗ ಭಾಷಾಸಮಸ್ಯೆಯ ಪರಿಹಾರಕ್ಕೆ ಸಲಹೆ ಅಥವಾ ಮಾರ್ಗದರ್ಶನ ನೀಡಲು ನೇಮಕವಾಗುವ ಆಯೋಗ ಅಥವಾ ಸಮಿತಿಗಳು ಕೆಲವೊಂದು ಚೌಕಟ್ಟಿಗೆ ಒಳಗಾಗಿರುತ್ತವೆ. ಹೀಗಾಗಿ ಭಾಷಾಸಮಸ್ಯೆಯ ಪರಿಹಾರಕ್ಕಾಗಿ ಸಲಹೆಗಳನ್ನು ನೀಡುವಂತೆ ನೇಮಕವಾದ ಭಾಷಾಆಯೋಗ ಅಥವಾ ಸಮಿತಿಗಳು ಒಂದು ಪ್ರದೇಶದ ಭಾಷಾಸಮಸ್ಯೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಅವುಗಳಿಗೆ ಸೂಕ್ತ ಪರಿಹಾರಗಳನ್ನು ಸೂಚಿಸಲು ಸಾಧ್ಯವಾಗಿಲ್ಲ.

ಇಂತಹ ಮಿತಿಗಳ ಜೊತೆಗೆ ಭಾಷಾಸಮಿತಿ ಅಥವಾ ಆಯೋಗಗಳು ನೀಡುವ ವರದಿಗಳ ಮೇಲೆ ಭಾಷಾಸಮಿತಿ ಅಥವಾ ಆಯೋಗದಲ್ಲಿ ನೇಮಕವಾದ ಅಧ್ಯಕ್ಷರು ಮತ್ತು ಸದಸ್ಯರುಗಳ ತತ್ವ, ಸಿದ್ಧಾಂತ, ಜ್ಞಾನ, ತಿಳುವಳಿಕೆ, ಹಿನ್ನೆಲೆ, ರಾಜಕೀಯ, ಆರ್ಥಿಕ, ಸಾಮಾಜಿಕ ಒತ್ತಡ, ಪ್ರಭಾವಗಳು ಪ್ರಧಾನ ಪಾತ್ರ ನಿರ್ವಹಿಸುತ್ತಿರುತ್ತವೆ. ಅಲ್ಲದೆ ಬಹುಭಾಷಿಕ ಪರಿಸರದಲ್ಲಿ ಭಾಷಾಆಯೋಗ ಅಥವಾ ಭಾಷಾಸಮಿತಿಗಳು ನೀಡಿದ ಸಲಹೆಗಳ ಆಧಾರದಲ್ಲಿ ಸರ್ಕಾರಗಳು ಭಾಷಾನೀತಿಯನ್ನು ಜಾರಿಗೆ ತಂದರೆ ಅವು ಇತರ ಭಾಷಿಕ ಸಮುದಾಯಗಳ ಮೇಲೆ ಉಂಟುಮಾಡಬಹುದಾದ ಪರಿಣಾಮಗಳು ಪ್ರಭಾವ ಬೀರುತ್ತಿರುತ್ತವೆ. ಹೀಗಿದ್ದೂ ಒಂದು ಪ್ರದೇಶದ ಬಹುಸಂಖ್ಯಾತರ ಒತ್ತಡ ಮತ್ತು ಬೇಡಿಕೆಗಳಿಗೆ ಅನುಗುಣವಾಗಿ ಏಕಪಕ್ಷೀಯವಾದ ಸಲಹೆಗಳನ್ನು ಭಾಷಾಆಯೋಗ, ಸಮಿತಿಗಳು ತಮ್ಮ ವರದಿಗಳಲ್ಲಿ ನೀಡಿವೆ. ಉದಾಹರಣೆಗೆ ಕರ್ನಾಟಕದ ಪ್ರೌಢಶಿಕ್ಷಣದಲ್ಲಿ ಒಂದು ಭಾಷೆಯಾಗಿ ಸಂಸ್ಕೃತ ಭಾಷೆಯನ್ನು ಕಲಿಸುತ್ತಿದ್ದುದರಿಂದ ಎದ್ದ ವಿವಾದವನ್ನು ಪರಿಹರಿಸುವುದಕ್ಕಾಗಿ ಕರ್ನಾಟಕ ಸರ್ಕಾರವು ೧. ಸಂಸ್ಕೃತವು

ಶಾಲಾ ಪಠ್ಯವಿಷಯಗಳಲ್ಲಿ ಅಭ್ಯಾಸದ ಒಂದು ವಿಷಯವಾಗಿ ಉಳಿಯಬೇಕೆ? ೨. ಹಾಗೆ ಉಳಿಯಬೇಕಾದರೆ ಕನ್ನಡಕ್ಕೆ ಪರ್ಯಾಯವಾಗದಂತೆ ಅದನ್ನು ಉಳಿಸಿಕೊಳ್ಳುವುದು ಹೇಗೆ? ೩. ತ್ರಿಭಾಷಾ ಸೂತ್ರದಂತೆ ಕನ್ನಡ ಕಡ್ಡಾಯ ಮಾಡಿ, ಮಿಕ್ಕ ಭಾಷೆಗಳಲ್ಲಿ ಯಾವುದಾದರೂ ಎರಡನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ವಿದ್ಯಾರ್ಥಿಗಳಿಗೇ ಬಿಡುವುದು ಸೂಕ್ತವೇ? ಎಂಬ ಅಂಶಗಳನ್ನು ನೀಡಿ ಅದಕ್ಕೆ ಸಂಬಂಧಪಟ್ಟ ಹಾಗೆ ವರದಿಯನ್ನು ನೀಡಲು ಡಾ. ವಿ.ಕೃ.ಗೋಕಾಕ್ ನೇತೃತ್ವದ ಸಮಿತಿಯನ್ನು ನೇಮಕ ಮಾಡಿತ್ತು.

ಈ ಸಮಿತಿಯು ಕರ್ನಾಟಕದ ಭಾಷಾಪರಿಸ್ಥಿತಿ, ಭಾಷಾಸಮಸ್ಯೆಗಳು, ಕನ್ನಡವನ್ನು ಏಕೈಕ ಪ್ರಥಮ ಭಾಷೆಯನ್ನಾಗಿ ಮಾಡುವುದರಿಂದ ಭವಿಷ್ಯದಲ್ಲಿ ಉದ್ಭವವಾಗಬಹುದಾದ ಸಮಸ್ಯೆಗಳು ಇತ್ಯಾದಿಗಳನ್ನು ಗಮನಿಸದೆ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರ ಒತ್ತಾಯಕ್ಕೆ ಮಣಿದು ಕರ್ನಾಟಕದ ಪ್ರೌಢಶಿಕ್ಷಣದಲ್ಲಿ ಕನ್ನಡವನ್ನು ಏಕೈಕ ಪ್ರಥಮ ಭಾಷೆಯಾಗಿಸುವಂತೆ ಸರ್ಕಾರಕ್ಕೆ ಶಿಫಾರಸು ಮಾಡಿದೆ. ಇದನ್ನು ಗಮನಿಸಿದಾಗ ಇದು ಕನ್ನಡ ಭಾಷೆಯ ಬಗೆಗೆ ಒಲವು ಮತ್ತು ಕನ್ನಡಿಗರ ಒತ್ತಡವನ್ನು ಗಮನದಲ್ಲಿ ಇಟ್ಟುಕೊಂಡು ನೀಡಿದ ವರದಿ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಇದು ಕರ್ನಾಟಕದ ಭಾಷಾಅಲ್ಪಸಂಖ್ಯಾತರು ಮತ್ತು ಅವರ ಭಾಷೆಯ ಮೇಲೆ ಉಂಟುಮಾಡುವ ಪರಿಣಾಮ ಹಾಗೂ ತಾನು ನೀಡಿದ ಸಲಹೆಯ ಪ್ರಕಾರ ಸರ್ಕಾರ ಭಾಷಾನೀತಿಯನ್ನು ಜಾರಿಗೆ ತಂದು ಅನುಷ್ಠಾನಕ್ಕೆ ಪ್ರಯತ್ನಿಸಿದರೆ ಉದ್ಭವವಾಗಬಹುದಾದ ಸಮಸ್ಯೆಗಳ ಬಗೆಗೆ ಆಲೋಚನೆ ಮಾಡದೆ ವರದಿ ನೀಡಿರುವುದು ತಿಳಿಯುತ್ತದೆ. ಹೀಗಿದ್ದೂ ಕರ್ನಾಟಕ ಸರ್ಕಾರ ಈ ಸಮಿತಿ ನೀಡಿದ ವರದಿಯನ್ನು ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರು ಈ ಸಮಿತಿ ನೀಡಿದ ವರದಿಯನ್ನು ಅನುಷ್ಠಾನಕ್ಕೆ ತರುವಂತೆ ತೀವ್ರತರದ ಒತ್ತಡ ಉಂಟುಮಾಡಿದ್ದರಿಂದ ಈ ವರದಿಯ ಆಧಾರದಲ್ಲಿ ಭಾಷಾನೀತಿಯನ್ನು ಜಾರಿಗೆ ತಂದಿದೆ.

ಇದರಿಂದಾಗಿ ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಈ ಭಾಷಾನೀತಿ ಭಾಷಾಅಲ್ಪಸಂಖ್ಯಾತರ ಭಾಷಾಕಲಿಕೆಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿದೆ. ಏಕೆಂದರೆ ಕರ್ನಾಟಕ ಸರ್ಕಾರದ ಈ ಭಾಷಾನೀತಿ ಭಾಷಾಅಲ್ಪಸಂಖ್ಯಾತರು ಅವರ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವುದರಿಂದ ವಂಚಿತರನ್ನಾಗಿ ಮಾಡಿತ್ತು. ಮತ್ತು ಕನ್ನಡವನ್ನು ಮಾತೃಭಾಷೆಯಾಗುಳ್ಳ ಮಕ್ಕಳಿಗೆ ಪ್ರಥಮ ಭಾಷೆಯಾಗಿ ಕಲಿಸಲು ಸಿದ್ಧಪಡಿಸಲಾಗಿದ್ದ ಪಠ್ಯವನ್ನು ಭಾಷಾಅಲ್ಪಸಂಖ್ಯಾತರ ಮಕ್ಕಳು ಕಲಿಯುವ ಒತ್ತಡಕ್ಕೆ ಒಳಗಾಗಿದ್ದರು. ಇದರಿಂದ ಕರ್ನಾಟಕ ಸರ್ಕಾರದ ಈ ಭಾಷಾನೀತಿಯನ್ನು ಭಾಷಾಅಲ್ಪಸಂಖ್ಯಾತರು ವಿರೋಧಿಸಿದ್ದಾರೆ. ಅಲ್ಲದೆ ಸರ್ಕಾರದ ಭಾಷಾನೀತಿಯ ವಿರುದ್ಧವಾಗಿ ನ್ಯಾಯಾಲಯಗಳ ಮೆಟ್ಟಿಲೇರಿ ನ್ಯಾಯ ಪಡೆದುಕೊಂಡು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಅವಕಾಶವನ್ನು ಪಡೆದುಕೊಂಡಿದ್ದಾರೆ. ಹೀಗೆ ಬಹುಭಾಷಿಕ ಪ್ರದೇಶದಲ್ಲಿ ಒಂದು ಭಾಷಾಸಮುದಾಯದ ಹಿತಕ್ಕಾಗಿ ಜಾರಿಗೆ ತರುವ ಭಾಷಾನೀತಿಗಳು ಇನ್ನೊಂದು ಸಮುದಾಯಕ್ಕೆ ಸಮಸ್ಯೆಗಳಾಗಿ ಪರಿಣಮಿಸಿವೆ.

ಇಂತಹ ಸಮಸ್ಯೆಗಳ ನಡುವೆಯೂ ಭಾಷಾಸಮುದಾಯಗಳು ತಮ್ಮ ಭಾಷೆಯನ್ನು ಅಭಿವೃದ್ಧಿ ಪಡಿಸಿಕೊಳ್ಳಲು ರೂಪಿಸುವ ಭಾಷಾಯೋಜನೆಗಳು ಪ್ರಧಾನವಾಗಿ ಎರಡು ಮಾದರಿಗಳಲ್ಲಿ ನಡೆಯುತ್ತವೆ. ೧.ರಚನಾ ಕೇಂದ್ರಿತ ಮಾದರಿ- ಭಾಷೆಯ ಲಿಪಿ, ಕಾಗುಣಿತ, ಬರವಣಿಗೆಯ ವಿಧಾನ, ಉಚ್ಚಾರಣೆಯ ಬಗೆಗಳು, ವ್ಯಾಕರಣ ನಿಯಮಗಳು ಈ ಮುಂತಾದ ವಲಯಗಳಲ್ಲಿ ನಿರ್ದಿಷ್ಟ ಬದಲಾವಣೆಗಳನ್ನು ಉದ್ದೇಶಿಸಿದ ಯೋಜನೆ. ೨.ಸ್ಥಾನಮಾನ ಕೇಂದ್ರಿತ ಮಾದರಿ- ಭಾಷೆಯ ವಿವಿಧ ಬಳಕೆಗಳ ಸ್ವರೂಪ ಮತ್ತು ಉದ್ದೇಶಗಳಲ್ಲಿ ಪರಿವರ್ತನೆ ತರಲು ಉದ್ದೇಶಿಸಿದ ಯೋಜನೆ. ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮವಾಗಿ ಬಳಸುವುದು, ನ್ಯಾಯಾಲಯಗಳಲ್ಲಿ ಬಳಕೆ, ವಾಣಿಜ್ಯೋದ್ಯಮಗಳಿಗೆ ಬಳಕೆ, ಆಡಳಿತದಲ್ಲಿ ಬಳಕೆ ಇತ್ಯಾದಿ, ನಿರ್ಣಯಗಳನ್ನು ಈ ಯೋಜನೆಯಲ್ಲಿ ಜಾರಿಗೊಳಿಸಿದರು. ಕನ್ನಡದಲ್ಲಿ ಎರಡನೇ ಮಾದರಿಯ ಯೋಜನೆಗೆ ನಿದರ್ಶನಗಳು ಹೆಚ್ಚು. ಸರಕಾರದ ಭಾಷಾನೀತಿಯ ಅನುಷ್ಠಾನದಲ್ಲಿ ಇಂಥ ಯೋಜನೆಗಳನ್ನು ರೂಪಿಸುವುದು, ಜಾರಿಗೊಳಿಸುವುದು ಮತ್ತು ಮೌಲ್ಯಮಾಪನ ಮಾಡುವುದು ಸೇರುತ್ತದೆ.[೧೨] ಮೊದಲನೆಯ ಮಾದರಿಯು ತನ್ನ ಭಾಷೆಯ ಒಳಗಡೆ ನಡೆಯುವ ಅಭಿವೃದ್ಧಿ ಪ್ರಕ್ರಿಯೆಯಾದರೆ ಎರಡನೆಯ ಮಾದರಿಯು ಬಹುಭಾಷೆಗಳ ನಡುವೆ ತನ್ನ ಭಾಷೆಯನ್ನು ಅಭಿವೃದ್ಧಿಪಡಿಸಿಕೊಳ್ಳುವ ಪ್ರಕ್ರಿಯೆಯಾಗಿರುತ್ತದೆ. ಸಮುದಾಯಗಳ ನಡುವೆ ಭಾಷಾ ಸಮಸ್ಯೆಗಳು ಉದ್ಭವವಾಗಿರುವುದು ತನ್ನ ಭಾಷೆಯನ್ನು ಭಾಷೆಯ ಒಳಗಡೆ ಅಭಿವೃದ್ಧಿಪಡಿಸಿಕೊಳ್ಳುವ ಯೋಜನೆಗಳನ್ನು ರೂಪಿಸಿರುವಾಗ ಅಲ್ಲ. ಬದಲಾಗಿ ಅನ್ಯಭಾಷೆಗಳ ನಡುವೆ ತನ್ನ ಭಾಷೆಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಭಾಷಾಯೋಜನೆ ಮತ್ತು ಭಾಷಾನೀತಿಯನ್ನು ರೂಪಿಸಿರುವಾಗ ಮತ್ತು ಜಾರಿಗೊಳಿಸಿರುವಾಗ. ಹೀಗಾಗಿ ಪ್ರಸ್ತುತ ಅಧ್ಯಯನದಲ್ಲಿ ಈ ಎರಡನೆಯ ಮಾದರಿಯನ್ನು ಅನುಸರಿಸಲಾಗಿದೆ. ಕರ್ನಾಟಕದಲ್ಲಿ ರೂಪಿತವಾಗಿರುವ ಭಾಷಾಯೋಜನೆ ಮತ್ತು ಭಾಷಾನೀತಿಗಳನ್ನು ಜಾರಿಗೊಳಿಸುವಾಗ ಮತ್ತು ಜಾರಿಗೊಳಿಸಿರುವುದರಿಂದ ಹಲವು ಸಮಸ್ಯೆಗಳು ಉದ್ಭವವಾಗಿವೆ. ಇವುಗಳ ಫಲಿತ ಮತ್ತು ಪರಿಣಾಮಗಳನ್ನು ಪ್ರಸ್ತುತ ಕರ್ನಾಟಕದ ಸಾಮಾಜಿಕ ಮತ್ತು ಭಾಷಾಪರಿಸರದ ಹಿನ್ನೆಲೆಯಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

### ೧.೫ ಭಾಷೆಗಳ ನಾಶ: ಮಾನವ ಜನಾಂಗಕ್ಕೆ ನಷ್ಟ

ಭಾಷಾಯೋಜನೆ ಮತ್ತು ಭಾಷಾನೀತಿಗಳನ್ನು ರೂಪಿಸಿರುವುದು ಮತ್ತು ಜಾರಿಗೊಳಿಸಿರುವುದು ಭಾಷೆಗಳ ಉಳಿವು ಮತ್ತು ಭಾಷಾಸಮಸ್ಯೆಗಳನ್ನು ಪರಿಹರಿಸುವುದಕ್ಕಾಗಿ. ಆದರೆ ಇಂತಹ ಭಾಷಾಯೋಜನೆ ಮತ್ತು ಭಾಷಾನೀತಿಗಳ ಬೆಳವಣಿಗೆಯಿಂದಾಗಿ ಇಂದು ಭಾಷೆ ಮತ್ತು ಭಾಷಿಕ ಸಮುದಾಯಗಳು ಆತಂಕ ಮತ್ತು ತಲ್ಲಣಗಳನ್ನು ಎದುರಿಸುತ್ತಿವೆ. ಇದೇ ರೀತಿಯ ಪರಿಸ್ಥಿತಿ ಮುಂದುವರೆದರೆ ಭಾಷೆಗಳು ಏನಾಗಬಹುದು ಎಂಬುದನ್ನು ಏಷಿಯಾ ಗ್ರಂಥಾಭಿವೃದ್ಧಿ (ಎಬಿಡಿ) ತ್ರೈಮಾಸಿಕದಲ್ಲಿ ಮಿಯೊಕ ಒಸಹಿತೊರವರು ಭಾಷೆಗಳ ಭವಿಷ್ಯ ಸಂಬಂಧವಾಗಿ ಪ್ರೊ. ಮೈಕೇಲ್ ಈ. ಕ್ರೌಸರು ಪರಿಭಾವಿಸಿರುವುದನ್ನು ನಿರೂಪಿಸಿದ್ದಾರೆ. ಕ್ರೌಸರ್ ಕೆಲವು ಮುನ್ಸೂಚನೆ ನೀಡಿದ್ದಾರೆ. ಅವರ ಮುನ್ನರಿವಿನ ಪ್ರಕಾರ ಹಾಲಿ ಪ್ರಪಂಚದಲ್ಲಿ ಆರು ಸಾವಿರದ ಐನೂರು ಭಾಷೆಗಳು ತೀರ ಕಡಿಮೆ

ಸಂಖ್ಯೆಯ ಭಾಷೆಗಳಾಗಿರುವುದರ ಜೊತೆಗೆ ಅವು ಮರೆಯಾಗಲಿವೆ. ಆ ಅಲ್ಪಸಂಖ್ಯಾತ ಭಾಷೆಗಳ ಸವಕಳಿ ವೇಗ ಮತ್ತು ಪ್ರಮಾಣ ಎಷ್ಟಿದೆಯೆಂದರೆ ೨೧೦೦ನೇ ಇಸವಿಯ ವೇಳೆಗೆ, ಅಂದರೆ ಇನ್ನು ಒಂದು ಶತಮಾನದಲ್ಲಿ ಸುಮಾರು ೬೫೦೦ ಭಾಷೆಗಳು ಲುಪ್ತವಾಗಿ ಹೋಗುತ್ತವೆ. ಹೀಗಾಗಿ ಇಪ್ಪತ್ತೆರಡನೆಯ ಶತಮಾನದ ವೇಳೆಗೆ ಪ್ರಪಂಚದಲ್ಲಿ ಉಳಿಯುವ ಭಾಷೆಗಳು ಅಬ್ಬಬ್ಬ ಎಂದರೆ ಮುನ್ನೂರು ಮಾತ್ರ. ತಮ್ಮ ಅಧ್ಯಯನದ ಫಲಿತಗಳನ್ನು ಪ್ರತಿಪಾದಿಸುತ್ತಾ ಪ್ರೊ.ಮೈಕೇಲ್ ಕ್ರೌಸರ್ ಪ್ರಪಂಚದಲ್ಲಿ ಇಂದು ಪ್ರಚಲಿತವಾಗಿರುವ ಭಾಷೆಗಳನ್ನು ಮೂರು ಗುಂಪಾಗಿ ವಿಂಗಡಿಸಿದ್ದಾರೆ.

೧. ಶಾಲಾ ಮಕ್ಕಳು ತಾಯಿ ಭಾಷೆಯ ಕಲಿಕೆಯನ್ನು ಈಗಾಗಲೇ ಕೈಬಿಟ್ಟಿರುವ ಮರಣೋನ್ಮುಖ ಭಾಷೆಗಳು. ಇವು ೨೫% ರಿಂದ ೫೦% ವರೆಗೆ ಇವೆ.
೨. ಶಾಲಾ ಮಕ್ಕಳು ತಾಯಿ ಭಾಷೆಯನ್ನು ಕಲಿಯುತ್ತಿದ್ದರೂ ಈ ೨೧ನೆಯ ಶತಮಾನಾಂತ್ಯದ ವೇಳೆಗೆ ಮೃತಶಯ್ಯೆಯತ್ತ ಹೆಜ್ಜೆ ಹಾಕುತ್ತಿರುವ ಅಪಾಯದಲ್ಲಿ ಸಿಲುಕಿರುವ ಭಾಷೆಗಳು. ಇವು ೪೦% ರಿಂದ ೭೫%ರ ಇವೆ.
೩. ಸುರಕ್ಷಿತ ಭಾಷೆಗಳು, ಇವು ಭವಿಷ್ಯದಲ್ಲಿ ಅಪಾಯಗಳಿಲ್ಲದ ಭಾಷೆಗಳು. ಇವು ೫% ರಿಂದ ೧೦% ರವರೆಗೆ ಇವೆ.[೧೩]

ಮೇಲಿನ ಅಂಶಗಳು ಶಿಕ್ಷಣದಲ್ಲಿ ಭಾಷಾಕಲಿಕೆ ಮತ್ತು ಬಳಕೆಯನ್ನು ಕಡಿಮೆ ಮಾಡುವುದು ಭಾಷೆಗಳ ನಾಶಕ್ಕೆ ಕಾರಣವಾಗುವ ಅಂಶವನ್ನು ಸ್ಪಷ್ಟಪಡಿಸುತ್ತವೆ. ಹೀಗೆ ಭಾಷೆಗಳು ನಶಿಸುತ್ತಾ ಹೋದರೆ ಆ ಭಾಷೆಯಲ್ಲಿರುವ ಸಾವಿರಾರು ವರ್ಷಗಳ ಜ್ಞಾನ, ಕಲೆ, ಸಾಹಿತ್ಯ, ಸಂಸ್ಕೃತಿ, ಸಂಪತ್ತು, ಇತಿಹಾಸ, ವೈವಿಧ್ಯತೆ ಎಲ್ಲವೂ ನಾಶವನ್ನು ಹೊಂದುತ್ತವೆ. ಏಕೆಂದರೆ "ಜನರ ಆತ್ಮವು ಅವರ ಭಾಷೆಯಲ್ಲಿಯೇ ಇದೆ. ಜನರನ್ನು ಹಿಡಿಯಬೇಕೆನ್ನುವವರು ಅವರ ಭಾಷೆಯ ಮೂಲಕವೇ ಹಿಡಿಯಬೇಕು. ತನ್ನದೆನ್ನುವ ಭಾಷೆ ಮನುಷ್ಯನನ್ನು ಅಲುಗಿಸುವಂತೆ ಬೇರೆ ಯಾವ ಭಾಷೆಯೂ ಅಲುಗಿಸಲಾರದು. ಅವನ ವಂಶಾವಳಿಯ ಶತಮಾನದ ಸಂಬಂಧಗಳು ಭಾಷೆಯ ಮೂಲಕ ಅವನ ಜೀವನದಲ್ಲಿ ಹೆಣೆದುಕೊಂಡಿರುತ್ತವೆ. ತನ್ನ ಭಾಷೆಯನ್ನು ಕಳೆದುಕೊಂಡರೆ ಮನುಷ್ಯನು ತನ್ನನ್ನು ಕಳೆದುಕೊಳ್ಳುತ್ತಾನೆ. ಒಂದು ಜನಪದವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ."[೧೪] ಹೀಗಾಗಿ ಒಂದು ಭಾಷೆಯ ನಾಶ ಆ ಭಾಷಿಕ ಸಮುದಾಯಕ್ಕೆ ಆದ ನಷ್ಟವಲ್ಲ. ಅದು ಇಡೀ ಮಾನವ ಜನಾಂಗಕ್ಕೆ ಆದ ನಷ್ಟ.

### ೧.೬ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ

ಸಾಮಾನ್ಯವಾಗಿ ಒಂದು ಪ್ರದೇಶದ ಭಾಷಾಸಮಸ್ಯೆಯ ಪರಿಹಾರಕ್ಕಾಗಿ ಉದ್ದೇಶ ಪೂರ್ವಕವಾಗಿ ರೂಪಿಸುವ ಕಾರ್ಯತಂತ್ರವೇ ಭಾಷಾಯೋಜನೆ. ಯಾವ ಯಾವ ಸಂದರ್ಭಗಳಲ್ಲಿ ಯಾವ ಯಾವ ಭಾಷೆಗಳು ಹೇಗೆ ಬಳಕೆಗೊಳ್ಳಬೇಕು, ಅವುಗಳ ಲಕ್ಷಣಗಳು ಹೇಗಿರಬೇಕು ಎಂಬುದರ ನೀತಿ ನಿರೂಪಣೆ ಭಾಷಾನೀತಿಯಾಗಿರುತ್ತದೆ. ಇದನ್ನು ಗಮನಿಸಿದಾಗ ಭಾಷಾಯೋಜನೆ ರೂಪುಗೊಳ್ಳುವುದು ಮತ್ತು ಭಾಷಾನೀತಿಗಳನ್ನು ಜಾರಿಗೆ ತರುವುದು ಒಂದು ಪ್ರದೇಶದ ಭಾಷಾಸಮಸ್ಯೆಯನ್ನು ಪರಿಹರಿಸುವುದೇ ಆಗಿರುತ್ತದೆ. ಇದು ಭಾಷಾನೀತಿಯನ್ನು ಜಾರಿಗೆ ತರುವ ಸರ್ಕಾರದ ರಾಜಕೀಯ ಅಧಿಕಾರದ ವ್ಯಾಪ್ತಿ ಮತ್ತು ಭಾಷಾಸಮಸ್ಯೆಯನ್ನು ಆಧರಿಸಿ ನಿರ್ಧರಿತವಾಗಿರುತ್ತದೆ. ಆದರೆ ಇದುವರೆಗೆ ಚರ್ಚಿತವಾದ ಅಂಶಗಳನ್ನು ಗಮನಿಸಿದರೆ ಭಾಷಾಸಮಸ್ಯೆಯ ಪರಿಹಾರಕ್ಕಾಗಿ ಉದ್ದೇಶ ಪೂರ್ವಕವಾಗಿ

ರೂಪಿಸಲಾಗಿರುವ ಕಾರ್ಯತಂತ್ರ ಮತ್ತು ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ಭಾಷೆಗಳು ಬಳಸಬೇಕು, ಅವುಗಳ ಲಕ್ಷಣಗಳು ಹೇಗಿರಬೇಕು ಎಂಬುದಕ್ಕೆ ಸಂಬಂಧಪಟ್ಟ ಹಾಗೆ ಜಾರಿಗೆ ತಂದಿರುವ ಭಾಷಾನೀತಿಗಳೇ ಸಮಸ್ಯೆಗಳಾಗಿ ಪರಿಣಮಿಸಿರುವುದು ಸ್ಪಷ್ಟವಾಗುತ್ತದೆ. ಏಕೆಂದರೆ ಯಾವುದೇ ಒಂದು ಪ್ರದೇಶದಲ್ಲಿ ಭಾಷಾಯೋಜನೆಗಳನ್ನು ರೂಪಿಸುವುದು ಮತ್ತು ಭಾಷಾನೀತಿಗಳನ್ನು ಜಾರಿಗೆ ತರುವುದು ಆ ಪ್ರದೇಶದಲ್ಲಿ ರಾಜಕೀಯವಾಗಿ ಪ್ರಭುತ್ವ ಹೊಂದಿದ ಸಮುದಾಯವೇ ಆಗಿರುತ್ತದೆ. ಅದು ಯಾವಾಗಲೂ ತನಗೆ ಬೇಕಾದ ಹಾಗೆ ಯೋಜನೆಗಳನ್ನು ರೂಪಿಸಿಕೊಳ್ಳುತ್ತದೆ. ಇವುಗಳ ಮೇಲೆ ಆ ಪ್ರದೇಶದ ರಾಜಕೀಯ ಮತ್ತು ಆರ್ಥಿಕ ಶಕ್ತಿಗಳು ತಮ್ಮದೇ ಆದ ಪ್ರಭಾವ ಬೀರುತ್ತಿರುತ್ತವೆ. ಅದು ಯಾವಾಗಲೂ ತನಗೆ ಬೇಕಾದ ಹಾಗೆ ಯೋಜನೆಗಳನ್ನು ರೂಪಿಸಿಕೊಳ್ಳುತ್ತದೆ.

ಅಂದರೆ ಒಂದು ರಾಜಕೀಯ ಅಧಿಕಾರದ ವ್ಯಾಪ್ತಿಗೆ ಒಳಪಡುವ ಭೂಪ್ರದೇಶದಲ್ಲಿ ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಪ್ರಬಲವಾದ ಸಮುದಾಯಗಳು ತಮಗೆ ಬೇಕಾದ ಹಾಗೆ ಭಾಷಾನೀತಿಗಳನ್ನು ಜಾರಿಗೆ ತಂದುಕೊಂಡಿವೆ. ಇಲ್ಲವೆ ತಮಗೆ ಬೇಕಾದ ಹಾಗೆ ಭಾಷಾನೀತಿಗಳನ್ನು ಜಾರಿಗೆ ತರುವಂತೆ ಅಲ್ಲಿನ ಸರ್ಕಾರಗಳ ಮೇಲೆ ಒತ್ತಡಗಳನ್ನು ಉಂಟುಮಾಡಿವೆ. ಹೀಗಾಗಿ ಬಹುಭಾಷಿಕ ಪ್ರದೇಶದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ರಾಜಕೀಯವಾಗಿ, ಆರ್ಥಿಕವಾಗಿ ಪ್ರಬಲವಲ್ಲದ ಸಮುದಾಯಗಳ ಭಾಷಾಕಲಿಕೆ, ಬಳಕೆಗೆ ಹೆಚ್ಚಿನ ಅವಕಾಶ ಕಲ್ಪಿಸಿಕೊಟ್ಟಿಲ್ಲ. ಇದಕ್ಕೆ ಸರ್ಕಾರಗಳು ಮತ್ತು ಆ ಪ್ರದೇಶದ ಪ್ರಬಲ ಭಾಷಿಕ ಸಮುದಾಯಗಳ ಪರವಾದ ಚಿಂತಕರು, ಹೋರಾಟಗಾರರು ತಮ್ಮದೇ ಆದ ಕಾರಣಗಳನ್ನು ಕೊಟ್ಟಿದ್ದಾರೆ. ಇವುಗಳನ್ನು ಕರ್ನಾಟಕದ ಭಾಷಾಪರಿಸ್ಥಿತಿಯನ್ನು ಕೇಂದ್ರೀಕರಿಸಿಕೊಂಡು ಈ ಅಧ್ಯಯನದ ಮುಂದಿನ ಭಾಗಗಳಲ್ಲಿ ಅಧ್ಯಯನಕ್ಕೆ ಪೂರಕವಾಗಿ ಚರ್ಚಿಸಲಾಗಿದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬಹುಭಾಷಿಕ ಪ್ರದೇಶದಲ್ಲಿ ರೂಪಿತವಾಗುವ ಭಾಷಾಯೋಜನೆಗಳು ಮತ್ತು ಜಾರಿಗೆ ಬರುವ ಭಾಷಾನೀತಿಗಳು ನಿಷ್ಪಕ್ಷಪಾತವಾಗಿ ಆ ಪ್ರದೇಶದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷಾಸಮುದಾಯಗಳಿಗೂ ಸಮಾನನ್ಯಾಯ ದೊರಕುವ ಹಾಗೆ ಹೊರಹೊಮ್ಮುವುದು ಅಸಂಭವವಾಗಿದೆ. ಆದುದರಿಂದ ಬಹುಭಾಷಿಕ ಪ್ರದೇಶದಲ್ಲಿ ರೂಪಿಸುವ ಭಾಷಾಯೋಜನೆಗಳು ಮತ್ತು ಜಾರಿಗೆ ತರುವ ಭಾಷಾನೀತಿಗಳು ಆ ಪ್ರದೇಶಗಳ ಭಾಷಾಸಮಸ್ಯೆಯ ಪರಿಹಾರಕ್ಕೆ ಕಂಡುಕೊಂಡ ಸಮರ್ಪಕ ಕಾರ್ಯತಂತ್ರವಾಗಿ ಕಾಣುವುದಿಲ್ಲ. ಬದಲಾಗಿ ರಾಜಕೀಯ ಮತ್ತು ಆರ್ಥಿಕವಾಗಿ ಪ್ರಬಲವಾದ ಸಮುದಾಯಗಳು ತಮ್ಮ ಭಾಷೆಯನ್ನು ಪ್ರಬಲಗೊಳಿಸಿಕೊಳ್ಳಲು ಕಂಡುಕೊಂಡಿರುವ ತಂತ್ರವಾಗಿದೆ.

ಭಾರತದಂತಹ ಪ್ರಜಾಪ್ರಭುತ್ವ ದೇಶದಲ್ಲಿ ಇಲ್ಲಿನ ಸಂವಿಧಾನದ ಚೌಕಟ್ಟಿಗೆ ಒಳಗಾಗಿ ರಾಜಕೀಯವಾಗಿ, ಆರ್ಥಿಕವಾಗಿ ಪ್ರಬಲವಲ್ಲದ ಭಾಷಾಸಮುದಾಯಗಳ ಭಾಷೆಗಳ ಕಲಿಕೆ, ಬಳಕೆ ಮತ್ತು ಅಭಿವೃದ್ಧಿಗೆ ಭಾಷಾನೀತಿಗಳಲ್ಲಿ ಅವಕಾಶಗಳನ್ನು ಕಲಿಸಿಕೊಟ್ಟಿದ್ದರೂ ಅವುಗಳು ಅನುಷ್ಠಾನವಾಗದೆ ಹಿಂದೆ ಉಳಿದುಕೊಂಡಿವೆ. ಇದರಿಂದ ಭಾರತ ಸ್ವತಂತ್ರಗೊಂಡು ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ಭಾಷಾನೀತಿಗಳನ್ನು ಜಾರಿಗೆ ತಂದ ನಂತರದಲ್ಲೂ ಪ್ರಬಲವಲ್ಲದ

ಭಾಷಾಸಮುಯದಾಯಗಳು ಭಾಷಾಸಮಸ್ಯೆಗಳಿಂದ ಬಿಡುಗಡೆಗೊಳ್ಳಲು ಸಾಧ್ಯವಾಗಿಲ್ಲ. ಪ್ರಭುತ್ವ ಶಕ್ತಿಗಳ ಇಂತಹ ತರತಮಗಳ ನಡುವೆಯೇ ಭಾರತ ಮತ್ತು ಕರ್ನಾಟಕದಲ್ಲಿ ಜಾರಿಗೆ ತಂದಿರುವ ಭಾಷಾನೀತಿಗಳ ನಡುವೆ ಹೊಂದಾಣಿಕೆಯ ಕೊರತೆ, ಶಿಕ್ಷಣದಲ್ಲಿ ಭಾಷೆಗಳನ್ನು ಕಲಿಸಲು ಅನುಸರಿಸುವ ಅವೈಜ್ಞಾನಿಕ ವಿಧಾನ, ವಿವಿಧ ಹಂತ ಮತ್ತು ವಿಭಾಗಗಳ ಬೋಧನಾಮಾಧ್ಯಮದಲ್ಲಿ ಇರುವ ಭಾಷಾವ್ಯತ್ಯಾಸಗಳು, ಬೇರೆಬೇರೆ ಕಾರಣಗಳಿಗಾಗಿ ಹಲವು ಭಾಷೆಗಳನ್ನು ಆಡಳಿತದಲ್ಲಿ ಬಳಸಬೇಕಿರುವುದು, ಕಾಲಕಾಲಕ್ಕೆ ಯಾಂತ್ರಿಕ ಉಪಕರಣಗಳಲ್ಲಿ ಆಗಿರುವ ಬದಲಾವಣೆ ಭಾಷಾನೀತಿಗಳ ಮೇಲೆ ತನ್ನದೇ ಆದ ಪ್ರಭಾವ ಬೀರಿವೆ. ಹೀಗಾಗಿ ಒಂದು ಕಾಲದಲ್ಲಿ ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ಜಾರಿಗೆ ತಂದ ಭಾಷಾನೀತಿಗಳೇ ಮತ್ತೊಂದು ಕಾಲದಲ್ಲಿ ಸಮಸ್ಯೆಗಳಾಗಿ ಪರಿಣಮಿಸಿವೆ.

ಈ ಸಮಸ್ಯೆಗಳು ಭಾಷಿಕ ವಿಚಾರಕ್ಕೆ ಮಾತ್ರ ಸೀಮಿತಗೊಳ್ಳದೆ ಆಡಳಿತಾತ್ಮಕವಾದ, ಶೈಕ್ಷಣಿಕವಾದ, ಸಾಮಾಜಿಕವಾದ, ಸಾಂಸ್ಕೃತಿಕವಾದ, ರಾಜಕೀಯವಾದ, ಆರ್ಥಿಕವಾದ ಸಮಸ್ಯೆಗಳ ಸ್ವರೂಪ ಪಡೆದಿವೆ. ಈ ಬಗೆಗೆ ಪರ ಮತ್ತು ವಿರೋಧಿ ನೆಲೆಗಟ್ಟಿನಲ್ಲಿ ಈಗಾಗಲೇ ಸಾಕಷ್ಟು ವಿಸ್ತಾರವಾದ ಚರ್ಚೆಗಳು ನಡೆದಿವೆ. ಈಗಲೂ ನಡೆಯುತ್ತಿವೆ. ಆದರೂ ಕರ್ನಾಟಕದಲ್ಲಿನ ಭಾಷಾಸಮಸ್ಯೆಯನ್ನು ಸಮರ್ಪಕವಾಗಿ ಬಿಡಿಸಲು ಸಾಧ್ಯವಾಗಿಲ್ಲ. ಅಷ್ಟರಮಟ್ಟಿಗೆ ಕರ್ನಾಟಕದ ಭಾಷಾಸಮಸ್ಯೆಗಳು ಜಟಿಲ ಸ್ವರೂಪ ಪಡೆದಿವೆ ಮತ್ತು ಭಾಷಾಸಮಸ್ಯೆಗಳು ಕರ್ನಾಟಕದಲ್ಲಿ ದಿನದಿಂದ ದಿನಕ್ಕೆ ತೀವ್ರಗೊಂಡಿವೆ. ಇವುಗಳ ಬಗೆಗೆ ಕರ್ನಾಟಕದಲ್ಲಿ ಇದುವರೆಗೆ ಅಧ್ಯಯನಗಳು ಆಗಿಲ್ಲ. ಇದರಿಂದ ಸಮಕಾಲೀನ ಕರ್ನಾಟಕದ ಸಾಮಾಜಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆ. ಇದು ಕರ್ನಾಟಕದ ಒಟ್ಟು ಭಾಷಾಸಮಸ್ಯೆಗಳ ಹಿನ್ನೆಲೆಯಲ್ಲಿ ನಡೆಸಿರುವ ಅಧ್ಯಯನವಲ್ಲ. ಕರ್ನಾಟಕದ ಭಾಷಾಸಮಸ್ಯೆ ಪರಿಹಾರಕ್ಕಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ರೂಪಿಸಲಾಗಿರುವ ಭಾಷಾಯೋಜನೆಗಳು ಮತ್ತು ಜಾರಿಗೆ ತಂದಿರುವ ಭಾಷಾನೀತಿಗಳನ್ನು ಆಧರಿಸಿ ಮಾತ್ರ ಕೈಗೊಂಡಿರುವ ಅಧ್ಯಯನವಾಗಿದೆ.

ಈ ಅಧ್ಯಯನದಲ್ಲಿ ಒಟ್ಟು ಏಳು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಭಾಷೆ ಎಂದರೇನು? ಭಾಷೆ ರೂಪುಗೊಳ್ಳುವ ಬಗೆ, ಭಾಷೆಯ ಮಹತ್ವ, ಬಹುಭಾಷಿಕ ಪರಿಸರದಲ್ಲಿನ ಭಾಷಾಸಮಸ್ಯೆ, ಭಾಷಾಯೋಜನೆಗಳನ್ನು ರೂಪಿಸುವ ಮತ್ತು ಭಾಷಾನೀತಿಗಳನ್ನು ಜಾರಿಗೆ ತರುವ ಉದ್ದೇಶ, ಅವುಗಳ ಹಿಂದಿರುವ ಒತ್ತಡಗಳು, ಭಾಷಾಯೋಜನೆ ಮತ್ತು ಭಾಷಾನೀತಿಗಳ ಸ್ವರೂಪ, ಭಾಷೆಗಳ ನಾಶದಿಂದ ಆಗುವ ನಷ್ಟ ಮತ್ತು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆಯನ್ನು ಕುರಿತು ಪ್ರಸ್ತಾಪಿಸಲಾಗಿದೆ. ಎರಡನೇಯ ಅಧ್ಯಾಯದಲ್ಲಿ ಏಕೀಕರಣದ ನಂತರದ ಕರ್ನಾಟಕದಲ್ಲಿ ಕನ್ನಡ ಭಾಷೆಗೆ ಪೂರಕವಾಗಿ, ಭಾಷಾಯೋಜನೆಗಳು ರೂಪಿಸುವಂತೆ, ಭಾಷಾನೀತಿಗಳನ್ನು ಜಾರಿಗೆ ತರುವಂತೆ ಪ್ರಬಲ ಒತ್ತಡ ಉಂಟುಮಾಡಿರುವುದು, ನಾಡು ಮತ್ತು ನುಡಿಯ ಸಂಬಂಧ. ಇದರ ಅನ್ಯೋನ್ಯತೆ ಕುರಿತು ನಡೆದಿರುವ ಚಿಂತನೆಗಳು 'ಕರ್ನಾಟಕದ ಭೂಪ್ರದೇಶ ಮತ್ತು ಭಾಷಾಬಳಕೆ'

ಎಂಬ ಶೀರ್ಷಿಕೆಯ ಉಪಶೀರ್ಷಿಕೆಯಾದ 'ಏಕೀಕರಣ ಪೂರ್ವ ಕರ್ನಾಟಕದ ಭೂಪ್ರದೇಶ ಮತ್ತು ಭಾಷಾಪರಿಸ್ಥಿತಿ' ಎಂಬ ಭಾಗದಲ್ಲಿ ಇವೆ.

ಎರಡನೆಯ ಉಪಶೀರ್ಷಿಕೆ 'ಆಂಗ್ಲರ ಆಡಳಿತ: ಕರ್ನಾಟಕದಲ್ಲಿ ಭಾಷಾ ಬಳಕೆ ಮತ್ತು ಸಮಸ್ಯೆಗಳು' ಎಂಬ ಭಾಗ. ಇದರಲ್ಲಿ ಏಕೀಕರಣ ನಂತರದ ಕರ್ನಾಟಕದಲ್ಲಿ ರೂಪಿಸಲಾಗಿರುವ ಭಾಷಾಯೋಜನೆ ಮತ್ತು ಜಾರಿಗೆ ತರಲಾಗಿರುವ ಭಾಷಾನೀತಿಗಳಿಂದ ಉದ್ಭವವಾಗಿರುವ ಸಮಸ್ಯೆಗಳಲ್ಲಿ ಪ್ರಧಾನ ಪಾತ್ರ ಇಂಗ್ಲಿಶ್ ಭಾಷೆಯದು. ಹೀಗಾಗಿ ಇಂಗ್ಲಿಶ್ ಕರ್ನಾಟಕದ ಮಣ್ಣಲ್ಲಿ ಬೇರುಬಿಟ್ಟದ್ದು ಹಾಗೂ ಕನ್ನಡಿಗರಲ್ಲಿ ಕರ್ನಾಟಕ ಏಕೀಕರಣ ಹೋರಾಟದ ಭಾವನೆ ಮೊಳಕೆಯೊಡೆಯಲು ಕಾರಣವಾದದ್ದು ಆಂಗ್ಲರ ಆಡಳಿತ. ಆದ್ದರಿಂದ ಈ ಭಾಗದಲ್ಲಿ ಆಂಗ್ಲರ ಆಡಳಿತದಲ್ಲಿ ಭಾಷಾಬಳಕೆಯ ಸ್ವರೂಪ ಮತ್ತು ಕರ್ನಾಟಕ ಏಕೀಕರಣ ಹೋರಾಟದ ಹಿಂದಿನ ಉದ್ದೇಶಗಳನ್ನು ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಮೂರನೆಯ ಉಪಶೀರ್ಷಿಕೆಯಾದ 'ಏಕೀಕರಣ ನಂತರದ ಕರ್ನಾಟಕ: ಭಾಷಾಕಲಿಕೆ, ಬಳಕೆ ಮತ್ತು ಸಮಸ್ಯೆಗಳ ಸ್ವರೂಪ' ಎಂಬ ಭಾಗದಲ್ಲಿ ಏಕೀಕರಣ ನಂತರದ ಕರ್ನಾಟಕದಲ್ಲಿ ತರಲಾಗಿರುವ ಭಾಷಾನೀತಿಗಳು, ಅವುಗಳ ಸ್ವರೂಪ, ಭಾಷಾನೀತಿಗಳನ್ನು ಜಾರಿಗೆ ತರುವುದರ ಹಿಂದೆ ಇದ್ದ ಒತ್ತಡಗಳು, ಅವುಗಳಿಗಿರುವ ಮಿತಿ, ಅವುಗಳನ್ನು ಜಾರಿಗೆ ತಂದಿದ್ದರಿಂದ ಉದ್ಭವವಾಗಿರುವ ಸಮಸ್ಯೆ, ಸಮಸ್ಯೆಗಳ ಸ್ವರೂಪ, ಸಮಸ್ಯೆಗಳು ಉದ್ಭವವಾಗುವುದಕ್ಕೆ ಕಾರಣವಾದ ಅಂಶಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಇನ್ನು ಮೂರನೇ ಅಧ್ಯಾಯದಲ್ಲಿ ಶಿಕ್ಷಣದಲ್ಲಿ ಭಾಷೆಗಳನ್ನು ಕಲಿಸಲು ಜಾರಿಗೆ ತಂದಿರುವ ಭಾಷಾನೀತಿ. ಅವುಗಳ ಹಿಂದಿನ ಉದ್ದೇಶ, ಸ್ವರೂಪವನ್ನು ಕುರಿತು ಚರ್ಚಿಸುತ್ತಲೇ ಅವುಗಳಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಶಿಕ್ಷಣ ಮತ್ತು ಭಾಷಾಮಾಧ್ಯಮ ಕುರಿತಾಗಿ ಚರ್ಚೆ ಮಾಡಲಾಗಿದ್ದು ಇಲ್ಲಿ ಭಾಷಾಮಾಧ್ಯಮದ ಬಗೆಗೆ ಇದುವರೆಗೆ ವ್ಯಕ್ತವಾಗಿರುವ ಪ್ರಮುಖ ಚಿಂತನೆಗಳನ್ನು ಭಾಷಾಮಾಧ್ಯಮದ ಸ್ವರೂಪದಲ್ಲಿ ವಿವರಿಸಿಕೊಳ್ಳುತ್ತ ಕರ್ನಾಟಕ ಸರ್ಕಾರ ಶಿಕ್ಷಣದಲ್ಲಿ ಬಳಸಬೇಕಾದ ಭಾಷಾಮಾಧ್ಯಮಕ್ಕೆ ಸಂಬಂಧಿಸಿದಂತೆ ಜಾರಿಗೆ ತಂದಿರುವ ಭಾಷಾನೀತಿ, ಅವುಗಳ ಸ್ವರೂಪ, ಅವುಗಳನ್ನು ಅನುಷ್ಠಾನಕ್ಕೆ ತರಲು ಇರುವ ಸಮಸ್ಯೆಗಳು ಮತ್ತು ಅನುಷ್ಠಾನಕ್ಕೆ ತಂದಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಐದನೇ ಅಧ್ಯಾಯದಲ್ಲಿ ಕರ್ನಾಟಕದ ಆಡಳಿತದಲ್ಲಿ ಬಳಕೆಯಾಗಬೇಕಾದ ಭಾಷೆಗೆ ಸಂಬಂಧಿಸಿದಂತೆ ಆಡಳಿತ ಭಾಷೆಯ ಸ್ವರೂಪವನ್ನು ವಿವರಿಸಿಕೊಳ್ಳುತ್ತಾ ಕರ್ನಾಟಕ ಸರ್ಕಾರ ಆಡಳಿತದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೆ ಜಾರಿಗೆ ತಂದಿರುವ ಭಾಷಾನೀತಿಯ ಪ್ರಕಾರ ಆಡಳಿತದಲ್ಲಿ ಭಾಷೆಗಳನ್ನು ಅನುಷ್ಠಾನಕ್ಕೆ ತರಲು ಇರುವ ಸಮಸ್ಯೆಗಳು ಮತ್ತು ತಂದಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ಗುರುತಿಸಲಾಗಿದೆ. ಅದಕ್ಕೆ ಹಿನ್ನೆಲೆಯಾಗಿ ರಾಜತ್ವ ಮತ್ತು ಆಂಗ್ಲರ ಆಡಳಿತದಲ್ಲಿ ಬಳಕೆಯಾಗುತ್ತಿದ್ದ ಭಾಷೆಗಳ ಸ್ವರೂಪವನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಆರನೇ ಅಧ್ಯಾಯದಲ್ಲಿ ನ್ಯಾಯಾಲಯಗಳಲ್ಲಿ ಬಳಕೆಯಾಗುವ ಭಾಷೆಯ ಸ್ವರೂಪ

ಮತ್ತು ಭಾಷಾಸಮಸ್ಯೆಗಳ ವಿವರಣೆ ಇದೆ. ಏಳನೇ ಅಧ್ಯಾಯ ಸಮಾರೋಪವಾಗಿದ್ದು ಈ ಅಧ್ಯಾಯದಲ್ಲಿ ಅಧ್ಯಯನದಿಂದ ಕಂಡುಕೊಂಡಿರುವ ಒಟ್ಟು ಸಮಸ್ಯೆಗಳನ್ನು ಫಲಿತಗಳ ರೂಪದಲ್ಲಿ ನೀಡಿ ಮುಂದೆ ಕೈಗೊಳ್ಳಬಹುದಾದ ಅಧ್ಯಯನದ ಸಾಧ್ಯತೆಗಳನ್ನು ಸೂಚಿಸಲಾಗಿದೆ.

ಇಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ವಿಷಯ **'ಕರ್ನಾಟಕದಲ್ಲಿ ಭಾಷಾಯೋಜನೆ ಮತ್ತು ಭಾಷಾನೀತಿ: ಸಮಸ್ಯೆ, ಸಾಧ್ಯತೆ'**ಗಳನ್ನು ಕುರಿತದ್ದು. ಭಾಷಾಸಮಸ್ಯೆ ಕರ್ನಾಟಕದ ಭೂಪ್ರದೇಶಕ್ಕೆ ಹೊಸತೇನೂ ಅಲ್ಲ. ಅದು ಕ್ರಿಸ್ತಪೂರ್ವದಿಂದಲೂ ಇದೆ. ಆದರೆ ಅದು ಆಂಗ್ಲರ ಆಡಳಿತದ ಕೊನೆಯವರೆಗು ಭಾರತದ ಜನಸಾಮಾನ್ಯರ ಬದುಕಿನಲ್ಲಿ ತೀವ್ರಸ್ವರೂಪದ ಬಿಕ್ಕಟ್ಟು ಸೃಷ್ಟಿಸಿಲ್ಲ. ಏಕೆಂದರೆ ಆಗ ಭಾರತದಲ್ಲಿ ಶಿಕ್ಷಣ ಕಲಿಯುತ್ತಿದ್ದವರು, ಆಡಳಿತದಲ್ಲಿ ಪಾಲ್ಗೊಳ್ಳುತ್ತಿದ್ದವರು, ಉದ್ಯೋಗವನ್ನು ಅರಸಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದವರು ಮತ್ತು ಬರುತ್ತಿದ್ದವರ ಸಂಖ್ಯೆ ಕಡಿಮೆ ಇತ್ತು. ಆದರೆ ಆಂಗ್ಲರ ಆಡಳಿತದಲ್ಲಿ ಭಾರತೀಯ ಶಿಕ್ಷಣ ಸಾರ್ವತ್ರೀಕರಣಗೊಂಡದ್ದು, ಆಡಳಿತದಲ್ಲಿ ಜನಸಾಮಾನ್ಯರ ಪಾಲ್ಗೊಳ್ಳುವಿಕೆ ಹೆಚ್ಚಾದದ್ದು, ಉದ್ಯೋಗಗಳನ್ನು ಅರಸಿ ಜನರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಲು ಆರಂಭಿಸಿದ್ದು ಕರ್ನಾಟಕದಲ್ಲಿ ಭಾಷಾಸಮಸ್ಯೆ ತೀವ್ರಸ್ವರೂಪ ಪಡೆದುಕೊಳ್ಳಲು ಕಾರಣವಾಗಿದೆ. ಇದರ ಜೊತೆಗೆ ಭಾರತ ಬ್ರಿಟೀಷರಿಂದ ರಾಜಕೀಯವಾಗಿ ಬಿಡುಗಡೆ ಪಡೆದ ನಂತರ ಕೇಂದ್ರದಲ್ಲಿ ಅಧಿಕಾರ ಹಿಡಿದಿರುವ ಸರ್ಕಾರಗಳು ಜನಸಮುದಾಯಗಳ ಒತ್ತಡಗಳಿಗೆ ಮಣಿದು ಭಾಷಾವಾರು ರಾಜ್ಯಗಳನ್ನು ರಚನೆ ಮಾಡಿವೆ. ಇದರಿಂದ ದೇಶದಲ್ಲಿ ಭಾಷೆಯ ಆಧಾರದಲ್ಲಿ ರಾಜ್ಯಗಳು ರಚನೆಯಾಗಿವೆ. ಇಲ್ಲಿ ಯಾವ ಭಾಷೆಯ ಆಧಾರದಲ್ಲಿ ರಾಜ್ಯಗಳು ರಚನೆಯಾಗಿವೆಯೋ ಆ ರಾಜ್ಯದಲ್ಲಿ ಆ ಭಾಷೆಯನ್ನು ಮಾತನಾಡುವ ಜನರು ಬಹುಸಂಖ್ಯಾತರಾಗಿದ್ದಾರೆ. ಇವರಲ್ಲಿನ ಒಂದು ವರ್ಗ ತಮ್ಮ ಸಮುದಾಯದ ಭಾಷೆಯ ಅಭಿವೃದ್ಧಿಗೆ ಪೂರಕವಾಗುವ ರೀತಿಯಲ್ಲಿ ಭಾಷಾಯೋಜನೆಗಳನ್ನು ರೂಪಿಸಬೇಕು, ಹಾಗೆಯೇ ಭಾಷಾನೀತಿಗಳನ್ನು ಜಾರಿಗೆ ತರಬೇಕು ಎಂದು ಆಯಾ ರಾಜ್ಯದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳ ಮೇಲೆ ಒತ್ತಡಗಳನ್ನು ಉಂಟುಮಾಡಿದ್ದಾರೆ.

ಇದೇ ರೀತಿಯಲ್ಲಿ ಕರ್ನಾಟಕದಲ್ಲಿಯೂ ಒತ್ತಡಗಳು ಉಂಟಾಗಿವೆ. ಈ ಒತ್ತಡಗಳು ಬರೀ ಭಾಷಿಕ ಹಿನ್ನೆಲೆಯಲ್ಲಿ ಹುಟ್ಟಿದವುಗಳಲ್ಲ. ಭಾಷೆಯ ಮೇಲಿನ ಅಭಿಮಾನ, ಜಾತಿ, ಧರ್ಮ, ಅಸಮಾನತೆ, ಆರ್ಥಿಕತೆ, ಉದ್ಯೋಗ, ಪ್ರತಿಷ್ಠೆ, ಗಡಿವಿವಾದ, ನದಿವಿವಾದ ಇತ್ಯಾದಿಗಳಿಂದ ಹುಟ್ಟಿದವುಗಳಾಗಿವೆ. ಇಂತಹ ಸಮಸ್ಯೆಗಳ ನಡುವೆ ಭಾರತ ಸ್ವತಂತ್ರ ಪಡೆದ ನಂತರ ದೇಶದೊಳಗಿನ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆಯನ್ನು ಬಳಕೆಗೆ ತರುವ ಉದ್ದೇಶದಿಂದ ಹಿಂದಿಯನ್ನು ಭಾರತದ ಆಡಳಿತ ಭಾಷೆಯನ್ನಾಗಿಸುವ ಪ್ರಯತ್ನ ಮಾಡಲಾಗಿದೆ. ಈ ಪ್ರಯತ್ನಕ್ಕೆ ಪ್ರಾದೇಶಿಕ ಭಾಷಾಸಮುದಾಯಗಳಿಂದ ತೀವ್ರವಿರೋಧ ವ್ಯಕ್ತವಾಗಿದೆ. ಈ ವಿರೋಧ ಮತ್ತು ದೇಶದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿಯನ್ನು ಬಳಕೆಗೆ ತರಲು ಸಿದ್ಧತೆ ಮಾಡಿಕೊಳ್ಳದೆ ಇದ್ದುದರಿಂದ ದೇಶದ ಆಡಳಿತದಲ್ಲಿ ಇಂಗ್ಲಿಶ್ ಮುಂದುವರಿಕೆಗೆ ಭಾರತ ಸಂವಿಧಾನ ರಚನಾಕಾರರು

ಸಂವಿಧಾನ ಅಂಗೀಕೃತವಾದ ನಂತರದಲ್ಲಿಯೂ ೧೫ ವರ್ಷಗಳ ಕಾಲಾವಧಿಯವರೆಗೆ ಅವಕಾಶ ಕಲ್ಪಿಸಿದ್ದಾರೆ. ಹೀಗಾಗಿ ಸ್ವಾತಂತ್ರ್ಯಾನಂತರದ ಭಾರತ ಮತ್ತು ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್ ಮುಂದುವರಿದಿದೆ.

ಇವುಗಳ ಜೊತೆಗೆ ಭಾರತ ಸಂವಿಧಾನ ಭಾಷಾಅಲ್ಪಸಂಖ್ಯಾತರಿಗೆ ನೀಡಿರುವ ಭಾಷಾಸ್ವಾತಂತ್ರ್ಯವಿದೆ. ಇದಕ್ಕೆ ಅಧೀನವಾಗಿ ಕರ್ನಾಟಕ ಏಕೀಕರಣಗೊಂಡ ನಂತರ ಇಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಭಾಷಾನೀತಿಗಳನ್ನು ಜಾರಿಗೆ ತರುವ ಪ್ರಯತ್ನ ಮಾಡಿವೆ. ಇದರಿಂದಾಗಿ ಕರ್ನಾಟಕ ಏಕೀಕರಣಗೊಂಡ ನಂತರ ಹಲವು ಭಾಷೆಗಳನ್ನು ಕಲಿಯುವುದು ಮತ್ತು ಬಳಸುವುದು ಕಡ್ಡಾಯವಾಗಿದೆ. ಹೀಗಾಗಿ ಸರ್ಕಾರಗಳು ರೂಪಿಸಿರುವ ಭಾಷಾನೀತಿಗಳೇ ಸಮಸ್ಯೆಗಳಾಗಿ ಪರಿಣಮಿಸಿವೆ. ಈ ಸಮಸ್ಯೆಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವಿಂಗಡಿಸಬಹುದು. ಒಂದು ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಭಾಷಾನೀತಿಗಳನ್ನು ಅನುಷ್ಠಾನಗೊಳಿಸಲು ಇರುವ ಸಮಸ್ಯೆಗಳು. ಎರಡು ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಭಾಷಾನೀತಿಗಳನ್ನು ಅನುಷ್ಠಾನಗೊಳಿಸಲು ಪ್ರಯತ್ನಿಸಿರುವುದರಿಂದ ಉದ್ಭವಿಸಿರುವ ಸಮಸ್ಯೆಗಳು. ಇವುಗಳ ಬಗೆಗೆ ಕರ್ನಾಟಕದಲ್ಲಿ ಇದುವರೆಗೆ ಅಧ್ಯಯನಗಳು ಆಗಿಲ್ಲ. ಹೀಗಾಗಿ **'ಕರ್ನಾಟಕದಲ್ಲಿ ಭಾಷಾಯೋಜನೆ ಮತ್ತು ಭಾಷಾನೀತಿ: ಸಮಸ್ಯೆ, ಸಾಧ್ಯತೆಗಳು'** ಎಂಬ ವಿಷಯ ಕುರಿತ ಅಧ್ಯಯನ ಇದುವರೆಗೆ ಭಾಷೆಯನ್ನು ಕುರಿತು ಆಗಿರುವ ಅಧ್ಯಯನಗಳಿಗಿಂತ ಭಿನ್ನವಾಗಿರುತ್ತದೆಂದು ಭಾವಿಸಿ ಕೈಗೊಳ್ಳಲಾಗಿದೆ.

ಈ ಅಧ್ಯಯನದ ಮುಖ್ಯ ಉದ್ದೇಶ ಯಾವುದೇ ಭಾಷೆಯ ಕಲಿಕೆ ಮತ್ತು ಬಳಕೆ ಹೀಗೇ ಇರಬೇಕು. ಹೀಗೆ ಇರಬಾರದು ಎಂದು ಹೇಳುವುದಲ್ಲ ಅಥವಾ ಯಾವುದೋ ಒಂದು ಭಾಷೆಯ ಪರವಾಗಿ ನಿಂತು ಇನ್ನೊಂದು ಭಾಷೆಯನ್ನು ವಿರೋಧಿಸಿ ವಿಚಾರಗಳನ್ನು ಮಂಡಿಸುವುದಲ್ಲ. ಬದಲಾಗಿ ಯಾವ ಯಾವ ಉದ್ದೇಶಗಳಿಗಾಗಿ ಯಾವ ಯಾವ ಭಾಷೆಗಳನ್ನು ಕಲಿಯಬೇಕು, ಬಳಸಬೇಕು ಎಂದು ಯೋಜಿಸಲಾಗಿದೆ. ಅದಕ್ಕೆ ಸಂಬಂಧಿಸಿದ ಹಾಗೆ ಭಾಷಾನೀತಿಗಳನ್ನು ಜಾರಿಗೆ ತರಲಾಗಿದೆ. ಈ ಪ್ರಕಾರ ಕರ್ನಾಟಕದಲ್ಲಿ ಭಾಷೆಗಳನ್ನು ಕಲಿಯುವುದಕ್ಕೆ, ಬಳಸುವುದಕ್ಕೆ ಸಾಧ್ಯವಾಗುತ್ತಿದೆಯೇ? ಸಾಧ್ಯವಾಗದಿದ್ದರೆ ಅದಕ್ಕೆ ಕಾರಣಗಳೇನು? ಸರ್ಕಾರದ ಭಾಷಾನೀತಿಯ ಪ್ರಕಾರ ಭಾಷೆಗಳನ್ನು ಕಲಿಯುತ್ತಿರುವುದರಿಂದ, ಬಳಸುತ್ತಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳೇನು ಎಂಬುದನ್ನು ಗುರುತಿಸುವುದೇ ಆಗಿದೆ. ಈ ಸಮಸ್ಯೆಗಳ ಸ್ವರೂಪ ಮತ್ತು ಉದ್ಭವವಾಗಿರುವ ಸಮಸ್ಯೆಗಳು ಇಲಾಖೆಯಿಂದ ಇಲಾಖೆಗೆ ಮತ್ತು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿವೆ. ಹಾಗೆಯೇ ಇದಕ್ಕೆ ಸಂಬಂಧಿಸಿದ ಹಾಗೆ ಸರ್ಕಾರಗಳು ಜಾರಿಗೆ ತಂದಿರುವ ಭಾಷಾಯೋಜನೆ ಮತ್ತು ಭಾಷಾನೀತಿಗಳಲ್ಲೂ ಬದಲಾವಣೆಗಳಾಗುತ್ತಾ ಬಂದಿವೆ. ಆದರೆ ಅವೆಲ್ಲವನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸುವುದರಿಂದ ಅಧ್ಯಯನ ವ್ಯಾಪ್ತಿ ವಿಸ್ತಾರವಾಗಿ ಅಧ್ಯಯನ ಬೇರೆಯದೇ ಆದ ವಿಚಾರಗಳ ಕಡೆಗೆ ಹೊರಳುವ ಸಾಧ್ಯತೆ ಇದೆ. ಹೀಗಾಗಿ ಅಧ್ಯಯನಕ್ಕೆ ಒಂದು ಚೌಕಟ್ಟನ್ನು ಒದಗಿಸಿಕೊಳ್ಳುವ ಉದ್ದೇಶದಿಂದ ಭಾಷಾಯೋಜನೆ ಮತ್ತು ಭಾಷಾನೀತಿಗಳ ಒಟ್ಟು ಸಾರವನ್ನು

ಪ್ರಧಾನವಾಗಿಸಿಕೊಂಡು ಅಧ್ಯಯನದ ವ್ಯಾಪ್ತಿಯನ್ನು ಏಕೀಕರಣ ನಂತರದ ಕರ್ನಾಟಕಕ್ಕೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ.

ಏಕೆಂದರೆ ಭಾರತದಲ್ಲಿ ಭಾಷಾಕಲಿಕೆ ಮತ್ತು ಬಳಕೆಗೆ ಸಂಬಂಧಿಸಿದ ಹಾಗೆ ವ್ಯವಸ್ಥಿತವಾಗಿ ಭಾಷಾಯೋಜನೆಗಳನ್ನು ರೂಪಿಸುವ ಮತ್ತು ನೀತಿಗಳನ್ನು ಜಾರಿಗೆ ತರುವ ಪಯತ್ನ ಆಗಿರುವುದೇ ಭಾರತ ಸ್ವತಂತ್ರಗೊಂಡು ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರ. ಇದಕ್ಕಿಂತ ಹಿಂದೆಯೂ ಭಾರತದಲ್ಲಿ ಭಾಷಾಕಲಿಕೆ ಮತ್ತು ಬಳಕೆಗೆ ಸಂಬಂಧಿಸಿದಂತೆ ಯೋಜನೆ ಮತ್ತು ನೀತಿಗಳು ಇದ್ದರೂ ಅವು ಜನತೆಯಿಂದ ಆಯ್ಕೆಯಾದ ಸರ್ಕಾರಗಳಿಂದ ರೂಪಿತವಾದ ನಿಯಮಗಳಲ್ಲ. ಅವೆಲ್ಲವೂ ಸರ್ವಾಧಿಕಾರಿ ಧೋರಣೆಯ ರಾಜತ್ವದ ಆಡಳಿತ ಮತ್ತು ಬ್ರಿಟೀಷರಿಂದ ರೂಪಿತ ಆಗಿರುವಂತಹವು. ಹೀಗಾಗಿ ಪ್ರಜಾಪ್ರಭುತ್ವದಲ್ಲಿ ಜನತೆಯಿಂದ ಆಯ್ಕೆಯಾದ ಸರ್ಕಾರಗಳು ತೆಗೆದುಕೊಂಡಿರುವ ಭಾಷಾನಿಲುವುಗಳು ಮತ್ತು ಏಕಾಧಿಪತ್ಯದ ಅಧಿಕಾರ ಹೊಂದಿದ್ದ ರಾಜರುಗಳು ತೆಗೆದುಕೊಂಡಿದ್ದ ಭಾಷಾನಿಲುವುಗಳಲ್ಲಿ ವ್ಯತ್ಯಾಸಗಳಿವೆ. ಹಾಗೆಯೇ ಇವುಗಳ ಅನುಷ್ಠಾನದ ವಿಚಾರದಲ್ಲಿ ಭಿನ್ನತೆಗಳಿವೆ. ಆದರೂ ರಾಜತ್ವ ಮತ್ತು ಬ್ರಿಟೀಷರ ಆಡಳಿತದಲ್ಲಿ ತೆಗೆದುಕೊಂಡಿದ್ದ ಭಾಷಾನಿಲುವುಗಳು ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ತೆಗಿದುಕೊಂಡಿರುವ ಭಾಷಾನೀತಿಗಳ ಮೇಲೆ ತಮ್ಮದೇ ಆದ ಪರಿಣಾಮ ಬೀರಿವೆ. ಹೀಗಾಗಿ ಅವುಗಳನ್ನು ಈ ಅಧ್ಯಯನದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**ಟಿಪ್ಪಣಿಗಳು**

೧. ಚಿದಾನಂದಮೂರ್ತಿ ಎಂ., ಭಾಷಾವಿಜ್ಞಾನದ ಮೂಲತತ್ವಗಳು, ಪುಟ ೨೩
೨. ನಾರಾಯಣ ಕೆ.ವಿ., ನಮ್ಮ ನುಡಿ, ಪುಟ ೯೭
೩. ರಾಧಾಕೃಷ್ಣ ಕೆ., ಭಾಷಾ ಸಮಸ್ಯೆಯ ಕುರಿತು, ಪುಟ ೧೪
೪. ರಂಗನಾಥ ಕಂಟನಕುಂಟೆ, ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ, ಪುಟ ೧
೫. ಸುದರ್ಶನ ಸ.ರ., ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು,ಪುಟ ೨
೬. ನಾಗರಾಜ ಡಿ.ಆರ್., (ಸಂ) ಅಗ್ರಹಾರ ಕೃಷ್ಣಮೂರ್ತಿ, ಸಂಸ್ಕೃತಿ ಕಥನ, ಪುಟ ೭೦
೭. ಮಲ್ಲಿಕಾರ್ಜುನ ಭ. (ಸಂ) ನಾರಾಯಣ ಕೆ.ವಿ. ಭಾಷೆ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೧, ಪುಟ.೩೪೪
೮. ರಂಗನಾಥ ಕಂಟನಕುಂಟೆ, ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ, ಪುಟ ೧೫
೯. ಸ್ಕುಟನ್ಸ್ಯಾಬ್ ಕಾಂಗಾಸ್, (ಅನುವಾದ) ಓ.ಎಲ್ ನಾಗಭೂಷಣಸ್ವಾಮಿ, ಕನ್ನಡ ಅಧ್ಯಯನ, ಪುಟ ೯೫
೧೦. ಹಂಪ ನಾಗರಾಜಯ್ಯ, ಮೂಲ ಚೂಲ, ಪುಟ ೨೪೭
೧೧. ಆಡಳಿತ ಭಾಷಾ ಸಂಬಂಧವಾದ ಸಂಸತ್ತಿನ ಸಮಿತಿಯ ವರದಿ, ಪುಟ ೧
೧೨. ಮಲ್ಲಿಕಾರ್ಜುನ ಭ, (ಸಂ) ನಾರಾಯಣ ಕೆ.ವಿ., ಭಾಷೆ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೧, ಪುಟ.೩೪೫
೧೩. ಹಂಪ ನಾಗರಾಜಯ್ಯ, ಮೂಲ ಚೂಲ, ಪುಟ ೨೪೭
೧೪. ಪಾಟೀಲ ಪುಟ್ಟಪ್ಪ, (ಸಂ) ಗುರುಲಿಂಗ ಕಾಪಸೆ, ಕನ್ನಡ ಕಾವಲು, (ಮುನ್ನುಡಿಯಲ್ಲಿ)

## ಅಧ್ಯಾಯ–೨

## ಕರ್ನಾಟಕದ ಭೂಪ್ರದೇಶ ಮತ್ತು ಭಾಷಾಬಳಕೆ

೨.೧ ಏಕೀಕರಣ ಪೂರ್ವ ಕರ್ನಾಟಕದ ಭೂಪ್ರದೇಶ ಮತ್ತು ಭಾಷಾಪರಿಸ್ಥಿತಿ

೨.೨ ಆಂಗ್ಲರ ಆಡಳಿತ: ಕರ್ನಾಟಕದ ಭಾಷಾಬಳಕೆಯ ಸ್ವರೂಪ ಮತ್ತು ಸಮಸ್ಯೆಗಳು

೨.೩ ಏಕೀಕರಣ ನಂತರದ ಕರ್ನಾಟಕ: ಭಾಷಾಕಲಿಕೆ, ಬಳಕೆ ಮತ್ತು ಸಮಸ್ಯೆಗಳ ಸ್ವರೂಪ

೨.೪ ಜಾಗತೀಕರಣ, ಖಾಸಗೀಕರಣ ಮತ್ತು ಸಾಫ್ಟ್‌ವೇರ್‌ನ ಉಗಮ: ಕರ್ನಾಟಕದ ಭಾಷಾಸಮಸ್ಯೆ

## ಅಧ್ಯಾಯ-೨

# ಕರ್ನಾಟಕದ ಭೂಪ್ರದೇಶ ಮತ್ತು ಭಾಷಾಬಳಕೆ

### ೨.೧ ಏಕೀಕರಣ ಪೂರ್ವ ಕರ್ನಾಟಕದ ಭೂಪ್ರದೇಶ ಮತ್ತು ಭಾಷಾಪರಿಸ್ಥಿತಿ

ದಕ್ಷಿಣ ಭಾರತದ ರಾಜ್ಯಗಳಲ್ಲಿ ಕರ್ನಾಟಕ ಒಂದು. ಇಲ್ಲಿ ಕರ್ನಾಟಕ ಏಕೀಕರಣವಾದ ನಂತರ ಕನ್ನಡವನ್ನು ರಾಜ್ಯಭಾಷೆ ಎಂದು ಘೋಷಿಸಲಾಗಿದೆ. ಕನ್ನಡಕ್ಕೆ ಭಾಷಾವಿದ್ವಾಂಸರು ಗುರುತಿಸುವ ಪ್ರಕಾರ ಸುಮಾರು ಎರಡು ಸಾವಿರಕ್ಕು ಅಧಿಕ ವರ್ಷಗಳ ಇತಿಹಾಸ ಇದೆ. ಹಾಗೆಯೇ ಕನ್ನಡ ಸಾಹಿತ್ಯಕ್ಕೆ ಸಾಹಿತ್ಯ ಚರಿತ್ರಕಾರರು ಗುರುತಿಸುವ ಪ್ರಕಾರ ಸುಮಾರು ಒಂದೂವರೆ ಸಾವಿರಕ್ಕು ಅಧಿಕ ವರ್ಷಗಳ ಇತಿಹಾಸವಿದೆ. ಈ ನಡುವೆ ಕನ್ನಡ ಸಾಹಿತ್ಯ ಸಂಸ್ಕೃತ, ಹಿಂದಿ, ಉರ್ದು, ತೆಲುಗು, ತಮಿಳು, ಮರಾಠಿ, ಬಂಗಾಳಿ, ಇಂಗ್ಲಿಶ್ ಮುಂತಾದ ಭಾಷೆಗಳ ಸಾಹಿತ್ಯದ ಜೊತೆ ಒಡನಾಟ ಹೊಂದಿ ಆ ಭಾಷೆಗಳ ಸಾಹಿತ್ಯವನ್ನು ಅನುಕರಣೆ ಮಾಡದೆ ಅನುಸಂಧಾನ ಪ್ರಕ್ರಿಯೆಯ ಮೂಲಕ ಇಂದಿನ ಕರ್ನಾಟಕದ ಭೂಪ್ರದೇಶದಲ್ಲಿ ಶ್ರೀಮಂತವಾಗಿ ಬೆಳೆದಿದೆ. ಹಾಗೆಯೇ ಕನ್ನಡ ಭಾಷೆ ಕೂಡ. ಹೀಗಾಗಿ ಕರ್ನಾಟಕದ ಭೂಪ್ರದೇಶ ಮತ್ತು ಕನ್ನಡ ಭಾಷೆಯ ನಡುವೆ ಭಾವನಾತ್ಮಕ ಸಂಬಂಧ ಇದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಇತಿಹಾಸ, ಕನ್ನಡ ಭಾಷೆ, ಅದರ ಉಗಮ, ಬೆಳವಣಿಗೆ, ಕರ್ನಾಟಕ, ಕನ್ನಡ ಪದಗಳ ನಿಷ್ಪತ್ತಿಯ ಬಗೆಗೆ ದೀರ್ಘವಾದ ಅಧ್ಯಯನಗಳು ನಡೆದಿವೆ. ಇದರಲ್ಲಿ ಮುಖ್ಯವಾಗಿ ಕರ್ನಾಟಕ ಶಬ್ದದ ನಿಷ್ಪತ್ತಿಯ ಬಗೆಗೆ ನಡೆದಿರುವ ಅಧ್ಯಯನಗಳನ್ನು ಗಮನಿಸಿದಾಗ 'ಕರ್ನಾಟಕ' ಎಂಬುದು ಕನ್ನಡನಾಡಿನ ಅಥವಾ ಕನ್ನಡ ಭಾಷೆಯ ಹೆಸರು. ಇದನ್ನು ಕರ್ಣಾಟ, ಕರ್ಣಾಟಕ ಎಂದೆಲ್ಲಾ ಕರೆಯುತ್ತಾರೆ. 'ಕರ್ಣಯೋಃ ಅಟತಿ ಇತಿ ಕರ್ಣಾಟಃ' ಎಂದು ವೆಂಕಟಾಧ್ವರಿಯು ತನ್ನ ಗುಣಾದರ್ಶದಲ್ಲಿ ಅರ್ಥೈಸಿದ್ದಾನೆ.[೧]

ಇನ್ನು ಗೋವಿಂದ ಪೈಯವರು ಕರು(ದೊಡ್ಡ)+ನಾಡು(ದೇಶ)=ಕರ್ನಾಡು>ಕನ್ನಾಡು>ಕನ್ನಾಡ>ಆಗಿ ಕರ್ಣಾಟ ಎಂಬ ಸಂಸ್ಕೃತರೂಪ ತಳೆದಿರಬೇಕೆಂದು ಅಭಿಪ್ರಾಯಪಡುತ್ತಾರೆ[೨] ಹಾಗೆಯೇ ರಾ.ನರಸಿಂಹಾಚಾರ್ಯರು ಕಮ್ಮಿತ್ತು+ನಾಡು(ಪರಿಮಳಪೂರಿತನಾಡು)=ಕಂನಾಡು>ಕನ್ನಾಡು>ಕನ್ನಡು>ಕನ್ನಡ ಆಗಿರಬಹುದೆಂದು ಅಭಿಪ್ರಾಯಪಟ್ಟರೆ ಹತ್ತಂಗಡಿ ನಾರಾಯಣರಾಯರು ಕರು(ಎತ್ತರವಾದ)+ನಾಡು (ಪ್ರದೇಶ)=ಕರುನಾಡು ಅಂದರೆ ಎತ್ತರವಾದ ಭೂಪ್ರದೇಶ ಎಂಬ ಅರ್ಥದಲ್ಲಿ ಕರ್ನಾಟಕ ಪದದ ಅರ್ಥ ಹುಡುಕುವ ಪ್ರಯತ್ನ ಮಾಡಿದ್ದಾರೆ[೩]. ಹಾಗೆಯೇ ಕನ್ನಡ ಶಬ್ದದ ನಿಷ್ಪತ್ತಿಯ ಬಗೆಗೆ ಕನ್ನಡ ಎಂಬ ಶಬ್ದ ಬಹುಪ್ರಾಚೀನ ಕಾಲದಿಂದಲೂ ಆ ಭಾಷೆ ಆಡುವ ಜನರ ನಾಡನ್ನು, ಅವರು ಆಡುವ ಭಾಷೆಯ ಹೆಸರನ್ನು ಸೂಚಿಸುತ್ತದೆ ಎನ್ನುತ್ತಾರೆ ಡಾ.ಕೆ.ಕೆಂಪೇಗೌಡರು. ಆದರೆ ಕನ್ನಡ ಶಬ್ದ ನಿಷ್ಪತ್ತಿಯ ಬಗೆಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಕನ್ನಡದ ಪ್ರಸಿದ್ಧ ವೈಯಾಕರಣಿ ಕೇಶೀರಾಜನು ಕನ್ನಡ ಎಂಬ ಶಬ್ದ ಕಾರ್ಣಾಟ(ಕ) ಎಂಬ ಸಂಸ್ಕೃತ ಶಬ್ದದಿಂದ ವಿಕಾಸಗೊಂಡದ್ದು ಎಂದರೆ ಆರ್.ನರಸಿಂಹಾಚಾರ್ಯರು ಕನ್ನಡ ಎಂಬ ಶಬ್ದ ಕಮ್ಮಿತು ನಾಡು ಎಂಬ ಸಮಾಸಪದದಿಂದ ವಿಕಾಸಗೊಂಡದ್ದು ಎಂದಿದ್ದಾರೆ. ಇದೇ ರೀತಿ ರಾಬರ್ಟ್ ಕಾಲ್ಡ್‌ವೆಲ್, ಎಫ್.ಕಿಟ್ಟೆಲ್, ಬಿ.ಎಲ್.ರೈಸ್

ಮುಂತಾದ ವಿದ್ವಾಂಸರು ಕನ್ನಡ ಎಂಬ ಶಬ್ದ ಕರುನಾಡು (ಕರ್‌ನಾಟು>ನಾಡು) ಎಂಬ ಸಮಾಸ ಪದದಿಂದ ವಿಕಾಸಗೊಂಡಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ[೩].

ಕರ್ನಾಟಕ, ಕನ್ನಡನಾಡಿನ ಶಬ್ದದ ನಿಷ್ಪತ್ತಿಯ ಬಗೆಗೆ ನಡೆದಿರುವ ಚಿಂತನೆಗಳು ಇಲ್ಲಿಗೆ ನಿಲ್ಲದೆ ಮತ್ತಷ್ಟು ಮುಂದುವರಿದು "ಕಮ್ಮಿತುನಾಡು ಎಂಬುದು ದೇಶೀಯ ಪದ. ಇದಕ್ಕೆ ಸುವಾಸನೆಯುಳ್ಳ ನಾಡು ಎಂಬರ್ಥವಿದೆ. ಗಂಧದ ಮರಗಳಿಂದ ತುಂಬಿಹೋಗಿರುವ ನಾಡು ಗಂಧದ ನಾಡು ಅಥವಾ ಕಮ್ಮಿತು ನಾಡು ಎಂಬರ್ಥ ಹೊಂದಿರುವ ಅದು ಇದಕ್ಕೆ ಅನ್ವರ್ಥನಾಮವಾಗಿ ತೋರಿಬರುತ್ತದೆ. ಇದೇ ರೀತಿ (ಕರುನಾಡು ಕರ್ ನಾಟು) ಕರ್ ನಾಟು ಎಂಬುದು ತಮಿಳು ಶಬ್ದ. ಇದು ತಮಿಳಿನಿಂದ ಕನ್ನಡಕ್ಕೆ ಬಂದದ್ದು, ಕರುನಾಡು (ಕರ್ ನಾಡು) ಎಂಬ ಪದಕ್ಕೆ ಜೋಳ ಅಥವಾ ಹತ್ತಿ ಬೆಳೆಯುವ ಕಪ್ಪು ಮಣ್ಣಿನನಾಡು, ಎತ್ತರವಾದ ನಾಡು ಎಂಬರ್ಥವಿದೆ. ಈ ಕಾರಣದಿಂದಲೇ ಈ ನಾಡಿಗೆ ಕರುನಾಡು ಎಂಬ ಹೆಸರು ಬರಲು ಸಾಧ್ಯವಾಗಿದೆ. ಅದು ಅಲ್ಲದೆ ಇದಕ್ಕೆ ಎತ್ತರವಾದ, ವಿಶಾಲವಾದ, ದೊಡ್ಡದಾದ ಮಹಾನಾಡು ಎಂಬರ್ಥಗಳೂ ಇವೆ. ಇಂತಹ ಮಹಾರಾಷ್ಟ್ರವೇ ಕರ್‌ನಾಟು, ಕರುನಾಡು-ಕರ್ಣಾಟಕ ಕನ್ನಡ ನಾಡು ಎಂದಾಗಿ ಬೆಳೆದು ಬಂದಿರಬೇಕೆಂದು ಕೆಲವರು ಊಹಿಸಿದ್ದಾರೆ" ಎನ್ನುತ್ತಾರೆ ಭಾಷಾವಿಜ್ಞಾನಿಗಳಾದ ಡಾ.ಕೆ.ಕೆಂಪೇಗೌಡರವರು[೪].

ಹೀಗೆ ಕರ್ನಾಟಕ, ಕನ್ನಡ ಪದ ನಿಷ್ಪತ್ತಿಯ ಬಗೆಗೆ ಏನೇ ಚರ್ಚೆಗಳು ನಡೆದಿದ್ದರೂ ಎತ್ತರದ ಪ್ರದೇಶವಾದ ಕರುನಾಡಿನಲ್ಲಿ ವಾಸಿಸುವ ಜನರೆ ಕನ್ನಡಿಗರು. ಇವರು ಈ ಪ್ರದೇಶದಲ್ಲಿ ಭಾಷಾವಿದ್ವಾಂಸರು ಗುರುತಿಸುವ ಪ್ರಕಾರ ಸುಮಾರು ಎರಡು ಸಾವಿರಕ್ಕು ಅಧಿಕ ವರ್ಷಗಳ ಹಿಂದಿನಿಂದ ತಮ್ಮ ಸಮುದಾಯದ ಪ್ರತ್ಯೇಕ ಅಸ್ತಿತ್ವ ರೂಪಿಸಿಕೊಳ್ಳುತ್ತಾ ಮುಂದುವರೆದು ಬಂದಿದ್ದಾರೆ. ಹೀಗೆ ಕನ್ನಡಿಗರು ಪ್ರತ್ಯೇಕ ಅಸ್ತಿತ್ವ ರೂಪಿಸಿಕೊಳ್ಳುವ ಮೊದಲು ದ್ರಾವಿಡ ಭಾಷೆಯನ್ನು ಆಡುತ್ತಿದ್ದರು. ಆಗ ದ್ರಾವಿಡರು ಅಂದರೆ ಕ್ರಿ.ಪೂ.೧೫೦೦ರಿಂದ ೫೦೦ರ ವರೆಗಿನ ಅವಧಿಯಲ್ಲಿ ಸಿಂಧೂ ನದಿಯ ತೀರದಲ್ಲಿ ತಮ್ಮ ವೈಭವದ ಜೀವನ ಸಾಗಿಸಿದ್ದಿರಬೇಕು[೫]. ಅನಂತರದಲ್ಲಿ ಆರ್ಯರು ಏಷ್ಯಾ ಮೈನರ್‌ನಿಂದ ವಾಯುವ್ಯ ಕಣಿವೆಗಳ ಮಾರ್ಗವಾಗಿ ಬಂದು, ಸಿಂಧೂ ನದಿಯ ಬಯಲಿನಲ್ಲಿದ್ದ ದ್ರಾವಿಡರನ್ನು ಓಡಿಸಿ ಅನಂತರದ ದಿನಗಳಲ್ಲಿ ಅವರೊಡನೆ ರಕ್ತ ಸಂಬಂಧ ಬೆಳೆಸಿ ಭಾರತದಲ್ಲಿ ಉಳಿದರು[೬]. ಹೀಗೆ ಆರ್ಯರ ಒತ್ತಡದಿಂದ ಉತ್ತರ ಭಾರತದಿಂದ ದಕ್ಷಿಣ ಭಾರತದ ಕಡೆಗೆ ವಲಸೆ ಬಂದ ದ್ರಾವಿಡರು ಒಂದೇ ಭೂಪ್ರದೇಶದಲ್ಲಿ ಉಳಿಯದೆ ದಕ್ಷಿಣ ಭಾರತದ ಬೇರೆ ಬೇರೆ ಪ್ರದೇಶಗಳಿಗೆ ಚದುರಿಹೋಗಿ ಜೀವನ ನಡೆಸಲು ಆರಂಭಿಸಿದ್ದಾರೆ. ಹೀಗೆ ಬೇರೆ ಬೇರೆ ಪ್ರದೇಶಗಳಿಗೆ ಚದುರಿಹೋದ ದ್ರಾವಿಡರು ತಾವು ನೆಲೆಸಿದ ಸ್ಥಳೀಯ ಪ್ರದೇಶದ ಪ್ರಾಕೃತಿಕ ಸಂಪತ್ತಿನ ಜೊತೆ ಬಾಂಧವ್ಯವನ್ನು ಹೊಂದಿ ತನ್ನದೇ ಆದ ಪ್ರತ್ಯೇಕ ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ನಂಬಿಕೆ ಆಚರಣೆ, ವಿಧಿವಿಧಾನ, ಜೀವನಕ್ರಮಗಳನ್ನು ರೂಪಿಸಿಕೊಳ್ಳುವ ಮೂಲಕ ಪ್ರತ್ಯೇಕ ಅಸ್ತಿತ್ವ ರೂಪಿಸಿಕೊಂಡಿದ್ದಾರೆ. ಹೀಗೆ ಉತ್ತರ ಭಾರತದಲ್ಲಿ ವಾಸಿಸುತ್ತಿದ್ದ ದ್ರಾವಿಡರು ಆರ್ಯರ ಹಿಂಸೆಯಿಂದ ತತ್ತರಿಸಿ ದಕ್ಷಿಣ ಭಾರತದ ಕಡೆಗೆ ವಲಸೆ ಬಂದು ಪ್ರತ್ಯೇಕ ಅಸ್ತಿತ್ವ ರೂಪಿಸಿಕೊಂಡ ಹಲವು ಭಾಷಾಸಮುದಾಯಗಳಲ್ಲಿ ಕನ್ನಡ

ಭಾಷಾಸಮುದಾಯವೂ ಒಂದು. ಇದು ಅಂದು ಇಂದಿನ ಕರ್ನಾಟಕದ ಭೂಪ್ರದೇಶದಲ್ಲಿ ನೆಲೆನಿಂತು ತನ್ನ ಪ್ರತ್ಯೇಕ ಅಸ್ತಿತ್ವ ರೂಪಿಸಿಕೊಂಡಿದೆ. ಹೀಗಾಗಿ ಕನ್ನಡವನ್ನು ದೇಶವಾಚಕವಾಗಿಯೂ, ಭಾಷಾವಾಚಕವಾಗಿಯೂ ಕರೆಯುತ್ತಾರೆ.

ಇದೇನೇ ಇದ್ದರೂ ಕನ್ನಡ ಭಾಷಿಕ ಸಮುದಾಯದ ದ್ರಾವಿಡ ಭಾಷೆಯಿಂದ ಪ್ರತ್ಯೇಕ ಅಸ್ತಿತ್ವ ಪಡೆದುಕೊಳ್ಳುವ ಪ್ರಕ್ರಿಯೆ ಕ್ರಿ.ಪೂ.ದಲ್ಲಿಯೇ ಆರಂಭಗೊಂಡಿದೆ. ಇದಕ್ಕೆ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಬಳಕೆಯಾಗಿರುವ 'ಇಸಿಲ' ಎಂಬ ಪದವನ್ನು ಭಾಷಾವಿದ್ವಾಂಸರು ದಾಖಲೆಯ ರೂಪದಲ್ಲಿ ಕೊಡುತ್ತಾರೆ. ಇದು ಶುದ್ಧ ದ್ರಾವಿಡ ಪದ. ಅದರಲ್ಲೂ ಕನ್ನಡದ ಸ್ವಚ್ಛರೂಪವೆಂದು ಕರೆಯಲಾಗುತ್ತದೆ. ಇದರ ನಂತರ ಶಾತವಾಹನರ ಕಾಲದಲ್ಲಿನ ಶಾಸನ ಮತ್ತು ನಾಣ್ಯಗಳ ಮೇಲಿರುವ 'ವಿಲಿವಾಯಕುರ' 'ಪುಳುಮಾಯಿ' ಎಂಬ ಕನ್ನಡದ ಶಬ್ದ, ಹಾಲರಾಜನ ಗಾಥಾಸಪ್ತಶತಿಯಲ್ಲಿ ಕಂಡುಬರುವ ಕೆಲವು ದೇಶ್ಯ ಶಬ್ದಗಳು, ಹಾಗೂ ಗ್ರೀಕ್‌ನ ಪ್ರಹಸನವಾದ 'ಆಕ್ಸಿರಿಂಕಸ್ ಪಪೈರಿ'ಯಲ್ಲಿನ ಉಲ್ಲೇಖವಾಗಿರುವ ಕೆಲವು ಕನ್ನಡ ಪದಗಳನ್ನು ಭಾಷಾವಿದ್ವಾಂಸರು ಗುರುತಿಸುತ್ತಾರೆ. ಇವುಗಳನ್ನು ಗಮನಿಸಿದಾಗ ಕನ್ನಡ ಭಾಷೆ ಕ್ರಿಸ್ತಪೂರ್ವದಲ್ಲಿಯೇ ದ್ರಾವಿಡ ಭಾಷೆಯಿಂದ ಪ್ರತ್ಯೇಕಗೊಂಡು ಸ್ವತಂತ್ರ ಅಸ್ತಿತ್ವ ಕಂಡುಕೊಳ್ಳುವ ಪ್ರಕ್ರಿಯೆ ಆರಂಭಿಸಿರುವುದು ಸ್ಪಷ್ಟವಾಗುತ್ತದೆ. ಈ ಸ್ವತಂತ್ರ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರಕ್ರಿಯೆ ಏಕಕಾಲದಲ್ಲಿ ಆಗುವಂತಹದ್ದಲ್ಲ. ಅದು ಆ ಭಾಷೆಯನ್ನಾಡುವ ಜನರ ಹಲವು ವರ್ಷಗಳ ಪ್ರಯತ್ನದ ಫಲವಾಗಿ ಹಂತಹಂತವಾಗಿ ರೂಪುಗೊಳ್ಳುವಂತಹದ್ದು.

ಏಕೆಂದರೆ ಭಾಷೆ ಸ್ವತಂತ್ರವಲ್ಲ. ಅದು ಮನುಷ್ಯನನ್ನು ಅವಲಂಭಿಸಿದೆ. ಆದರೆ ಮನುಷ್ಯ ನಿಂತ ನೀರಲ್ಲ. ಹರಿಯುವ ನದಿಯಿದ್ದಂತೆ. ಯಾವಾಗಲು ಹೊಸದನ್ನು ಯೋಚಿಸುತ್ತಿರುತ್ತಾನೆ. ಆ ಮೂಲಕ ಹೊಸ ಹೊಸ ಆವಿಷ್ಕಾರಗಳನ್ನು ಮಾಡುತ್ತಿರುತ್ತಾನೆ. ನಿರಂತರವಾಗಿ ಹೊಸದನ್ನು ಯೋಚಿಸುವುದು, ಅಭಿವೃದ್ಧಿ ಹೊಂದುವುದು, ಅದಕ್ಕಾಗಿ ಪ್ರಯತ್ನಿಸುವುದು ಮನುಷ್ಯನ ಸಹಜಗುಣ. ಹೀಗಾಗಿ ಮನುಷ್ಯ ಆದಿಮಾನವನ ಕಾಲದಿಂದಲೂ ಬೆಳವಣಿಗೆ ಮತ್ತು ಅಭಿವೃದ್ಧಿಯ ಕಡೆಗೆ ಹೆಜ್ಜೆ ಹಾಕಿದ್ದಾನೆ. ಮನುಷ್ಯ ಹೀಗೆ ಬೆಳವಣಿಗೆ ಮತ್ತು ಅಭಿವೃದ್ಧಿಯ ಕಡೆಗೆ ಹೊರಳಿದಂತೆಲ್ಲಾ ಅವನ ಭಾಷೆ ಕೂಡ ಬದಲಾಗಿದೆ. ಆದರೆ ಇಲ್ಲಿ ಮನುಷ್ಯನ ಬೆಳವಣಿಗೆ ಕೂಡ ಸ್ವತಂತ್ರವಲ್ಲ. ಅದು ಪ್ರಕೃತಿಯಲ್ಲಿನ ಸಂಪತ್ತು ಮತ್ತು ಅವನ ಬೌದ್ಧಿಕ ವಿಕಾಸವನ್ನು ಅವಲಂಭಿಸಿದೆ. ಹೀಗಾಗಿ ಭಾಷೆಯ ಬೆಳವಣಿಗೆಯಲ್ಲಿ ಇದುವರೆಗೆ ಹೇಳಿದ ಅಂಶಗಳು ಪ್ರಮುಖ ಪಾತ್ರ ವಹಿಸಿವೆ. ಇವುಗಳ ಜೊತೆಗೆ ಆ ಭಾಷೆಯನ್ನಾಡುವ ಜನರು ವಾಸಿಸುವ ಭೂಪ್ರದೇಶ, ಅಲ್ಲಿನ ಪ್ರಾಕೃತಿಕ ಸಂಪತ್ತು, ಆಡಳಿತ, ಶಿಕ್ಷಣ, ಉದ್ಯೋಗ, ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಸಂಪ್ರದಾಯ, ವಿಧಿವಿಧಾನ, ಆಚರಣೆ, ಜೀವನಕ್ರಮ ಇತ್ಯಾದಿ ಅಂಶಗಳೂ ಸೇರಿವೆ.

ಹೀಗಾಗಿ ಒಂದು ಪ್ರದೇಶದಲ್ಲಿ ಬಳಕೆಯಾಗುವ ಭಾಷೆ, ಆ ಭಾಷೆಯನ್ನಾಡುವ ಜನರು, ಅಲ್ಲಿನ ಭೂಪ್ರದೇಶ, ಪ್ರಾಕೃತಿಕ ಸಂಪತ್ತು, ಆ ಭಾಷೆಯನ್ನಾಡುವ ಜನರ ಬೌದ್ಧಿಕ ವಿಕಾಸ, ಭೌತಿಕ ಅಭಿವೃದ್ಧಿ ಮತ್ತು ಆ ಭಾಷಾಸಮುದಾಯದ ವಿಶೇಷತೆಗಳ ನಡುವೆ ಒಂದು ರೀತಿಯ ನಿಕಟ ಸಂಬಂಧ ಇದೆ.

ಈ ಸಂಬಂಧ ಜನರಲ್ಲಿ ತನ್ನ ಭಾಷೆ, ಭೂಪ್ರದೇಶ ಮತ್ತು ವಿಶೇಷತೆಗಳ ಮೇಲೆ ಅಭಿಮಾನ ಬೆಳೆಸಿ ಭಾವನಾತ್ಮಕತೆ ಉಂಟುಮಾಡುತ್ತದೆ. ಹೀಗಾಗಿಯೇ ಕರ್ನಾಟಕದ ಭೂಪ್ರದೇಶ, ಕನ್ನಡ ಭಾಷೆ ಮತ್ತು ಕನ್ನಡ ಭಾಷಿಕರು ಮತ್ತು ಅವರ ವಿಶೇಷತೆಗಳ ನಡುವೆ ಮೊದಲಿನಿಂದಲೂ ಒಂದು ರೀತಿಯ ವಿಶೇಷವಾದ ಸಂಬಂಧ ಬೆಳೆದಿದೆ. ಈ ಸಂಬಂಧ ಕನ್ನಡನಾಡು, ನುಡಿ, ಇಲ್ಲಿನ ಪ್ರಾಕೃತಿಕ ಸಂಪತ್ತು ಮತ್ತು ಸಮುದಾಯದ ವಿಶೇಷತೆಗಳ ಮೇಲೆ ಅಭಿಮಾನ ಮಾತ್ರ ಬೆಳೆಸಿಲ್ಲ. ಅಭಿಮಾನದ ಜೊತೆಗೆ ತನ್ನ ನಾಡು-ನುಡಿ, ಸಂಸ್ಕೃತಿ, ವಿಶೇಷತೆಗಳಿಗೆ ಧಕ್ಕೆಯಾದಾಗ ಅವುಗಳನ್ನು ರಕ್ಷಿಸಿಕೊಳ್ಳುವ ಚೈತನ್ಯವನ್ನು ಕನ್ನಡಿಗರಲ್ಲಿ ಪ್ರೇರಿಸಿದೆ.

ಹೀಗಾಗಿ ಭಾಷೆ ಈ ಹಿಂದೆ ಹೇಳಿರುವಂತೆ ಮನುಷ್ಯನ ಭಾವನೆಗಳನ್ನು, ಅಭಿಪ್ರಾಯಗಳನ್ನು ಅಭಿವ್ಯಕ್ತಗೊಳಿಸಲು ಇರುವ ಒಂದು ಸಂವಹನ ಮಾಧ್ಯಮ ಮಾತ್ರವಲ್ಲ. ಅದು ಒಂದು ಭಾಷಾಸಮುದಾಯದ ಸಮಸ್ತ ವಿಶೇಷತೆಗಳನ್ನು ಪ್ರತಿನಿಧಿಸುವ ಶಕ್ತಿ. ಹೀಗಾಗಿ ಭಾಷೆ ಸ್ವತಂತ್ರವಾಗಿ ರೂಪುಗೊಳ್ಳಲು ಹಲವು ವರ್ಷಗಳನ್ನು ತೆಗೆದುಕೊಳ್ಳುತ್ತದೆ. ಈ ಪ್ರಕಾರ ಕನ್ನಡವು ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಳ್ಳಲು ಹಲವು ವರ್ಷಗಳನ್ನು ತೆಗೆದುಕೊಂಡಿದೆ. ಕನ್ನಡ ಭಾಷೆ ಈ ಎಲ್ಲಾ ಹಂತಗಳನ್ನು ದಾಟಿ ಕ್ರಿಸ್ತಶಕದ ಆರಂಭಕ್ಕೂ ಮೊದಲೇ ಸ್ವತಂತ್ರ ಅಸ್ತಿತ್ವ ಪಡೆದುಕೊಂಡಿರುವುದು ಈ ಹಿಂದೆ ಚರ್ಚಿಸಿರುವ ಅಂಶಗಳಿಂದ ಸ್ಪಷ್ಟವಾಗುತ್ತದೆ. ಆಗ ಕನ್ನಡ ಭಾಷೆ ಆಡುವವರ ಸಂಖ್ಯೆ ಕಡಿಮೆಯಿತ್ತು. ಹೀಗಾಗಿ ಕನ್ನಡ ಭಾಷಿಕರು ವಾಸಿಸುವ ಭೂಪ್ರದೇಶವು ವಿಸ್ತಾರದಲ್ಲಿ ಕಡಿಮೆಯಿತ್ತು. ಕನ್ನಡಿಗರ ಸಂಖ್ಯೆ ಹೆಚ್ಚಾದಂತೆ ಮತ್ತು ಕನ್ನಡದ ರಾಜಮನೆತನಗಳು ರಾಜಕೀಯವಾಗಿ ಪ್ರಬಲರಾಗಿ ಅಧಿಕಾರದ ವಿಸ್ತರಣೆಗೆ ಮುಂದಾದಾಗ ಕನ್ನಡಿಗರು ವಾಸಿಸುವ ಭೂಪ್ರದೇಶ ವಿಸ್ತಾರವಾಗುತ್ತಾ ಸಾಗಿದೆ. ಕ್ರಿಸ್ತಶಕದ ಆರಂಭದಲ್ಲಿ ವಿಸ್ತಾರದಲ್ಲಿ ಕಡಿಮೆಯಿದ್ದ ಕನ್ನಡ ಭಾಷೆಯನ್ನಾಡುವ ಜನರ ಭೂಪ್ರದೇಶ ಒಂಭತ್ತನೆಯ ಶತಮಾನದ ಕವಿರಾಜಮಾರ್ಗಕಾರನ ಹೊತ್ತಿಗೆ ವಿಶಾಲವಾಗಿ ಬೆಳೆದಿದೆ. ಇದರಿಂದ ಕವಿರಾಜಮಾರ್ಗಕಾರ ತನ್ನ ಕಾವ್ಯವಾದ ಕವಿರಾಜಮಾರ್ಗದಲ್ಲಿ ಕನ್ನಡದ ಭೂಪ್ರದೇಶವೂ "ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಲಯ ವಿಲೀನ ವಿಶದ ವಿಷಯ ವಿಶೇಷಂ[೭]" ಎಂದಿದ್ದಾನೆ.

ಈ ಪ್ರಕಾರವಾಗಿ ಕನ್ನಡದ ಪ್ರದೇಶವು ಒಂಭತ್ತನೆಯ ಶತಮಾನದ ಹೊತ್ತಿಗೆ ವಿಸ್ತಾರವಾಗಿ ಬೆಳೆದಿತ್ತು. ಅನಂತರದಲ್ಲಿ ಹಲವು ಅನ್ಯಭಾಷಾ ರಾಜಮನೆತನಗಳು ಮತ್ತು ಬ್ರಿಟೀಷರ ಆಡಳಿತದ ಅಧೀನಕ್ಕೆ ಒಳಗಾಗಿ ಕನ್ನಡಿಗರು ವಾಸಿಸುವ ಭೂಪ್ರದೇಶವು ಹತ್ತೊಂಭತ್ತನೆಯ ಶತಮಾನದ ಹೊತ್ತಿಗೆ

೧. ಮುಂಬಯಿ ಕರ್ನಾಟಕ
೨. ಮದರಾಸು (ಬ್ರಿಟಿಷ್) ಕರ್ನಾಟಕ
೩. ಮೈಸೂರು ಸಂಸ್ಥಾನ
೪. ಕೊಡಗು
೫. ಹೈದ್ರಾಬಾದ್ (ನಿಜಾಂ) ಕರ್ನಾಟಕ
೬. ಹೈದ್ರಾಬಾದ್ ಕರ್ನಾಟಕದ ಜಹಗೀರು

೧೨. ಮೀರಜ್ (ಹಿರಿ)
೧೩. ಮೀರಜ್ (ಕಿರಿ)
೧೪. ಕುರಂದವಾಡ (ಹಿರಿ)
೧೫. ಕುರಂದವಾಡ (ಕಿರಿ)
೧೬. ಜಮಖಂಡಿ
೧೭. ಮುಧೋಳ

(ಕೊಪ್ಪಳ, ಗದ್ವಾಲ)
೭. ಕಂಟೋನ್ಮೆಂಟ್ (ದಂಡು) ಕರ್ನಾಟಕ
೮. ಕೊಲ್ಹಾಪುರ ಸಂಸ್ಥಾನ
೯. ಕೊಲ್ಹಾಪುರ ಸಂಸ್ಥಾನದ ಜಹಗೀರುಗಳು
೧೦. ಸಾಂಗ್ಲಿ
೧೧. ಜೌಂದ್
೧೮. ರಾಮದುರ್ಗ
೧೯. ಅಕ್ಕಲಕೋಟೆ
೨೦. ಜತ್ತ
೨೧. ಸವಣೂರು
೨೨. ಸೊಂಡೂರು[೮]

ಎಂದು ಒಟ್ಟು ೨೨ ಆಡಳಿತ ವಲಯಗಳಾಗಿ ಹಂಚಿಹೋಗಿತ್ತು. ಮೈಸೂರು ಪ್ರಾಂತ್ಯವನ್ನು ಹೊರತು ಪಡಿಸಿದರೆ ಉಳಿದ ಪ್ರಾಂತ್ಯಗಳಲ್ಲಿ ಕನ್ನಡ ಭಾಷೆ ಆಡಳಿತ ಸೇರಿದಂತೆ ಇತರ ಕ್ಷೇತ್ರಗಳಲ್ಲಿ ಸಮರ್ಪಕವಾಗಿ ಬಳಕೆಯಾಗುತ್ತಿರಲಿಲ್ಲ. ನಾಲ್ಕನೇ ಆಂಗ್ಲೋ-ಮೈಸೂರ್ ಯುದ್ಧದ ತರುವಾಯ ಬ್ರಿಟೀಷರು-ಮರಾಠರು ಮತ್ತು ಹೈದರಾಬಾದ್ ನಿಜಾಮನ ನಡುವೆ ಆದ ಒಪ್ಪಂದದ ಪ್ರಕಾರ ಕನ್ನಡ ಮಾತನಾಡುವ ಪ್ರದೇಶಗಳಾದ ಬೀದರ್, ಗುಲ್ಬರ್ಗ ಮತ್ತು ರಾಯಚೂರುಗಳನ್ನು ೧೭೯೬ರಲ್ಲಿ ನಿಜಾಮನ ವಶಕ್ಕೆ ಕೊಡಲಾಯಿತು[೯]. ಇವನು ತನ್ನ ಆಡಳಿತದ ಅವಧಿಯಲ್ಲಿ ಜನತೆಗೆ ತುಂಬಾ ಕ್ರೂರವಾದ ಶಿಕ್ಷೆಗಳನ್ನು ನೀಡುತ್ತಿದ್ದನು. ಆದುದರಿಂದ ಇವನ ಆಡಳಿತದ ಬಗ್ಗೆ ಸ್ಥಳೀಯರಿಗೆ ವಿರೋಧವಿತ್ತು. ಆಧುದರಿಂದ ಈ ಭಾಗದ ಜನತೆ ಆಡಳಿತ ವರ್ಗದ ಜೊತೆ ಸರಿಯಾಗಿ ಸಹಕರಿಸುತ್ತಿರಲಿಲ್ಲ.

ಇದರಿಂದಾಗಿ ನಿಜಾಮನ ಆಡಳಿತದ ಅವಧಿಯಲ್ಲಿ ಆಡಳಿತ ಎಲ್ಲಾ ಹಂತಗಳಲ್ಲೂ ಹಿಂದೆ ಉಳಿದುಕೊಂಡಿತು. ಅದರಲ್ಲೂ ಇವನ ಆಡಳಿತದ ಅವಧಿಯಲ್ಲಿ ಕನ್ನಡ ಮಾತನಾಡುವ ಪ್ರದೇಶಗಳ ಜನರಂತೂ ಹೆಚ್ಚಿನ ತೊಂದರೆಗಳಿಗೆ ಒಳಗಾಗಿದ್ದರು. ಬೇರೆಲ್ಲರಂತೆ ಶೋಷಣೆಗೆ ಒಳಗಾಗಿದ್ದರ ಜೊತೆಗೆ ಅವರು ತೀವ್ರತರ ಸಾಂಸ್ಕೃತಿಕ ದಾಳಿಗೆ ತುತ್ತಾದರು. ಧಾರ್ಮಿಕ ಮತ್ತು ಸಾಮಾಜಿಕ ಸಮಾವೇಶಗಳನ್ನೂ ಅವರು ಮುಕ್ತವಾಗಿ ಸಂಘಟಿಸುವಂತಿರಲಿಲ್ಲ. ಇತರರು ವಸಾಹತು ಸನ್ನಿವೇಶದಲ್ಲಿ ಲಭ್ಯವಿದ್ದ ಅಲ್ಪಸ್ವಲ್ಪ ಅವಕಾಶಗಳನ್ನು ಬಳಸಿಕೊಳ್ಳುತ್ತಿದ್ದರು. ಆದರೆ ಕನ್ನಡಿಗರು ಈ ಕಿಂಚಿತ್ ಅವಕಾಶಗಳಿಂದಲೂ ವಂಚಿತರಾಗಿದ್ದರು. ಅವರಿಗೆ ಶೈಕ್ಷಣಿಕ ಸೌಲಭ್ಯಗಳೇ ಇರಲಿಲ್ಲ. ಅಲ್ಪಸ್ವಲ್ಪ ಇದ್ದರೆ ಅವು ಕೇವಲ ಉರ್ದುಮಾಧ್ಯಮ ಸಂಸ್ಥೆಗಳಾಗಿದ್ದವು. ಜೊತೆಗೆ ಸರ್ಕಾರಿ ನೌಕರಿಗೆ ನಿಜಾಮನ ಸರ್ಕಾರ, ಶ್ರೀಮಂತ-ಜಮೀನ್ದಾರಿ ಮನೆತನಗಳವರನ್ನೇ ನೇಮಿಸುವ ಪರಿಪಾಠ ಹೊಂದಿತ್ತು[೧೦]. ನಿಜಾಮ ತೆಗೆದುಕೊಂಡಿದ್ದ ಇಂತಹ ಸರ್ವಾಧಿಕಾರಿತನದ ಜನ ವಿರೋಧಿ ಆಡಳಿತ ನೀತಿ, ಸ್ಥಳೀಯ ಜನರ ಮೇಲಿನ ಸಾಂಸ್ಕೃತಿಕ ದಬ್ಬಾಳಿಕೆ ಮತ್ತು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಔದ್ಯೋಗಿಕ ಅಸಮಾನತೆಗಳು ಈ ಭಾಗದ ಕನ್ನಡಿಗರ ಭಾವನೆಗಳನ್ನು ಕೆರಳುವಂತೆ ಮಾಡಿದ್ದವು. ಇದೇ ಸಂದರ್ಭದಲ್ಲಿ ಮೈಸೂರು ಭಾಗದಲ್ಲಿದ್ದ ಕನ್ನಡಿಗರು ಇಂತಹ ಸಮಸ್ಯೆಗಳಿಂದ ಮುಕ್ತವಾಗಿ ನೆಮ್ಮದಿಯುತ ಬದುಕನ್ನು ಸಾಗಿಸುತ್ತಿದ್ದರು. ಇದು ನಿಜಾಮನ ಆಡಳಿತದ ಅಧೀನದಲ್ಲಿದ್ದ ಕನ್ನಡಿಗರನ್ನು ಮತ್ತಷ್ಟು ಕೆರಳಿಸಿದೆ.

ಏಕೆಂದರೆ ಮೈಸೂರು ಭಾಗದ ಕನ್ನಡಿಗರು ತಮ್ಮ ದಿನನಿತ್ಯದ ಬದುಕಿನಲ್ಲಿ ಮಾತ್ರವಲ್ಲದೆ ಶಿಕ್ಷಣ, ಆಡಳಿತದಲ್ಲಿ ಕನ್ನಡವನ್ನು ಬಳಸುತ್ತಿದ್ದರು. ಆದರೆ ನಾವು ಕೂಡ ನಮ್ಮ ದಿನನಿತ್ಯದ ಬದುಕಿನಲ್ಲಿ ಕನ್ನಡವನ್ನು ಬಳಸುತ್ತಿದ್ದೇವೆ. ಆದರೆ ಶಿಕ್ಷಣದಲ್ಲಿ ಕನ್ನಡವನ್ನು ಕಲಿಯಲು ಮತ್ತು ಆಡಳಿತದಲ್ಲಿ ಕನ್ನಡವನ್ನು ಬಳಸಲು ಸಾಧ್ಯವಾಗದೆ ಸಮಸ್ಯೆಗಳನ್ನು ಎದುರಿಸುವಂತಾಗಿದೆ. ಇದು ನಮ್ಮನ್ನು ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ಔದ್ಯೋಗಿಕವಾಗಿ ಕುಗ್ಗಿಹೋಗುವಂತೆ ಮಾಡಿದೆ. ಅಲ್ಲದೆ ನಮ್ಮ ಪ್ರದೇಶದ ಶಿಕ್ಷಣ ಅನ್ಯಭಾಷಾಮಾಧ್ಯಮದಲ್ಲಿ ಇರುವುದರಿಂದ ನಮ್ಮ ಮಕ್ಕಳು ಶಿಕ್ಷಣ ಕಲಿಯಲು ಸಾಧ್ಯವಾಗದೆ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಆದೇ ಮೈಸೂರು ಪ್ರಾಂತ್ಯದ ಜನರು ಕನ್ನಡಿಗರೇ ಆಗಿದ್ದರೂ ಶಿಕ್ಷಣ, ಆಡಳಿತದಲ್ಲಿ ಕನ್ನಡ ಬಳಕೆಯಾಗುತ್ತಿದೆ. ಇದರಿಂದ ಈ ಭಾಗದ ಮಕ್ಕಳು ಶಿಕ್ಷಣ ಕಲಿತು, ಉದ್ಯೋಗಗಳನ್ನು ಪಡೆದು ಅಭಿವೃದ್ಧಿ ಹೊಂದಿದ್ದಾರೆ. ನಾವು ಕೂಡ ಮೈಸೂರು ಪ್ರಾಂತ್ಯದ ಜನರ ಹಾಗೆ ನಮ್ಮದೇ ಜನರ ಆಡಳಿತದ ವ್ಯಾಪ್ತಿಗೆ ಒಳಪಟ್ಟರೆ ಇಂತಹ ಸಮಸ್ಯೆಗಳನ್ನು ಎದುರಿಸುವ ಅಗತ್ಯ ಇರುವುದಿಲ್ಲ. ನಮ್ಮೆಲ್ಲಾ ಸಮಸ್ಯೆಗಳಿಗೆ ಸೂಕ್ತ ಪರಿಹಾರವೆಂದರೆ ನಿಜಾಮನ ಜನವಿರೋಧಿ ಆಡಳಿತದಿಂದ ಬಿಡುಗಡೆ ಪಡೆಯುವುದು. ಅಂದರೆ ಕನ್ನಡ ಭಾಷೆಯ ಆಧಾರದಲ್ಲಿ ಪತ್ಯೇಕ ರಾಜ್ಯ ರಚನೆಗೊಳ್ಳುವಂತೆ ಮಾಡುವುದು. ಇದಕ್ಕಾಗಿ ಉತ್ತರ ಕರ್ನಾಟಕದ ಜನತೆ ಕನ್ನಡ ಭಾಷೆಯ ಆಧಾರದಲ್ಲಿ ಕರ್ನಾಟಕ ಏಕೀಕರಣ ಚಳವಳಿ ಆರಂಭಿಸಿದ್ದಾರೆ. ಹೀಗೆ ನಿಜಾಮನ ಜನವಿರೋಧಿ ಆಡಳಿತ ನೀತಿ ಮತ್ತು ಅನ್ಯಭಾಷಾಮಾಧ್ಯಮದ ಕಲಿಕೆ ಮತ್ತು ಬಳಕೆಗಳ ಒತ್ತಡಗಳು ಕನ್ನಡಿಗರಲ್ಲಿ ಕರ್ನಾಟಕ ಏಕೀಕರಣ ಹೋರಾಟದ ಭಾವನೆಗಳು ಮೊಳಕೆಯೊಡೆಯುವಂತೆ ಮಾಡಿವೆ.

**೨.೨ ಆಂಗ್ಲರ ಆಡಳಿತ: ಕರ್ನಾಟಕದ ಭಾಷಾಬಳಕೆಯ ಸ್ವರೂಪ ಮತ್ತು ಸಮಸ್ಯೆಗಳು**

ಇದುವರೆಗೆ ಚರ್ಚಿಸಿದ ಹಾಗೆ ಕನ್ನಡಿಗರಲ್ಲಿ ಕರ್ನಾಟಕ ಏಕೀಕರಣ ಹೋರಾಟದ ಭಾವನೆ ಮೊಳಕೆಯೊಡೆಯಲು ಮುಖ್ಯಕಾರಣ ಇಂದಿನ ಕರ್ನಾಟಕದ ಭೂಪ್ರದೇಶದಲ್ಲಿ ಆಡಳಿತ ನಡೆಸಿರುವ ಅನ್ಯಭಾಷಾಸಮುದಾಯಗಳ ರಾಜರ ಸರ್ವಾಧಿಕಾರಿ ಧೋರಣೆ ಮತ್ತು ಕನ್ನಡ ವಿರೋಧಿ ಆಡಳಿತ ನೀತಿ. ಇದಕ್ಕೆ ಮತ್ತಷ್ಟು ಪುಷ್ಟಿನೀಡುವಂತೆ ಆಂಗ್ಲರ ಆಡಳಿತ ಕಾರಣವಾಗಿದೆ. ಆಂಗ್ಲರು ಭಾರತದಲ್ಲಿ ಆಡಳಿತ ಆರಂಭಿಸಿದಾಗ ಅವರಿಗೆ ಸ್ಥಳೀಯ ಭಾಷೆಗಳಲ್ಲಿ ಆಡಳಿತ ನಡೆಸುವ ಸಾಮರ್ಥ್ಯ ಇರಲಿಲ್ಲ. ಹೀಗಾಗಿ ಭಾರತದಲ್ಲಿ "ಈಸ್ಟ್ ಇಂಡಿಯಾ ಕಂಪನಿಯ ಸರ್ಕಾರದಲ್ಲಿ ದಿನನಿತ್ಯ ಕಚೇರಿಯ ವ್ಯವಹಾರಗಳನ್ನು ನೋಡಿಕೊಳ್ಳಲು ಅರ್ಹರಾದ ಇಂಗ್ಲಿಷ್ ಬಲ್ಲ ಗುಮಾಸ್ತರ ಅಗತ್ಯವಿತ್ತು. ಇದರಿಂದಾಗಿ ಮೂಲತಃ ಇಂಗ್ಲಿಷ್ ಶಿಕ್ಷಣ ತನ್ನ ಪ್ರಮುಖ ಸ್ಥಾನವನ್ನು ಪಡೆಯಲಾರಂಭಿಸಿತು. "ಇತ್ತ ಮೆಕಾಲೆ ಮತ್ತು ಟ್ರೆವಿಯನ್‌ರಂಥ ಬುದ್ಧಿಜೀವಿಗಳು ಆಂಗ್ಲೀಕರಣದಲ್ಲಿ ಮಹಾಧ್ಯೇಯಗಳ ಸಾಧನೆಗಳ ಕನಸು ಕಂಡರು. ಇದರಿಂದಾಗಿ ಇಂಗ್ಲಿಷ್ ವಿದ್ಯಾಭ್ಯಾಸ ಜೀವನೋಪಾಯಕ್ಕಾಗಿ ರಹದಾರಿಯಾಗಿ ಪರಿಣಮಿಸಿತೇ ಹೊರತು, ಭಾಷೆಯ ಕಲಿಕೆಯ ಬಗೆಗಿನ ಮಹತ್ವ ವಿಚಾರಗಳು ಗಣನೆಗೆ ಬರಲೇ ಇಲ್ಲ. ಕ್ರಮೇಣ 'ಬಾಬು ಇಂಗ್ಲಿಷ್' ಸಂಸ್ಕೃತಿ ಸಹಜವಾಗಿಯೇ ತನ್ನ ತಾಯಿ ಬೇರುಗಳನ್ನು ಆಳವಾಗಿ ಬಿಡಲಾರಂಭಿಸಿತು. ವಿಶ್ವವಿದ್ಯಾಲಯಗಳಲ್ಲಿ ಹೆಚ್ಚಳವನ್ನು ಗಳಿಸುವುದೂ ಕೂಡ ಕೇವಲ

ಉದ್ಯೋಗವನ್ನು ಗಿಟ್ಟಿಸಿಕೊಳ್ಳುವ ಏಕೈಕ ಮಾರ್ಗವೆನ್ನುವಷ್ಟರಮಟ್ಟಿಗೆ ನಂಬುಗೆ ಬೆಳೆಯಿತು. ಲಾರ್ಡ್ ಮೆಕಾಲೆಯ ದೃಷ್ಟಿಯಲ್ಲಿ ಭಾರತೀಯರ ಜ್ಞಾನ ಅಭಿವೃದ್ಧಿಗೆ, ಸಾಹಿತ್ಯ ಮತ್ತು ವಿಜ್ಞಾನಗಳ ಅಧ್ಯಯನಕ್ಕೆ ಇಂಗ್ಲಿಷ್ ಭಾಷೆ ಅನಿವಾರ್ಯವಾಗಿತ್ತು[೧೧].

ಇದರಿಂದಾಗಿ ಅಂದು ದೇಶೀಯ ಪ್ರಮುಖರು ಮತ್ತು ದೇಶೀಯ ರಾಜರು ತಮಗೆ ಇಂಗ್ಲೀಷ್ ಶಿಕ್ಷಣಬೇಕೆಂದೂ ತಮ್ಮ ಮಕ್ಕಳಿಗೆ ಇಂಗ್ಲೀಷನ್ನು ಕಲಿಸಬೇಕೆಂದೂ ಇಚ್ಛಿಸಿ, ಇಂಗ್ಲೀಷ್ ಅಧ್ಯಾಪಕರನ್ನು ತಮ್ಮ ಮನೆಗಳಲ್ಲಿರಿಸಿಕೊಂಡು ತಾವೂ ಕಲಿಯುವ ಮತ್ತು ಮಕ್ಕಳಿಗೂ ಕಲಿಸುವ ಪ್ರಯತ್ನ ಮಾಡಿದರು. ಹೈದರಾಬಾದಿನ ನಿಜಾಮ, ಮೈಸೂರು ಅರಸರು ಆಂಗ್ಲ ಅಧ್ಯಾಪಕರನ್ನು ತಮ್ಮ ಅರಮನೆಯಲ್ಲಿರಿಸಿ ಕೊಂಡಿದ್ದರು. ತಿರುವಾಂಕೂರಿನ ಸ್ವಾತಿ ತಿರುಗಾಳ್ ರಾಜಕುಮಾರನಿಗೆ ಕರ್ನಲ್ ಮನ್ರೊ ಆಂಗ್ಲ ಶಿಕ್ಷಕನಾಗಿದ್ದನು. ಸುರಪುರದ ರಾಜಕುಮಾರ ವೆಂಕಟಪ್ಪನಿಗೆ ಕರ್ನಲ್ ಟೈಲರ್ ಗುರುವಾಗಿದ್ದನು. ಈತನನ್ನು ವೆಂಕಟಪ್ಪನು "ಅಪ್ಪಾ" ಎಂದು ಕರೆಯುತ್ತಿದ್ದನಂತೆ. ಆಂಗ್ಲಭಾಷಾ ವ್ಯಾಮೋಹಕ್ಕೊಳಗಾಗಿ ಕೊಡಗಿನ ಚಿಕ್ಕವೀರ ರಾಜೇಂದ್ರನು ತನ್ನ ಮಗಳು ಗೌರಮ್ಮನಿಗೆ ಕ್ರಿಸ್ತಮತವನ್ನು ಅವಲಂಬಿಸಲು ಅನುಮತಿ ನೀಡಿದನಲ್ಲದೆ, ವಿಕ್ಟೋರಿಯಾ ಮಹಾರಾಣಿಗೆ ಅವಳನ್ನು ದತ್ತು ನೀಡಿದ. ಆತನೂ ಸಹಾ ಇಂಗ್ಲೆಂಡಿನಲ್ಲಿಯೇ ನೆಲಸಿ, ಮಗಳ ಪಾಶ್ಚಾತ್ಯ ರೀತಿ–ನೀತಿಗಳನ್ನು ನೋಡಿ ಆನಂದಿಸುತ್ತಾ, ತನ್ನ ಮಗಳು "ವಿಕ್ಟೋರಿಯಾ ಗೌರಮ್ಮ"ನಾದುದನ್ನು ಕಂಡು ಹೆಮ್ಮೆಪಟ್ಟುಕೊಂಡ[೧೨].

ಆಂಗ್ಲರ ಆಡಳಿತದ ಭಾರತದಲ್ಲಿ ಇಂತಹ ಬದಲಾವಣೆಗಳು ಆಗಲು ಮುಖ್ಯವಾಗಿ ಕಾರಣವಾದದ್ದು ಒಂದು ಇಂಗ್ಲಿಶ್ ಭಾಷಾಕಲಿಕೆಯಿಂದ ಸಮಾಜದಲ್ಲಿ ದೊರಕುತ್ತಿದ್ದ ಉನ್ನತ ಸ್ಥಾನಮಾನ, ಗೌರವ, ಪ್ರತಿಷ್ಟೆಗಳು. ಎರಡು ಆಡಳಿತದ ಕೆಳಹಂತದ ನೌಕರಿಗಳನ್ನು ಪಡೆಯಲು ಉಂಟಾದ ಇಂಗ್ಲಿಶ್ ಭಾಷಾಜ್ಞಾನದ ಅನಿವಾರ್ಯತೆ. ಇದನ್ನು ಗಮನಿಸಿದಾಗ ಬ್ರಿಟಿಷ್ ಆಡಳಿತೆಯ ಕೆಳಹಂತದ ನೌಕರಿಗಳನ್ನು ಪಡೆಯುವ ಆಸೆಯೊಂದೇ ಇಂಗ್ಲಿಷ್ ಕಲಿಯಲು ಉತ್ತೇಜಕವಾಗಿತ್ತು. ಇಂಗ್ಲೀಷ್ ಶಿಕ್ಷಣಕ್ಕೂ ನೌಕರಿಗೂ ಕಲ್ಪಿಸಿಕೊಂಡ ಸಂಬಂಧದಿಂದಾಗಿ ಭಾರತದಲ್ಲಿ "ಬಾಬು ಪ್ರಪಂಚ" (Babu dom) ವೊಂದು ನಿರ್ಮಾಣವಾಯಿತು[೧೩]. ಇದಕ್ಕೆ ಪೂರಕವಾಗಿ ಬ್ರಿಟೀಷರು ಏಕಪಕ್ಷೀಯವಾಗಿ ಬ್ರಾಹಣರ ಹಿಡಿತದಲ್ಲಿದ್ದ ಭಾರತೀಯ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ನೆಪದಲ್ಲಿ ಭಾರತೀಯ ಶಿಕ್ಷಣದಲ್ಲಿ ಇಂಗ್ಲಿಶ್ ಭಾಷೆ ಮತ್ತು ಭಾಷಾಮಾಧ್ಯಮದ ಕಲಿಕೆಗೆ ಭದ್ರವಾದ ಬುನಾದಿ ಹಾಕಿದ್ದಾರೆ. ಇದಕ್ಕೆ ಮತ್ತಷ್ಟು ಪ್ರೋತ್ಸಾಹ ನೀಡುವಂತೆ ಸಾವಿರಾರು ವರ್ಷಗಳಿಂದ ಭಾರತೀಯ ಸಮಾಜದಲ್ಲಿ ಜಾತಿ, ಧರ್ಮ, ಲಿಂಗ, ಆರ್ಥಿಕತೆ ಇತ್ಯಾದಿಗಳ ಆಧಾರದಲ್ಲಿ ಅಸಮಾನತೆಗೆ ಒಳಗಾಗಿ ಶಿಕ್ಷಣದಿಂದ ವಂಚಿತವಾಗಿದ್ದ ಜನಸಮುದಾಯಗಳು ಈ ಅಸಮಾನತೆಯಿಂದ ಹೊರಬರುವ ಮಾರ್ಗವಾಗಿ ಇಂಗ್ಲಿಶ್ ಶಿಕ್ಷಣವನ್ನು ಪರಿಗಣಿಸಿ ಅದರ ಕಲಿಕೆಗೆ ಮುಂದಾಗಿದ್ದಾರೆ. ಇದರಿಂದಾಗಿ ಇಂಗ್ಲಿಶ್ ಭಾಷಾಕಲಿಕೆ ಲಾರ್ಡ್ ಮೆಕಾಲೆಯ ದೃಷ್ಟಿಯಲ್ಲಿ ಭಾರತೀಯರ ಜ್ಞಾನ ಅಭಿವೃದ್ಧಿಗೆ, ಸಾಹಿತ್ಯ ಮತ್ತು ವಿಜ್ಞಾನಗಳ ಅಧ್ಯಯನಕ್ಕೆ ಇಂಗ್ಲಿಷ್ ಭಾಷೆ ಅನಿವಾರ್ಯವಾಗಿತ್ತು. ಇಂಗ್ಲಿಷ್ ಶಿಕ್ಷಣದಿಂದ ದೇಶ ಭಾಷೆಗಳನ್ನು ಬಲಪಡಿಸಬಹುದು ಎಂಬುದು ಈತನ ಅಭಿಪ್ರಾಯವಾಗಿತ್ತು. ಆದರೆ ಇದು ಕ್ರಮೇಣ

ಕಣ್ಮರೆಯಾಗಿ ಜ್ಞಾನಾರ್ಜನೆಗಿಂತ ಇಂಗ್ಲಿಷ್ ವಿದ್ಯಾಭ್ಯಾಸದಿಂದ ಕೇವಲ ಇಂಗ್ಲಿಷ್‌ರ ವೇಷಭೂಷಣ, ಮಾತು, ವ್ಯವಹಾರವಿಧಾನ ಇತ್ಯಾದಿ ತೋರಿಕೆಯ ಅನುಕರಣೆಯಲ್ಲಿ ಭಾರತೀಯರು ತಮ್ಮ ಮೂಲ ಗುರಿಯನ್ನು ಮರೆತರಲ್ಲದೆ ಮಾತೃಭಾಷೆಗಳನ್ನು ಮತ್ತು ಮೂಲ ಸಂಸ್ಕೃತಿಯನ್ನು ಕಡೆಗಣಿಸಿದರು. ಇಂಗ್ಲಿಷ್ ಬಾರದವರು ಅಸಂಸ್ಕೃತರು ಎಂಬ ಭಾವನೆ ನಮ್ಮಲ್ಲೆ ಬೆಳೆಯತೊಡಗಿತು. ಇದರಿಂದ ನಮ್ಮ ಮಾತೃಭಾಷೆಗಳು ಕೃಶಗೊಂಡವಲ್ಲದೆ ನಮ್ಮಷ್ಟಕ್ಕೆ ನಾವೇ ಅರ್ಥ ಕಳೆದುಕೊಂಡು ಬದುಕಿನ ಅನೇಕ ಸಂದರ್ಭಗಳನ್ನು ಕಾಣಿಸಿಕೊಂಡವು[೧೪].

ಹೀಗೆ ಆರಂಭದಲ್ಲಿ ಸಮಾನತೆಗಾಗಿ ಆರಂಭಗೊಂಡ ಇಂಗ್ಲಿಶ್ ಭಾಷಾಕಲಿಕೆ ನಂತರದಲ್ಲಿ ಭಾರತೀಯರಲ್ಲಿಯೇ ಭಾಷೆಯ ಆಧಾರದಲ್ಲಿ ಶ್ರೇಷ್ಠ-ಕನಿಷ್ಠ ಎಂಬ ಭಾವನೆ ಬೆಳೆಯಲು ಕಾರಣವಾಗಿದೆ. ಹಾಗೆಯೇ ಇಂಗ್ಲಿಶ್ ಭಾಷಾಕಲಿಕೆ ಭಾರತೀಯರನ್ನು ಬೌದ್ಧಿಕವಾಗಿ ಅತಂತ್ರರನ್ನಾಗಿ ಮಾಡಿ ಅವರ ಮಾತೃಭಾಷೆ, ಮಾತೃಸಂಸ್ಕೃತಿಗಳ ನಶಿಸುವಿಕೆಗೆ ಕಾರಣವಾಗಿದೆ. ಇದರಿಂದ ಭಾರತದಲ್ಲಿ ಇಂಗ್ಲಿಶ್ ಭಾಷಾಕಲಿಕೆಯ ಬಗೆಗೆ ವ್ಯಾಪಕ ವಿರೋಧ, ಟೀಕೆಗಳು ವ್ಯಕ್ತವಾಗಿವೆ. ಈ ವ್ಯಾಪಕ ವಿರೋಧ ಮತ್ತು ಟೀಕೆಗಳು ಮೋನಿಯರ್ ವಿಲಿಯಮ್ಸ್‌ನಂಥವರ ಅಭಿಪ್ರಾಯಗಳನ್ನು ಗಮನಿಸಿದರೆ ಮತ್ತಷ್ಟು ಸ್ಪಷ್ಟವಾಗುತ್ತವೆ. "ಆಳವಿಲ್ಲದ. ಇಂಗ್ಲಿಷ್ ವಿದ್ಯಾಭ್ಯಾಸ, ಅದರತ್ತ ತೋರಿದ ಉತ್ಸಾಹ ಇವು ಹೆಚ್ಚಿನ ಟೀಕೆಗಳಿಗೆ ಗುರಿಯಾದವುಗಳು. ಈ ಬಗೆಯ ಶಿಕ್ಷಣ ಜನರ ರಾಷ್ಟ್ರೀಯ ಸಂಪ್ರದಾಯಗಳಿಗೆ ವಿರೋಧಿಯಾದ ಹಾಗೂ ಪಾಶ್ಚಾತ್ಯ ಪದ್ಧತಿಗಳನ್ನು ಅಪೂರ್ಣ ಅನುಕರಣೆ ಮಾಡುವ ಬುಡರಹಿತ ಮೇಲುವರ್ಗ ಮತ್ತು ಧರ್ಮಬಾಹಿರರನ್ನು ಸೃಷ್ಟಿಗೊಳಿಸಿದೆ; ಇವರು ತಮ್ಮ ಸತ್ ಸಂಪ್ರದಾಯಗಳನ್ನು ಗಾಳಿಗೆ ತೂರಿದರು; ಇಂಗ್ಲೀಷಿನಲ್ಲಿ ವಿದ್ವಾಂಸರಾಗಲಿಲ್ಲ; ಪ್ರಾಮಾಣಿಕ ವಿಚಾರವಂತರಾಗಲಿಲ್ಲ; ಆಲೋಚನಾ ಪರರಾಗಲಿಲ್ಲ; ಪ್ರಾಮಾಣಿಕ ಕ್ರಿಶ್ಚಿಯನ್ನರು ಅಥವಾ ಬ್ರಿಟಿಷ್ ಚಕ್ರಾಧಿಪತ್ಯದ ನಂಬಲರ್ಹ ಪ್ರಜೆಗಳೂ ಆಗಲಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾನೆ[೧೫]."

ಮೋನಿಯರ್‌ವಿಲಿಯಮ್ಸ್‌ರವರ ಮೇಲಿನ ಮಾತುಗಳು ಇಂಗ್ಲಿಶ್ ಭಾಷಾಕಲಿಕೆ ಭಾರತೀಯರನ್ನು ಅತಂತ್ರರನ್ನಾಗಿಸಿರುವುದನ್ನು ಸ್ಪಷ್ಟಪಡಿಸುತ್ತವೆ. ಜೊತೆಗೆ ಇದು ಭಾರತೀಯ ಭಾಷೆಗಳು, ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ನಂಬಿಕೆ, ಆಚರಣೆ, ವಿಧಿವಿಧಾನಗಳಿಗೆ ಪೆಟ್ಟು ನೀಡಿ ಅವುಗಳ ಅಸ್ತಿತ್ವದ ನಾಶ ಮತ್ತು ಅಭಿವೃದ್ಧಿಗೆ ಮಾರಕವಾಗಿ ಪರಿಣಮಿಸಿದೆ. ಇದರಿಂದಾಗಿ '೧೮೫೨-೫೩ರ ಅವಧಿಯಲ್ಲಿ ಭಾರತೀಯ ಶಿಕ್ಷಣದ ಬಗೆಗೆ ಪಕ್ವವಾದ ಆಲೋಚನೆಗಳು ಕಾಣಿಸತೊಡಗಿದವು. ಈ ಅವಧಿಯಲ್ಲಿ ಬ್ರಿಟಿಷ್ ಪಾರ್ಲಿಮೆಂಟ್, ಕಂಪನಿ ಸರ್ಕಾರದಲ್ಲಿ ಭಾರತದ ಶಿಕ್ಷಣ ಸ್ಥಿತಿಗತಿಗಳನ್ನು ಪರಿಶೀಲಿಸಲು 'ಸೆಲೆಕ್ಟ್ ಸಮಿತಿ'ಯನ್ನು ರಚಿಸಿತು. ಸರ್.ಚಾರ್ಲ್ಸ್‌ವುಡ್ ಎಂಬುವನು ಈ ಸಮಿತಿಯ ಸದಸ್ಯರಲ್ಲೊಬ್ಬ ನಾಗಿದ್ದ. ಸರ್.ಚಾರ್ಲ್ಸ್‌ವುಡ್ ಡಿಸ್ಪ್ಯಾಚ ಎಂದು ಪ್ರಸಿದ್ಧವಾಗಿರುವ ಸಮಿತಿಯ ವರದಿಯಲ್ಲಿ 'ವಿದ್ಯಾವಂತ ಜನರಲ್ಲಿ ನೈತಿಕ ಮಟ್ಟವನ್ನು ಹೆಚ್ಚಿಸುವುದರಿಂದ ಹಾಗೂ ಪ್ರಾದೇಶಿಕ ಭಾಷೆಗಳಿಗೆ ಗಮನ ಕೊಡುವುದರಿಂದ ಕಂಪನಿ ಸರ್ಕಾರದ ಕಛೇರಿಗಳಲ್ಲಿ ಜವಾಬ್ದಾರಿಯುತ ಕೆಲಸಗಳನ್ನು ನಿರ್ವಹಿಸಲು ಅರ್ಹರಾಗುತ್ತಾರೆ; ಯಾವುದೇ ಒಂದು ಸಾಮಾನ್ಯ ಶಿಕ್ಷಣ ವ್ಯವಸ್ಥೆಯಲ್ಲಿ

ಪ್ರಾದೇಶಿಕ ಭಾಷೆಗಳ ಪೂರ್ಣ ಅಧ್ಯಯನವನ್ನು ಕಡೆಗಣಿಸಲು ಸಾಧ್ಯವಿಲ್ಲ; ಪರಭಾಷೆಯ ಮೂಲಕ ಪಾಶ್ಚಾತ್ಯ ಜ್ಞಾನವನ್ನು ಗಳಿಸಿದವರು ಉಚ್ಚಶಿಕ್ಷಣವನ್ನು ಪಡೆಯಲಾಗದ ಬಹಳಷ್ಟು ಮಂದಿಗೆ ತಮ್ಮ ಜ್ಞಾನವನ್ನು ಪ್ರಾದೇಶಿಕ ಭಾಷೆಗಳ ಮೂಲಕ ಪ್ರಸಾರ ಮಾಡಬೇಕು' ಎಂಬುದು ಗಮನಾರ್ಹ ಅಂಶವಾಗಿತ್ತು. ಆದರೆ ಈ ಭಾವನೆಗಳಿಗೆ ಇಂಬು ಕೊಡುವ ಉತ್ತೇಜನ ಭಾರತೀಯರಿಂದ ದೊರಕಲಿಲ್ಲವಾದ್ದರಿಂದ ಇಂಗ್ಲಿಷ್ ಮತ್ತಷ್ಟು ಪ್ರಬಲವಾಗತೊಡಗಿತು[೧೬] ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ.

ಇಂತಹ ಪರಿಸ್ಥಿತಿಯಲ್ಲಿಯು ಪ್ರಾದೇಶಿಕ ಭಾಷೆಯ ಕಾಳಜಿಯನ್ನು ಹೊಂದಿ, ಅವುಗಳ ಅಭಿವೃದ್ಧಿಗೆ ಶ್ರಮಿಸಿದ, ತಮ್ಮ ಅಧಿಕಾರದ ಅವಧಿಯಲ್ಲಿ ಕನ್ನಡವನ್ನು ಕಲಿತು, ಆಡಳಿತದಲ್ಲಿ ಬಳಸಿದ ಹಲವು ಆಂಗ್ಲ ಅಧಿಕಾರಿಗಳು ಕರ್ನಾಟಕದಲ್ಲಿ ಇದ್ದರು. ಅವರುಗಳಲ್ಲಿ ಮುಖ್ಯವಾಗಿ ಜೆ.ಎಫ್.ಪ್ಲೀಟ್, ಕರ್ನಲ್ ಟೈಲರ್, ಲೇ||ಅಬರರ ಕ್ರಾಂಬಿ, ಮಾರ್ಕ್ ಕಬ್ಬನ್, ರಾಬರ್ಟ್ ಕೋಲ್, ಝಿಗ್ಲಿರ್, ಜೆ.ಬುಚರ್, ಜಾನ್ ಮೆಕೆರೆಲ್, ಎಲ್.ರಿಕೆಟ್ಸ್, ಟಿ.ಜಿ.ಕ್ಲಾರ್ಕ್, ವಿಲಿಯಂ ರೆಸೆಲ್, ಥಾಮಸ್ ಮನ್ರೋ, ರೆ. ರೀಡ್, ಮೆಕಾರ್ಡಿ ಎ.ಎಸ್.ಜಿ. ಚಾರ್ಲ್ಸ್ ಬ್ರೌನ್, ಜಾನ್ ಗ್ಯಾರೆಟ್, ಮೋಗ್ಲಿಂಗ್, ಕಾಲಿನ್ ಮೆಕಂಜಿ, ಥಾಮಸ್ ಹಡ್ಸನ್, ಬಿ.ಎಚ್.ರೈಸ್, ಕ್ಯಾಪ್ಟನ್ ಬೆಸ್ಟ್, ವಿಲಿಯಂ ಕ್ಯಾರಿ, ಮೂರ್, ಆಂಡ್ರ್ಯರ್‌ಸನ್, ಚಾರ್ಲ್ಸ್ ಬ್ರೌನ್, ಇ.ಪಿ.ರೈಸ್, ಕ್ಯಾಪ್ಟನ್ ಮಹೋನಿ, ರೇಸ್ ಸಾಂಡರ್ ಸಸ್, ಬಿ.ಎಲ್.ರೈಸ್, ಮ್ಯಾಕ್ ಹುಚಿನ್‌ರಂತಹ ಆಂಗ್ಲ ಅಧಿಕಾರಿಗಳು ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಸಿದ್ದಾರೆ. ಹಾಗೆಯೇ ವಿಲಿಯಂ ಜೋನ್ಸ್, ವಿಲಿಯಂ ಕ್ಯಾರಿ, ಹಡ್ಸನ್, ರಾಬರ್ಟ್‌ಲೀಜ್, ಇಲಿಯಟ್, ಬುಕ್ಯಾನಿನ್, ಕಾಲ್ಡವೆಲ್, ಬೀಮ್ಸ, ಬ್ಯೂಲರ್ ಕನ್ನಡವನ್ನು ಬಲ್ಲ ಬಹುಭಾಷಾ ಪಂಡಿತರಾಗಿದ್ದರು. ಹೀಗೆ ವಿದೇಶೀ ವಿದ್ವಾಂಸರು ಕರ್ನಾಟಕದಲ್ಲಿ ಇದ್ದು ಕನ್ನಡವನ್ನು ಕಲಿತು, ಬಳಸಿ ಕನ್ನಡದ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಆದರೆ ಕೆಲವು ಕನ್ನಡಿಗರು ಸರ್.ಚಾರ್ಲ್ಸ್‌ವುಡ್ ಹೇಳಿರುವ ಹಾಗೆ ಇಂಗ್ಲಿಶ್ ಭಾಷೆಯ ಕಲಿಕೆಯಿಂದ ಒದಗುತ್ತಿದ್ದ ಉದ್ಯೋಗ ಮತ್ತು ಸ್ಥಾನಮಾನಗಳಿಗಾಗಿ ಮತ್ತು ವೈಜ್ಞಾನಿಕ, ವೈಚಾರಿಕ ಶಿಕ್ಷಣ, ಸಮಾನತೆಗಾಗಿ ಮಾತೃಭಾಷಾ ಕಲಿಕೆ ಮತ್ತು ಮಾತೃಭಾಷಾಮಾಧ್ಯಮದ ಶಿಕ್ಷಣ ಸಹಕಾರಿಯಾಗುವುದಿಲ್ಲ. ಅದಕ್ಕೆ ಇಂಗ್ಲಿಶ್ ಭಾಷೆಯೇ ಸಮರ್ಥವಾದ ಭಾಷೆ ಎಂದು ಭಾವಿಸಿ ಇಂಗ್ಲಿಶ್ ಭಾಷೆ ಮತ್ತು ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣದ ಕಡೆಗೆ ಆಸಕ್ತರಾಗಿದ್ದಾರೆ. ಇದು ಇಂಗ್ಲಿಶ್ ಭಾಷೆಯ ಬಗೆಗೆ ಭಾಷಿಕವಾಗಿ ಇದ್ದ ವ್ಯಾಮೋಹವಲ್ಲ. ಬದಲಾಗಿ ಈ ಹಿಂದೆಯೇ ಚರ್ಚಿಸಿರುವ ಹಾಗೆ ಇಂಗ್ಲಿಶ್ ಭಾಷೆಯಿಂದ ಒದಗುತ್ತಿದ್ದ ಉದ್ಯೋಗದ ಅವಕಾಶ, ಹೊಸಜ್ಞಾನ ಪರಂಪರೆ ಹಾಗೂ ಸ್ಥಾನಮಾನ ಕಾರಣವಾಗಿದ್ದವು.

ಹೀಗೆ ಸ್ಥಳೀಯರು ಆಂಗ್ಲರ ಆಡಳಿತದಲ್ಲಿ ಉದ್ಯೋಗ ಮತ್ತು ಸ್ಥಾನಮಾನದ ಕಾರಣಕ್ಕಾಗಿ ಇಂಗ್ಲಿಶ್ ಭಾಷೆ ಮತ್ತು ಭಾಷಾಮಾಧ್ಯಮದಲ್ಲಿ ಕಲಿಯಲು ತೋರಿದ ಆಸಕ್ತಿ ಬ್ರಿಟೀಷರಿಗೆ ಭಾರತದಲ್ಲಿ ಇಂಗ್ಲಿಶ್‌ನ ಕಲಿಸುವಿಕೆ ಮತ್ತು ಬಳಕೆಯ ವ್ಯಾಪ್ತಿ ಹೆಚ್ಚಿಸಲು ಸಹಾಯಕವಾಗಿದೆ. ಮತ್ತು ಇದು ಭಾರತದ ಆಡಳಿತ, ಶಿಕ್ಷಣ, ಉದ್ಯೋಗ ಸೇರಿದಂತೆ ಎಲ್ಲಾ ಕ್ಷೇತ್ರಗಳಲ್ಲಿ ಇಂಗ್ಲಿಶ್ ಭಾಷಾಬಳಕೆಯನ್ನು

ಸುಲಭಗೊಳಿಸಿದೆ. ಆದರೆ ಇದು ಭಾರತದಲ್ಲಿ ಭಾಷಾಬಿಕ್ಕಟ್ಟು ಸೇರಿದಂತೆ ಇತರ ಸಮಸ್ಯೆಗಳ ಹುಟ್ಟಿಗೆ ಅಡಿಪಾಯವಾಗಿದೆ. ಹೇಗೆಂದರೆ ಆಂಗ್ಲರ ಕಾಲದಲ್ಲಿ ಕರ್ನಾಟಕದ ಎಲ್ಲಾ ಕ್ಷೇತ್ರಗಳಲ್ಲಿ ಬಳಕೆಗೊಳ್ಳಲು ಆರಂಭಗೊಂಡದ್ದರಿಂದ ಸ್ಥಳೀಯ ಭಾಷೆಗಳ ಬಳಕೆ ಸಹಜವಾಗಿಯೇ ಕುಂಠಿತವಾಗಿದೆ. ಇದರಿಂದಾಗಿ ಸ್ಥಳೀಯ ಮಕ್ಕಳು ಶಿಕ್ಷಣ, ಉದ್ಯೋಗ, ವ್ಯವಹಾರ ಮುಂತಾದ ಕಾರಣಗಳಿಗೆ ಇಂಗ್ಲಿಶ್ ಕಲಿಯುವುದು ಅನಿವಾರ್ಯವಾಗಿದೆ. ಇದರಿಂದ ಸ್ಥಳೀಯ ಭಾಷಿಕ ಮಕ್ಕಳು ಇಂಗ್ಲಿಶ್ ಕಲಿಯಲು ಪ್ರಯತ್ನಿಸಿವೆ.

ಆದರೆ ದೇಶದ ಎಲ್ಲಾ ಮಕ್ಕಳು ಇಂಗ್ಲಿಶ್ ಭಾಷೆ ಮತ್ತು ಭಾಷಾಮಾಧ್ಯಮದ ಶಿಕ್ಷಣವನ್ನು ಸಮರ್ಥವಾಗಿ ಗ್ರಹಿಸಲು ಸಾಧ್ಯವಾಗಿಲ್ಲ. ಏಕೆಂದರೆ ಸ್ಥಳೀಯ ಭಾಷಾಸಮುದಾಯದ ಮಕ್ಕಳಿಗೆ ಶಾಲೆಗೆ ಸೇರುವ ಮುನ್ನ ಇಂಗ್ಲಿಶ್ ಭಾಷೆಯ ಪರಿಚಯ ಇರಲಿಲ್ಲ. ಹೀಗಾಗಿ ಭಾಷೆಯ ನಾಲ್ಕು ಕೌಶಲಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದನ್ನು ಶಾಲೆಯಲ್ಲಿಯೇ ಕಲಿಯಬೇಕಾಗಿತ್ತು. ಆದರೆ ನಮ್ಮ ಶಾಲೆಗಳಲ್ಲಿ ಭಾಷೆಯ ಈ ನಾಲ್ಕು ಕೌಶಲಗಳನ್ನು ಸಮರ್ಥವಾಗಿ ಕಲಿಸುವ ವ್ಯವಸ್ಥೆ ಇರಲಿಲ್ಲ. ಏಕೆಂದರೆ ಮಗು ಶಾಲೆಗೆ ಸೇರುವ ಪೂರ್ವದಲ್ಲೆ ತನ್ನ ಮಾತೃಭಾಷೆಯಲ್ಲಿ ಭಾಷೆಯ ಎರಡು ಕೌಶಲಗಳಾದ ಆಲಿಸುವ ಮತ್ತು ಮಾತನಾಡುವ ಕೌಶಲಗಳನ್ನು ಕಲಿತಿರುತ್ತಿದ್ದವು. ಹೀಗಾಗಿ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಮೊದಲು ಅಕ್ಷರಗಳನ್ನು ಬರೆದು ಅವುಗಳನ್ನು ತಿದ್ದಿಸಿ ಬರೆಸುವುದು, ಅನಂತರ ಅವನ್ನು ಓದಿಸಿ ಸ್ವತಂತ್ರವಾಗಿ ಬರೆಯುವುದನ್ನು ಅಭ್ಯಾಸ ಮಾಡಿಸುತ್ತಿದ್ದರು. ಇದರಿಂದ ಮಾತೃಭಾಷಾ ಮಾಧ್ಯಮದಲ್ಲಿ ಕಲಿಯುತ್ತಿದ್ದ ಮಕ್ಕಳಿಗೆ ಆಲಿಸುವ ಮತ್ತು ಮಾತನಾಡುವ ಕೌಶಲಗಳ ತರಬೇತಿ ಸಿಗುತ್ತಿರಲಿಲ್ಲ. ಅನ್ಯಭಾಷೆ ಮತ್ತು ಭಾಷಾಮಾಧ್ಯಮದ ಶಿಕ್ಷಣ ನೀಡುವಾಗ ಮಕ್ಕಳಿಗೆ ಮೊದಲು ಶಾಲೆಗಳಲ್ಲಿ ಭಾಷೆಯನ್ನು ಆಲಿಸುವ ಮತ್ತು ಮಾತನಾಡುವ ಕೌಶಲಗಳನ್ನು ಪ್ರಾಯೋಗಿಕವಾಗಿ ಅಭ್ಯಾಸ ಮಾಡಿಸಬೇಕಿತ್ತು. ಅನಂತರ ಅವರಿಗೆ ಭಾಷೆಯ ಉಳಿದೆರಡು ಕೌಶಲಗಳಾದ ಓದುವುದು ಮತ್ತು ಬರೆಯವುದನ್ನು ಅಭ್ಯಾಸ ಕಲಿಸಬೇಕಿತ್ತು.

ಆದರೆ ಕರ್ನಾಟಕ ಶಾಲೆಗಳಲ್ಲಿ ಇಂತಹ ವಿಧಾನ ಕಾರ್ಯರೂಪದಲ್ಲಿ ಇರಲಿಲ್ಲ. ಈಗಲೂ ಇಲ್ಲ. ಹೀಗಾಗಿ ಮಕ್ಕಳು ಮಾತೃಭಾಷೆ ಮತ್ತು ಮಾತೃಭಾಷಾಮಾಧ್ಯಮದ ಶಿಕ್ಷಣವನ್ನು ಅರ್ಥೈಸಿಕೊಂಡಷ್ಟು, ಅಭಿವ್ಯಕ್ತಿಸಿದಷ್ಟು ಸುಲಭವಾಗಿ ಇಂಗ್ಲಿಶ್ ಭಾಷೆ ಮತ್ತು ಭಾಷಾಮಾಧ್ಯಮದ ಶಿಕ್ಷಣದಲ್ಲಿ ಅರ್ಥೈಸಿಕೊಳ್ಳಲು, ಅಭಿವ್ಯಕ್ತಿಸಲು ಸಾಧ್ಯವಾಗಿಲ್ಲ. ಹೀಗಾಗಿ ವಿದ್ಯಾರ್ಥಿಗಳು ಇಂಗ್ಲಿಶ್ ಭಾಷೆ ಮತ್ತು ಭಾಷಾಮಾಧ್ಯಮದ ಪರೀಕ್ಷೆಗಳಲ್ಲಿ ಹೆಚ್ಚು ಅಂಕ ಗಳಿಸಲು ಸಾಧ್ಯವಾಗದೆ ಹಿಂದೆ ಉಳಿದಿರುವುದು, ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತವಾಗಿರುವುದು ಹೆಚ್ಚಿನ ಸಂಖ್ಯೆಯಲ್ಲಿ ಇದೆ. ಹೀಗಿದ್ದರೂ ಈ ಹಿಂದೆ ಪ್ರಸ್ತಾಪಿಸಿರುವ ಕೆಲವು ಆಂಗ್ಲ ಅಧಿಕಾರಿಗಳನ್ನು ಹೊರತುಪಡಿಸಿದರೆ ಉಳಿದ ಆಂಗ್ಲರು ಮತ್ತು ಭಾರತೀಯ ಅಧಿಕಾರಿಗಳು, ನೌಕರರು ಆಡಳಿತದಲ್ಲಿ ಇಂಗ್ಲಿಶ್ ಬಳಸಿದ್ದಾರೆ. ಇದರಿಂದಾಗಿ ಇಂಗ್ಲಿಶ್‌ನ ಕಲಿಕೆಗೆ ಬೇಡಿಕೆ ಸಹಜವಾಗಿಯೇ ಹೆಚ್ಚಾಗಿದೆ. ಇದರ ಪೂರೈಕೆಗಾಗಿ ಆಂಗ್ಲರು ಇಂಗ್ಲಿಶ್ ಶಾಲೆಗಳನ್ನು ಆರಂಭಿಸಿ ಪ್ರೋತ್ಸಾಹ ನೀಡಿದ್ದಾರೆ. ಆದರೆ ಇದೇ ರೀತಿಯ ಪ್ರೋತ್ಸಾಹ ಸ್ಥಳೀಯ

ಭಾಷಾಮಾಧ್ಯಮದ ಶಾಲೆಗಳಿಗೆ ನೀಡಿಲ್ಲ. ಇದರಿಂದ ಇಂಗ್ಲಿಶ್ ಆಂಗ್ಲರ ಆಡಳಿತದಲ್ಲಿ ಹಂತಹಂತವಾಗಿ ಅಭಿವೃದ್ಧಿ ಹೊಂದಿ ಭಾರತೀಯ ಶಿಕ್ಷಣದಲ್ಲಿ ತನ್ನ ಸ್ಥಾನ ಭದ್ರಪಡಿಸಿಕೊಂಡಿದೆ.

ಇದೇ ಸಂದರ್ಭದಲ್ಲಿ ಭಾರತೀಯ ಶಿಕ್ಷಣ ಸಾರ್ವತ್ರೀಕರಣಗೊಂಡಿದ್ದು ಭಾರತದ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ತುಳಿತಕ್ಕೆ ಸಿಕ್ಕಿ ಶಿಕ್ಷಣದಿಂದ ವಂಚಿತವಾಗಿದ್ದ ಎಲ್ಲಾ ಜಾತಿ, ಧರ್ಮಗಳ ಜನರು ಶಿಕ್ಷಣ ಕಲಿಯಲು ಆಸಕ್ತರಾಗಿದ್ದರು. ಏಕೆಂದರೆ ಈ ವರ್ಗಗಳು ಭಾರತೀಯ ಪರಂಪರೆಯಲ್ಲಿ ಶತಶತಮಾನಗಳಿಂದ ಅನುಭವಿಸಿದ್ದ ಶೋಷಣೆಯಿಂದ ಮುಕ್ತಗೊಳ್ಳಲು ಶಿಕ್ಷಣ ಕಲಿಯುವುದು ಅನಿವಾರ್ಯವಾಗಿತ್ತು. ಇಂತಹ ಸಂದರ್ಭದಲ್ಲಿ ಇಂಗ್ಲಿಶ್ ಭಾರತೀಯ ಶಿಕ್ಷಣ ಪದ್ಧತಿಯಲ್ಲಿ ಸೇರ್ಪಡೆಗೊಂಡದ್ದು ಮಾತ್ರವಲ್ಲದೆ ಅದರ ಕಲಿಕೆಗೆ ಅನಿವಾರ್ಯತೆ ಉಂಟಾದದ್ದು ಭಾರತದಲ್ಲಿ ಇಂಗ್ಲಿಶ್ ಬಹುಬೇಗ ಬೇರುಬಿಟ್ಟುಕೊಳ್ಳಲು ಕಾರಣವಾಗಿದೆ. ಆದರೆ ಇಂಗ್ಲಿಶ್ ಕಲಿಕೆ ಈಗಾಗಲೇ ಪ್ರಸ್ತಾಪಿಸಿರುವ ಕಾರಣಗಳಿಂದಾಗಿ ಕಷ್ಟವಾಗಿದ್ದು, ರಾಜ್ಯದ ಎಲ್ಲಾ ಶಾಲೆಗಳಲ್ಲಿ ಕಲಿಯಲು ಪೂರಕ ವಾತಾವರಣ ಇರಲಿಲ್ಲ. ಹೀಗಾಗಿ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳು ಇಂಗ್ಲಿಶ್ ಭಾಷಾಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಆದರೂ ಈ ಬಗೆಗೆ ಅಂದು ಚಿಂತನೆಗಳು ನಡೆದಿಲ್ಲ. ಈ ಸಮಸ್ಯೆಗಳನ್ನು ಬಗೆಹರಿಸುವ ಕೆಲಸಗಳು ನಡೆದಿಲ್ಲ.

ಏಕೆಂದರೆ ಭಾರತೀಯರಿಗೆ ಆಗ ಇಂಗ್ಲಿಶ್ ಕಲಿಕೆಯಿಂದ ಸಮಾಜದಲ್ಲಿ ಲಭ್ಯವಾಗುತ್ತಿದ್ದ ಗೌರವ, ಉದ್ಯೋಗ ಮತ್ತು ಆರ್ಥಿಕ ಲಾಭಗಳೇ ಪ್ರಧಾನವಾಗಿದ್ದವು. ಹೀಗಾಗಿ ಇಂಗ್ಲಿಶ್ ಭಾಷಾಕಲಿಕೆ, ಅದರ ಸಮಸ್ಯೆ, ಇಂಗ್ಲಿಶ್ ಕಲಿಕೆ ಭಾರತೀಯ ಭಾಷೆ, ಕಲೆ, ಸಾಹಿತ್ಯ, ಸಂಸ್ಕೃತಿ ವಿಜ್ಞಾನ, ಬದುಕಿನ ಮೇಲೆ ಭವಿಷ್ಯದಲ್ಲಿ ಬೀರಬಹುದಾಗಿದ್ದ ವ್ಯತಿರಿಕ್ತ ಪರಿಣಾಮಗಳು ನಗಣ್ಯವಾಗಿವೆ. ಯಾವಾಗ ಇಂಗ್ಲಿಶ್ ಭಾರತದ ಅಧಿಕಾರ ವರ್ಗದ ಜೊತೆ ಬೆರೆತು ಪ್ರಬಲವಾಗಿ ಉಳಿದ ಜನವರ್ಗಗಳ ಬದುಕಿಗೆ ವ್ಯತಿರಿಕ್ತವಾಗಲು ಆರಂಭಿಸಿತೋ ಮತ್ತು ಭಾಷಿಕ ಸಮುದಾಯಗಳ ಮಧ್ಯೆ ಪ್ರಬಲ–ದುರ್ಬಲ, ಮೇಲು–ಕೀಳು, ಶ್ರೇಷ್ಠ–ಕನಿಷ್ಠ ಎಂಬ ಭಾವನೆ ಬೆಳೆಸಿತೋ ಅಲ್ಲಿಂದ ಇಂಗ್ಲಿಶ್‌ನ್ನು ವಿರೋಧಿಸುವ ಒಂದು ವರ್ಗ ಭಾರತದಲ್ಲಿ ನಿರ್ಮಾಣವಾಗಿದೆ. ಇದು ನಾವು ಅನ್ಯಭಾಷಾ ಸಮುದಾಯದವರ ಆಡಳಿತ ನಮ್ಮನ್ನು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ, ಧಾರ್ಮಿಕವಾಗಿ ಅಧೀರರನ್ನಾಗಿ ಮಾಡಿದೆ. ಇದರಿಂದ ನಾವು ಅಭಿವೃದ್ಧಿಯಲ್ಲಿ ಹಿಂದೆ ಉಳಿದುಕೊಂಡಿದ್ದೇವೆ ಮತ್ತು ಎಲ್ಲಾ ತರಹದ ಅಸಮಾನತೆಗಳಿಗೆ ಗುರಿಯಾಗಿದ್ದೇವೆ. ಇದರಿಂದ ನೂರಾರು ವರ್ಷಗಳಿಂದ ಭವ್ಯವಾಗಿ ಬೆಳೆದಿರುವ ನಮ್ಮ ಸಮುದಾಯಗಳ ವಿಶೇಷತೆಗಳಿಗೆ ಧಕ್ಕೆಯಾಗುತ್ತಿದೆ. ಪರಿಸ್ಥಿತಿ ಹೀಗೆ ಮುಂದುವರೆದರೆ ಒಂದು ಕಡೆ ನಮ್ಮ ಬದುಕು ಮತ್ತೊಂದು ಕಡೆಗೆ ನಮ್ಮ ವಿಶೇಷತೆಗಳು. ಈ ಎರಡನ್ನು ಕಳೆದುಕೊಂಡು ಸ್ವತಂತ್ರ ಅಸ್ತಿತ್ವವಿಲ್ಲದೆ ನಾವು ಅನಾಥರಾಗಬೇಕಾಗುತ್ತದೆ. ಈಗಾಗಬಾರದು ಎಂದರೆ ಮೊದಲು ನಮ್ಮ ಭಾಷೆಯನ್ನು ಉಳಿಸಿಕೊಳ್ಳಬೇಕು ಎಂದು ಜನರನ್ನು ಪ್ರೇರಿಸುವ ಕೆಲಸ ಮಾಡಿದೆ.

ಈ ರೀತಿ ಜನರನ್ನು ಪ್ರೇರಿಸುವ ಜನವರ್ಗವೊಂದು ಕರ್ನಾಟಕದಲ್ಲಿ ಮಾತ್ರವಲ್ಲದೆ ಭಾರತದ ಎಲ್ಲಾ ಪ್ರಮುಖ ಭಾಷೆಗಳಲ್ಲು ಹುಟ್ಟಿಕೊಂಡಿದೆ. ಕರ್ನಾಟಕದ ಸಂದರ್ಭದಲ್ಲಿ ಈ ವರ್ಗವು ಕನ್ನಡವನ್ನು ಉಳಿಸಿಕೊಳ್ಳುವ ಮೂಲಕ ಅನ್ಯಭಾಷಾ ಸಮುದಾಯಗಳ ಆಡಳಿತದ ಅಧೀನಕ್ಕೆ ಒಳಗಾಗಿ ತಾವು ಕಳೆದುಕೊಂಡಿದ್ದ ಬದುಕನ್ನು ಪುನರ್ ಪಡೆದುಕೊಳ್ಳುವ ಪ್ರಯತ್ನ ಮಾಡಿದೆ. ಇದಕ್ಕಾಗಿ ಕನ್ನಡ ಭಾಷೆಯ ಆಧಾರದಲ್ಲಿ ಕರ್ನಾಟಕ ರಾಜ್ಯ ರಚನೆಯ ಹೋರಾಟ ಆರಂಭಿಸಿದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಕರ್ನಾಟಕ ಏಕೀಕರಣ ಹೋರಾಟವೆಂಬುದು ಕೇವಲ ವಿವಿಧ ಆಡಳಿತ ವಲಯಗಳಾಗಿ ಹಂಚಿಹೋಗಿದ್ದ ಕನ್ನಡಿಗರು ವಾಸಿಸುತ್ತಿದ್ದ ಭೂಪ್ರದೇಶವನ್ನು ಭೌಗೋಳಿಕವಾಗಿ ಮತ್ತು ರಾಜಕೀಯವಾಗಿ ಒಂದುಗೂಡಿಸುವುದಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅದು ಮುಂದುವರೆದು ಕನ್ನಡಿಗರ ವಿಶೇಷತೆಯನ್ನು ಸಾರುವ ಅಸ್ಮಿತೆಯ ಕುರುಹುಗಳಾದ ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಕಲೆ, ಕ್ರೀಡೆ, ಶೌರ್ಯ, ಸಾಹಸ, ಪರಾಕ್ರಮ, ಔದಾರ್ಯ, ವಿಶಾಲ ಮನೋಭಾವಗಳನ್ನು ಮತ್ತು ಅವುಗಳನ್ನು ಮುಂದಿನ ತಲೆಮಾರಿಗೆ ಪ್ರವಹಿಸುವ ಭಾಷೆಯನ್ನು ಉಳಿಸುವುದಾಗಿತ್ತು. ಇದರ ಜೊತೆಗೆ ಕನ್ನಡವನ್ನು ಉಳಿಸಿಕೊಳ್ಳದೆ ನಾವು ಸಾಮಾಜಿಕವಾದ, ರಾಜಕೀಯವಾದ, ಶೈಕ್ಷಣಿಕವಾದ ಆಡಳಿತಾತ್ಮಕವಾದ ಸಮಸ್ಯೆಗಳಿಂದ ಹೊರಬಂದು ಪ್ರಬಲವಾಗಿ ಬೆಳೆಯುವುದು ಅಸಾಧ್ಯ ಎಂಬ ಅರಿವು ಕನ್ನಡಿಗರಿಗೆ ಬಂದಿತ್ತು. ಹೀಗಾಗಿ ಕರ್ನಾಟಕ ಏಕೀಕರಣ ಹೋರಾಟದ ಹಿಂದೆ ಕನ್ನಡ ಭಾಷಿಕರು ವಾಸಿಸುವ ಒಟ್ಟು ಭೂಪ್ರದೇಶವನ್ನು ಭೌಗೋಳಿಕವಾಗಿ ಒಂದುಗೂಡಿಸಿ ರಾಜಕೀಯವಾಗಿ ಪ್ರಬಲವಾಗುವ ಮೂಲಕ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಅಭಿವೃದ್ಧಿ ಹೊಂದುವ ಆಲೋಚನೆ ಇತ್ತು.

ಈ ಹಿನ್ನೆಲೆಯಲ್ಲಿ ಇಂದಿನ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರು ಕನ್ನಡ ಭಾಷೆಯ ಆಧಾರದಲ್ಲಿ ಪ್ರತ್ಯೇಕ ರಾಜ್ಯದ ಬೇಡಿಕೆಯನ್ನಿಟ್ಟು ಸ್ವಾತಂತ್ರ್ಯ ಹೋರಾಟದ ಜೊತೆಜೊತೆಯಲ್ಲಿಯೇ ಕರ್ನಾಟಕ ಏಕೀಕರಣ ಹೋರಾಟ ಚಳವಳಿ ಆರಂಭಿಸಿದ್ದಾರೆ. ಇದೇ ರೀತಿಯ ಹೋರಾಟಗಳು ದೇಶದ ಇತರ ಭಾಗಗಳಲ್ಲಿ ಬಹುಸಂಖ್ಯಾತರಾಗಿ ಅಭಿವೃದ್ಧಿ ಹೊಂದಿದ್ದ ಇತರ ಭಾಷಿಕರಿಂದಲೂ ನಡೆದಿವೆ. ಆದರೂ ಆಂಗ್ಲರು ತಮ್ಮ ಆಡಳಿತದ ಅವಧಿಯಲ್ಲಿ ಭಾಷಾಆಧಾರಿತ ರಾಜ್ಯಗಳನ್ನು ರಚಿಸಿಲ್ಲ. ಏಕೆಂದರೆ ಭಾಷೆಯ ಆಧಾರದಲ್ಲಿ ರಾಜ್ಯಗಳನ್ನು ರಚಿಸಿದರೆ ಭಾರತೀಯರು ಒಂದುಗೂಡಿ ಸಂಘಟಿತರಾಗುತ್ತಾರೆ. ಇದು ನಮ್ಮ ಅಧಿಕಾರಕ್ಕೆ ಕುತ್ತು ತರುತ್ತದೆ ಎಂದು ಭಾವಿಸಿ ಬ್ರಿಟೀಷರು ಭಾರತದಲ್ಲಿ ಭಾಷಾವಾರು ರಾಜ್ಯಗಳನ್ನು ರಚನೆ ಮಾಡುವುದರಿಂದ ಹಿಂದೆ ಸರಿದಿದ್ದಾರೆ. ಇದೇ ಸಂದರ್ಭದಲ್ಲಿ ಭಾರತ ಸ್ವಾತಂತ್ರ ಹೋರಾಟದಲ್ಲಿ ತೊಡಗಿದ್ದ ಭಾರತೀಯ ನಾಯಕರು ದೇಶ ಸ್ವತಂತ್ರಗೊಂಡರೆ ಇಲ್ಲಿನ ಜನಸಮುದಾಯಗಳ ಬೇಡಿಕೆಗಳನ್ನು ಈಡೇರಿಸಲಾಗುವುದು. ಅಂದರೆ ದೇಶದಲ್ಲಿ ಭಾಷಾವಾರು ರಾಜ್ಯಗಳನ್ನು ರಚನೆ ಮಾಡಲಾಗುವುದು ಎಂದಿದ್ದರು. ಇದಕ್ಕೆ ಗಾಂಧಿ ಕೂಡ ಬೆಂಬಲವಾಗಿದ್ದರು. ಏಕೆಂದರೆ ಗಾಂಧಿ ದೇಶದಲ್ಲಿ ಜನಸಮುದಾಯಗಳು ಅಭಿವೃದ್ಧಿ ಹೊಂದದೆ ದೇಶ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲ. ದೇಶ ಅಭಿವೃದ್ಧಿಯಾಗಬೇಕಾದರೆ ಮೊದಲು

ಜನಸಮುದಾಯಗಳು ಅಭಿವೃದ್ಧಿ ಆಗಬೇಕು. ಜನಸಮುದಾಯಗಳು ಅಭಿವೃದ್ಧಿಯಾಗಬೇಕಾದರೆ ಮಕ್ಕಳಿಗೆ ಶಿಕ್ಷಣ ಸಾಧ್ಯವಾದಷ್ಟು ಅವರ ಮಾತೃಭಾಷೆಯಲ್ಲಿ ಸಿಗಬೇಕು. ಆಯಾಪ್ರದೇಶದ ಆಡಳಿತ ಸ್ಥಳೀಯ ಭಾಷೆ ಅಥವಾ ಭಾಷೆಗಳಲ್ಲಿ ನಡೆಯಬೇಕು. ಇಂತಹ ವ್ಯವಸ್ಥೆ ನಿರ್ಮಾಣ ಮಾಡದೆ ದೇಶವನ್ನು ಅಭಿವೃದ್ಧಿ ಪಡಿಸಲು ಮತ್ತು ಜನರು ನೆಮ್ಮದಿಯಾಗಿ ಬದುಕಲು ಸಾಧ್ಯವಿಲ್ಲ. ದೇಶದ ಅಭಿವೃದ್ಧಿ ಮತ್ತು ಜನಸಮುದಾಯಗಳ ಭಾಷೆ, ಶಿಕ್ಷಣ, ಆಡಳಿತ, ಸಾಹಿತ್ಯ, ಸಂಸ್ಕೃತಿ ಇತ್ಯಾದಿಗಳ ಹಿನ್ನೆಲೆಯಲ್ಲಿ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಗಳ ಕಲಿಕೆ ಮತ್ತು ಬಳಕೆಯ ಪರವಾಗಿ ಪ್ರತಿಪಾದಿಸಿದ್ದರು.

ಹೀಗಾಗಿ ದೇಶ ಸ್ವತಂತ್ರವಾದರೆ ಸಹಜವಾಗಿಯೇ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾಗುತ್ತವೆ. ಇದರಿಂದ ನಮ್ಮ ಬೇಡಿಕೆ ಈಡೇರುತ್ತದೆ, ಜೊತೆಗೆ ದೇಶವು ಸ್ವತಂತ್ರಗೊಳ್ಳುತ್ತದೆ ಎಂದು ಭಾವಿಸಿ ಭಾಷಾವಾರು ರಾಜ್ಯರಚನೆಗಾಗಿ ಹೋರಾಟ ಮಾಡುತ್ತಿದ್ದ ಜನಸಮುದಾಯಗಳು ತಮ್ಮ ಹೋರಾಟದ ಮೊದಲ ಆದ್ಯತೆಯನ್ನು ಸ್ವಾತಂತ್ರ್ಯ ಹೋರಾಟಕ್ಕೆ ನೀಡಿವೆ. ಅನಂತರದ ಆದ್ಯತೆಯನ್ನು ತಮ್ಮ ಭಾಷಾಆಧಾರಿತ ರಾಜ್ಯ ರಚನೆಗೆ ನೀಡಿವೆ. ಇದರ ಫಲವಾಗಿ ಭಾರತ ೧೯೪೭ ಆಗಸ್ಟ್ ೧೫ರಂದು ಭಾರತ ಬ್ರಿಟೀಷರಿಂದ ಬಿಡುಗಡೆ ಪಡೆಯಲು ಸಾಧ್ಯವಾಗಿದೆ. ಹೀಗಿದ್ದರೂ ಭಾರತ ಸ್ವತಂತ್ರಗೊಂಡ ನಂತರ ಕೇಂದ್ರದಲ್ಲಿ ಅಧಿಕಾರ ಹಿಡಿದ ಕಾಂಗ್ರೆಸ್ ಸರ್ಕಾರ ದೇಶದ ಏಕತೆ ಮತ್ತು ಆಡಳಿತಾತ್ಮಕ ಕಾರಣಗಳನ್ನು ಕೊಟ್ಟು ಭಾಷಾವಾರು ರಾಜ್ಯಗಳ ರಚನೆಯಿಂದ ಹಿಂದೆ ಸರಿದಿದೆ. ಇದು ಸ್ವಾತಂತ್ರ್ಯ ಪೂರ್ವದಲ್ಲಿ ಭಾಷಾಆಧಾರಿತ ರಾಜ್ಯರಚನೆಗಾಗಿ ಹೋರಾಟ ಮಾಡಿದ್ದ ಹೋರಾಟಗಾರರನ್ನು ಕೆರಳಿಸಿದೆ. ಇವರು ಮತ್ತೆ ಆಕ್ರೋಶಗೊಂಡು ದೇಶ ಸ್ವಾತಂತ್ರ್ಯಾನಂತರ ಭಾಷಾವಾರು ರಾಜ್ಯರಚನೆಗಾಗಿ ಹೋರಾಟ ಆರಂಭಿಸಿದ್ದಾರೆ. ಇದರಿಂದ ದೇಶದಲ್ಲಿ ಸ್ವಾತಂತ್ರ್ಯಗೊಂಡ ನಂತರ ದೇಶದಲ್ಲಿ ಮತ್ತೆ ಭಾಷಾಆಧಾರಿತ ರಾಜ್ಯರಚನೆಯ ಹೋರಾಟಗಳು ತೀವ್ರಗೊಂಡಿವೆ. ಇವುಗಳನ್ನು ನಿಯಂತ್ರಣಕ್ಕೆ ತರಲು ಸಾಧ್ಯವಾಗದ ಕೇಂದ್ರಸರ್ಕಾರ ೧೯೫೩ರಲ್ಲಿ ದೇಶದಲ್ಲಿ ಮೊಟ್ಟಮೊದಲ ಬಾರಿಗೆ ಭಾಷಾಆಧಾರಿತ ರಾಜ್ಯರಚನೆಗೆ ಒಪ್ಪಿಗೆ ಕೊಟ್ಟಿದೆ. ಆಗ ತೆಲಗು ಭಾಷೆಯ ಆಧಾರದಲ್ಲಿ ರಚನೆಯಾದ ರಾಜ್ಯವೇ ಆಂಧ್ರಪ್ರದೇಶ (ಇಂದು ತೆಲಂಗಾಣ ಮತ್ತು ಸೀಮಾಂಧ್ರ ಎಂದು ವಿಂಗಡಣೆಯಾಗಿರುವ ಭೂಪ್ರದೇಶ). ಹೀಗಾಗಿ ದೇಶದಲ್ಲಿ ಭಾಷಾವಾರು ರಾಜ್ಯರಚನೆಗೆ ಹೋರಾಟ ಮಾಡಿದ ರಾಜ್ಯಗಳಲ್ಲಿ ಆಂಧ್ರಪ್ರದೇಶಕ್ಕೆ ಅಗ್ರಸ್ಥಾನವಿದೆ.

ಹೀಗೆ ದೇಶದಲ್ಲಿ ಮೊಟ್ಟಮೊದಲ ಬಾರಿಗೆ ತೆಲಗು ಭಾಷೆಯ ಆಧಾರದಲ್ಲಿ ಪ್ರತ್ಯೇಕ ರಾಜ್ಯ ರಚನೆ ಮಾಡಿದ ಕೇಂದ್ರ ಸರ್ಕಾರ, ತೆಲುಗು ಭಾಷಿಕರ ರೀತಿಯಲ್ಲಿಯೇ ತಮ್ಮ ಭಾಷೆಯ ಆಧಾರದಲ್ಲಿಯೂ ಪ್ರತ್ಯೇಕ ರಾಜ್ಯ ರಚನೆಗಾಗಿ ಹೋರಾಟ ಮಾಡುತ್ತಿದ್ದ ಇತರ ಭಾಷಿಕರ ಬೇಡಿಕೆಗೆ ಸಕಾರಾತ್ಮಕವಾಗಿ ಸ್ಪಂದಿಸಿಲ್ಲ. ಅಂದರೆ ಸ್ವಾತಂತ್ರ್ಯಪೂರ್ವದಲ್ಲಿ ಭಾಷಾಆಧಾರಿತವಾಗಿ ಹೋರಾಟ ಮಾಡಿದ್ದ ಇತರ ಭಾಷಿಕರ ಭಾಷೆಗಳ ಆಧಾರದಲ್ಲಿ ರಾಜ್ಯಗಳನ್ನು ರಚನೆ ಮಾಡಿಲ್ಲ. ಇದರಿಂದ ಕೆರಳಿದ ಇತರ ಭಾಷಿಕರು ತಮ್ಮ ಭಾಷೆಯ ಆಧಾರದಲ್ಲಿ ರಾಜ್ಯರಚನೆಗಾಗಿ ಕೇಂದ್ರದ ವಿರುದ್ಧ ಹೋರಾಟ

ತೀವ್ರಗೊಳಿಸಿದ್ದರು. ಇದರಿಂದ ಕೇಂದ್ರ ಸರ್ಕಾರ ಮತ್ತೆ ಇಕ್ಕಟ್ಟಿಗೆ ಸಿಲುಕಿ, ಭಾಷಾಆಧಾರಿತ ಹೋರಾಟಗಳನ್ನು ನಿಯಂತ್ರಣಕ್ಕೆ ತರಲು ಸಾಧ್ಯವಾಗದೆ ರಾಜ್ಯಪುನರ್ ವಿಂಗಡಣಾ ಆಯೋಗವನ್ನು ನೇಮಿಸಿದೆ. ಈ ಆಯೋಗ ನೀಡಿದ ವರದಿಯನ್ವಯ ೧೯೫೬ರಲ್ಲಿ ಕೇಂದ್ರಸರ್ಕಾರ ಒಟ್ಟು ೧೪ ರಾಜ್ಯಗಳನ್ನು ರಚನೆ ಮಾಡಿದೆ. ಆಗ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾದ ರಾಜ್ಯವೇ ಇಂದಿನ ಕರ್ನಾಟಕ. (೧೯೫೬ ರಿಂದ ೧೯೭೩ರವರೆಗೆ ಮೈಸೂರು ರಾಜ್ಯ ಎಂಬ ಹೆಸರಿದ್ದರೂ).

**೨.೩ ಏಕೀಕರಣ ನಂತರದ ಕರ್ನಾಟಕ: ಭಾಷಾಕಲಿಕೆ, ಬಳಕೆ ಮತ್ತು ಸಮಸ್ಯೆಗಳ ಸ್ವರೂಪ**

ಪ್ರಸ್ತುತ ಅಧ್ಯಯನ ಮುಖ್ಯ ಉದ್ದೇಶ ಏಕೀಕರಣ ನಂತರದ ಕರ್ನಾಟಕದಲ್ಲಿ ರೂಪಿಸಲಾಗಿರುವ ಭಾಷಾಯೋಜನೆ, ಜಾರಿಯಾಗಿರುವ ಭಾಷಾನೀತಿ, ಅವುಗಳಿಂದ ಆಗಿರುವ ಭಾಷಾಬದಲಾವಣೆ ಮತ್ತು ಉದ್ಭವವಾಗಿರುವ ಸಮಸ್ಯೆ, ಸಾಧ್ಯತೆಗಳನ್ನು ಕುರಿತದ್ದು. ಆದರೂ ಈ ಅಧ್ಯಾಯದಲ್ಲಿ ಇದುವರೆಗಿನ ಚರ್ಚೆಯಲ್ಲಿ ಏಕೀಕರಣ ಪೂರ್ವ ಕರ್ನಾಟಕದ ಭಾಷಾಪರಿಸ್ಥಿತಿ ಮತ್ತು ಅದರ ಹಿನ್ನೆಲೆಯನ್ನು ಕುರಿತು ಚರ್ಚಿಸಲಾಗಿದೆ. ಏಕೆಂದರೆ ಏಕೀಕರಣ ನಂತರದ ಕರ್ನಾಟಕದಲ್ಲಿ ರೂಪಿಸಲಾಗಿರುವ ಭಾಷಾಯೋಜನೆ ಮತ್ತು ಜಾರಿಗೊಳಿಸಲಾಗಿರುವ ಭಾಷಾನೀತಿ ಹಾಗೂ ಅವುಗಳಿಂದ ಉದ್ಭವವಾಗಿರುವ ಸಮಸ್ಯೆಗಳಿಗೂ, ಏಕೀಕರಣ ಪೂರ್ವ ಕರ್ನಾಟಕದ ಭಾಷಾಪರಿಸ್ಥಿತಿ ಮತ್ತು ಸಮಸ್ಯೆಗಳಿಗೂ ಸಂಬಂಧವಿದೆ. ಹೀಗಾಗಿ ಏಕೀಕರಣ ಪೂರ್ವ ಕರ್ನಾಟಕ ಭೂಪ್ರದೇಶದ ಭಾಷಾಪರಿಸ್ಥಿತಿ ಮತ್ತು ಆಗಿನ ಸಮಸ್ಯೆಗಳನ್ನು ಗುರುತಿಸಿಕೊಳ್ಳದೆ ಏಕೀಕರಣ ನಂತರದ ಕರ್ನಾಟಕದ ಭಾಷಾಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಅಷ್ಟು ಸೂಕ್ತವಲ್ಲ.

ಈ ಹಿನ್ನೆಲೆಯಲ್ಲಿ ಕರ್ನಾಟಕದ ಭೂಪ್ರದೇಶ, ಕರ್ನಾಟಕ, ಕನ್ನಡ ಪದಗಳ ನಿಷ್ಪತ್ತಿ, ಕನ್ನಡ ಭಾಷೆಯ ಉಗಮ, ಬೆಳವಣಿಗೆ ಮತ್ತು ಇಲ್ಲಿನ ಭಾಷಾಪರಿಸರದ ನಡುವೆ ಇರುವ ಅನೋನ್ಯತೆಯನ್ನು ಕುರಿತು ಚರ್ಚಿಸಲಾಗಿದೆ. ಹಾಗೆಯೇ ಅನ್ಯಭಾಷಾಸಮುದಾಯಗಳು ಮತ್ತು ಬ್ರಿಟೀಷರ ಆಡಳಿತದಿಂದ ಇಂದಿನ ಕರ್ನಾಟಕದ ಭೂಪ್ರದೇಶದಲ್ಲಿ ಅಂದು ಉದ್ಭವವಾದ ಭಾಷಾಸಮಸ್ಯೆಗಳು, ಈ ಭಾಷಾಸಮಸ್ಯೆಗಳು ಇತರ ಕ್ಷೇತ್ರಗಳ ಮೇಲೆ ಬೀರಿದ ಪ್ರಭಾವ, ಅದರಿಂದ ಉಂಟಾದ ಪರಿಣಾಮಗಳು, ಅವು ಕರ್ನಾಟಕ ರಾಜ್ಯ ರಚನೆಯ ಹೋರಾಟಕ್ಕೆ ಕಾರಣವಾದ ಬಗೆಯನ್ನು ಕಂಡುಕೊಳ್ಳುವ ಉದ್ದೇಶದಿಂದ ಇಲ್ಲಿ ಏಕೀಕರಣ ಪೂರ್ವ ಕರ್ನಾಟಕದ ಭಾಷಾಪರಿಸ್ಥಿತಿಯನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಆ ಮೂಲಕ ಈ ಅಧ್ಯಾಯದ ಇದುವರೆಗಿನ ಚರ್ಚೆಯಲ್ಲಿ ಏಕೀಕರಣ ಪೂರ್ವ ಕರ್ನಾಟಕದ ಭೂಪ್ರದೇಶ ಮತ್ತು ಭಾಷಾಪರಿಸ್ಥಿತಿ ಹಾಗೂ ಆಂಗ್ಲರ ಆಡಳಿತ: ಕರ್ನಾಟಕದ ಭಾಷಾ ಸಮಸ್ಯೆಯ ತೀವ್ರತೆಗೆ ಅಡಿಗಲ್ಲು ಎಂಬ ಎರಡು ಉಪಶೀರ್ಷಿಕೆಯ ಅಡಿಯಲ್ಲಿ ಕರ್ನಾಟಕದ ಭೂಪ್ರದೇಶ ಮತ್ತು ಕನ್ನಡ ಭಾಷೆಗೆ ಇರುವ ಸಂಬಂಧ ಹಾಗೂ ಏಕೀಕರಣ ಪೂರ್ವದ ಕರ್ನಾಟಕದಲ್ಲಿನ ಭಾಷಾಸಮಸ್ಯೆ ಕುರಿತು ಚರ್ಚೆ ಮಾಡಲಾಗಿದೆ.

ಇಲ್ಲಿ ಕರ್ನಾಟಕದ ಭೂಪ್ರದೇಶ, ಕರ್ನಾಟಕ, ಕನ್ನಡ ಪದಗಳ ನಿಷ್ಪತ್ತಿ, ಕನ್ನಡ ಭಾಷೆಯ ಉಗಮ ಮತ್ತು ಬೆಳವಣಿಗೆ ಹಾಗೂ ಕನ್ನಡ ಭಾಷೆ ಮತ್ತು ಕರ್ನಾಟಕದ ಭೂಪ್ರದೇಶದ ನಡುವಿನ ಸಂಬಂಧ ಏನೇ ಇದ್ದರೂ ಕರ್ನಾಟಕ ಏಕೀಕರಣ ಹೋರಾಟವೆನ್ನುವುದು ಕನ್ನಡ ಭಾಷಿಕರು ವಾಸಿಸುತ್ತಿರುವ ಭೂಪ್ರದೇಶವನ್ನು ಭೌಗೋಳಿಕವಾಗಿ ಮತ್ತು ರಾಜಕೀಯವಾಗಿ ಒಗ್ಗೂಡಿಸುವುದಲ್ಲ. ಅನ್ಯಭಾಷಾ ಸಮುದಾಯಗಳ ಆಡಳಿದ ಅಧೀನಕ್ಕೆ ಒಳಗಾಗಿ ತಾವು ಕಳೆದುಕೊಂಡಿದ್ದ ರಾಜಕೀಯ, ಸಾಹಿತ್ಯಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಮತ್ತು ಭಾಷಾಸ್ವಾತಂತ್ರ್ಯವನ್ನು ಕನ್ನಡ ಭಾಷಿಕ ಸಮುದಾಯ ಪುನರ್ ಪಡೆದುಕೊಳ್ಳಲು ಮಾಡಿದ ಪ್ರಯತ್ನವಾಗಿದೆ. ಹೀಗಾಗಿ ಕನ್ನಡಿಗರು ಕರ್ನಾಟಕ ಏಕೀಕರಣವಾದ ನಂತರ ಸಹಜವಾಗಿಯೇ ಕನ್ನಡವನ್ನು ಕರ್ನಾಟಕದ ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯ, ಬ್ಯಾಂಕುಗಳು ಸೇರಿದಂತೆ ಎಲ್ಲಾ ಇಲಾಖೆಗಳಲ್ಲಿ ಕಡ್ಡಾಯವಾಗಿ ಬಳಕೆಗೆ ತರಬೇಕು. ಅದಕ್ಕಾಗಿ ಭಾಷಾನೀತಿಯನ್ನು ಜಾರಿಗೊಳಿಸಬೇಕು, ಆ ಮೂಲಕ ಕರ್ನಾಟಕ ಏಕೀಕರಣದ ಉದ್ದೇಶ ಸಾಕಾರಗೊಳಿಸಬೇಕು ಎಂದು ಇಲ್ಲಿ ಆಡಳಿತ ನಡೆಸಿರುವ ಸರ್ಕಾರಗಳಿಗೆ ಮನವಿ ಸಲ್ಲಿಸಿದ್ದಾರೆ. ಅದು ಸಾಧ್ಯವಾಗದಿದ್ದಾಗ ಮತ್ತೆ ಮತ್ತೆ ಕನ್ನಡದ ಪರವಾಗಿ ಪ್ರತಿಭಟನೆ, ಹೋರಾಟಗಳನ್ನು ತೀವ್ರಗೊಳಿಸಿ ಇಲ್ಲಿ ಆಡಳಿತ ನಡೆಸಿರುವ ಸರ್ಕಾರಗಳ ಮೇಲೆ ಒತ್ತಡಗಳನ್ನು ಉಂಟುಮಾಡಿದ್ದಾರೆ. ಇದರಿಂದ ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರನ್ನು ಸಮಾಧಾನಗೊಳಿಸುವ ಹಿನ್ನೆಲೆಯಲ್ಲಿ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ತನ್ನ ಅಧಿಕಾರವನ್ನು ಬಳಸಿಕೊಂಡು ಭಾಷಾಸಮಿತಿ, ಭಾಷಾಆಯೋಗಗಳನ್ನು ನೇಮಕ ಮಾಡಿವೆ. ಆ ಸಮಿತಿ ಅಥವಾ ಆಯೋಗಗಳು ನೀಡಿದ ವರದಿ ಆಧರಿಸಿ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಇದರಲ್ಲಿ ಕನ್ನಡವನ್ನು ಕರ್ನಾಟಕದ ಆಡಳಿತ ಭಾಷೆಯನ್ನಾಗಿಸಲು ಎಸ್. ನಿಜಲಿಂಗಪ್ಪ ನೇತೃತ್ವದ ಕರ್ನಾಟಕ ಸರ್ಕಾರ ೧೯೬೩ರಲ್ಲಿ ಜಾರಿಗೆ ತಂದಿರುವ **"ಕರ್ನಾಟಕ ರಾಜಭಾಷಾ ಅಧಿನಿಯಮ"** ಪ್ರಧಾನವಾಗಿದೆ. ಈ ಅಧಿನಿಯಮದ ಪ್ರಕಾರವಾಗಿ–

೨. **ಕನ್ನಡವು ರಾಜ್ಯದ ರಾಜಭಾಷೆಯಾಗಿರುವುದು:–** ಕನ್ನಡವು ಕರ್ನಾಟಕ ರಾಜ್ಯದ ರಾಜಭಾಷೆಯಾಗಿ ಇರತಕ್ಕುದು.

೩. **ಸರ್ಕಾರವು ಅನ್ಯಥಾ ನಿರ್ದೇಶಿಸುವವರೆಗೆ ಸರ್ಕಾರೀ ಉದ್ದೇಶಗಳಿಗಾಗಿ ಇಂಗ್ಲಿಷ್ ಉಪಯೋಗಿಸುವುದನ್ನು ಮುಂದುವರಿಸುವುದು:–** ರಾಜ್ಯ ಸರ್ಕಾರವು ೪ನೇ ಪ್ರಕರಣದ ಮೇರೆಗಿನ ಅಧಿಸೂಚನೆಯ ಮೂಲಕ, ಅದರಲ್ಲಿ ನಿರ್ದಿಷ್ಟಪಡಿಸಿದ ಯಾವುದಾದರೂ ಸರ್ಕಾರಿ ಉದ್ದೇಶಗಳ ಸಂಬಂಧದಲ್ಲಿ ಅನ್ಯಥಾ ನಿರ್ದೇಶಿಸುವವರೆಗೆ, ೨ನೇ ಪ್ರಕರಣದಲ್ಲಿ ಏನೇ ಇದ್ದರೂ ಮತ್ತು ಸಂವಿಧಾನದ ೩೪೬ನೇ ಮತ್ತು ೩೪೭ನೇ ಅನುಚ್ಛೇದಗಳ ಉಪಬಂಧಗಳಿಗೆ ಬಾಧಕವಾಗದಂತೆ, ಈ ಅಧಿನಿಯಮವು ಪ್ರಾರಂಭವಾಗುವ ಮುಂಚೆ ರಾಜ್ಯದ ಯಾವ ಸರ್ಕಾರಿ ಉದ್ದೇಶಗಳಿಗಾಗಿ ಇಂಗ್ಲಿಷ್ ಭಾಷೆಯನ್ನು ಉಪಯೋಗಿಸಲಾಗುತ್ತಿದ್ದಿತೋ ಅವೆಲ್ಲಕ್ಕೂ ಅದನ್ನು ಉಪಯೋಗಿಸುವುದನ್ನು ಮುಂದುವರಿಸತಕ್ಕುದು.

೪. **ಯಾವ ಸರ್ಕಾರೀ ಉದ್ದೇಶಗಳಿಗೆ ಕನ್ನಡವನ್ನು ಉಪಯೋಗಿಸಬೇಕೆಂಬುದನ್ನು ಅಧಿಸೂಚಿಸಲುಸರ್ಕಾರದ ಶಕ್ತಿ:–** ರಾಜ್ಯ ಸರ್ಕಾರವು, ಕಾಲಕಾಲಕ್ಕೆ ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚಿಸುವ ಮೂಲಕ, ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸರ್ಕಾರಿ ಉದ್ದೇಶಗಳಿಗಾಗಿ ಮತ್ತು ಪ್ರದೇಶಗಳಲ್ಲಿ ಕನ್ನಡವನ್ನು ಉಪಯೋಗಿಸತಕ್ಕದ್ದೆಂದು ನಿರ್ದೇಶಿಸಬಹುದು.

***೫. "(ವಿಧಾನಮಂಡಲ ಮುಂತಾದೆಡೆಯಲ್ಲಿ ಬಳಸಬೇಕಾದ ಭಾಷೆ)"**

೧) ಸಂವಿಧಾನವು ಪ್ರಾರಂಭವಾದಂದಿನಿಂದ ಹದಿನೈದು ವರ್ಷಗಳ ಅವಧಿ ಗತಿಸಿದರೂ, ೧೯೬೫ರ ಜನವರಿ ೨೬ನೇ ದಿನಾಂಕದಿಂದ ರಾಜ್ಯದ ವಿಧಾನಮಂಡಲದ ವ್ಯವಹಾರ ನಿರ್ವಹಣೆಗಾಗಿ ಕನ್ನಡ ಮತ್ತು ಹಿಂದಿಯ ಜೊತೆಗೆ ಇಂಗ್ಲಿಷ್ ಭಾಷೆಯ ಉಪಯೋಗವನ್ನು ಮುಂದುವರಿಸಬಹುದು.

೨) ("ವಿಧಾನಮಂಡಲ ಮುಂತಾದೆಡೆಯಲ್ಲಿ ಬಳಸಬೇಕಾದ ಭಾಷೆ)"

ಅ) ಮಂಡಿಸಬೇಕಾದ ಯಾವುದೇ ವಿಧೇಯಕದಲ್ಲಿ ಅಥವಾ ಅದಕ್ಕೆ ಸೇರಿಸಬೇಕಾದ ತಿದ್ದುಪಡಿಗಳಲ್ಲಿ ಅಥವಾ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಅನುಮೋದಿಸಲಾದ ಯಾವುದೇ ಅಧಿನಿಯಮದಲ್ಲಿ; ಅಥವಾ

ಆ) ಕರ್ನಾಟಕ ರಾಜ್ಯದ ರಾಜ್ಯಪಾಲರಿಂದ ಪ್ರಖ್ಯಾಪಿಸಲಾದ ಯಾವುದೇ ಅಧ್ಯಾದೇಶದಲ್ಲಿ; ಅಥವಾ

ಇ) ಸಂವಿಧಾನದ ಮೇರೆಗೆ ಅಥವಾ ಸಂಸತ್ತು ಅಥವಾ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಮಾಡಲಾದ ಯಾವುದೇ ಕಾನೂನಿನ ಮೇರೆಗೆ ಸರ್ಕಾರದಿಂದ ಹೊರಡಿಸಲಾದ ಯಾವುದೇ ಆದೇಶ, ನಿಯಮ, ವಿನಿಮಯ ಅಥವಾ ಉಪವಿಧಿಯಲ್ಲಿ– ಸಹ ಬಳಸಬಹುದು.

**೫ಕ. ಕೇಂದ್ರ ಮತ್ತು ರಾಜ್ಯ ಅಧಿನಿಯಮಗಳ ಅಧಿಕೃತ ಕನ್ನಡ ಭಾಷಾಂತರ: ರಾಜ್ಯಪಾಲರ ಆದೇಶದ ಮೇರೆಗೆ ಸರ್ಕಾರಿ ರಾಜಪತ್ರದಲ್ಲಿ ಪ್ರಕಟವಾದ–**

೧) ಯಾವುದೇ ಕೇಂದ್ರಾಧಿನಿಯಮ ಅಥವಾ ಸಂವಿಧಾನದ ಏಳನೆಯ ಅನುಸೂಚಿಯ ೩ನೇ ಪಟ್ಟಿಯಲ್ಲಿ ಸೂಚಿಸಿದ ವಿಷಯಗಳ ಪೈಕಿ ಯಾವುದೇ ವಿಷಯದ ಸಂಬಂಧದಲ್ಲಿ ರಾಷ್ಟ್ರಪತಿಯಿಂದ ಪ್ರಖ್ಯಾಪಿತವಾದ ಯಾವುದೇ ಅಧ್ಯಾಧೇಶದ ಅಥವಾ ಯಾವುದೇ ರಾಜ್ಯಾಧಿನಿಯಮದ ಅಥವಾ ರಾಜ್ಯಪಾಲನು ಮಾಡಿದ ಯಾವುದೇ ಅಧ್ಯಾದೇಶದ ಅಥವಾ ನಿಯಮಗಳ: ಅಥವಾ

೨) ಸಂವಿಧಾನದ ಮೇರೆಗೆ ಅಥವಾ ಯಾವುದೇ ಕೆಂದ್ರಾಧಿನಿಯಮದ ಅಥವಾ ಯಾವುದೇ ರಾಜ್ಯಾಧಿನಿಯಮದ ಅಥವಾ ರಾಜ್ಯದಲ್ಲಿ ಜಾರಿಲ್ಲಿರುವ ಇತರ ಯಾವುದೇ ಕಾನೂನಿನ ಮೇರೆಗೆ ರಾಜ್ಯ ಸರ್ಕಾರವು ಅಥವಾ ರಾಜ್ಯಸರ್ಕಾರದ ಇತರ ಪ್ರಾಧಿಕಾರಿಯು ಅಥವಾ ಅಧಿಕಾರಿಯು ಹೊರಡಿಸಿದ ಯಾವುದೇ ಆದೇಶದ, ನಿಯಮದ, ಅಥವಾ ಉಪವಿಧಿಯ: –ಕನ್ನಡ ಭಾಷಾಂತರವನ್ನು, ರಾಜ್ಯಸರ್ಕಾರವು ಸರ್ಕಾರಿ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಅದರ ಅಧಿಕೃತ ಕನ್ನಡ ಪಾಠವೆಂದು ಭಾವಿಸತಕ್ಕುದು.

**೬. ೫ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಅಧಿಸೂಚನೆಯನ್ನು ವಿಧಾನಮಂಡಲದ ಮುಂದೆ ಇರಿಸುವುದು:–** ೫ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು, ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದೇ ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇರಿಸತಕ್ಕದು ಮತ್ತು ಅದನ್ನು ಹಾಗೆ ಇರಿಸಲಾದ ಅಧಿವೇಶನವು ಅಥವಾ ನಿಕಟೋತ್ತರ ಅಧಿವೇಶನಗಳು ಮುಗಿಯುವ ಮೊದಲು ಆ ಅಧಿಸೂಚನೆಯಲ್ಲಿ ಯಾವುದಾದರು ಮಾರ್ಪಾಡು ಮಾಡುವುದಕ್ಕೆ ಎರಡೂ ಸದನಗಳು ಒಪ್ಪಿದರೆ ಅಥವಾ ಅಧಿಸೂಚನೆಯನ್ನು ಹೊರಡಿಸಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ಅಧಿಸೂಚನೆಯು, ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕುದು ಅಥವಾ ಪರಿಣಾಮಕಾರಿಯಾಗತಕ್ಕುದಲ್ಲ. ಆದರೆ ಅಂಥ ಯಾವುದೇ ಮಾರ್ಪಾಡು ಅಥವಾ ರದ್ದಿಯಾತಿಯು ಆ ಅಧಿಸೂಚನೆಯ ಮೇರೆಗೆ ಆ ಹಿಂದೆ ಮಾಡಿದ ಯಾವುದೇ ಕಾರ್ಯದ ವಿಧಿಮಾನ್ಯತೆಗೆ ಬಾಧೆಯುಂಟು ಮಾಡತಕ್ಕುದಲ್ಲ[೧೩]. ಎಂದು ಹೇಳಿದೆ.

ಈ ಭಾಷಾನೀತಿಯ ಎರಡನೇ ಪ್ರಕರಣವನ್ನು ಗಮನಿಸಿದಾಗ ಏಕೀಕರಣ ನಂತರದ ಕರ್ನಾಟಕದಲ್ಲಿ ಕನ್ನಡವನ್ನು ಅಧಿಕೃತ ಆಡಳಿತ ಭಾಷೆಯಾಗಿಸಲು ಪ್ರಯತ್ನಿಸಿರುವುದು ಸ್ಪಷ್ಟವಾಗುತ್ತದೆ. ಆದರೆ ಇದೇ

ಭಾಷಾನೀತಿಯ ಮೂರನೇ ಪ್ರಕರಣದಲ್ಲಿ ೪ನೇ ಪ್ರಕರಣದ ಮೇರೆಗಿನ ಅಧಿಸೂಚನೆಯ ಮೂಲಕ, ಅದರಲ್ಲಿ ನಿರ್ದಿಷ್ಟಪಡಿಸಿದ ಯಾವುದಾದರೂ ಸರ್ಕಾರಿ ಉದ್ದೇಶಗಳ ಸಂಬಂಧದಲ್ಲಿ ಅನ್ಯಥಾ ನಿರ್ದೇಶಿಸುವವರೆಗೆ, ೨ನೇ ಪ್ರಕರಣದಲ್ಲಿ ಏನೇ ಇದ್ದರೂ ಮತ್ತು ಸಂವಿಧಾನದ ೩೪೬ನೇ ಮತ್ತು ೩೪೭ನೇ ಅನುಚ್ಛೇದಗಳ ಉಪಬಂಧಗಳಿಗೆ ಬಾಧಕವಾಗದಂತೆ, ಈ ಅಧಿನಿಯಮವು ಪ್ರಾರಂಭವಾಗುವ ಮೊದಲು ರಾಜ್ಯದ ಯಾವ ಸರ್ಕಾರಿ ಉದ್ದೇಶಗಳಿಗಾಗಿ ಇಂಗ್ಲಿಷ್ ಭಾಷೆಯನ್ನು ಉಪಯೋಗಿಸಲಾಗುತ್ತಿದ್ದಿತೋ ಅವೆಲ್ಲಕ್ಕೂ ಅದನ್ನು ಉಪಯೋಗಿಸುವುದನ್ನು ಮುಂದುವರಿಸತಕ್ಕುದು ಎಂದು ಹೇಳಿದೆ. ಇಲ್ಲಿ ಇಂಗ್ಲಿಶ್ ಭಾಷಾಬಳಕೆಗೆ ಯಾವುದೇ ನಿರ್ಬಂಧಗಳು ಇಲ್ಲ. ಇದರ ಜೊತೆಗೆ ೧೯೬೩ರ ಕರ್ನಾಟಕ ರಾಜಭಾಷಾ ಅಧಿನಿಯಮ ಜಾರಿಗೊಂಡ ಸಂದರ್ಭದಲ್ಲಿ ಸರ್ಕಾರದ ಉನ್ನತ ಮತ್ತು ಆಡಳಿತಾತ್ಮಕ ಹುದ್ದೆಗಳ ನೇಮಕಾತಿಗಾಗಿ ಭಾಷಾವಿಷಯಕ್ಕೆ ಸಂಬಂಧಿಸಿದಂತೆ ರೂಪಿಸಲಾಗಿದ್ದ ನಿಯಮಾವಳಿಗಳಲ್ಲಿ ಯಾವುದೇ ಬದಲಾವಣೆ ಮಾಡಿಲ್ಲ. ಇದು ಜೊತೆಗೆ ಕರ್ನಾಟಕದಲ್ಲಿ ೧೯೬೩ರ ರಾಜಭಾಷಾ ಅಧಿನಿಯಮ ಜಾರಿಗೊಂಡ ನಂತರದಲ್ಲಿಯೂ ಸರ್ಕಾರದ ಆಡಳಿತಾತ್ಮಕ ಹುದ್ದೆಗಳ ನೇಮಕಾತಿಯಲ್ಲಿ ಇಂಗ್ಲಿಶ್ ಭಾಷಾಜ್ಞಾನದ ಪರೀಕ್ಷೆ ಕಡ್ಡಾಯವಾಗಿ ಮುಂದುವರೆದಿದೆ. ಹೀಗಾಗಿ ಸರ್ಕಾರದ ಉನ್ನತ ಮತ್ತು ಆಡಳಿತಾತ್ಮಕ ಹುದ್ದೆಗಳಿಗೆ ನೇಮಕ ಆಗಿರುವವರು ಇಂಗ್ಲಿಶ್ ಜ್ಞಾನವುಳ್ಳವರೇ ಆಗಿದ್ದಾರೆ. ಇಂಗ್ಲಿಶ್ ಭಾಷಾಜ್ಞಾನ ಇಲ್ಲದ ಹೆಚ್ಚಿನ ಅಭ್ಯರ್ಥಿಗಳು ಸರ್ಕಾರದ ಆಡಳಿತಾತ್ಮಕ ಹುದ್ದೆಗಳ ನೇಮಕಾತಿ ಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡು ಸರ್ಕಾರಿ ಉದ್ಯೋಗದಿಂದ ವಂಚಿತರಾಗಿದ್ದಾರೆ.

ಹೀಗೆ ನೇಮಕವಾಗಿ ಸರ್ಕಾರಿ ಉದ್ಯೋಗ ಪಡೆದವರಿಗೆ ಆಡಳಿತದಲ್ಲಿ, ದಿನನಿತ್ಯದ ಬದುಕಿನಲ್ಲಿ ಇಂಗ್ಲಿಶ್ ಬಳಸುವುದೇ ಒಂದು ಪ್ರತಿಷ್ಠೆಯಾಗಿದೆ. ಇಂಗ್ಲಿಶ್ ಬಳಕೆಯಿಂದ ತಮ್ಮ ಘನತೆ, ಗೌರವ, ಹೆಚ್ಚುತ್ತದೆ. ಸಮಾಜದಲ್ಲಿ ನಾವು ಶ್ರೇಷ್ಠರಾಗುತ್ತೇವೆ. ಜೊತೆಗೆ ಇಂಗ್ಲಿಶ್ ನಮಗೆ ಅಧಿಕಾರದ ಗತ್ತನ್ನು ಒದಗಿಸಿ ಇತರರಿಗಿಂತ ಭಿನ್ನವಾಗಿಸಿಸುತ್ತದೆ. ಎಲ್ಲರ ಹಾಗೆ ನಾವು ಆಡಳಿತದಲ್ಲಿ ಕನ್ನಡ ಬಳಸಿದರೆ ಸಮಾಜದಲ್ಲಿ ಗೌರವಗಳು ಸಿಗುವುದಿಲ್ಲ. ನಾವು ಸಾಮಾನ್ಯರ ಹಾಗೆ ಕಾಣದೆ, ಬದುಕದೆ ವಿಶೇಷವಾಗಿ ಅಧಿಕಾರ ಅನುಭವಿಸಬೇಕಾದರೆ ಆಡಳಿತ, ವ್ಯವಹಾರ ನಿರ್ವಹಣೆಯಲ್ಲಿ ಇಂಗ್ಲಿಶ್ ಬಳಸಬೇಕು ಎಂಬ ಭಾವನೆ ಹೆಚ್ಚಿನ ಅಧಿಕಾರಿಗಳಲ್ಲಿ ಇತ್ತು. ಈಗಲೂ ಆಡಳಿತದಲ್ಲಿ ಕಾರ್ಯನಿರ್ವಹಿಸುತ್ತಿರುವ ಹೆಚ್ಚಿನ ಅಧಿಕಾರಿಗಳಲ್ಲಿ ಈ ಭಾವನೆ ಇದೆ. ಹೀಗಾಗಿ ಕರ್ನಾಟಕ ಸರ್ಕಾರ ಕನ್ನಡಿಗರ ಒತ್ತಾಯಕ್ಕೆ ಮಣಿದು ಕನ್ನಡವನ್ನು ರಾಜ್ಯದ ಆಡಳಿತ ಭಾಷೆಯಾಗಿಸುವ ಉದ್ದೇಶದಿಂದ ೧೯೬೩ರಲ್ಲಿ ಕರ್ನಾಟಕ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತಂದಿದ್ದರು ಆಡಳಿತದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಇಂತಹ ಭಾಷಾಧೋರಣೆಯಿಂದಾಗಿ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್‌ನ ಬಳಕೆ ಮುಂದುವರಿದಿದೆ. ಇದಕ್ಕೆ ಸಹಕಾರ ನೀಡುವಂತೆ ದಾಖಲೆ ಪುಸ್ತಕ, ಪತ್ರಗಳು ಮತ್ತು ಯಾಂತ್ರಿಕ ಉಪಕರಣಗಳು ಕಾರಣವಾಗಿವೆ.

ಹೇಗೆಂದರೆ ಕರ್ನಾಟಕ ಏಕೀಕರಣಗೊಂಡಾಗ ಟೈಪ್ರೇಟರ್, ಮುದ್ರೆಗಳು, ಅರ್ಜಿಪತ್ರಗಳ ನಮೊನೆ, ದಾಸ್ತಾನು ವಹಿ, ದಾಖಲಾತಿ ಪುಸ್ತಕಗಳು ಹೆಚ್ಚಿನದಾಗಿ ಇಂಗ್ಲಿಶ್ ಭಾಷೆಯಲ್ಲಿ ಇದ್ದವು. ೧೯೬೩ರಲ್ಲಿ ಕರ್ನಾಟಕ ಸರ್ಕಾರ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತಂದ ನಂತರ ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಬಳಕೆಗೆ ತರಲು ಅನುಕೂಲವಾಗುವಂತೆ ಸರ್ಕಾರ ಇಂಗ್ಲಿಶ್‌ಗೆ ಬದಲಾಗಿ ಅಥವಾ ಇಂಗ್ಲಿಶ್‌ನ ಜೊತೆಗೆ ಯಾಂತ್ರಿಕ ಉಪಕರಣಗಳನ್ನು, ಕನ್ನಡದ ಅರ್ಜಿ ನಮೂನೆ, ಮುದ್ರೆ, ದಾಖಲಾತಿ ಪುಸ್ತಕ ಇತ್ಯಾದಿ ಅಗತ್ಯ ಪರಿಕರಗಳನ್ನು ಒದಗಿಸಬೇಕಿತ್ತು. ಅದಕ್ಕೆ ಅನುಗುಣವಾಗಿ ನೌಕರರನ್ನು ಸಿದ್ಧಗೊಳಿಸುವ, ಅವರಿಗೆ ತರಬೇತಿಗಳನ್ನು ನೀಡುವ, ಅದಕ್ಕಾಗಿ ಕಾರ್ಯಾಗಾರಗಳನ್ನು ಏರ್ಪಡಿಸುವ ಕೆಲಸಗಳನ್ನು ಮಾಡಬೇಕಿತ್ತು. ಆದರೆ ಸರ್ಕಾರಗಳು ಈ ಕೆಲಸ ಮಾಡಿಲ್ಲ. ಇದರಿಂದಾಗಿ ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಬಳಕೆಗೆ ತರುವ ಉದ್ದೇಶದಿಂದ ಜಾರಿಗೆ ತರಲಾಗಿರುವ ಕರ್ನಾಟಕ ರಾಜಭಾಷಾ ಅಧಿನಿಯಮಯದಿಂದಾಗಿ ಕರ್ನಾಟಕದಲ್ಲಿ ಭಾಷಿಕ ಸೇರಿದಂತೆ ಇತರ ಸಮಸ್ಯೆಗಳು ಉದ್ಭವವಾಗಿವೆ. ಇವುಗಳನ್ನು 'ಆಡಳಿತದಲ್ಲಿ ಕನ್ನಡ ಭಾಷಾಬಳಕೆ ಮತ್ತು ಸಮಸ್ಯೆಗಳು' ಎಂಬ ಭಾಗದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಆಡಳಿತದಲ್ಲಿ ಕನ್ನಡವನ್ನು ಬಳಸುವುದಕ್ಕೆ ಸಂಬಂಧಿಸಿದ ಇಂತಹ ತಾಂತ್ರಿಕ ಸಮಸ್ಯೆಗಳ ನಡುವೆಯೇ 'ರಾಜ್ಯದ ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರ ಅಧಿಕಾರಾವಧಿಯಲ್ಲಿ (೧೯೭೯) ಶಾಲಾ ಪಠ್ಯಕ್ರಮದಲ್ಲಿನ ಭಾಷೆಗಳಿಗೆ ಸಂಬಂಧಿಸಿದಂತೆ ಸಮಸ್ಯೆ ಹುಟ್ಟಿತು. ಅದು ಪ್ರೌಢಶಾಲೆಗಳಲ್ಲಿ 'ಭಾಷಾ ಮಾಧ್ಯಮ'ದ ವಿಚಾರಗಳನ್ನು ಕುರಿತದ್ದು. ಅದುವರೆಗಿನ ಶಿಕ್ಷಣ ನೀತಿಯ ಪ್ರಕಾರ ಕನ್ನಡ, ಇಂಗ್ಲಿಷ್, ತೆಲುಗು, ತಮಿಳು ಮೊದಲಾದ ಮಾತೃಭಾಷೆಗಳ ಜೊತೆಗೆ ಸಂಸ್ಕೃತವನ್ನು ಸಹ ಪ್ರಥಮ ಭಾಷಾ ಸ್ಥಾನದಲ್ಲಿ ಕಲಿಯಬಹುದಾಗಿತ್ತು. ಇದು ಯಾವುದೇ ಮಾಧ್ಯಮದ ಪ್ರೌಢಶಾಲಾ ವಿದ್ಯಾರ್ಥಿಗಳಿಗಾದರೂ ಅನ್ವಯ ಆಗುವಂಥದ್ದು. ಒಂದನೇ ತರಗತಿಯಿಂದ ತಮ್ಮ ಮಾತೃಭಾಷೆಯಲ್ಲಿ ಓದಿದವರಿಗೆ ಏಕಾಏಕಿ ಎಂಟನೇ ತರಗತಿಯಿಂದ ಹೊಸಭಾಷೆಯಾದ ಸಂಸ್ಕೃತವನ್ನು ಕಲಿಯಲು ಅನುವು ಮಾಡಿಕೊಡಲಾಗಿತ್ತು[೧೮]. ಆದರೆ ಸಂಸ್ಕೃತ ಯಾರ ಮಾತೃಭಾಷೆಯೂ ಆಗಿರಲಿಲ್ಲ. ಅಲ್ಲದೆ ಸಮಾಜದಲ್ಲಿ ಸಂವಹನ ಸೇರಿದಂತೆ ಇತರ ವ್ಯವಹಾರಗಳಲ್ಲಿ ಜನರು ಹೆಚ್ಚಾಗಿ ಬಳಸುತಿರಲಿಲ್ಲ. ಇದರಿಂದ ಸಂಸ್ಕೃತಕ್ಕೆ ಬೇಡಿಕೆ ಕಡಿಮೆಯಾಗಿ ಶಾಲೆಗಳಲ್ಲಿ ಸಂಸ್ಕೃತವನ್ನು ಕಲಿಯುವವರ ಸಂಖ್ಯೆ ದಿನದಿಂದ ದಿನಕ್ಕೆ ಕಡಿಮೆ ಆಗಲು ಆರಂಭವಾಗಿದೆ.

ಇದು ಶಾಲೆಗಳಲ್ಲಿ ಸಂಸ್ಕೃತದ ಶಿಕ್ಷಕರ ಉದ್ಯೋಗಗಳಿಗೆ ಕುತ್ತು ತರುವ ಪರಿಸ್ಥಿತಿ ಉಂಟುಮಾಡಿದೆ. ಇದರಿಂದ ಸಂಸ್ಕೃತದ ಶಿಕ್ಷಕರು ತಮ್ಮ ಉದ್ಯೋಗ ಉಳಿಸಿಕೊಳ್ಳಲು ವಿದ್ಯಾರ್ಥಿಗಳನ್ನು ಸಂಸ್ಕೃತದ ಕಡೆಗೆ ಆಕರ್ಷಿಸುವುದು ಅನಿವಾರ್ಯವಾಗಿತ್ತು. ಇದಕ್ಕಾಗಿ ಸಂಸ್ಕೃತದ ಶಿಕ್ಷಕರು ಶಾಲೆಗಳಲ್ಲಿ ಸಂಸ್ಕೃತವನ್ನು ಆಯ್ಕೆ ಮಾಡಿಕೊಂಡು ಕಲಿಯುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿಗಳ ಅರ್ಹತೆಗೂ ಮೀರಿ ಅಂಕಗಳನ್ನು ನೀಡಲು ಆರಂಭಿಸಿದರು. ಇದರ ಜೊತೆಗೆ ಸಂಸ್ಕೃತವನ್ನು ಆಯ್ಕೆ ಮಾಡಿಕೊಂಡವರಿಗೆ ಮತ್ತೊಂದು ಅನುಕೂಲವೂ ಇತ್ತು. ಅದೇನೆಂದರೆ ಸಂಸ್ಕೃತ

ಪ್ರಶ್ನೆಪತ್ರಿಕೆಯನ್ನು ಕನ್ನಡ ಮತ್ತು ಇಂಗ್ಲಿಷಿನಲ್ಲಿ ಉತ್ತರಿಸುವಂತಹದ್ದು. ಹೀಗಾಗಿ ವಿದ್ಯಾರ್ಥಿಗಳು ರ್‍ಯಾಂಕ್ ಗಳಿಸುವಲ್ಲಿ ಹೆಚ್ಚಿನ ಅನುಕೂಲಗಳು ಇದ್ದವು[೧೯]. ಹೀಗೆ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿತವರಿಗೆ ಸಂಸ್ಕೃತವನ್ನು ಉತ್ತರಿಸುವುದು ಮತ್ತು ರ್‍ಯಾಂಕ್‌ಗಳನ್ನು ಪಡೆಯುವುದು ಸುಲಭವಾಗಿತ್ತು. ಆದರೆ ಉಳಿದ ಭಾಷೆಗಳನ್ನು ಪ್ರಥಮ ಭಾಷೆಯಾಗಿ ಕಲಿತ ವಿದ್ಯಾರ್ಥಿಗಳಿಗೆ ಇಂತಹ ಅವಕಾಶಗಳು ಇರಲಿಲ್ಲ. ಇದರಿಂದ ಕರ್ನಾಟಕದಲ್ಲಿ ಶಿಕ್ಷಣ ಕಲಿಯುತ್ತಿದ್ದ ಕನ್ನಡದ ಮಕ್ಕಳು ಹೆಚ್ಚಿನ ಅಂಕಗಳಿಕೆಗಾಗಿ ಕನ್ನಡಕ್ಕೆ ಬದಲಾಗಿ ಸಂಸ್ಕೃತ ಆಯ್ಕೆ ಮಾಡಿಕೊಂಡು ಕಲಿಯಲು ಆಸಕ್ತರಾಗಿದ್ದರು. ಸಂಸ್ಕೃತ ಭಾಷೆಯ ಶಿಕ್ಷಕರು ತಮ್ಮ ಉದ್ಯೋಗ ಉಳಿಸಿಕೊಳ್ಳಲು ಅನುಸರಿಸಿದ ಇಂತಹ ಮಾರ್ಗ ಕನ್ನಡಪರ ಹೋರಾಟಗಾರರನ್ನು ಕೆರಳಿಸಿದೆ. ಏಕೆಂದರೆ ಕನ್ನಡದ ಮಕ್ಕಳು ಕನ್ನಡವನ್ನು ಕಲಿಯುತ್ತಿಲ್ಲ. ಕನ್ನಡದ ಬದಲಿಗೆ ಹೆಚ್ಚಿನ ಅಂಕಗಳಿಗಾಗಿ ಸಂಸ್ಕೃತ ಕಲಿಯುತ್ತಿದ್ದಾರೆ. ಆದರೆ ಸಂಸ್ಕೃತ ಇಂದು ಯಾರ ಮಾತೃಭಾಷೆಯಾಗಿಯೂ ಉಳಿದಿಲ್ಲ. ಇದನ್ನು ಪ್ರಥಮ ಭಾಷೆಯಾಗಿ ಕಲಿಸಬೇಕಾದ ಅಗತ್ಯ ಇಲ್ಲ. ಹೀಗಾಗಿ ಸಂಸ್ಕೃತವನ್ನು ಪ್ರಥಮ ಭಾಷಾಕಲಿಕೆಯ ಪಟ್ಟಿಯಿಂದ ತೆಗೆದುಹಾಕಬೇಕು. ಕರ್ನಾಟಕದ ಶಿಕ್ಷಣದಲ್ಲಿ ಕನ್ನಡ ಕಲಿಯದೆ ಶಿಕ್ಷಣ ಪೂರ್ಣಗೊಳಿಸುವ ಪದ್ಧತಿಯನ್ನು ಬದಲಾವಣೆಮಾಡಿ ಕಡ್ಡಾಯವಾಗಿ ಕನ್ನಡ ಕಲಿಯುವಂತಹ, ಕಲಿಸುವಂತಹ ಭಾಷಾನೀತಿ ಜಾರಿಗೊಳಿಸಬೇಕು ಎಂದು ಹೋರಾಟ ಆರಂಭಿಸಿದ್ದಾರೆ.

ಇದರ ತೀವ್ರತೆ ಅರಿತ 'ಕರ್ನಾಟಕ ಸರ್ಕಾರವು ೧೯೭೯ರ ಅಕ್ಟೋಬರ್ ತಿಂಗಳಲ್ಲಿ ಒಂದು ಆದೇಶವನ್ನು ಹೊರಡಿಸಿ ಸಂಸ್ಕೃತ ಭಾಷೆಯನ್ನು ತೃತೀಯ ಭಾಷೆಯಾಗಿ ಕಲಿಯಲು ಮಾತ್ರ ಅವಕಾಶವನ್ನು ಕಲ್ಪಿಸಿಕೊಟ್ಟಿತು. ಆದರೆ ಇದರಿಂದ ವಿವಾದ ಮತ್ತಷ್ಟು ಜೋರಾಯಿತು. ಕೆಲವರು ಈ ವಿಷಯವನ್ನು ಉಚ್ಚನ್ಯಾಯಾಲಯಕ್ಕೆ ಒಯ್ದರು. ಕರ್ನಾಟಕ ವಿಧಾನಸಭೆಯಲ್ಲಿಯು ಚರ್ಚೆಯಾಯಿತು. ಈ ವಿಷಯವನ್ನು ಕೂಲಂಕಷವಾಗಿ ವಿಶ್ಲೇಷಿಸಿ ಒಂದು ತೀರ್ಮಾನಕ್ಕೆ ಬರಲು ಅನುಕೂಲವಾಗುವಂತೆ ತಜ್ಞರ ಒಂದು ಸಮಿತಿಯನ್ನು ನೇಮಿಸಲು ಸರ್ಕಾರ[೨೦] ನಿರ್ಧರಿಸಿದೆ. ಆಗ ಅಂದಿನ ಮುಖ್ಯಮಂತ್ರಿಯಾಗಿದ್ದ ಆರ್.ಗುಂಡೂರಾಯರು ಡಾ.ವಿ.ಕೃ.ಗೋಕಾಕ್ ನೇತೃತ್ವದಲ್ಲಿ ಜಿ.ನಾರಾಯಣ, ಎಸ್.ಕೆ.ರಾಮಚಂದ್ರರಾವ್, ತ.ಸು.ಶಾಮರಾವ್, ಡಾ.ಕೆ.ಕೃಷ್ಣಮೂರ್ತಿ, ಡಾ.ಎಚ್.ಪಿ.ಮಲ್ಲೇದೇವರು, ಸಾ.ಮಂಚಯ್ಯ ಅವರನ್ನು ಸದಸ್ಯರಾಗಿ ಒಳಗೊಂಡಂತೆ ಒಂದು ತಜ್ಞರ ಸಮಿತಿಯನ್ನು ದಿನಾಂಕ ೫ನೇ ಜುಲೈ ೧೯೮೦ರಂದು ಕ್ರಮಾಂಕ ಇಡಿ/೧೧೩/ಎಸ್‌ಒಎಚ್/೭೯ ಆಜ್ಞೆಯ ಮೂಲಕ ನೇಮಿಸಿದೆ. 'ಈ ಸಮಿತಿಗೆ ಸರ್ಕಾರವು ಪರಾಮರ್ಶನೆಗಾಗಿ ಮೂರು ಅಂಶಗಳನ್ನು ನೀಡಿತ್ತು. ಅವುಗಳೆಂದರೆ–

೧. ಸಂಸ್ಕೃತವು ಶಾಲಾ ಪಠ್ಯವಿಷಯಗಳಲ್ಲಿ ಅಭ್ಯಾಸದ ಒಂದು ವಿಷಯವಾಗಿ ಉಳಿಯಬೇಕೇ?
೨. ಹಾಗೆ ಉಳಿಯಬೇಕಾದರೆ ಕನ್ನಡಕ್ಕೆ ಪರ್ಯಾಯವಾಗದಂತೆ ಅದನ್ನು ಉಳಿಸಿಕೊಳ್ಳುವುದು ಹೇಗೆ?
೩. ತ್ರಿಭಾಷಾ ಸೂತ್ರದಂತೆ ಕನ್ನಡವನ್ನು ಕಡ್ಡಾಯ ಮಾಡಿ, ಮಿಕ್ಕಭಾಷೆಗಳಲ್ಲಿ ಯಾವುದಾದರು ಎರಡನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ವಿದ್ಯಾರ್ಥಿಗಳಿಗೆ ಬಿಡುವುದು ಸೂಕ್ತವೇ?[೨೧]

ಎಂಬ ಅಂಶಗಳನ್ನು ನೀಡಿ ಅವುಗಳ ಬಗೆಗೆ ಸೂಕ್ತ ಸಲಹೆ ಮತ್ತು ಮಾರ್ಗದರ್ಶನ ನೀಡುವಂತೆ ಸಮಿತಿಯನ್ನು ಕೋರಿದೆ. ಆದರೆ ಈ ಸಮಿತಿಯ ನೇಮಕಕ್ಕೆ ಡಿ.ಆರ್. ನಾಗರಾಜ್, ಕಿರಂ. ನಾಗರಾಜ, ಅಗ್ರಹಾರ ಕೃಷ್ಣಮೂರ್ತಿ ಮೊದಲಾದ ಕನ್ನಡ ಪರವಾದ ಚಿಂತಕರಿಂದಲೇ ವಿರೋಧ ವ್ಯಕ್ತವಾಗಿದೆ. ಏಕೆಂದರೆ ಈ ಸಮಿತಿಯಲ್ಲಿ ಇರುವವರು ಬಹುತೇಕರು ಸಂಸ್ಕೃತ ಪರವಾದಿಗಳು. ಸಂಸ್ಕೃತದ ಪರವಾಗಿ ವರದಿ ಸಲ್ಲಿಸುತ್ತಾರೆ. ಇದರಿಂದ ಕನ್ನಡಕ್ಕೆ ಸೂಕ್ತನ್ಯಾಯ ಸಿಗುವುದಿಲ್ಲ ಎಂದು. ಸರ್ಕಾರ ಸೂಚಿಸಿರುವ ಮೇಲಿನ ಅಂಶಗಳು ಮತ್ತು ಈ ಸಮಿತಿಯ ನೇಮಕಕ್ಕೆ ಹುಟ್ಟಿಕೊಂಡ ವಿರೋಧಗಳನ್ನು ಗಮನಿಸಿದಾಗ ಕನ್ನಡವನ್ನು ರಾಜ್ಯದ ಶಿಕ್ಷಣದಲ್ಲಿ ಕಡ್ಡಾಯವಾಗಿ ಜಾರಿಗೊಳಿಸುವ ಹಿತಾಸಕ್ತಿ ಇದ್ದುದು ಸ್ಪಷ್ಟವಾಗುತ್ತದೆ. ಆದರೆ ಈ ಹಿತಾಸಕ್ತಿ ಸರ್ಕಾರಕ್ಕೆ ತನ್ನಿಂದ ತಾನೇ ಹುಟ್ಟಿದ್ದಲ್ಲ. ಸಂಸ್ಕೃತವನ್ನು ವಿರೋಧಿಸಿ ಕನ್ನಡಿಗರು ನಡೆಸಿದ ಹೋರಾಟದಿಂದಾಗಿ ಹುಟ್ಟಿದ್ದು. ಹೀಗಾಗಿ ಸರ್ಕಾರ ಶಾಲಾಶಿಕ್ಷಣದಲ್ಲಿ ಕನ್ನಡವನ್ನು ಕಡ್ಡಾಯ ಮಾಡಲು ಮತ್ತು ಸಂಸ್ಕೃತ ಮತ್ತು ಇತರ ಭಾಷೆಗಳ ಸ್ಥಾನಮಾನ ಹೇಗಿರಬೇಕು ಎಂಬ ಸಲಹೆಗಳನ್ನು ನೀಡಲು ಸರ್ಕಾರ ಗೋಕಾಕ್ ನೇತೃತ್ವದಲ್ಲಿ ಸಮಿತಿಯನ್ನು ರಚನೆ ಮಾಡಿದೆ. ಸರ್ಕಾರ ಪರಾಮರ್ಶನೆಗೆ ನೀಡಿದ ಅಂಶಗಳನ್ನು ಮುಖ್ಯವಾಗಿಸಿಕೊಂಡು ಈ ಸಮಿತಿಯು "ಭಾಷಾಶಿಕ್ಷಣ ತತ್ವಗಳನ್ನನುಸರಿಸಿ ಭಾಷೆಗಳ ಮಹತ್ವದ ಪ್ರಮಾಣ, ಇಂದಿನ ಕನ್ನಡ ಜನತೆಯ ಪರಿಸ್ಥಿತಿ, ಅಲ್ಪಸಂಖ್ಯಾತರ ಭಾಷೆಗಳು, ವಿಕಸನಪೂರ್ಣ ವಿದ್ಯಾರ್ಜನೆಯ ಕ್ರಮ ಎಲ್ಲ ವಿಷಯಗಳನ್ನು ಕುರಿತು ಆಮಂತ್ರಿತರೊಡನೆ ಹಾಗೂ ಸಾರ್ವಜನಿಕವಾಗಿ ನಡೆದ ಚರ್ಚೆಗಳನ್ನು ಲಕ್ಷಿಸಿ ಸಮಿತಿಯ ಸದಸ್ಯರ ವಿಚಾರಗಳನ್ನು ಮಥಿಸಿ ಈ ವರದಿಯಲ್ಲಿ ಸೂಚಿಸಿರುವ ಅಭಿಪ್ರಾಯಗಳನ್ನು ಸರ್ವಾನುಮತದಿಂದ ಸಮಿತಿಯು ಅಂಗೀಕರಿಸಿದೆ." ಎಂದು ಹೇಳಿ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿದೆ. ಅದರಲ್ಲಿ ಪ್ರಮುಖವಾದವು ಅಂಶಗಳು ಈ ಕೆಳಕಂಡಂತೆ ಇವೆ.

**೧೧(೩) (ಅ) ಕೆಲವು ನಕ್ಷೆಗಳು: ಮುಖ್ಯ ಸಲಹೆಗಳ ಪ್ರಕಾರ ೧೯೮೧-೮೨ರಿಂದ ಹಾಗೂ ಮುಂದೆ ಎಲ್ಲ ವಿದ್ಯಾರ್ಥಿಗಳ ಎಸ್.ಎಸ್.ಎಲ್.ಸಿ. ಭಾಷಾಶಿಕ್ಷಣ ವ್ಯವಸ್ಥೆ**

| ಪ್ರಥಮಭಾಷೆ | ದ್ವಿತೀಯ ಭಾಷೆ | ತೃತೀಯ ಭಾಷೆ |
|---|---|---|
| ಕನ್ನಡ ಏಕೈಕ ಕಡ್ಡಾಯ ಭಾಷೆ ಅಂಕಗಳು ೧೫೦ | ಅಂಕಗಳು ೧೦೦ | ಅಂಕಗಳು ೫೦ |
| | ಕೆಳಗೆ ಕಾಣಿಸಿದ ಭಾಷೆಗಳಲ್ಲಿ ಒಂದು: | ದ್ವಿತೀಯ ಭಾಷೆಯೆಂದು ಆಯ್ದುಕೊಂಡ ಭಾಷೆಯನ್ನು ಬಿಟ್ಟು ಒಂದು: |
| | ಅ) ಆಧುನಿಕ ಭಾರತೀಯ ಭಾಷೆಗಳು: ತಮಿಳು, ತೆಲುಗು, ಮಲೆಯಾಳಂ, ಮರಾಠಿ, ಗುಜರಾತಿ, ಹಿಂದಿ, ಉರ್ದು | ದ್ವಿತೀಯ ಭಾಷೆಯ (ಅ), (ಆ) ಮತ್ತು (ಇ) ವರ್ಗಗಳೊಳಗಿಂದ ಆಯ್ದುಕೊಳ್ಳಬಹುದಾದ ತೃತೀಯ ಭಾಷೆಯೂ ಕಡ್ಡಾಯ ಪರೀಕ್ಷಾ ಭಾಷೆ |
| | ಆ) ಇಂಗ್ಲೀಷು | |
| | ಇ) ಪ್ರಾಚೀನ ಭಾಷೆಗಳು: ಸಂಸ್ಕೃತ, ಅರೇಬಿಕ್ ಪರ್ಷಿಯನ್, ಲ್ಯಾಟಿನ್, ಗ್ರೀಕ್ | |

(ಪುಟ ೫೪, ಗೋಕಾಕ್ ವರದಿ)

## ೧೯೮೧-೮೨ರಿಂದ ೧೯೮೫-೮೬ರವರೆಗೆ ಗ್ರಾಹ್ಯವೆಂದು ಸೂಚಿಸಿದ ತಾತ್ಪೂರ್ತಿಕ ವ್ಯವಸ್ಥೆಯ ಎರಡು ನಕ್ಷೆಗಳು ಕನ್ನಡೇತರ ವಿದ್ಯಾರ್ಥಿಗಳಿಗಾಗಿ

| ಪ್ರಥಮಭಾಷೆ | ದ್ವಿತೀಯ ಭಾಷೆ | ತೃತೀಯ ಭಾಷೆ |
|---|---|---|
| ಕನ್ನಡ ಅಂಕಗಳು ೧೫೦ | ಅಂಕಗಳು ೧೦೦ | ಅಂಕಗಳು ೫೦ |
| (ಕನ್ನಡ ಶಿಕ್ಷಕರಿಲ್ಲದ ಮೂಲಕ ಪ್ರಾಥಮಿಕ ೩ನೇಯ ಇಯತ್ತೆಯಿಂದ ಕನ್ನಡೇತರ ವಿದ್ಯಾರ್ಥಿಗಳು ಕನ್ನಡ ಕಲಿತಿಲ್ಲ. ಕಾರಣ ೧೯೮೧-೮೨ರಿಂದ ಕನ್ನಡವನ್ನು ಕಡ್ಡಾಯವಾಗಿ ೩ನೇಯ ಇಯತ್ತೆಯಿಂದ ಕಲಿಯಲು ಪ್ರಾರಂಭಿಸಿದ ವಿದ್ಯಾರ್ಥಿ ೧೯೮೬-೮೭ರಲ್ಲಿ ೮ನೇಯ ಇಯತ್ತೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯೆಂದು (೧೫೦ ಅಂಕಗಳು) ತೆಗೆದುಕೊಳ್ಳುತ್ತಾರೆ. | ಕನ್ನಡ ಇಲ್ಲವೇ ಇಂಗ್ಲೀಷು ಇಲ್ಲವೇ ಒಂದು ಪ್ರಾಚೀನ ಭಾಷೆ (ಸಂಸ್ಕೃತ, ಅರೇಬಿಕ್, ಗ್ರೀಕ್, ಪರ್ಷಿಯನ್, ಲ್ಯಾಟಿನ್) | ಕನ್ನಡ ಇಲ್ಲವೇ ಹಿಂದಿ ಇಲ್ಲವೇ ಒಂದು ಪ್ರಾಚೀನ ಭಾಷೆ (ಸಂಸ್ಕೃತ, ಅರೇಬಿಕ್, ಗ್ರೀಕ್, ಪರ್ಷಿಯನ್, ಲ್ಯಾಟಿನ್) |
| ಅಲ್ಲಿಯವರೆಗೆ ತಮ್ಮ ಮಾತೃಭಾಷೆಯನ್ನು (ತಮಿಳು, ತೆಲುಗು, ಮಲೆಯಾಳಂ, ಮರಾಠಿ, ಗುಜರಾತಿ, ಉರ್ದು, ಹಿಂದಿ) ೧೫೦ ಅಂಕಗಳ ವಿಷಯವನ್ನಾಗಿ ತೆಗೆದುಕೊಳ್ಳುತ್ತಾರೆ. ಹಾಗೂ ಕನ್ನಡವನ್ನು ವರ್ಷಾನುವರ್ಷ ಕಲಿತು ೧೯೮೬-೮೭ರಲ್ಲಿ ಪ್ರಥಮ ಭಾಷೆಯಾಗಿಸಿಕೊಳ್ಳುತ್ತಾರೆ. ೧೯೮೬-೮೭ರವರೆಗೆ ಕನ್ನಡೇತರ ವಿದ್ಯಾರ್ಥಿಗಳು ೪ನೇಯ ಇಯತ್ತೆಯಲ್ಲಿ ಕನ್ನಡವನ್ನು ದ್ವಿತೀಯ ಇಲ್ಲವೇ ತೃತೀಯ ಭಾಷೆಯಾಗಿ ಕಲಿಯುತ್ತಾರೆ. | | ಕನ್ನಡವನ್ನು ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದವರಿಗೆ ಅದು ತೃತೀಯ ಭಾಷೆಯಾಗಿ ಕಡ್ಡಾಯದ ಪರೀಕ್ಷಾ ವಿಷಯವಾಗಿರುತ್ತದೆ. |

(ಪುಟ ೫೬, ಗೋಕಾಕ್ ವರದಿ)

## ಕನ್ನಡ ವಿದ್ಯಾರ್ಥಿಗಳಿಗಾಗಿ ೧೮೮೧-೮೬ರ ವರೆಗೆ ಮಾಡಿದ ಭಾಷಾಭ್ಯಾಸ ವ್ಯವಸ್ಥೆ

| ಪ್ರಥಮಭಾಷೆ | ದ್ವಿತೀಯ ಭಾಷೆ | ತೃತೀಯ ಭಾಷೆ |
|---|---|---|
| ಕನ್ನಡ ಏಕೈಕ ಕಡ್ಡಾಯದ ಭಾಷೆ: ೧೫೦ ಅಂಕಗಳು | ಅಂಕಗಳು ೧೦೦<br>ಕೆಳಗೆ ಕಾಣಿಸಿದ ಭಾಷೆಗಳಲ್ಲಿ ಒಂದು:<br>ಅ) ತಮಿಳು, ತೆಲುಗು, ಮಲೆಯಾಳಂ, ಮರಾಠಿ, ಗುಜರಾತಿ, ಉರ್ದು, ಹಿಂದಿ; ಇಲ್ಲವೇ<br>ಆ) ಇಂಗ್ಲಿಷ್; ಇಲ್ಲವೇ<br>ಇ) ಸಂಸ್ಕೃತ, ಅರೇಬಿಕ್, ಪರ್ಷಿಯನ್, ಲ್ಯಾಟಿನ್, ಗ್ರೀಕ್ | ಅಂಕಗಳು ೫೦<br>ಕೆಳಗೆ ಕಾಣಿಸಿದ ಭಾಷೆಗಳಲ್ಲಿ ಒಂದು:<br>ಅ) ತಮಿಳು, ತೆಲುಗು, ಮಲೆಯಾಳಂ, ಮರಾಠಿ, ಗುಜರಾತಿ, ಉರ್ದು, ಹಿಂದಿ; ಇಲ್ಲವೇ<br>ಇ) ಸಂಸ್ಕೃತ, ಅರೇಬಿಕ್, ಪರ್ಷಿಯನ್, ಲ್ಯಾಟಿನ್, ಗ್ರೀಕ್ |

(ಪುಟ ೫೭ ಗೋಕಾಕ್ ವರದಿ)

ಈ ವರದಿಯನ್ನು ಆಧರಿಸಿ ರಾಜ್ಯಸರ್ಕಾರವು ಇಡಿ೧೧೩ ಎಸ್‌ಒಎಚ್ ೭೯ ಬೆಂಗಳೂರು, ದಿನಾಂಕ ೩೦ ಏಪ್ರಿಲ್ ೧೯೮೨ ರಂದು ಆದೇಶ ಹೊರಡಿಸಿದೆ. ಅದರ ಪ್ರಕರಣದಲ್ಲಿ ೧)ಪ್ರೌಢಶಾಲೆಯ ಹಂತದಲ್ಲಿ ಭಾಷಾಕ್ರಮವೂ ಹೀಗಿರುತ್ತದೆ.

ಅ) ಪ್ರಥಮ ಭಾಷೆ: ಕನ್ನಡ ಅಥವಾ ಮಾತೃಭಾಷೆ (ಉರ್ದು, ತಮಿಳು, ತೆಲುಗು, ಮರಾಠಿ, ಇಂಗ್ಲಿಷ್, ಹಿಂದಿ) ೧೫೦ ಅಂಕಗಳಿಗೆ

ಆ) ಇವುಗಳಲ್ಲಿ ಎರಡು ಭಾಷೆಗಳು: ಕನ್ನಡ, ಹಿಂದಿ, ಇಂಗ್ಲಿಷ್, ಸಂಸ್ಕೃತ, ಅರಾಬಿಕ್, ಪರ್ಷಿಯನ್, ಉರ್ದು, ತಮಿಳು, ತೆಲುಗು, ಮರಾಠಿ. ಪ್ರತಿಯೊಂದಕ್ಕೂ ೧೦೦ ಅಂಕಗಳು

**ಸೂಚನೆ:** ೧) ಕನ್ನಡದ ಬದಲು ಬೇರೊಂದು ಭಾಷೆಯನ್ನು ಪ್ರಥಮ ಭಾಷೆಯಾಗಿ ಆಯ್ದುಕೊಂಡ ವಿದ್ಯಾರ್ಥಿಗಳು ಉಳಿದ ಭಾಷೆಗಳಲ್ಲಿ ಕಡ್ಡಾಯಭಾಷೆಯಾಗಿ ಕನ್ನಡವನ್ನೂ (ಆ ಗುಂಪಿನ ಭಾಷೆಗಳಲ್ಲಿ) ಮತ್ತೊಂದು ಭಾಷೆಯನ್ನೂ ಅಧ್ಯಯನ ಮಾಡುತ್ತಾರೆ. ಆ ಎರಡೂ ಭಾಷೆಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಯ ವಿಷಯಗಳು; ೨ ಕನ್ನಡವನ್ನು ಪ್ರಥಮ ಭಾಷೆಯಾಗಿ ಆಯ್ದುಕೊಳ್ಳುವ ವಿದ್ಯಾರ್ಥಿಗಳು (ಆ ಗುಂಪಿನಿಂದ) ಕನ್ನಡವನ್ನು ಬಿಟ್ಟು ಬೇರೆ ಯಾವುದೇ ಎರಡು ಭಾಷೆಗಳನ್ನು ತೆಗೆದುಕೊಳ್ಳುತ್ತಾರೆ[೨೨] ಎಂದು ಹೇಳಿದೆ.

ಅನಂತರದಲ್ಲಿ ದಿನಾಂಕ ೩೦ ಏಪ್ರಿಲ್ ೧೯೮೨ರ ಕರ್ನಾಟಕ ಸರ್ಕಾರದ ಭಾಷಾನೀತಿ ಕನ್ನಡಿಗರ ಆಶೋತ್ತರಗಳಿಗೆ ಪೂರಕವಾಗಿಲ್ಲ ಎಂಬ ಭಾವನೆಗಳು ವ್ಯಕ್ತವಾಗಿದ್ದರಿಂದ ಈ ವಿಷಯವನ್ನು ವಿಧಾನಮಂಡಲದ ಮುಂದೆ ಇರಿಸುವುದು ಯುಕ್ತವೆಂದು ಸರ್ಕಾರ ಯೋಚಿಸಿದೆ. ಅನಂತರ ಕನ್ನಡವು ೧೨೫ ಅಂಕಗಳಿಗೆ ಏಕೈಕ ಪ್ರಥಮ ಭಾಷೆಯೆಂದು, ಇದಕ್ಕೆ ಪೂರಕವಾಗಿ ಉಳಿದ ಎರಡು ಭಾಷೆಗಳನ್ನು ೧೦೦ ಅಂಕಗಳಿಗೆ ಅಧ್ಯಯನ ಮಾಡಬಹುದು ಎಂದು ತೀರ್ಮಾನಕ್ಕೆ ಬಂದು ರಾಜ್ಯ ಸರ್ಕಾರವು ೨೦ನೇ ಜುಲೈ ೧೯೮೨ರಂದು ಆಜ್ಞೆಯನ್ನು ಹೊರಡಿಸಿದೆ. ಅದು ಹೀಗಿದೆ: ಆಜ್ಞೆ ಸಂ.ಇಡಿ ೧೧೩ ಎಸ್‌ಓಎಚ್ ೭೯, ಬೆಂಗಳೂರು, ೨೦ನೇ ಜುಲೈ ೧೯೮೨. ಮೇಲೆ ಹೇಳಿದ ಅಂಶಗಳನ್ನು ಗಮನಿಸಿ ಸರ್ಕಾರವು ಈ ರೀತಿ ನಿರ್ದೇಶಿಸುತ್ತದೆ.

"೧) ಪ್ರೌಢಶಾಲೆಯ ಹಂತದಲ್ಲಿ (೧೯೮೭-೮೮ನೆಯ ಶೈಕ್ಷಣಿಕ ವರ್ಷದಿಂದ) ಅನುಸರಿಸುವ ಭಾಷಾ ಕ್ರಮವೂ ಈ ರೀತಿ ಇರುತ್ತದೆ: ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡಬೇಕು.

ಅ) ಪ್ರಥಮ ಭಾಷೆ: ಕನ್ನಡ ಏಕೈಕ ಪ್ರಥಮ ಭಾಷೆ (೧೨೫ ಅಂಕಗಳು)

ಆ) ಇವುಗಳಲ್ಲಿ ಇನ್ನೆರಡು ಭಾಷೆಗಳು: ಉರ್ದು, ತಮಿಳು, ತೆಲುಗು, ಮರಾಠಿ. ಇಂಗ್ಲಿಷ್, ಹಿಂದಿ, ಸಂಸ್ಕೃತ, ಅರಾಬಿಕ್, ಪರ್ಷಿಯನ್, ಮಲಯಾಳಂ ಮತ್ತು ಕನ್ನಡ (ತಲಾ ೧೦೦ ಅಂಕಗಳು)[೨೩]

ಸರ್ಕಾರದ ಈ ಭಾಷಾನೀತಿಯಿಂದ ನೊಂದ ಕೆಲವು ಶಿಕ್ಷಣ ಸಂಸ್ಥೆಗಳು ಸರ್ಕಾರದ ಈ ಭಾಷಾನೀತಿಯ ವಿರುದ್ಧವಾಗಿ ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ಭಾರತ ಸಂವಿಧಾನದ ೨೯ ಮತ್ತು ೩೦ನೇ ಅನುಚ್ಛೇದಗಳನ್ನು ಉಲ್ಲಂಘಿಸುತ್ತದೆ ಎಂದು ರಿಟ್ ಅರ್ಜಿ ಸಲ್ಲಿಸಿದ್ದಾರೆ. ಇದನ್ನು ಅಂಗೀಕರಿಸಿರುವ ಪೂರ್ಣಪೀಠವು '೨೦ನೇ ಜುಲೈ ೧೯೮೨ರ ಸರಕಾರಿ ಆಜ್ಞೆಯು- ಭಾಷಾಅಲ್ಪಸಂಖ್ಯಾತ ಗುಂಪಿಗೆ ಸೇರಿದ ಮಕ್ಕಳಿಗೆ ಪ್ರಾಥಮಿಕ ಶಾಲೆಯ ೧ನೇ ತರಗತಿಯಿಂದ ಕನ್ನಡವನ್ನು ಕಡ್ಡಾಯ ವಿಷಯವಾಗಿ ಮಾಡುವುದು ಮತ್ತು ಅದನ್ನು ಭಾಷಾಅಲ್ಪಸಂಖ್ಯಾತರು ಸ್ಥಾಪಿಸಿರುವ ಪ್ರಾಥಮಿಕ ಶಾಲೆಗಳಲ್ಲಿ ೧ನೇ ತರಗತಿಯಿಂದ ಕಡ್ಡಾಯ ವಿಷಯವಾಗಿ ಆರಂಭಿಸುವುದು ಮತ್ತು ಪ್ರೌಢಶಾಲೆಗೆ ಸೇರುವ ವಿದ್ಯಾರ್ಥಿಗಳು ಕನ್ನಡವನ್ನು ಏಕೈಕ ಪ್ರಥಮ ಭಾಷೆಯಾಗಿ

ತೆಗೆದುಕೊಳ್ಳುವಂತೆ ಒತ್ತಾಯಿಸುವುದು ಹಾಗೂ ಭಾಷಾಅಲ್ಪಸಂಖ್ಯಾತರು ಸ್ಥಾಪಿಸಿರುವ ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಏಕೈಕ ಪ್ರಥಮ ಭಾಷೆಯಾಗಿ ಆರಂಭಿಸಲು ಒತ್ತಾಯಿಸುವುದು-ಅಷ್ಟರ ಮಟ್ಟಿಗೆ ಸಂವಿಧಾನದ ೨೯(೧) ಮತ್ತು ೩೦(೧) ಅನುಚ್ಛೇದಗಳನ್ನು ಉಲ್ಲಂಘಿಸುತ್ತದೆ[೨೪] ಎಂದು ತೀರ್ಪಿತ್ತಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಭಾಷಾವಿಚಾರವಾಗಿ ತೆಗೆದುಕೊಂಡಿರುವ ನಿಲುವುಗಳು ಕನ್ನಡವನ್ನು ಆಡಳಿತ, ಶಿಕ್ಷಣ ಸೇರಿದಂತೆ ಇತರ ಎಲ್ಲಾ ಕ್ಷೇತ್ರಗಳಲ್ಲಿ ಬಳಕೆಗೆ ತರುವಂತೆ ಒತ್ತಡ ಉಂಟುಮಾಡಿರುವುದು ಸ್ಪಷ್ಟವಾಗುತ್ತದೆ. ಹಾಗೆಯೇ ವಿ.ಕೃ.ಗೋಕಾಕ್ ನೇತೃತ್ವದಲ್ಲಿ ರಚನೆಯಾದ ಸಮಿತಿಯ ಮೇಲೆ ಕನ್ನಡದ ಪರ ವರದಿ ಸಲ್ಲಿಸುವಂತೆ ಸರ್ಕಾರ ಮತ್ತು ಜನತೆಯಿಂದ ಒತ್ತಡ ಇದ್ದುದು ತಿಳಿಯುತ್ತದೆ. ಈ ರೀತಿಯ ಒತ್ತಡಗಳು ಏಕೀಕರಣದ ನಂತರ ಕರ್ನಾಟಕದಲ್ಲಿ ನೇಮಕವಾಗಿರುವ ಎಲ್ಲಾ ಭಾಷಾಸಮಿತಿ ಮತ್ತು ಆಯೋಗಗಳ ಮೇಲೂ ಇವೆ. ಏಕೆಂದರೆ ಈಗಾಗಲೇ ಚರ್ಚಿಸಿರುವ ಹಾಗೆ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಕರ್ನಾಟಕದ ಮಣ್ಣಿಗೂ ಕನ್ನಡ ಭಾಷೆಗೂ ನಿಕಟ ಸಂಬಂಧ ಇದೆ (ಇದನ್ನು ಈ ಅಧ್ಯಾಯದ ಮೊದಲ ಭಾಗದಲ್ಲಿ ಈಗಾಗಲೇ ಚರ್ಚಿಸಲಾಗಿದೆ). ಇಲ್ಲಿನ ಬಹುಸಂಖ್ಯಾತರು ಕನ್ನಡಿಗರು. ಹೀಗಾಗಿ ಕರ್ನಾಟಕದ ಆಡಳಿತ, ಶಿಕ್ಷಣ, ನ್ಯಾಯಾಲಯ, ಉದ್ಯೋಗ, ಬ್ಯಾಂಕು, ಅಂಚೆ ಮತ್ತು ತಂತಿ, ರೈಲ್ವೆ ಸೇರಿದಂತೆ ಕರ್ನಾಟಕದ ಕಾರ್ಯನಿರ್ವಹಿಸುತ್ತಿರುವ ಪ್ರತಿಯೊಂದು ಇಲಾಖೆ ಸಂಸ್ಥೆ, ಉದ್ದಿಮೆ, ಕೈಗಾರಿಕೆಗಳು ಅವು ರಾಜ್ಯಸರ್ಕಾರದ ಹಿಡಿತದಲ್ಲಿರಲಿ ಅಥವಾ ಕೇಂದ್ರಸರ್ಕಾರದ ಹಿಡಿತದಲ್ಲಿರಲಿ ಅಥವಾ ಖಾಸಗಿಯವರ ಹಿಡಿತದಲ್ಲಿರುವ ಪ್ರತಿಯೊಂದು ಕಡೆಯೂ ಕನ್ನಡವೇ ಬಳಕೆಯಾಗಬೇಕು. ಹೀಗೆ ಮಾಡುವುದು ಪ್ರಾದೇಶಿಕ ಭಾಷೆಯ ಬೆಳವಣಿಗೆಗೆ, ಅಭಿವೃದ್ಧಿಗೆ ನೀಡುವ ಗೌರವವು ಹೌದು, ಪ್ರೋತ್ಸಾಹವು ಹೌದು. ಅದು ನ್ಯಾಯಯುತವೂ ಆಗಿದೆ, ವೈಜ್ಞಾನಿಕತೆಯಿಂದಲು ಕೂಡಿದೆ. ಆದುದರಿಂದ ಕರ್ನಾಟಕದ ಎಲ್ಲಾ ಕಡೆಗಳಲ್ಲಿ ಕನ್ನಡ ಹೆಚ್ಚು ಬಳಕೆಗೆ ಬರುವಂತೆ ಪೂರಕ ಸಲಹೆಗಳನ್ನು ನೀಡಬೇಕು ಎಂದು ಭಾಷಾಸಮಸ್ಯೆಯ ಪರಿಹಾರಕ್ಕೆ ನೇಮಕವಾದ ಸಮಿತಿ ಅಥವಾ ಆಯೋಗಗಳ ಮೇಲೆ ಒತ್ತಡಗಳನ್ನು ಹೇರಲಾಗಿದೆ.

ಹೀಗಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷಾಸಮಸ್ಯೆಗೆ ಇದುವರೆಗೆ ಸೂಕ್ತ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಏಕೆಂದರೆ ಯಾವುದೇ ಒಬ್ಬ ವ್ಯಕ್ತಿ, ಒಂದು ಸಮಿತಿ ಅಥವಾ ಆಯೋಗ ಒತ್ತಡಗಳ ನಡುವೆ ಕಾರ್ಯನಿರ್ವಹಿಸುವಾಗ ಸಮಸ್ಯೆಗಳಿಗೆ ನಿಷ್ಪಕ್ಷಪಾತ ಪರಿಹಾರ ಸೂಚಿಸಲು ಸಾಧ್ಯವಾಗುವುದಿಲ್ಲ. ಒತ್ತಡಗಳು ಒಬ್ಬ ವ್ಯಕ್ತಿ, ಒಂದು ಸಮಿತಿ ಅಥವಾ ಆಯೋಗವನ್ನು ಭಯಕ್ಕೆ ಒಳಗು ಮಾಡುತ್ತವೆ. ಇದರಿಂದ ವ್ಯಕ್ತಿ, ಸಮಿತಿ ಅಥವಾ ಆಯೋಗ ಒತ್ತಡಗಳನ್ನು ಉಂಟುಮಾಡಿದ್ದ ಸಮುದಾಯದ ಪರವಾಗಿ ತಾವು ವರದಿ ಸಲ್ಲಿಸದಿದ್ದರೆ ತಮ್ಮ ವಿರುದ್ಧ ಪ್ರತಿಭಟಿಸಿ, ಘೋಷಣೆಗಳನ್ನು ಕೂಗುತ್ತಾರೆ. ಇದರಿಂದ ನಾವು ಯಾವ ಸಮುದಾಯದ ತಮ್ಮ ಭಾಷೆಯ

ಪರವಾಗಿ ನೀತಿ ತರುವಂತೆ ಒತ್ತಡ ಉಂಟುಮಾಡಿರುತ್ತದೆಯೋ ಆ ಸಮುದಾಯದ ಪರ ವರದಿ ಸಲ್ಲಿಸಿದರೆ ಸಮಾಧಾನ ಗೊಳ್ಳುತ್ತದೆ. ಹೋರಾಟಗಳು ಮತ್ತೆ ತೀವ್ರಗೊಳ್ಳುವುದಿಲ್ಲ ಎಂಬ ಆಲೋಚನೆ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರ ಮನಸ್ಸಿನಲ್ಲಿ ಇದ್ದ ಹಾಗೆ ಕಾಣುತ್ತದೆ. ಇದರಿಂದಾಗಿ ಒತ್ತಡದ ನಡುವೆ ಸಮಸ್ಯೆಯ ಪರಿಹಾರಕ್ಕೆ ವರದಿ ಸಲ್ಲಿಸಿರುವ ಸಮಿತಿ ಅಥವಾ ಆಯೋಗಗಳು ಪೂರ್ವಾಗ್ರಹಕ್ಕೆ ಒಳಗಾಗಿ ಯಾವ ಸಮುದಾಯ ತಮ್ಮ ಪರವಾಗಿ ನಿಯಮಗಳನ್ನು ರೂಪಿಸಬೇಕು ಎಂದು ಹೋರಾಟ ಮಾಡಿದೆಯೋ ಆ ಸಮುದಾಯಕ್ಕೆ ಪೂರಕವಾಗಿ ವರದಿ ಸಲ್ಲಿಸಿವೆ.

ಆದರೆ ಪೂರ್ವಾಗ್ರಹಕ್ಕೆ ಒಳಗಾಗಿ ಒಂದು ಸಮಿತಿ ಅಥವಾ ಆಯೋಗ ನೀಡುವ ವರದಿ ಬಹುಭಾಷಿಕ ಪ್ರದೇಶದಲ್ಲಿನ ಭಾಷಾಸಮಸ್ಯೆಯ ಪರಿಹಾರಕ್ಕೆ ಅಷ್ಟುಸೂಕ್ತವಾಗಿರುವುದಿಲ್ಲ. ಅದರಲ್ಲೂ ಭಾರತದಂತಹ ಪ್ರಜಾಪ್ರಭುತ್ವ ದೇಶದಲ್ಲಿ ಇಂತಹ ವರದಿಗಳನ್ನು ಆಧರಿಸಿ ನಿಯಮಗಳನ್ನು ಮಾಡಿ, ಅವುಗಳ ಅನುಷ್ಠಾನಕ್ಕೆ ಪ್ರಯತ್ನಿಸುವುದು ಯುಕ್ತವಲ್ಲ. ಏಕೆಂದರೆ ಈಗಾಗಲೆ ಚರ್ಚಿಸಿರುವ ಹಾಗೆ ಭಾರತ ತನ್ನದೇ ಆದ ಸ್ವತಂತ್ರ ಸಂವಿಧಾನವನ್ನು ಒಳಗೊಂಡಿದೆ. ಇಲ್ಲಿ ಯಾವುದೇ ನಿಯಮಗಳು ರೂಪಿತವಾದರು ಅವು ಭಾರತ ಸಂವಿಧಾನದ ಚೌಕಟ್ಟಿಗೆ ಒಳಪಟ್ಟು ರೂಪಿತವಾಗಬೇಕಾಗುತ್ತದೆ. ಇದನ್ನು ಮೀರಿ ರಾಜ್ಯ ಸರ್ಕಾರಗಳು ತನ್ನ ಇಚ್ಛೆಗೆ ಬಂದ ಹಾಗೆ ನಿಯಮಗಳನ್ನು ರಚಿಸುವ ಹಾಗಿಲ್ಲ. ಹಾಗೇನಾದರು ರಚಿಸಿದ್ದೇ ಆದರೆ ಅದು ಸಂವಿಧಾನ ಬಾಹಿರ. ಸಂವಿಧಾನ ಬಾಹಿರವಾಗಿ ರಚಿಸಿದ ನಿಯಮಗಳನ್ನು ದೇಶದ ನ್ಯಾಯಾಲಯಗಳಲ್ಲಿ ಪ್ರಶ್ನಿಸಬಹುದು. ಹೀಗಾಗಿ ರಾಜ್ಯ ಸರ್ಕಾರಗಳಿಗೆ ಸ್ಥಳೀಯ ಜನರ ಒತ್ತಡಕ್ಕೆ ಒಳಗಾಗಿ ಒತ್ತಡ ಉಂಟುಮಾಡಿದ ಜನರಿಗೆ ಅನುಕೂಲವಾಗುವ ಹಾಗೆ ಕಾನೂನು ರಚಿಸುವ ಅಧಿಕಾರ ಇಲ್ಲ. ಹಾಗೇನಾದರೂ ರಚಿಸುವುದು ಅನಿವಾರ್ಯವಾದರೆ ಅದು ಆ ಪ್ರದೇಶದ ಇತರ ಭಾಷಿಕ ಸಮುದಾಯಗಳ ಭಾಷೆಯ ಕಲಿಕೆ ಮತ್ತು ಬಳಕೆಗೆ ತೊಂದರೆಯಾಗದಂತೆ ಸಂವಿಧಾನ ಬದ್ಧವಾಗಿ ರಚಿಸಬೇಕಾಗುತ್ತದೆ. ಅಂದರೆ ಒಂದು ಭಾಷಾಸಮುದಾಯದ ಪರವಾಗಿ ನಿಯಮಗಳನ್ನು ರೂಪಿಸುವಾಗ ಅದು ಆ ಪ್ರದೇಶದ ಇತರ ಭಾಷಿಕ ಸಮುದಾಯಗಳ ಜನರ ಭಾಷೆ, ಸಾಹಿತ್ಯ, ಸಂಸ್ಕೃತಿ, ಬದುಕಿಗೆ ಮಾರಕವಾಗದಂತೆ ಎಚ್ಚರಿಕೆ ವಹಿಸಿ ನಿಯಮಗಳನ್ನು ರೂಪಿಸಬೇಕಾಗುತ್ತದೆ.

ಆದರೆ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿದೆ. ಹೀಗಾಗಿ ಕರ್ನಾಟಕದ ಎಲ್ಲಾ ವ್ಯವಹಾರಗಳು ಕನ್ನಡದಲ್ಲಿಯೇ ಇರಬೇಕು. ಆ ನಿಟ್ಟಿನಲ್ಲಿ ಇಲ್ಲಿನ ಸರ್ಕಾರ ಭಾಷಾನೀತಿಯನ್ನು ಜಾರಿಗೆ ತರಬೇಕು ಎಂಬ ಬೇಡಿಕೆಯನ್ನಿಟ್ಟು ಕನ್ನಡಿಗರು ಹೋರಾಟಗಳನ್ನು ಮಾಡುತ್ತಾ ಬಂದಿದ್ದಾರೆ. ಇದು ತಮ್ಮ ಭಾಷೆಯಲ್ಲಿ ತಮ್ಮ ಅಗತ್ಯ ಪೂರೈಸಿಕೊಳ್ಳುವ ಹಿನ್ನೆಲೆಯಲ್ಲಿ ಉತ್ತಮವಾದುದು. ಆದರೆ 'ಕರ್ನಾಟಕದಲ್ಲಿ ಕನ್ನಡವೇ ಪ್ರಥಮ, ಪ್ರಧಾನ, ರಾಜ, ರಾಣಿ, ರಾಜಕುಮಾರ ಎಲ್ಲಾ. ಮಿಕ್ಕ ಯಾವ ಭಾಷೆಯಾದರೂ ಇಲ್ಲಿ ಸೇವಕರ ಸ್ಥಾನದಲ್ಲಿರಬೇಕು.[೨೫] ಎನ್ನುವುದು ಅಷ್ಟು ಯುಕ್ತವಾದುದಲ್ಲ. ಏಕೆಂದರೆ ಭಾರತ ಬಹುಭಾಷಿಕರನ್ನು ಒಳಗೊಂಡಿರುವ ದೇಶ. ಇಲ್ಲಿ ಈಗಾಗಲೇ ಹೇಳಿದ ಹಾಗೆ ಒಂದು ಸಂವಿಧಾನವಿದೆ. ಅದರ ಪ್ರಕಾರ ಭಾರತದಲ್ಲಿ ಎಲ್ಲಾ ಭಾಷಿಕರು ಸಮಾನರು ಮತ್ತು ತನಗೆ

ಬೇಕಾದ ಭಾಷೆಯನ್ನು ಬಳಸಿಕೊಂಡು ತನ್ನ ಭಾವನೆಗಳನ್ನು ವ್ಯಕ್ತಪಡಿಸಲು ಪ್ರತಿಯೊಬ್ಬರು ಸ್ವತಂತ್ರರು. ಇದಕ್ಕಾಗಿಯೇ ಸಂವಿಧಾನದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ. ಹೀಗಾಗಿ ರಾಜ್ಯಸರ್ಕಾರಗಳಾಗಲಿ ಅಥವಾ ಕೇಂದ್ರಸರ್ಕಾರಗಳಾಗಲಿ ತನ್ನ ಪ್ರಜೆಗೆ ನೀವು ಇಂತಹದೇ ಭಾಷೆಯನ್ನು ಕಲಿಯಬೇಕು, ಇಂತಹದೇ ಭಾಷೆಯನ್ನೇ ಬಳಸಬೇಕು, ಇಂತಹ ಭಾಷೆಯನ್ನು ಕಲಿಯಬಾರದು, ಇಂತಹ ಭಾಷೆಯನ್ನು ಬಳಸಬಾರದು ಎಂದು ಹೇಳುವ ಅಧಿಕಾರವಿಲ್ಲ. ಹೀಗಾಗಿ ರಾಜ್ಯ ಮತ್ತು ಕೇಂದ್ರಸರ್ಕಾರಗಳು ಎಲ್ಲಾ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಅವಕಾಶ ಮಾಡಿಕೊಡಬೇಕು.

ಆದರೆ ಒಂದು ಪ್ರದೇಶದ ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯ, ಬ್ಯಾಂಕು, ಪತ್ರಿಕೆಗಳು ಮುಂತಾದ ಕ್ಷೇತ್ರಗಳಲ್ಲಿ ಒಂದು ಭಾಷೆಯನ್ನು ಬಳಕೆ ಮಾಡಬೇಕಾದರೆ ಆ ಭಾಷೆ ಲಿಪಿಯನ್ನು ಒಳಗೊಂಡಿರಬೇಕು. ಜೊತೆಗೆ ಆಡಳಿತ, ಶಿಕ್ಷಣ, ಉದ್ಯೋಗ ಇತ್ಯಾದಿಗಳಲ್ಲಿ ಬಳಕೆಯಾಗುವ ಸಾಮರ್ಥ್ಯ ಪಡೆದಿರಬೇಕು. ಹಾಗೆಯೇ ಆ ಪ್ರದೇಶದಲ್ಲಿ ಒಂದು ನಿರ್ದಿಷ್ಟ ಸಂಖ್ಯೆಯ ಜನರು ಇರಬೇಕು. ಇಂತಹ ಸಾಮರ್ಥ್ಯ ಪಡೆದುಕೊಳ್ಳದ ಭಾಷೆ ಅಥವಾ ಭಾಷೆಗಳನ್ನು ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯ ಮುಂತಾದ ಕ್ಷೇತ್ರಗಳ ಭಾಷೆಯಾಗಿ ಬಳಕೆಗೆ ತರುವುದು ಅಸಾಧ್ಯದ ಕೆಲಸ. ಹೀಗಾಗಿ ಬಹುಭಾಷಿಕ ಪ್ರದೇಶದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷೆಗಳನ್ನು ಆಡಳಿತದ, ಶಿಕ್ಷಣದ, ಉದ್ಯೋಗದ, ನ್ಯಾಯಾಲಯಗಳ, ಪತ್ರಿಕೆಗಳ, ಬ್ಯಾಂಕುಗಳ ಭಾಷೆಯಾಗಿ ಬಳಕೆಗೆ ತರುವುದು ಸಾಧ್ಯವಾಗದ ಕೆಲಸ. ಹೀಗಾಗಿ ಒಂದು ಪ್ರದೇಶದ ಬಹುಸಂಖ್ಯಾತರ ಭಾಷೆಯನ್ನಷ್ಟೇ ಮೇಲೆ ತಿಳಿಸಲಾಗಿರುವ ಕ್ಷೇತ್ರಗಳಲ್ಲಿ ಕಲಿಸಲು, ಬಳಸಲು ಸಾಧ್ಯವೆಂದು ಭಾರತದಲ್ಲಿ, ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಪ್ರಬಲವಾಗಿದ್ದು ಕರ್ನಾಟಕದಲ್ಲಿ ಹೆಚ್ಚಿನ ಸಂಖ್ಯೆಯ ಜನರು ವಾಸಿಸುತ್ತಿರುವ ಸಮುದಾಯಗಳ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಅವಕಾಶ ಕಲ್ಪಿಸಲಾಗಿದೆ. ಹೀಗಾಗಿ ಕರ್ನಾಟಕದಲ್ಲಿ ಇಂಗ್ಲಿಶ್, ಕನ್ನಡ, ಹಿಂದಿ, ತಮಿಳು, ತೆಲುಗು, ಉರ್ದು, ಮರಾಠಿ, ಮಲಯಾಳಂ ಭಾಷೆಗಳು ಮಾತ್ರ ಕರ್ನಾಟಕದ ಶಿಕ್ಷಣದಲ್ಲಿ ಪ್ರಥಮ ಭಾಷೆಯ ಸ್ಥಾನ ಪಡೆದಿವೆ. ರಾಜ್ಯದಲ್ಲಿನ ಇತರ ಭಾಷೆಗಳಾದ ತುಳು, ಕೊಂಕಣಿ, ಕೊಡವ ಸೇರಿದಂತೆ ದೇಶದ ಇತರ ರಾಜ್ಯಗಳಲ್ಲಿ ಪ್ರಬಲರಾಗಿದ್ದು ಕರ್ನಾಟಕದಲ್ಲಿ ಕಡಿಮೆ ಸಂಖ್ಯೆಯಲ್ಲಿ ಬಳಸುವ ಒರಿಯಾ, ಬಂಗಾಳಿ, ಅಸ್ಸಾಮಿ, ಪಂಜಾಬಿ ತರದ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಅವಕಾಶವಿಲ್ಲ.

ಇಲ್ಲಿ ಈ ವಿಚಾರಗಳನ್ನು ಚರ್ಚಿಸಿರುವ ಉದ್ದೇಶ ಕನ್ನಡ ಇಂಗ್ಲಿಶ್, ಹಿಂದಿಯ ಕಲಿಕೆ ಮತ್ತು ಬಳಕೆಯನ್ನು ಕಡ್ಡಾಯಗೊಳಿಸಬಾರದು ಅಥವಾ ಕರ್ನಾಟಕದಲ್ಲಿ ಇರುವ ಎಲ್ಲಾ ಭಾಷಿಕರಿಗೆ ಅವರ ಭಾಷೆಯಲ್ಲಿಯೇ ಶಿಕ್ಷಣ ಕಲಿಸಬೇಕು. ಆಡಳಿತ ಸೇರಿದಂತೆ ಇತರ ಎಲ್ಲಾ ಕ್ಷೇತ್ರಗಳಲ್ಲಿ ಬಳಸಲು ಅವಕಾಶ ಕಲ್ಪಿಸಿಕೊಡಬೇಕು ಎಂಬುದಲ್ಲ. ಬದಲಾಗಿ ಪ್ರಸ್ತಾವನೆಯಲ್ಲಿ ಚರ್ಚಿಸಿರುವ ಹಾಗೆ ಇಂದಿನ ಜಗತ್ತಿಗೆ ಎಲ್ಲಾ ಭಾಷೆ, ಭಾಷಿಕ ಜನರು, ಅವರ ವಿಶೇಷತೆಗಳು ಮುಖ್ಯ ಆಗಿರುವುದರಿಂದ ಅವುಗಳನ್ನು ರಕ್ಷಿಸುವ ಕಾರ್ಯ ಆಗಬೇಕಿದೆ. ಹೀಗಾಗಿ ಬಹುಭಾಷೆಗಳು ಬಳಕೆಯಲ್ಲಿರುವ ಪ್ರದೇಶದಲ್ಲಿ ಎಲ್ಲಾ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಅವಕಾಶ ಸಾಧ್ಯವಿಲ್ಲ ಎನ್ನುವುದಾದರೆ ಅಂತಹ

ಭಾಷಾಸಮುದಾಯದ ಭಾಷೆ, ಸಾಹಿತ್ಯ, ಸಂಸ್ಕೃತಿ, ಜೀವನವಿಧಾನ, ಬದುಕಿನ ಕ್ರಮಗಳನ್ನು ಉಳಿಸಲು ಕೈಗೊಳ್ಳಬೇಕಾದ ಕ್ರಮಗಳು ಯಾವುವು ಎಂಬುದನ್ನು ಆಲೋಚಿಸಬೇಕಾಗುತ್ತದೆ. ಅವುಗಳ ಬಗೆಗೆ ಕ್ರಮಕೈಗೊಳ್ಳಬೇಕಾಗುತ್ತದೆ. ಏಕೆಂದರೆ ಭಾರತದಂತಹ ಬಹುಭಾಷೆಗಳು ಬಳಕೆಯಲ್ಲಿರುವ ದೇಶದಲ್ಲಿ ಕೆಲವು ಭಾಷೆಗಳು ಲಿಪಿ ರೂಪಿಸಿಕೊಂಡಿಲ್ಲ, ಶಿಕ್ಷಣ, ಆಡಳಿತ, ಉದ್ಯೋಗ ಇತ್ಯಾದಿ ಕ್ಷೇತ್ರಗಳಲ್ಲಿ ಬಳಕೆಯಾಗುವ ಸಾಮರ್ಥ್ಯ ಪಡೆದಿಲ್ಲ ಎಂಬಂತಹ ಕಾರಣಗಳನ್ನು ನೀಡಿ ವಿದ್ಯಾರ್ಥಿಗಳು ಶಾಲೆಗಳಲ್ಲಿ ಇಂತಹ ಭಾಷೆಗಳನ್ನು ಮಾತ್ರ ಕಲಿಯಬೇಕು, ಹೀಗೇ ಕಲಿಯಬೇಕು. ಇಂತಹದೇ ಮಾಧ್ಯಮದಲ್ಲಿ ಕಲಿಯಬೇಕು ಎಂದು ಹೇಳುವುದಾಗಲಿ ಅಥವಾ ಇಂತಹ ಭಾಷೆಗಳನ್ನು, ಇಂತಹ ಮಾಧ್ಯಮದಲ್ಲಿ ಕಲಿಯಬಾರದು, ಬಳಸಬಾರದು ಎಂದು ಹೇಳುವ ಹಾಗಿಲ್ಲ.

ಏಕೆಂದರೆ ಸಂವಿಧಾನದ ನಿಯಮ ಮತ್ತು ನ್ಯಾಯಾಲಯಗಳು ನೀಡಿರುವ ತೀರ್ಪಿನ ಪ್ರಕಾರ ವಿದ್ಯಾರ್ಥಿಗಳು ತಮಗೆ ಬೇಕಾದ ಭಾಷೆ ಅಥವಾ ಭಾಷೆಗಳನ್ನು ಹಾಗೂ ಭಾಷಾಮಾಧ್ಯಮದಲ್ಲಿ ಕಲಿಯುವ ಸ್ವತಂತ್ರರು. ಹಾಗೆಯೇ ಪೋಷಕರು ತಮ್ಮ ಮಕ್ಕಳಿಗೆ ತಮಗೆ ಬೇಕಾದ ಭಾಷೆ ಅಥವಾ ಭಾಷೆಗಳನ್ನು ಹಾಗೂ ಭಾಷಾಮಾಧ್ಯಮದಲ್ಲಿ ಕಲಿಸಲು ಸ್ವತಂತ್ರರು. ಈ ಹಕ್ಕನ್ನು ಕಸಿದುಕೊಳ್ಳುವ ಸ್ವಾತಂತ್ರ್ಯ ರಾಜ್ಯಸರ್ಕಾರಗಳಿಗಾಗಲಿ ಅಥವಾ ಕೇಂದ್ರ ಸರ್ಕಾರಕ್ಕಾಗಲಿ ಇಲ್ಲ ಎಂದು ನ್ಯಾಯಾಲಯಗಳು ತೀರ್ಪು ನೀಡಿವೆ. ಹೀಗಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಕನ್ನಡವನ್ನು ಆಡಳಿತ, ಶಿಕ್ಷಣ, ನ್ಯಾಯಾಲಯ, ಉದ್ಯೋಗಗಳ ಭಾಷೆಯಾಗಿ ಸಂಪೂರ್ಣವಾಗಿ ಬಳಕೆಗೆ ತರಲು ಸಾಧ್ಯವಾಗಿಲ್ಲ. ಇದರಿಂದಾಗಿ ಏಕೀಕರಣ ಪೂರ್ವ ಕರ್ನಾಟಕದಲ್ಲಿ ಇಂಗ್ಲಿಶ್ ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯ ಮತ್ತು ಇತರ ಕ್ಷೇತ್ರಗಳಲ್ಲಿ ಹೇಗೆ ಬಳಕೆಯಾಗುತ್ತಿತ್ತೊ ಅದಕ್ಕಿಂತಲೂ ಹೆಚ್ಚಾಗಿ ಇಂದು ಬಳಕೆಯಾಗುತ್ತಿದೆ. ಅದರಲ್ಲೂ ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣ ತುಂಬಾ ಪ್ರಭಾವಶಾಲಿಯಾಗಿ ಬೆಳವಣಿಗೆಯಾಗಿದೆ.

ರಾಜ್ಯದಲ್ಲಿ ಇಂಗ್ಲಿಶ್ ಭಾಷಾಬಳಕೆ ಮತ್ತು ಭಾಷಾಮಾಧ್ಯಮದ ಶಿಕ್ಷಣ ಹೆಚ್ಚಾಗಿರುವುದರಿಂದ ಕನ್ನಡದ ಬೆಳವಣಿಗೆಗೆ ಧಕ್ಕೆಯಾಗುತ್ತಿದೆ. ಹೀಗೆ ವ್ಯಾವಹಾರಿಕ ಉದ್ದೇಶದಿಂದ ಇಂಗ್ಲಿಶ್‌ನಂತಹ ಅನ್ಯಭಾಷಾಭಾಷಾ ಮಾಧ್ಯಮದ ಮೂಲಕ ಮಕ್ಕಳಿಗೆ ಶಿಕ್ಷಣ ಕೊಟ್ಟರೆ ಶಿಕ್ಷಣ ಹೊರೆಯಾಗುತ್ತದೆ. ಜೊತೆಗೆ ಅವರು ತಮ್ಮ ಇಡೀ ಬದುಕನ್ನು ಭಾಷೆಯನ್ನು ಕಲಿಯುವುದಕ್ಕೆ ಸವೆಸಬೇಕಾಗುತ್ತದೆ. ಉಳಿದ ವಿಚಾರಗಳನ್ನು ಕಲಿಯಲು ಅವರಿಗೆ ಸಾಧ್ಯವಾಗುವುದಿಲ್ಲ. ಜೊತೆಗೆ ಸ್ವತಂತ್ರ ಅಭಿವ್ಯಕ್ತಿ ಸಾಧ್ಯವಾಗದೆ ಅವರಲ್ಲಿರುವ ಪ್ರತಿಭೆ ನಾಶವಾಗುತ್ತದೆ. ಇದರಿಂದ ಆಡಳಿತಕ್ಕು ತೊಂದರೆಯಾಗುತ್ತದೆ. ಹೀಗಾಗಿ ಮಗುವಿನ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡವೇ ಶಿಕ್ಷಣಮಾಧ್ಯಮದ ಭಾಷೆಯಾಗಬೇಕು ಎಂದು ಹೇಳಲಾಗಿದೆ. ಇದಕ್ಕಾಗಿ ಮಾತೃಭಾಷಾ ಮಾಧ್ಯಮದ ಕಲಿಕೆಯಿಂದ ಆಗುವ ಲಾಭ ಮತ್ತು ಅನ್ಯಭಾಷಾಮಾಧ್ಯಮದ ಮೂಲಕ ಕಲಿಯುವುದರಿಂದ ಆಗುವ ನಷ್ಟವನ್ನು ಕುರಿತು ಭಾಷಾವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರು ನೀಡಿರುವ ವೈಜ್ಞಾನಿಕ ಕಾರಣಗಳನ್ನು ಉಲ್ಲೇಖಿಸಲಾಗಿದೆ. ಆದರೆ ವಿದ್ಯಾರ್ಥಿಗಳ ಕಲಿಕಾಮಾಧ್ಯಮದ ಹಿಂದಿರುವ ವೈಜ್ಞಾನಿಕ ಕಾರಣಗಳು

ಏನೇ ಆದರೂ ಈಗಾಗಲೇ ಚರ್ಚಿಸಿರುವ ಅಂಶಗಳ ಪ್ರಕಾರವಾಗಿ ಭಾಷಾಸಮುದಾಯಗಳ ನಡುವೆ ಭಿನ್ನತೆಗಳಿವೆ. ಇಲ್ಲಿ ಆಡಳಿತ, ಶಿಕ್ಷಣ, ಉದ್ಯೋಗದ ಭಾಷೆಯಾಗಿ ಬಳಕೆಯಾಗುವ ಸಾಮರ್ಥ್ಯ ಪಡೆದಿಲ್ಲದ ಸಮುದಾಯಗಳ ಜನರ ಮೇಲೆ ಇದನ್ನೇ ಪ್ರಧಾನವಾಗಿಸಿಕೊಂಡು ಇಲ್ಲಿನ ಪ್ರಬಲ ಭಾಷಾಸಮುದಾಯಗಳು ತಮ್ಮ ಅಧಿಪತ್ಯ ಸ್ಥಾಪಿಸಬಹುದು. ಆ ಮೂಲಕ ಪ್ರಬಲವಲ್ಲದ ಸಮುದಾಯಗಳ ನಾಶಕ್ಕೆ ಕಾರಣವಾಗಬಹುದು. ಪ್ರಜಾಪ್ರಭುತ್ವದಲ್ಲಿ ಇಂತಹ ಪರಿಸ್ಥಿತಿ ನಿರ್ಮಾಣವಾಗಬಾರದು. ಇಲ್ಲಿ ಎಲ್ಲಾ ಭಾಷಿಕರಿಗೂ ಸಮಾನವಾಗಿ ಬದುಕುವ, ತನ್ನ ಭಾಷೆ, ಸಾಹಿತ್ಯ, ಸಂಸ್ಕೃತಿ ಇತ್ಯಾದಿಗಳನ್ನು ರಕ್ಷಿಸಿಕೊಳ್ಳುವ ಸ್ವಾತಂತ್ರ್ಯವಿರಬೇಕು ಎಂಬ ಹಿನ್ನೆಲೆಯಲ್ಲಿ ಭಾಷಾಅಲ್ಪಸಂಖ್ಯಾತರು ತಮ್ಮ ಭಾಷೆಗಳನ್ನು ಉಳಿಸಿಕೊಳ್ಳಲು ಪೂರಕವಾದ ಅಂಶಗಳನ್ನು ಸಂವಿಧಾನದಲ್ಲಿ ಅಳವಡಿಸಲಾಗಿದೆ.



ಇದರಲ್ಲಿ "ಭಾಷಾ ಅಲ್ಪಸಂಖ್ಯಾತ ವರ್ಗಗಳಿಗೆ ಸೇರಿದ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ಹಾಗೆ ಶಿಕ್ಷಣವು ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯಲ್ಲಿ ದೊರೆಯುವುದಕ್ಕಾಗಿ ತಕ್ಕಷ್ಟು ಸೌಕರ್ಯಗಳಿರುವಂತೆ ಉಪಬಂಧವನ್ನೇರ್ಪಡಿಸಲು ಪ್ರತಿಯೊಂದು ರಾಜ್ಯವೂ ಆ ರಾಜ್ಯದಲ್ಲಿರತಕ್ಕ ಪ್ರತಿಯೊಂದು ಸ್ಥಾನೀಯ ಪ್ರಾಧಿಕಾರಿಯೂ ಪ್ರಶ್ನಿಸತಕ್ಕದ್ದು: ಮತ್ತು ಅಂತಹ ಸೌಕರ್ಯಗಳನ್ನೊದಗಿಸುವುದನ್ನು ಸುನಿಶ್ಚಿತಗೊಳಿಸುವುದಕ್ಕಾಗಿ ರಾಷ್ಟ್ರಪತಿಯು ತಾನು ಅವಶ್ಯಕವೆಂದು ಅಥವಾ ಉಚಿತವೆಂದು ಭಾವಿಸುವಂತ ನಿರ್ದೇಶನಗಳನ್ನು ಯಾವುದಾದರೂ ರಾಜ್ಯಕ್ಕೆ ನೀಡಬಹುದು"[೨೬] ಎಂಬುದು ಪ್ರಮುಖವಾಗಿದೆ. ಇದನ್ನು ಗಮನಿಸಿದಾಗ ದೇಶದಲ್ಲಿ ಆಡಳಿತ ನಡೆಸುವ ಸರ್ಕಾರಗಳು ತನ್ನ ಇಚ್ಛೆಗೆ ಬಂದ ಹಾಗೆ ಭಾಷಾನೀತಿಗಳನ್ನು ಜಾರಿಗೆ ತರುವ ಹಾಗಿಲ್ಲ. ಹಾಗೇನಾದರೂ ಆಡಳಿತ, ಶಿಕ್ಷಣ, ಉದ್ಯೋಗ ಮುಂತಾದವುಗಳ ಅನುಕೂಲಕ್ಕಾಗಿ ಭಾಷಾನೀತಿಗಳನ್ನು ಜಾರಿಗೆ ತರಬೇಕಾದರೆ ಆಗ ಭಾರತ ಸಂವಿಧಾನದ ಚೌಕಟ್ಟು, ಕೇಂದ್ರ ಸರ್ಕಾರದ ಭಾಷಾನೀತಿ, ರಾಷ್ಟ್ರಪತಿಯವರು ನೀಡುವ ನಿರ್ದೇಶನಕ್ಕೆ ಅಧೀನವಾಗಿ ಆಯಾ ರಾಜ್ಯದಲ್ಲಿರುವ ಭಾಷಾಅಲ್ಪಸಂಖ್ಯಾತರನ್ನು ಗಮನದಲ್ಲಿ ಇರಿಸಿಕೊಂಡು ಅವರ ಭಾಷೆ, ಬದುಕಿಗೆ ತೊಂದರೆಯಾಗದಂತೆ ಭಾಷಾನೀತಿಗಳನ್ನು ಜಾರಿಗೆ ತರಬೇಕು.

ಹೀಗಾಗಿ ಭಾರತ ಸ್ವತಂತ್ರಗೊಂಡ ನಂತರ ಇಲ್ಲಿ ಯಾವುದೇ ಭಾಷೆಯನ್ನು ಒತ್ತಾಯಪೂರ್ವಕವಾಗಿ ಕಲಿಸುವ ಹಾಗಿಲ್ಲ. ಇದನ್ನು ಗಮನಿಸದೆ ಒಂದು ಪ್ರದೇಶದಲ್ಲಿರುವ ಬಹುಸಂಖ್ಯಾತರನ್ನು ಅಥವಾ ಪ್ರಬಲ ಸಮುದಾಯಗಳನ್ನು ಒಲೈಸುವ ದೃಷ್ಟಿಯಿಂದ ಸರ್ಕಾರಗಳು ಪ್ರಬಲ ಸಮುದಾಯಗಳ ಪರವಾದ ಭಾಷಾನೀತಿಗಳನ್ನು ಜಾರಿಗೆ ತರುವುದು. ಅವುಗಳ ಅನುಷ್ಠಾನಕ್ಕೆ ಪೂರಕ ಪರಿಕರಗಳನ್ನು ಒದಗಿಸಿಕೊಡುವುದು. ಪ್ರಬಲವಲ್ಲದ ಸಮುದಾಯಗಳ ಭಾಷೆಗಳ ಕಲಿಸುವಿಕೆ ಮತ್ತು ಬಳಕೆಯನ್ನು ಗೌಣಮಾಡುವುದು, ಕೆಲವು ಭಾಷೆಗಳ ಕಲಿಕೆ ಮತ್ತು ಬಳಕೆಯನ್ನು ಕಡ್ಡಾಯಗೊಳಿಸುವುದು ಆ ಪ್ರದೇಶದ ಪ್ರಬಲ ಭಾಷಿಕ ಸಮುದಾಯಗಳು ಪ್ರಬಲವಲ್ಲದ ಭಾಷಿಕ ಸಮುದಾಯಗಳ ಮೇಲೆ ಅಧಿಪತ್ಯ ನಡೆಸಲು ನಿರ್ಮಾಣ ಮಾಡಿಕೊಟ್ಟ ರಹದಾರಿಯೇ ಆಗಿರುತ್ತದೆ.

ಹೀಗಿದ್ದರೂ ಪ್ರತಿಯೊಂದು ರಾಜ್ಯದಲ್ಲೂ ಆಯಾ ರಾಜ್ಯ ಅಥವಾ ಪ್ರದೇಶದಲ್ಲಿರುವ ಭಾಷೆಗಳನ್ನು ಆಡಳಿತ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ ಕಲಿಸುತ್ತಾ, ಬಳಸುತ್ತಾ ಹೋದರೆ ಒಂದು ಪ್ರದೇಶದವರ ಭಾಷೆ ಮತ್ತೊಂದು ಪ್ರದೇಶದವರಿಗೆ ಅರ್ಥವಾಗದೆ ದೇಶದ ಆಡಳಿತ ಅಸಮರ್ಪಕವಾಗಿ ಅಸ್ತವ್ಯಸ್ತವಾಗುತ್ತದೆ ಎಂಬ ಕಾರಣಕ್ಕಾಗಿ ಭಾರತ ಸ್ವತಂತ್ರಗೊಂಡ ನಂತರ ರೂಪಿಸಿಕೊಳ್ಳಲಾಗಿರುವ ಸಂವಿಧಾನದ ೩೪೩ನೇ ಅನುಚ್ಛೇದದಲ್ಲಿ '೧) ದೇವನಾಗರಿ ಲಿಪಿಯಲ್ಲಿ ಹಿಂದಿ ಒಕ್ಕೂಟದ ರಾಷ್ಟ್ರಭಾಷೆ ಆಗಿರತಕ್ಕದ್ದು, ಕೇಂದ್ರದ ಸರಕಾರೀ ಉದ್ದೇಶಗಳಿಗಾಗಿ ಉಪಯೋಗವಾಗತಕ್ಕ ಅಂಕಿಗಳ ರೂಪವು ಭಾರತೀಯ ಅಂಕಿಗಳ ಅಂತರರಾಷ್ಟ್ರೀಯ ರೂಪವಾಗಿರತಕ್ಕದ್ದು. ೨). (೧) ನೇ ಖಂಡದಲ್ಲಿ ಏನೇ ಇದ್ದರೂ, ಈ ಸಂವಿಧಾನವು ಪ್ರಾರಂಭವಾದಾಗಿನಿಂದ ೧೫ ವರ್ಷಗಳ ಕಾಲಾವಧಿಯವರೆಗೆ ಹಾಗೆ ಪ್ರಾರಂಭವಾಗುವುದಕ್ಕೆ ನಿಕಟಪೂರ್ವದಲ್ಲಿ ಒಕ್ಕೂಟದ ಯಾವ ಸರಕಾರಿ ಉದ್ದೇಶಗಳಿಗಾಗಿ ಇಂಗ್ಲೀಷ್ ಭಾಷೆಯನ್ನು ಉಪಯೋಗಿಸಲಾಗುತ್ತಿದ್ದಿತೋ ಆ ಎಲ್ಲಾ ಸರಕಾರಿ, ಉದ್ದೇಶಗಳಿಗಾಗಿ, ಎಂದಿನಂತೆ ಇಂಗ್ಲೀಷ ಭಾಷೆಯನ್ನು ಉಪಯೋಗಿಸುತ್ತಾ ಬರತಕ್ಕದ್ದು.[೨೭]' ಎಂದು ಹೇಳಿದೆ. ಹಾಗೆಯೇ ೩೪೫ನೇ ಅನುಚ್ಛೇದದಲ್ಲಿ '೩೪೬ ಮತ್ತು ೩೪೭ನೇಯ ಅನುಚ್ಛೇದಗಳ ಉಪಬಂಧಗಳಿಗೆ ಒಳಪಟ್ಟು, ಒಂದು ರಾಜ್ಯದ ವಿಧಾನಮಂಡಲವು ಕಾನೂನು ಮೂಲಕ ಆ ರಾಜ್ಯದಲ್ಲಿ ಉಪಯೋಗದಲ್ಲಿರುವ ಯಾವುದಾದರೂ ಒಂದು ಅಥವಾ ಹೆಚ್ಚು ಭಾಷೆಗಳನ್ನು ಅಥವಾ ಹಿಂದೀ ಭಾಷೆಯನ್ನು ಆ ರಾಜ್ಯದ ಎಲ್ಲಾ ಸರಕಾರಿ ಉದ್ದೇಶಗಳಿಗೆ ಅಥವಾ ಯಾವುದಾದರೂ ಸರಕಾರೀ ಉದ್ದೇಶಕ್ಕಾಗಿ ಉಪಯೋಗಿಸತಕ್ಕ ಭಾಷೆಯನ್ನಾಗಿ ಅಥವಾ ಭಾಷೆಗಳನ್ನಾಗಿ ಅಂಗೀಕರಿಸಬಹುದು.

ಪರಂತು, ಆ ರಾಜ್ಯದ ವಿಧಾನಮಂಡಲವು ಕಾನೂನು ಮೂಲಕ ಅನ್ಯಥಾ ಉಪಬಂಧವನ್ನು ಕಲ್ಪಿಸುವವರೆಗೂ ಇಂಗ್ಲೀಷ ಭಾಷೆಯನ್ನು ಆ ರಾಜ್ಯದೊಳಗೆ ಈ ಸಂವಿಧಾನವು ಪ್ರಾರಂಭವಾಗುವುದಕ್ಕೆ ನಿಕಟಪೂರ್ವದಲ್ಲಿ ಯಾವ ಸರಕಾರಿ ಉದ್ದೇಶಗಳಿಗಾಗಿ ಉಪಯೋಗಿಸಲಾಗುತ್ತಿದ್ದಿತೋ ಆ ಉದ್ದೇಶಗಳಿಗಾಗಿ ಎಂದಿನಂತೆ ಉಪಯೋಗಿಸುತ್ತಾ ಬರತಕ್ಕದ್ದು ಎಂದು ಹೇಳಿದರೆ ೩೪೭ನೇ ಅನುಚ್ಛೇದದಲ್ಲಿ 'ಒಂದು ರಾಜ್ಯದ ಜನಸಮುದಾಯದ ಪೈಕಿ ಗಣ್ಯವಾದ ಅನುಪಾತದಷ್ಟು ಜನ ಅವರು ಮಾತನಾಡತಕ್ಕ ಯಾವುದಾದರೂ ಭಾಷೆಯನ್ನು ಆ ರಾಜ್ಯದಿಂದ ಅಂಗೀಕೃತವಾಗಬೇಕೆಂದು ಅಪೇಕ್ಷಿಸುತ್ತಾರೆಂದು ತತ್ಸಬಂಧವಾಗಿ ಕೋರಿಕೆಯನ್ನು ಮಾಡಿಕೊಂಡಿದ್ದರೆ ಮೇಲೆ ರಾಷ್ಟ್ರಪತಿಗೆ ಮನವರಿಕೆಯಾದರೆ, ರಾಷ್ಟ್ರಪತಿಯು, ಆ ಭಾಷೆಯೂ ಸಹಾ ಅವನು ನಿರ್ದೇಶಿಸಬಹುದಾದಂಥ ಉದ್ದೇಶಕ್ಕಾಗಿ, ಆ ರಾಜ್ಯದಲ್ಲೆಲ್ಲಾ ಅಥವಾ ಆ ರಾಜ್ಯದ ಯಾವುದಾದರೂ ಭಾಗದಲ್ಲಿ ರಾಜ್ಯಭಾಷೆಯಾಗಿ ಅಂಗೀಕೃತವಾಗತಕ್ಕದೆಂದು ನಿರ್ದೇಶಿಸಬಹುದು[೨೮] ಎಂದು ಹೇಳಿದೆ.

ಈ ಅಂಶಗಳನ್ನು ಗಮನಿಸಿದಾಗ ಸಂವಿಧಾನ ರಚನೆಯಾದ ನಂತರ ಭಾರತದ ಆಡಳಿತದಲ್ಲಿ ಬಳಕೆಯಾಗಬೇಕಾದ ಭಾಷೆಗೆ ಸಂಬಂಧಿಸಿದಂತೆ ಸಂವಿಧಾನದ ೩೪೩ನೇ ಅನುಚ್ಛೇದದಲ್ಲಿ ದೇವನಾಗರಿ ಲಿಪಿಯ ಹಿಂದಿ ಭಾಷೆಯನ್ನು ರಾಷ್ಟ್ರಭಾಷೆಯೆಂದು ಘೋಷಣೆ ಮಾಡಿ ಇಂಗ್ಲಿಶ್‌ಗೆ

ಪರ್ಯಾಯವಾಗಿ ಹಿಂದಿಯನ್ನು ಬಳಕೆಗೆ ತರುವ ಪ್ರಯತ್ನ ಮಾಡಿ ಸಂವಿಧಾನ ಅಂಗೀಕೃತವಾದ ನಂತರ ೧೫ ವರ್ಷಗಳ ವೆರೆಗೆ ಇಂಗ್ಲಿಶ್ ಬಳಕೆಯ ಮುಂದುವರಿಕೆಗೆ ಅವಕಾಶ ಕಲ್ಪಿಸಿಕೊಡಲಾಗಿದೆ. ಇದರ ಉದ್ದೇಶ ಸ್ವತಂತ್ರ ಭಾರತದ ಆಡಳಿತದಲ್ಲಿ ಇಂಗ್ಲಿಶ್‌ನ್ನು ಮುಂದುವರೆಸುವುದಲ್ಲ. ಬದಲಾಗಿ ಹಿಂದಿಯನ್ನು ದೇಶದ ಆಡಳಿತದಲ್ಲಿ ಬಳಸಲು ಸಂವಿಧಾನ ಅಂಗೀಕೃತವಾದಾಗ ಸಿದ್ಧತೆ ಮಾಡಿಕೊಳ್ಳದೇ ಇದ್ದುದ್ದು. ಏಕೆಂದರೆ ಯಾವುದೇ ಒಂದು ಭಾಷೆಯನ್ನು ಹೊಸದಾಗಿ ಆ ಪ್ರದೇಶದ ಆಡಳಿತ ಭಾಷೆಯಾಗಿ ಬಳಕೆಗೆ ತರಬೇಕಾದರೆ ಅದಕ್ಕೆ ಹಲವು ಸಿದ್ಧತೆಗಳ ಅಗತ್ಯವಿರುತ್ತದೆ. ಸಿದ್ಧತೆಗಳಿಲ್ಲದೆ ಯಾವ ಭಾಷೆಯನ್ನು ಆಡಳಿತ ಭಾಷೆಯಾಗಿ ಜಾರಿಗೆ ತರಲು ಸಾಧ್ಯವಿಲ್ಲ. ಹಾಗೇನಾದರೂ ಸಿದ್ಧತೆಯಿಲ್ಲದೆ ಒಂದು ಭಾಷೆಯನ್ನು ಆಡಳಿತ ಭಾಷೆಯಾಗಿ ಜಾರಿಗೆ ತರುವ ಪ್ರಯತ್ನ ಮಾಡಿದರೆ ಅದರಿಂದ ಹಲವು ತಾಂತ್ರಿಕ ಸಮಸ್ಯೆಗಳು ಉದ್ಭವಿಸುತ್ತವೆ. ಹೀಗಾಗಿ ಭಾರತ ಸ್ವತಂತ್ರಗೊಂಡು ಸಂವಿಧಾನ ಅಂಗೀಕರಿಸಿದ ತಕ್ಷಣದಿಂದಲೇ ಹಿಂದಿಯನ್ನು ಭಾರತದ ಆಡಳಿತ ಭಾಷೆಯಾಗಿ ಬಳಕೆಗೆ ತರಲಿಲ್ಲ. ಬದಲಾಗಿ ಭಾರತ ಸಂವಿಧಾನ ಅಂಗೀಕರಿಸಿದ ನಂತರದಲ್ಲಿಯೂ ೧೫ ವರ್ಷಗಳವರೆಗೆ ಸಂವಿಧಾನವನ್ನು ಅಂಗೀಕರಿಸುವ ಪೂರ್ವದಲ್ಲಿ ಒಕ್ಕೂಟದ ಯಾವ ಸರಕಾರಿ ಉದ್ದೇಶಗಳಿಗಾಗಿ ಇಂಗ್ಲಿಶ್ ಭಾಷೆಯನ್ನು ಉಪಯೋಗಿಸಲಾಗುತ್ತಿದ್ದಿತೋ ಆ ಎಲ್ಲಾ ಉದ್ದೇಶಗಳಿಗಾಗಿ ಇಂಗ್ಲಿಶ್ ಭಾಷೆಯನ್ನು ಮುಂದುವರೆಸಲು ಅವಕಾಶವನ್ನು ಕಲ್ಪಿಸಲಾಗಿದೆ.

ಇದೇ ರೀತಿ ರಾಜ್ಯಗಳಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೂ ಸಂವಿಧಾನದ ೩೪೫ನೇ ಅನುಚ್ಛೇದದಲ್ಲಿ ರಾಜ್ಯಗಳು ಒಂದು ಅಥವಾ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ರಾಜ್ಯಭಾಷೆಗಳೆಂದು ಘೋಷಣೆ ಮಾಡಿಕೊಂಡು ಅವುಗಳನ್ನು ಆಡಳಿತದಲ್ಲಿ ಬಳಸಬಹುದು ಎಂದು ಹೇಳಲಾಗಿದೆ. ಆ ಪ್ರಕಾರ ಕರ್ನಾಟಕದಲ್ಲಿ ಈಗಾಗಲೇ ಉಲ್ಲೇಖಿಸಿರುವ ಹಾಗೆ ೧೯೬೩ರಲ್ಲಿ 'ಕರ್ನಾಟಕ ರಾಜಭಾಷಾ ಅಧಿನಿಯಮವನ್ನು' ಜಾರಿಗೆ ತರಲಾಗಿದೆ. ಆದರೆ ಕೇಂದ್ರದ ಆಡಳಿತದಲ್ಲಿ ಹಿಂದಿಯನ್ನು ಬಳಕೆಗೆ ತರಲು ಪ್ರಯತ್ನಿಸಿದಾಗ ಎದುರಾದ ಸಮಸ್ಯೆಗಳು ಕರ್ನಾಟಕದಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಕೆಗೆ ತರಲು ಪ್ರಯತ್ನಿಸಿರುವಾಗಲು ಕಾಣಿಸಿಕೊಂಡಿವೆ. ಹೀಗಾಗಿ ಕರ್ನಾಟಕ ಸರ್ಕಾರ ಕರ್ನಾಟಕ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತರುವ ಪೂರ್ವದಲ್ಲಿಯೇ ಈ ಸಿದ್ಧತೆಗಳನ್ನು ಮಾಡಿಕೊಳ್ಳುವ ಅಗತ್ಯ ಇತ್ತು. ಆದರೆ ಕರ್ನಾಟಕ ಸರ್ಕಾರ ಇದಕ್ಕೆ ಸಿದ್ಧತೆ ಮಾಡಿಕೊಂಡಿರಲಿಲ್ಲ. ಇದರ ಜೊತೆಗೆ ರಾಜ್ಯಸರ್ಕಾರ ಕೇಂದ್ರದ ಜೊತೆ ವ್ಯವಹರಿಸುವಾಗ ಕೇಂದ್ರಸರ್ಕಾರದ ಭಾಷಾನೀತಿಯಂತೆ ಇಂಗ್ಲಿಶ್ ಇಲ್ಲವೆ ಹಿಂದಿಯಲ್ಲಿ ವ್ಯವಹರಿಸಬೇಕಿತ್ತು. ಇದರಿಂದಾಗಿ ೧೯೬೩ರಲ್ಲಿ ಕರ್ನಾಟಕ ರಾಜಭಾಷ ಅಧಿನಿಯಮದ ೫ನೇ ಪ್ರಕರಣದ ಒಂದನೇ ಕಂಡಿಕೆಯಲ್ಲಿ ಸಂವಿಧಾನವು ಪ್ರಾರಂಭವಾದಂದಿನಿಂದ ಹದಿನೈದು ವರ್ಷಗಳ ಅವಧಿ ಗತಿಸಿದರೂ, ೧೯೬೫ರ ಜನವರಿ ೨೬ನೇ ದಿನಾಂಕದಿಂದ ರಾಜ್ಯದ ವಿಧಾನಮಂಡಲದ ವ್ಯವಹಾರ ನಿರ್ವಹಣೆಗಾಗಿ ಕನ್ನಡ ಮತ್ತು ಹಿಂದಿಯ ಜೊತೆಗೆ ಇಂಗ್ಲಿಶ್ ಭಾಷೆಯ ಉಪಯೋಗವನ್ನು ಮುಂದುವರಿಸಬಹುದು ಎಂದು ಹೇಳಲಾಗಿದೆ. ಇದರಿಂದಾಗಿ ಕರ್ನಾಟಕ ಏಕೀಕರಣಗೊಂಡ ನಂತರ ಆಡಳಿತದಲ್ಲಿ ಪ್ರಾದೇಶಿಕ ಭಾಷೆಯಾಗಿ ಕನ್ನಡ

ಹಾಗೂ ಕೇಂದ್ರ ಮತ್ತು ಇತರ ರಾಜ್ಯಗಳ ನಡುವಿನ ವ್ಯವಹಾರದ ಭಾಷೆಯಾಗಿ ಹಿಂದಿ ಇಲ್ಲವೆ ಇಂಗ್ಲಿಶ್‌ನ್ನು ಬಳಸುವುದು ಅನಿವಾರ್ಯವಾಗಿದೆ. ಇದರಿಂದ ಹಲವು ಸಮಸ್ಯೆಗಳು ಉದ್ಭವವಾಗಿವೆ. ಈ ಸಮಸ್ಯೆಗಳ ಸ್ವರೂಪ ಭಾಷೆಯಿಂದ ಭಾಷೆಗೆ ಭಿನ್ನವಾಗಿವೆ. ಇವುಗಳನ್ನು 'ಆಡಳಿತ ಮತ್ತು ಭಾಷೆ' ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಇದುವರೆಗೆ ಚರ್ಚಿತವಾದ ಅಂಶಗಳನ್ನು ಗಮನಿಸಿದರೆ ಭಾರತ ಸ್ವತಂತ್ರಗೊಂಡು ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರ ಕೆಲವು ಭಾಷೆಗಳನ್ನು ಅಧಿಕೃತಗೊಳಿಸಿ, ಮತ್ತೆ ಕೆಲವು ಭಾಷೆಗಳನ್ನು ಅಧಿಕೃತಗೊಳಿಸದೇ ಇರುವುದು ಸ್ಪಷ್ಟವಾಗುತ್ತದೆ. ಇದು ಮೇಲ್ನೋಟಕ್ಕೆ ಅಥವಾ ಕೆಲವು ಭಾಷೆಗಳನ್ನು ಅಧಿಕೃತಗೊಳಿಸಿರುವುದಕ್ಕೆ ಕೊಟ್ಟಿರುವ ಕಾರಣಗಳನ್ನು ಗಮನಿಸಿದಾಗ ದೇಶದಲ್ಲಿನ ಕೆಲವು ಭಾಷೆಗಳಿಗೆ ಹೆಚ್ಚು ಪ್ರಾತಿನಿಧ್ಯ ಕೊಡುವುದು, ಮತ್ತೆ ಕೆಲವು ಭಾಷೆಗಳಿಗೆ ಕಡಿಮೆ ಪ್ರಾತಿನಿಧ್ಯ ಕೊಡುವ ಉದ್ದೇಶ ಇಲ್ಲದಿರುವಂತೆ ಕಂಡರೂ ಆಂತರ್ಯದಲ್ಲಿ ಕೆಲವು ಭಾಷೆಗಳಿಗೆ ಹೆಚ್ಚಿನ ಪ್ರಾತಿನಿಧ್ಯ ಕೊಟ್ಟು ಅವುಗಳ ಬಳಕೆಯ ವ್ಯಾಪ್ತಿ ವಿಸ್ತರಿಸಿರುವುದು, ಮತ್ತೆ ಕೆಲವು ಭಾಷೆಗಳಿಗೆ ಪ್ರಾತಿನಿಧ್ಯ ಕೊಡದೆ ಕಡೆಗಣಿಸಲ್ಪಟ್ಟಿರುವುದು ವಾಸ್ತವವೇ ಆಗಿದೆ. ಇದರಿಂದಾಗಿ ಭಾರತ ಸ್ವತಂತ್ರಗೊಂಡು ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರದಿಂದ ವಿದ್ಯಾರ್ಥಿಗಳಿಗೆ ಮಾತೃಭಾಷೆ, ಪ್ರಾದೇಶಿಕ ಭಾಷೆ, ರಾಜ್ಯಭಾಷೆ, ರಾಷ್ಟ್ರಭಾಷೆ, ಅಂತರಾಷ್ಟ್ರೀಯ ಭಾಷೆ, ಉದ್ಯೋಗದ ಭಾಷೆ ಹೀಗೆ ಬೇರೆ ಬೇರೆ ಹೆಸರುಗಳಲ್ಲಿ ಹಲವು ಭಾಷೆಗಳನ್ನು ಕಲಿಸಲಾಗುತ್ತಿದೆ. ಇದಕ್ಕಾಗಿ ತ್ರಿಭಾಷಾಸೂತ್ರವನ್ನು ಜಾರಿಗೆ ತರಲಾಗಿದೆ. ಈ ಪ್ರಕಾರ ಕರ್ನಾಟಕದಲ್ಲಿ ಶಿಕ್ಷಣ ಕಲಿತಿರುವ ಮಕ್ಕಳಿಗೂ ಹಲವು ಭಾಷೆಗಳನ್ನು ಕಲಿಸಲಾಗಿದೆ. ಈ ಭಾಷಾಕಲಿಸುವಿಕೆ ಕಲಿಕಾ ಹಂತಗಳನ್ನು ಆಧರಿಸಿ ಕಾಲಕಾಲಕ್ಕೆ ಬದಲಾಗುವಂತೆ ಕಾಲದ ಅಗತ್ಯಕ್ಕೆ ಅನುಗುಣವಾಗಿ ಭಾಷಾನೀತಿಗಳನ್ನು ಬದಲಾಯಿಸುವ ಮೂಲಕ ಭಾಷೆಗಳನ್ನು ಕಲಿಸಲಾಗಿದೆ.

ಹೀಗೆ ಭಾಷಾನೀತಿಗಳನ್ನು ಬದಲಾವಣೆ ಮಾಡಿ ಹಲವು ಭಾಷೆಗಳನ್ನು ಕಲಿಸುವ ಉದ್ದೇಶ ಬೇರೆಬೇರೆಯೇ ಆಗಿದೆ. ಇದರಲ್ಲಿ ಪ್ರಧಾನವಾಗಿ ಮಗುವಿಗೆ ಮಾತೃಭಾಷೆಯನ್ನು ಕಲಿಸುವಾಗ ಆ ಮಗುವಿನ ಭಾಷೆ, ಸಾಹಿತ್ಯ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪ, ಸಂಗೀತ, ವಿಜ್ಞಾನ. ಸಂಪ್ರದಾಯ, ನಂಬಿಕೆ, ಆಚರಣೆ, ವಿಧಿವಿಧಾನ ಮುಂತಾದವುಗಳ ಪರಿಚಯವನ್ನು ಮಾಡಿಕೊಡುವ ಉದ್ದೇಶ ಹೊಂದಲಾಗಿದ್ದರೆ ಪ್ರಾದೇಶಿಕ ಭಾಷೆ, ರಾಜ್ಯಭಾಷೆ, ರಾಷ್ಟ್ರಭಾಷೆ, ಅಂತರಾಷ್ಟ್ರೀಯ ಭಾಷೆ, ಉದ್ಯೋಗದ ಭಾಷೆಯ ಹೆಸರಿನಲ್ಲಿ ಭಾಷೆಗಳನ್ನು ಕಲಿಸುವಾಗ ವ್ಯಾವಹಾರಿಕ ಉದ್ದೇಶವಿದೆ. ಇಲ್ಲಿ ಸಂವಿಧಾನದ ಪ್ರಕಾರ ಯಾವ ಭಾಷೆಯು ಶ್ರೇಷ್ಟವಲ್ಲ ಯಾವ ಭಾಷೆಯೂ ಕನಿಷ್ಟವಲ್ಲ. ಎಲ್ಲಾ ಭಾಷೆಗಳೂ ಸಮಾನ. ಆದರೆ ಆಡಳಿತ, ಶಿಕ್ಷಣ, ಉದ್ಯೋಗ ಇತ್ಯಾದಿಗಳಿಗೆ ಅನುಕೂಲ ಮಾಡಿಕೊಳ್ಳುವ ಉದ್ದೇಶದಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಸಂವಿಧಾನ ನೀಡಿರುವ ಅಧಿಕಾರ ಬಳಸಿಕೊಂಡು ಆಯಾ ರಾಜ್ಯಗಳಲ್ಲಿರುವ ಬಹುಸಂಖ್ಯಾತ ಭಾಷಾಸಮುದಾಯಗಳು ತಮ್ಮ ಭಾಷೆಯನ್ನು ಪ್ರಬಲಗೊಳಿಸುವ ನಿಟ್ಟಿನಲ್ಲಿ ತಮ್ಮ ಭಾಷೆಯನ್ನೇ ಆಡಳಿತ ಭಾಷೆಯಾಗಿ, ಶಿಕ್ಷಣದ

ಭಾಷೆಯಾಗಿ, ಉದ್ಯೋಗದ ಭಾಷೆಯಾಗಿ ಬಳಕೆಗೆ ತರಬೇಕು ಎಂದು ಆಯಾ ರಾಜ್ಯಗಳಲ್ಲಿ ಆಡಳಿತ ನಡೆಸಿರುವ ಸರ್ಕಾರಗಳ ಮೇಲೆ ಒತ್ತಡ ಉಂಟುಮಾಡಿವೆ. ಅಂದರೆ ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ದೇಶದಲ್ಲಿ ಭಾಷೆಯ ಆಧಾರದಲ್ಲಿ ರಾಜ್ಯಗಳು ರಚನೆಯಾಗಿರುವುದರಿಂದ, ಯಾವ ಭಾಷೆಯ ಆಧಾರದಲ್ಲಿ ರಾಜ್ಯ ರಚನೆಯಾಗಿದೆಯೋ ಆ ಭಾಷೆಯ ಜನರು ತಮ್ಮ ಭಾಷೆಯನ್ನೇ ರಾಜ್ಯದ ಅಧಿಕೃತ ಆಡಳಿತ ಭಾಷೆಯಾಗಿ ಘೋಷಿಸಬೇಕು. ಅದಕ್ಕೆ ಪೂರಕವಾಗಿ ಶಿಕ್ಷಣದಲ್ಲಿ ಭಾಷೆಯನ್ನು ಕಲಿಸುವುದಕ್ಕೆ, ಉದ್ಯೋಗಗಳಿಗೆ ನೇಮಕವಾಗುವುದಕ್ಕೆ ಭಾಷಾನೀತಿಗಳನ್ನು ಜಾರಿಗೆ ತರಬೇಕು ಎಂಬುದು ಆಯಾ ರಾಜ್ಯಗಳ ಬಹುಸಂಖ್ಯಾತರ ಒತ್ತಾಯವಾಗಿದೆ.

ಇಂತಹ ಒತ್ತಾಯಗಳಲ್ಲಿ ಕರ್ನಾಟಕದಲ್ಲಿನ ಕನ್ನಡಿಗರ ಒತ್ತಾಯವು ಸೇರಿದೆ. ಏಕೆಂದರೆ ಈಗಾಗಲೇ ಚರ್ಚಿಸಿರುವ ಹಾಗೆ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಇಲ್ಲಿ ಕರ್ನಾಟಕದ ಆಡಳಿತ, ಶಿಕ್ಷಣದ, ನ್ಯಾಯಾಲಯ, ಉದ್ಯೋಗ ಸೇರಿದಂತೆ ಎಲ್ಲಾ ಕಡೆ ಕನ್ನಡವೇ ಬಳಕೆಯಾಗಬೇಕು. ಇದಕ್ಕೆ ಸರ್ಕಾರ ನಿಯಮಗಳನ್ನು ರೂಪಿಸಬೇಕು ಎಂದು ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರು ಏಕೀಕರಣದ ನಂತರ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳ ಮೇಲೆ ಒತ್ತಡ ಉಂಟುಮಾಡಿದ್ದಾರೆ. ಆದರೆ ಇದುವರೆಗೆ ಚರ್ಚಿಸಿರುವ ಅಂಶಗಳಿಂದಾಗಿ ಸ್ವತಂತ್ರ ಭಾರತದಲ್ಲಿ ಯಾವುದೇ ರಾಜ್ಯ ಏಕೈಕ ಭಾಷೆಯನ್ನು ರಾಜ್ಯದಾದ್ಯಂತ ಕಡ್ಡಾಯವಾಗಿ ಬಳಕೆಗೆ ಬರುವಂತೆ ಅಧಿಕೃತವಾಗಿ ಆದೇಶಿಸಲು ಸಾಧ್ಯವಿಲ್ಲ. ಇದನ್ನು ಮೀರಿ ರಾಜ್ಯಗಳಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಬಹುಸಂಖ್ಯಾತರ ಒತ್ತಡಕ್ಕೆ ಮಣಿದು ಏಕಭಾಷೆಯನ್ನು ಕಡ್ಡಾಯ ಆಡಳಿತ, ಶಿಕ್ಷಣದ ಭಾಷೆಯಾಗಿಸಿದರೆ, ಇದು ಅಲ್ಲಿನ ಇತರ ಭಾಷಿಕರ ಮೇಲೆ ತನ್ನ ಅಧಿಪತ್ಯ ಸ್ಥಾಪಿಸಲು ನಡೆಸಿದ ಯತ್ನವೇ ಆಗುತ್ತದೆ. ಹೀಗಾಗಿ ಕರ್ನಾಟಕದಲ್ಲಿ ಕನ್ನಡವನ್ನು ಏಕೈಕ ಕಡ್ಡಾಯ ಆಡಳಿತ, ಶಿಕ್ಷಣದ ಭಾಷೆಯಾಗಿಸುವ ಸರ್ಕಾರದ ಪ್ರಯತ್ನಕ್ಕೆ ವಿರೋಧಗಳು ವ್ಯಕ್ತವಾಗಿವೆ.

ಏಕೆಂದರೆ ಕರ್ನಾಟಕ ಏಕೀಕರಣವಾದ ನಂತರ 'ಭೌಗೋಳಿಕವಾಗಿ ತಮಿಳು, ತೆಲುಗು, ಮರಾಠಿ, ಮಲಯಾಳಂ, ಕೊಂಕಣಿ, ಭಾಷೆಗಳನ್ನಾಡುವ ಜನತೆಯ ಜೊತೆ ತೆರೆದುಕೊಂಡಿದೆ. ಅಲ್ಲದೆ ಈಗಾಗಲೇ ಹೇಳಿದಂತೆ ಹಿಂದಿ, ಉರ್ದು, ಪಂಜಾಬಿ, ಕಾಶ್ಮೀರಿ ಮುಂತಾದ ರಾಜ್ಯಾಂಗದ ಮಾನ್ಯತೆ ಪಡೆದ ಭಾಷೆಗಳನ್ನಾಡುವ ಜನರು ಬಹುಕಾಲದಿಂದಲೂ ಇಲ್ಲಿ ವಾಸಿಸುತ್ತಿದ್ದಾರೆ. ತುಳು, ಕೊಡವ ಮುಂತಾದ ಈ ಭೌಗೋಳಿಕ ಪ್ರದೇಶಕ್ಕೆ ಸೀಮಿತವಾದ ಭಾಷೆಗಳನ್ನಾಡುವ ಜನರು ಇಲ್ಲಿದ್ದಾರೆ'. ಇವರುಗಳ ನಡುವೆಯೇ ಕರ್ನಾಟಕ ಏಕೀಕರಣವಾದ ನಂತರ ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರು ಆಡಳಿತಾತ್ಮಕವಾಗಿ, ಭೌಗೋಳಿಕವಾಗಿ ಅಪೂರ್ಣವಾಗಿ (ಭಾಷಾವಾರು ರಾಜ್ಯವಿಂಗಡಣೆಯ ಸಂದರ್ಭದಲ್ಲಿ ಕನ್ನಡಿಗರು ವಾಸಿಸುವ ಕರ್ನಾಟಕದ ಗಡಿಭಾಗದಲ್ಲಿರುವ ಹಲವು ಪ್ರದೇಶಗಳು ಬೇರೆ ರಾಜ್ಯಗಳ ಜೊತೆಯಲ್ಲಿಯೂ, ಹಾಗೆಯೇ ಬೇರೆ ಭಾಷೆಗಳನ್ನಾಡುವ ಜನರು ಕರ್ನಾಟಕ ರಾಜ್ಯದಲ್ಲಿ ವಿಲೀನವಾಗಿರುವುದರಿಂದ) ಒಂದುಗೂಡಿದ್ದಾರೆ. ಇದರಲ್ಲಿ ತೆಲಗು, ತಮಿಳು, ಮರಾಠಿ, ಮಲಯಾಳಂ ಭಾಷೆಗಳು ಕ್ರಮವಾಗಿ ಆಂಧ್ರಪ್ರದೇಶ (ಇಂದಿನ ತೆಲಂಗಾಣ ಮತ್ತು

ಸೀಮಾಂಧ್ರ), ತಮಿಳುನಾಡು, ಮಹಾರಾಷ್ಟ್ರ ಮತ್ತು ಕೇರಳ ರಾಜ್ಯಗಳ ರಾಜ್ಯಭಾಷೆಗಳಾಗಿವೆ. ಇನ್ನು ಕೊಂಕಣಿ, ತುಳು, ಕೊಡವ, ಕೊರಗ, ಲಂಬಾಣಿ, ಸೋಲಿಗ, ಮುಂತಾದ ಭಾಷೆಗಳನ್ನಾಡುವ ಜನರು ಬಹಳ ಹಿಂದಿನಿಂದಲೂ ಕರ್ನಾಟಕದ ಮಣ್ಣಿನಲ್ಲಿಯೇ ತಮ್ಮ ವಿಶೇಷತೆಗಳನ್ನು ರೂಪಿಸಿಕೊಂಡಿದ್ದರೂ ಕರ್ನಾಟಕ ಏಕೀಕರಣವಾದ ನಂತರ ಕರ್ನಾಟಕದಲ್ಲಿ ಭಾಷಿಕ ಅಲ್ಪಸಂಖ್ಯಾತರಾಗಿದ್ದಾರೆ. ಇಂತಹ ಸಂದರ್ಭದಲ್ಲಿ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಹೀಗಾಗಿ ಇಲ್ಲಿನ ಎಲ್ಲಾ ವ್ಯವಹಾರ ಕನ್ನಡದಲ್ಲಿಯೇ ನಡೆಯಬೇಕು. ಇಲ್ಲಿ ಕನ್ನಡವೇ ಪ್ರಥಮ, ಪ್ರಧಾನ ಮಿಕ್ಕೆಲ್ಲವು ನಂತರದ ಸ್ಥಾನ ಪಡೆಯಬೇಕು ಎಂದು ಹೇಳುವುದು ಕರ್ನಾಟಕದಲ್ಲಿನ ಇತರ ಭಾಷಾಸಮುದಾಯಗಳ ಮೇಲೆ ಕನ್ನಡ ಭಾಷಾಸಮುದಾಯವು ತನ್ನ ಅಧಿಪತ್ಯ ಸ್ಥಾಪಿಸಲು ನಡೆಸಿದ ಯತ್ನವಾಗಿದೆ.

ಇದರಿಂದಾಗಿ ಭಾಷಾವಾರು ಪ್ರಾಂತ್ಯ ರಚನೆಯ ಮೊದಲ ಹಂತದಲ್ಲಿ ನಿರೀಕ್ಷಿಸಲು ಸಾಧ್ಯವಾಗದಿದ್ದ ಕೆಲವು ವೈರುಧ್ಯಗಳು ಈಗ ಈ ಭಾಷೆಗಳ ನಡುವಣ ಸಂಬಂಧದಲ್ಲಿ ಮುಂಚೂಣಿಗೆ ಬರತೊಡಗಿವೆ. ಒಂದೇ ಪ್ರಾಂತ್ಯದಲ್ಲಿ ಆ ಪ್ರಾಂತ್ಯ ಭಾಷೆಯು ಅಲ್ಲಿಯ ಜನಸಮುದಾಯದ ಇತರ ಭಾಷೆಗಳಿಗೆ ಯಜಮಾನ ಭಾಷೆಯಾಗಿ ಸ್ಥಾಪಿತವಾಗಿರುವುದೇ ಈ ವೈರುಧ್ಯ. ಕರ್ನಾಟಕದಲ್ಲಿ ಕನ್ನಡ ಈ ಪಾತ್ರವನ್ನು ನಿರ್ವಹಿಸುತ್ತಿದೆ. ತುಳು, ಕೊಡಗು, ಕೊಂಕಣಿ, ಕೊರಗ, ಲಂಬಾಣಿ ಮೊದಲಾದ ಭಾಷೆಗಳು ಕನ್ನಡದ ಯಾಜಮಾನ್ಯವನ್ನು ಅನುಭವಿಸತೊಡಗಿವೆ. ತಮ್ಮ ಪ್ರತ್ಯೇಕ ಅಸ್ತಿತ್ವಕ್ಕಾಗಿ ಭಾಷಾಸಮುದಾಯಗಳು ಹೋರಾಟದ ಹಾದಿಯನ್ನು ತುಳಿದಿವೆ. ಶಿಕ್ಷಣ, ಆಡಳಿತ, ಸಮೂಹ ಮಾಧ್ಯಮಗಳಲ್ಲಿ ಕನ್ನಡದ ಜೊತೆಗೆ ಭಾಷೆಗಳು ತಮ್ಮ ಇರುವಿಕೆಗಾಗಿ ಹುಡುಕಾಟ ನಡೆಸಬೇಕಾಗಿದೆ. ಮಾತೃಭಾಷೆಯಲ್ಲಿ ಶಿಕ್ಷಣವನ್ನು ಪಡೆಯುವುದು ಎಲ್ಲ ರೀತಿಯಲ್ಲೂ ವಿದ್ಯಾರ್ಥಿಗಳಿಗೆ ಆರೋಗ್ಯಕರ ಎಂಬ ತತ್ವವನ್ನು ಕನ್ನಡದ ಮಟ್ಟಿಗೆ ಪಾಲಿಸಲು ಸಿದ್ಧವಿದ್ದೇವಾದರೂ ಅಲ್ಪಸಂಖ್ಯಾತ ಭಾಷೆಗಳ ವಿಷಯದಲ್ಲಿ ಈ ತರ್ಕವನ್ನು ಒಪ್ಪಲು ನಾವು ಸಿದ್ಧರಿರುವುದಿಲ್ಲ.[೩೦] ಹೀಗೆ ಏಕೀಕರಣ ನಂತರದ ಕರ್ನಾಟಕದಲ್ಲಿ ಕನ್ನಡವನ್ನು ಪ್ರಬಲಗೊಳಿಸಲು ಮಾಡಿರುವ ಪ್ರಯತ್ನಗಳಿಂದಾಗಿ ಭಾಷಾಅಲ್ಪಸಂಖ್ಯಾತರು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದಾರೆ. ಇದರಿಂದ ಹೊರಬರಲು ಈ ಸಮುದಾಯಗಳ ಮುಂದಿನ ದಿನಗಳಲ್ಲಿ ಹೋರಾಟದ ಹಾದಿಯನ್ನು ತೀವ್ರಗೊಳಿಸುತ್ತವೆ. ಇದರಿಂದ ಮುಂಬರುವ ದಶಕಗಳು ಪ್ರಾಂತಿಯ ಭಾಷೆಯಾಗಿ ಕನ್ನಡ ಈ ಅಧೀನ ಭಾಷೆಗಳ ಹಕ್ಕೋತ್ತಾಯಗಳನ್ನು ಈಡೇರಿಸಲು ಯಾವ ಪ್ರಯತ್ನಗಳನ್ನು ಕೈಗೊಳ್ಳಬೇಕು? ಎಂಬುದನ್ನು ಯೋಚಿಸಬೇಕಾಗುತ್ತದೆ. ಕನ್ನಡದಂತಹ "ಒಳಗೊಳ್ಳುವ" ವಿಧಾನವನ್ನು ಭಾಷೆಗಳು ಪಾಲಿಸುವುದು ಅನಿವಾರ್ಯ. ಹತ್ತಿಕ್ಕುವ "ಹೊರಗಿಡುವ" ವಿಧಾನವನ್ನು ಅನುಸರಿಸಿದರೆ ಈ ಭಾಷೆಗಳು ತೀವ್ರ ಕನ್ನಡವಿರೋಧವನ್ನು ಪಾಲಿಸಿದರೆ ಅಚ್ಚರಿಯಿಲ್ಲ. ಕನ್ನಡವನ್ನು ಎಚ್ಚರಿಕೆಯಿಂದ ಯೋಜಿಸಿದರೆ ಮಾತ್ರ ಅದರ ವ್ಯಾಪಕ ಬಳಕೆಗೆ ಅವಕಾಶಗಳು ದೊರಕುತ್ತವೆ. ಇಲ್ಲದಿದ್ದರೆ ಕನ್ನಡ ತನ್ನ ಅಸ್ತಿತ್ವಕ್ಕಾಗಿ

ಹೋರಾಟ ಮುಂದುವರೆಸುವಾಗ ಇನ್ನಷ್ಟು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ[೩೧] ಎಂದಿದ್ದಾರೆ ಪ್ರಸಿದ್ಧ ಭಾಷಾವಿದ್ವಾಂಸರಾದ ಕೆ.ವಿ.ನಾರಾಯಣರವರು.

ಆದ್ದರಿಂದಲೇ ಇರಬೇಕು ಇಂದು ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಶ್ರೇಣೀಕರಣವನ್ನು ಇರುವಂತೆಯೇ ಉಳಿಸಿಕೊಳ್ಳುವುದಕ್ಕಾಗಿಯೇ ಭಾಷಾ ಶಿಕ್ಷಣವನ್ನು ಉಪಯೋಗಿಸಿಕೊಳ್ಳಲಾಗುತ್ತಿರುವುದರಿಂದ, ಸಮಾಜದಲ್ಲಿರುವ "ಶಕ್ತಿ ಸಮೀಕರಣ"ವು ವ್ಯತ್ಯಾಸ ವೊಂದಿದಾಗ ಮಾತ್ರ ಭಾಷಾ ಶಿಕ್ಷಣವು ಬದುಕಿನಲ್ಲಿ ಬದಲಾವಣೆಯನ್ನು ತರಬಹುದು. ಆದರೆ ನಮ್ಮೆದುರು ಇರುವ ಕೆಲವು ಉದಾಹರಣೆಗಳಿಂದ ದುರ್ಬಲ ಅಲ್ಪಸಂಖ್ಯಾತರು ಪ್ರತಿಶ್ರೇಣೀಕರಣವನ್ನು ಸಾಧಿಸಲು ಭಾಷಾ ಶಿಕ್ಷಣವನ್ನು ಬಳಸಿಕೊಳ್ಳಬಹುದು ಎಂದು ತಿಳಿದಿದೆ. ಆದರೆ ಭಾಷೆಯ ಪುನರುಜ್ಜೀವನ ಸಂದರ್ಭದಲ್ಲಿ ಸಹನೆಯನ್ನು ತೋರುವುದು ಭಾಷೆಯ ಉಳಿವಿಗೆ ಸಹಾಯ ಘೋಷಿಸುವುದು, ಇತ್ಯಾದಿ ಕ್ರಿಯೆಗಳು, ಪ್ರಧಾನವರ್ಗಗಳು ತಮ್ಮ ಹಿತವನ್ನು ಕಾಯ್ದುಕೊಳ್ಳಲು ಬಳಸುತ್ತಿರುವ ಅತಿ ಪರಿಷ್ಕೃತ ಸೂಕ್ಷ್ಮ ವಿಧಾನಗಳಾಗಿಬಿಟ್ಟಿವೆಯೇ ಎಂಬ ಬಗೆಗೂ ನಾವು ಎಚ್ಚರವನ್ನು ಹೊಂದಿರಬೇಕು. ಗುಂಪುಗಳಿಗೆ ಭಾಷಿಕ ಹಕ್ಕುಗಳು ಬೇಕು ಎಂದು ಹೋರಾಡುವಾಗ ನಾವು ಈ ಹಕ್ಕುಗಳಿಗಾಗಿ ಅಲ್ಪಸಂಖ್ಯಾತರು ತಮ್ಮತನವನ್ನು ಉಳಿಸಿಕೊಳ್ಳಲು ಸಹಾಯವಾಗುತ್ತದೆಯೇ ಅಥವಾ ಯಜಮಾನಿಕೆಯನ್ನು ಮತ್ತಷ್ಟು ದೃಢಪಡಿಸುತ್ತದೆಯೋ ಎಂಬುದನ್ನು ಅರಿಯಬೇಕು[೩೨] ಎಂದಿರುವುದು ಸ್ಕುಟನ್ಯಾಬ್ ಕಾಂಗಾಸ್‌ರವರು.

ಆದರೆ ಇದು ಕರ್ನಾಟಕದ ಮಣ್ಣಿನಲ್ಲಿ ತಮ್ಮ ವಿಶೇಷತೆಗಳನ್ನು ರೂಪಿಸಿಕೊಂಡಿರುವ ಭಾಷಿಕರ ಮೇಲಾಗಲಿ ಅಥವಾ ಹೊರಗಿನಿಂದ ಬಂದು ಕರ್ನಾಟಕದಲ್ಲಿ ನೆಲೆಸಿರುವ, ನೆಲೆಸಲು ಪ್ರಯತ್ನಿಸುತ್ತಿರುವ ಇತರ ಭಾಷಿಕರ ಮೇಲಾಗಲಿ ತಮ್ಮ ಅಧಿಪತ್ಯ ಸ್ಥಾಪಿಸಲು ಕನ್ನಡಿಗರು ನಡೆಸಿರುವ ಉದ್ದೇಶಪೂರ್ವಕವಾದ ಯತ್ನವಲ್ಲ. ಬದಲಾಗಿ ಕನ್ನಡಿಗರು ತಮ್ಮ ಭಾಷೆಯನ್ನು ರಕ್ಷಿಸಿಕೊಳ್ಳಲು ರೂಪಿಸಿಕೊಂಡಿರುವ ಕಾರ್ಯತಂತ್ರ. ಅಂದರೆ ಭಾರತ ಸ್ವತಂತ್ರಗೊಂಡ ನಂತರ ಈಗಾಗಲೇ ಚರ್ಚಿಸಿರುವ ಹಾಗೆ ಭಾರತದ ಆಡಳಿತ, ಶಿಕ್ಷಣ, ಉದ್ಯೋಗ ಮುಂತಾದವುಗಳ ಅನುಕೂಲದ ಹೆಸರಿನಲ್ಲಿ ಹಿಂದಿ ಮತ್ತು ಇಂಗ್ಲಿಶ್‌ಗೆ ವಿಶೇಷ ಮಾನ್ಯತೆ ನೀಡಲಾಗಿದೆ. ಅದರಲ್ಲೂ ಹಿಂದಿಯ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ಅಪಾರ ಹಣ ಬಿಡುಗಡೆ ಮಾಡಿ ತ್ರಿಭಾಷಾ ಸೂತ್ರದ ಅಡಿಯಲ್ಲಿ ದೇಶದ ಎಲ್ಲಾ ರಾಜ್ಯಗಳಲ್ಲು ಹಿಂದಿಯನ್ನು ಒಂದು ಭಾಷೆಯಾಗಿ ಕಲಿಸುವ ಪರಿಸ್ಥಿತಿ ನಿರ್ಮಾಣ ಮಾಡಿದೆ. ಇದಕ್ಕೆ ಅನುಕೂಲ ಆಗುವಂತೆ ರಾಜ್ಯಗಳು ಕೇಂದ್ರ ಸರ್ಕಾರದ ಜೊತೆ ವ್ಯವಹರಿಸುವಾಗ ಹಿಂದಿ ಅಥವಾ ಇಂಗ್ಲಿಶ್ ಭಾಷೆಗಳನ್ನು ಬಳಸಬೇಕು ಎಂದು ಅಧಿಕೃತಗೊಳಿಸಿದ್ದರಿಂದ ರಾಜ್ಯಗಳಲ್ಲಿ ಹಿಂದಿ ಮತ್ತು ಇಂಗ್ಲಿಶ್ ಭಾಷೆಗಳ ಕಲಿಕೆ ಅನಿವಾರ್ಯವಾಗಿದೆ.

ಹೀಗೆಯೇ ಕರ್ನಾಟಕ ಸರ್ಕಾರ ಕನ್ನಡವನ್ನು ಅಭಿವೃದ್ಧಿಪಡಿಸುತ್ತಿರುವ ಸಂದರ್ಭದಲ್ಲಿ ಇಂಗ್ಲಿಶ್ ಕರ್ನಾಟಕದ ಉನ್ನತ ಮತ್ತು ವೃತ್ತಿಪರ ಶಿಕ್ಷಣದ ಬೋಧನಾಮಾಧ್ಯಮವಾಗಿ ಮುಂದುವರೆದಿದೆ. ಹಾಗೆಯೇ ಕರ್ನಾಟಕದಲ್ಲಿ ಸ್ಥಾಪನೆಯಾಗಿರುವ ಸರ್ಕಾರಿ ಮತ್ತು ಖಾಸಗಿ ವಲಯದ ಕಂಪನಿ,

ಕೈಗಾರಿಕೆ, ಉದ್ದಿಮೆಗಳ ಉನ್ನತ ಹುದ್ದೆಗಳು ಹೆಚ್ಚಿನದಾಗಿ ಇಂಗ್ಲಿಶ್ ಬಲ್ಲವರ ಪಾಲಾಗಿವೆ. ಸರ್ಕಾರದ ಉನ್ನತ ಮತ್ತು ಅಧಿಕಾರಯುತ ಹುದ್ದೆಗಳನ್ನು ಪಡೆಯುವುದಕ್ಕೆ, ನಿರ್ವಹಿಸುವುದಕ್ಕೆ ಇಂಗ್ಲಿಶ್ ಭಾಷಾಜ್ಞಾನ ಅನಿವಾರ್ಯವಾಗಿದೆ. ಇದರಿಂದಾಗಿ ಕರ್ನಾಟಕದಲ್ಲಿ ಶಿಕ್ಷಣ ಪಡೆಯುತ್ತಿರುವ ಬಹುತೇಕ ಮಕ್ಕಳು ತಮ್ಮ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಾದ ಕನ್ನಡ ಭಾಷಾಮಾಧ್ಯಮದಲ್ಲಿ ಶಿಕ್ಷಣ ಕಲಿಯುವ ಬದಲಾಗಿ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುತ್ತಿದ್ದಾರೆ. ಇದರಿಂದ ಕರ್ನಾಟಕದ ಶಿಕ್ಷಣದಲ್ಲಿ ಹಲವು ಸಮಸ್ಯೆಗಳು ಉದ್ಭವವಾಗಿವೆ. ಅಷ್ಟೇ ಅಲ್ಲದೆ ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆ ಇಲ್ಲಿನ ಮಾತೃಭಾಷಾಸಮುದಾಯಗಳ ಅಸ್ತಿತ್ವದ ಮೇಲೆ ವ್ಯತಿರಿಕ್ತ ಪರಿಣಾಮ ಉಂಟುಮಾಡಿದೆ. ಹೀಗೆ ಇಂಗ್ಲಿಶ್ ಮತ್ತು ಹಿಂದಿ ಭಾಷೆಗಳ ಕಲಿಕೆ ಮತ್ತು ಬಳಕೆ ಕರ್ನಾಟಕದಲ್ಲಿನ ಬಹುಸಂಖ್ಯಾತರಾದ ಕನ್ನಡಿಗರಿಗೆ ಹಿಂದಿ ಮತ್ತು ಇಂಗ್ಲಿಶ್‌ನ ಎದುರಿಗೆ ತಾವು ಕೊಚ್ಚಿಹೋಗುತ್ತಿದ್ದೇವೆ ಎಂಬ ಭಯ ಕಾಡಿದೆ. ಇದರಿಂದ ಹೊರಬರಲು ಮಾಡಿರುವ ಪ್ರಯತ್ನದ ಫಲವಾಗಿ ಉದ್ಭವಿಸಿರುವ ಸಮಸ್ಯೆಯಾಗಿದೆ.

ಇದನ್ನು ಸರಿಯಾಗಿ ಅರ್ಥಮಾಡಿಕೊಂಡು ಕನ್ನಡದ ಕಲಿಕೆ ಮತ್ತು ಬಳಕೆಗೆ ಪ್ರಬಲ ಅಡ್ಡಿ ಉಂಟುಮಾಡಿರುವ ಭಾಷೆ ಅಥವಾ ಭಾಷೆಗಳನ್ನು ನಿಯಂತ್ರಿಸುವ ಒತ್ತಾಯಗಳನ್ನು ಮಾಡುವ ಬದಲಿಗೆ ಭಾಷಾಅಲ್ಪಸಂಖ್ಯಾತರ ಭಾಷಾಕಲಿಕೆ ಮತ್ತು ಬಳಕೆಯ ಹಕ್ಕುಗಳನ್ನು ಕಸಿದುಕೊಳ್ಳುವಂತಹ ಒತ್ತಾಯಗಳನ್ನು ಸರ್ಕಾರಗಳ ಮುಂದಿಡಲಾಗಿದೆ. ಇದಕ್ಕೆ ಸರ್ಕಾರಗಳು ನೇರವಾದ ತೀರ್ಮಾನ ತೆಗೆದುಕೊಳ್ಳಲು ಸಾಧ್ಯವಾಗದೆ ಪರೋಕ್ಷವಾಗಿ ನಿಯಂತ್ರಿಸುವ ಕೆಲಸ ಮಾಡಿವೆ. ಅಂದರೆ ಅವರ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಪೂರಕ ವ್ಯವಸ್ಥೆ ನಿರ್ಮಾಣಮಾಡದೆ ತಟಸ್ಥ ನಿಲುವನ್ನು ತಳೆದಿವೆ. ಇಲ್ಲವೆ ಮೇಲ್ನೋಟಕ್ಕೆ ಕೊಟ್ಟಹಾಗೆ ತೋರಿಸಿಕೊಳ್ಳುವುದಕ್ಕೆ ಅಲ್ಪಸ್ವಲ್ಪ ಹಣ ನೀಡಿ ಸುಮ್ಮನಾಗಿವೆ. ಇವುಗಳ ಜೊತೆಗೆ ಯಾವುದೇ ಒಂದು ಪ್ರದೇಶದಲ್ಲಿ ಭಾಷೆ ಅಥವಾ ಭಾಷೆಗಳನ್ನು ಕಲಿಯಬೇಕಾದರೆ, ಬಳಸಬೇಕಾದರೆ ಅವು ಬದುಕಿನ ಭಾಗವಾಗಿರಬೇಕು. ಇದಕ್ಕೆ ಅಲ್ಲಿನ ಸರ್ಕಾರಗಳು ಪೂರಕ ವ್ಯವಸ್ಥೆ ನಿರ್ಮಾಣ ಮಾಡಿರಬೇಕು. ಇಂತಹ ಪರಿಸ್ಥಿತಿ ನಿರ್ಮಾಣವಾಗದೇ ಕೆಲವು ಭಾಷೆಗಳನ್ನು ಅಭಿಮಾನದ ನೆಲೆಯಲ್ಲಿ ನೋಡಿ ಬದುಕಿನ ಭಾಗದಿಂದ ದೂರವಾಗಿರುವ ಅಥವಾ ದೂರವಾಗುತ್ತಿರುವ ಭಾಷೆಗಳನ್ನು ಕಲಿಯುವಂತೆ, ಬಳಸುವಂತೆ ಒತ್ತಡ ಹೇರುವುದು ಅಥವಾ ಬದುಕಿನ ಭಾಗವಾಗಿರುವ ಭಾಷೆ ಅಥವಾ ಭಾಷೆಗಳನ್ನು ಪರಕೀಯತೆಯ ನೆಲೆಯಲ್ಲಿ ನೋಡಿ ಅವುಗಳನ್ನು ಕಲಿಯದಂತೆ, ಬಳಸದಂತೆ ಭಾಷಾನೀತಿಗಳ ಮೂಲಕ ನಿಯಂತ್ರಿಸಲು ಪ್ರಯತ್ನಿಸುವುದು ಸ್ಥಳೀಯ ಪ್ರದೇಶದ ಭಾಷಾಸಮಸ್ಯೆಗೆ ನಾಂದಿಯಗುತ್ತದೆ. ಆಗ ಜನರು ಸರ್ಕಾರದ ಭಾಷಾನೀತಿಯನ್ನು ಧಿಕ್ಕರಿಸಿ ತನಗೆ ಬೇಕಾದ ಭಾಷೆಯಲ್ಲಿ ಕಲಿಯುತ್ತಾರೆ, ಮತ್ತು ಬೇಕಾದ ಭಾಷೆಯನ್ನು ಬಳಸುತ್ತಾರೆ. ಇದನ್ನು ತಡೆಯುವ ಅಧಿಕಾರ ಸರ್ಕಾರಗಳಿಗೆ ಇಲ್ಲ. ಒಂದು ವೇಳೆ ಸರ್ಕಾರಗಳು ಜನರ ಭಾಷಾಕಲಿಕೆ ಮತ್ತು ಬಳಕೆಯ ಅಧಿಕಾರವನ್ನು ಕಸಿದುಕೊಂಡರೆ ಅವುಗಳನ್ನು ನ್ಯಾಯಾಲಯಗಳಲ್ಲಿ ಪ್ರಶ್ನಿಸಬಹುದು. ಆ

ಮುಖಾಂತರ ನ್ಯಾಯ ಪಡೆದುಕೊಂಡು ತನಗೆ ಬೇಕಾದ ಭಾಷೆ ಹಾಗೂ ಭಾಷೆಗಳನ್ನು ಹಾಗೂ ಭಾಷಾಮಾಧ್ಯಮದಲ್ಲಿ ಕಲಿಯಬಹುದು.

ದೇಶದಲ್ಲಿನ ಯಾವುದೇ ಸರ್ಕಾರಗಳು ನ್ಯಾಯಾಲಯದ ತೀರ್ಪನ್ನು ಧಿಕ್ಕರಿಸಿ ಭಾಷಾನೀತಿಯನ್ನು ತರುವುದಕ್ಕಾಗಲಿ ಅಥವಾ ತಾನು ಜಾರಿಗೆ ತಂದು ಭಾಷಾನೀತಿಯನ್ನು ಅನುಷ್ಠಾನಕ್ಕೆ ತರುವಂತೆ ಒತ್ತಡ ಹೇರುವುದಕ್ಕಾಗಲಿ ಅವಕಾಶವಿಲ್ಲ. ಹೀಗಾಗಿಯೇ "ಕರ್ನಾಟಕದ ಸರಕಾರದ ಭಾಷಾ ನೀತಿಗೆ ಎರಡು ನೆಲೆಯ ಒತ್ತಾಯಗಳು ಪ್ರೇರಕಗಳಾಗಿವೆ. ೧. ಸಂವಿಧಾನ ನಿರೂಪಿಸಿದ ಭಾಷಾ ನೀತಿಯನ್ನು ಕರ್ನಾಟಕದ ಸಂದರ್ಭದಲ್ಲಿ ಯಥಾವತ್ತಾಗಿ ಆಚರಿಸುವುದು. ೨. ಜನತೆಯ ಆಶೋತ್ತರಗಳನ್ನು ಅಪೇಕ್ಷೆಗಳನ್ನು ಗಮನಿಸಿ ಅದಕ್ಕೆ ಅನುಗುಣವಾದ ಭಾಷಾನೀತಿಯನ್ನು ರೂಪಿಸುವುದು. ಕರ್ನಾಟಕದಲ್ಲಿ ಈ ಎರಡೂ ಪ್ರೇರಣಾ ಮೂಲಗಳು ಯಾವಾಗಲೂ ಒಂದೇ ದಿಕ್ಕಿನಲ್ಲಿ ಕೆಲಸ ಮಾಡಿಲ್ಲ. ಸಂವಿಧಾನದ ಅಪೇಕ್ಷೆಗಳು ಜನರ ಅಗತ್ಯಗಳಿಗೆ ಪೂರಕವಾಗಿದ್ದಾಗ ಸರಕಾರದ ಭಾಷಾ ನೀತಿ ಉಪಯುಕ್ತ ಮತ್ತು ಅನುಕರಣೆಗೆ ಅರ್ಹವಾಗಿವೆ ಎನಿಸಿವೆ. ಆದರೆ ಈ ಪ್ರೇರಣೆಗಳಲ್ಲಿ ಯಾವಾಗ ಪರಸ್ಪರ ಯಾವಾಗ ವಿರೋಧ ಉಂಟಾಗಿದೆಯೋ ಅಂತಹ ಸಂದರ್ಭದಲ್ಲಿ ಸರಕಾರ ತನ್ನ ಮೊದಲ ಕರ್ತವ್ಯವೆಂದು ಸಂವಿಧಾನ ಪರ ನೀತಿಯನ್ನೇ ತೋರಿಸಿದೆ.[೩೩]

ಸಂವಿಧಾನ ಸಾಮಾನ್ಯವಾಗಿ ಜನರ ಆಶೋತ್ತರಗಳಿಗೆ ಪೂರಕವಾಗಿ ಇರುವುದರಿಂದ ಇಲ್ಲಿ ಯಾವುದೋ ಒಂದು ಸಮುದಾಯದ ರಾಜಕೀಯ ಹಿತಾಸಕ್ತಿ ಪ್ರಧಾನವಾಗಿಲ್ಲ. ಇಲ್ಲಿ ದೇಶದ ಎಲ್ಲಾ ಭಾಷೆ, ಸಾಹಿತ್ಯ, ಸಂಸ್ಕೃತಿ, ಜನರು ಬದುಕಿಗೆ ಪೂರಕವಾದ ನಿಯಮಗಳನ್ನು ಅಳವಡಿಸಲಾಗಿದೆ. ಇದರಿಂದಾಗಿ ಒಂದು ವರ್ಗ ಅಥವಾ ಸಮುದಾಯಕ್ಕೆ ಪೂರಕವಾದ ನಿಯಮಗಳನ್ನು ರೂಪಿಸಲು ಸರ್ಕಾರಗಳಿಗೆ ಸಾಧ್ಯವಿಲ್ಲ. ಸರ್ಕಾರಗಳು ಯಾವುದೇ ನಿಯಮಗಳನ್ನು ಜಾರಿಗೆ ತಂದರೂ ಅವು ಜನರ ಬದುಕಿನ ಭಾಗವಾಗಿರಬೇಕು. ಇಲ್ಲವೆ ಭಾಗವಾಗುವಂತಿರಬೇಕು. ಅವುಗಳನ್ನು ವೈಜ್ಞಾನಿಕ ಕ್ರಮದ ಅಡಿಯಲ್ಲಿ ಕಲಿಸುವ ವ್ಯವಸ್ಥೆ ನಿರ್ಮಾಣ ಮಾಡಬೇಕು. ಆಗ ಜನ ಅವುಗಳನ್ನು ಪಾಲಿಸುತ್ತಾರೆ. ಇದರಿಂದ ಸರ್ಕಾರದ ಭಾಷಾನೀತಿ ಯಶಸ್ವಿಯಾಗುತ್ತದೆ. ಇಂತಹ ಆಲೋಚನೆಗಳಿಲ್ಲದೆ ಜಾರಿಗೆ ಬರುವ ಸರ್ಕಾರದ ಭಾಷಾನೀತಿಗಳು ಕಾಗದದ ಮೇಲಿನ ಅಕ್ಷರಗಳಾಗಿ ಮಾತ್ರ ಉಳಿಯುತ್ತವೆ ಅಷ್ಟೆ. ಅವು ಆ ಪ್ರದೇಶದ ಭಾಷಾಅಗತ್ಯತೆಯ ಪೂರೈಕೆಗಾಗಿ ಅಥವಾ ಭಾಷಾಸಮಸ್ಯೆಗೆ ಅಷ್ಟು ಪರಿಣಾಮಕಾರಿಯಾದ ಪರಿಹಾರವಾಗುವುದಿಲ್ಲ. ಪರಿಣಾಮಕಾರಿಯಲ್ಲದ ಭಾಷಾನೀತಿಗಳನ್ನು ಜಾರಿಗೆ ತಂದು ಅವುಗಳನ್ನು ಕಲಿಯಲು, ಬಳಸಲು ಒತ್ತಡ ಉಂಟುಮಾಡಿದರೆ ಜನ ಅದರಿಂದ ಸಮಸ್ಯೆಗೆ ಸಿಲುಕುತ್ತಾರೆ. ಹೀಗಾಗಿ ಯಾವುದೇ ಒಂದು ಪ್ರದೇಶದಲ್ಲಿ ರೂಪಿಸುವ ಭಾಷಾಯೋಜನೆ ಮತ್ತು ಜಾರಿಗೆ ತರುವ ಭಾಷಾನೀತಿಗಳು ಅಲ್ಲಿನ ಜನರ ಬದುಕಿನ ಭಾಗವಾಗುವಂತಿರಬೇಕು.

ಅಂದರೆ ಸರ್ಕಾರ ಇಂತಹ ಭಾಷೆ ಅಥವಾ ಭಾಷೆಗಳನ್ನು ಕಲಿಯಬೇಕು, ಬಳಸಬೇಕು ಅಂದರೆ ಆ ಭಾಷೆ ಅಥವಾ ಭಾಷೆಗಳು ಆ ಪ್ರದೇಶದ ಆಡಳಿತ, ಶಿಕ್ಷಣಮಾಧ್ಯಮ, ಉದ್ಯೋಗ, ನ್ಯಾಯಾಲಯ, ಪತ್ರಿಕೆ, ಉದ್ದಿಮೆ, ಕೈಗಾರಿಕೆ ಹೀಗೆ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ವಲಯದ ಎಲ್ಲಾ

ವ್ಯವಹಾರಗಳಲ್ಲಿ ಸಮರ್ಪಕವಾಗಿ ಬಳಕೆಯಾಗುತ್ತಿರಬೇಕು. ಹಾಗೆಯೇ ಇವುಗಳ ನಡುವೆ ಹೊಂದಾಣಿಕೆ ಇರಬೇಕು. ಹೊಂದಾಣಿಕೆಯಿರದ ಭಾಷಾನೀತಿಗಳನ್ನು ಸರ್ಕಾರಗಳು ಜಾರಿಗೆ ಅವು ಯಶಸ್ವಿಯಾಗಿ ಅನುಷ್ಠಾನಗೊಳ್ಳುವುದಿಲ್ಲ. ಹೀಗಾಗಿ ಸರ್ಕಾರಗಳು ಭಾಷಾನೀತಿಯನ್ನು ಜಾರಿಗೊಳಿಸುವಾಗ ಈ ಅಂಶಗಳನ್ನು ಗಮನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ಇದನ್ನು ಮರೆತು ಸರ್ಕಾರಗಳು ಕೆಲವು ಭಾಷೆಗಳನ್ನು ಅಭಿಮಾನದ ನೆಲೆಯಲ್ಲಿ ನೋಡಿ ಅವುಗಳನ್ನು ಕಡ್ಡಾಯವಾಗಿ ಕಲಿಯುವಂತೆ, ಬಳಸುವಂತೆ ಒತ್ತಡ ಉಂಟುಮಾಡಿವೆ. ಹಾಗೆಯೇ ಮತ್ತೆ ಕೆಲವು ಭಾಷೆಗಳನ್ನು ಪರಕೀಯತೆಯ ನೆಲೆಯಲ್ಲಿ ನೊಡಿ ಅವುಗಳನ್ನು ಕಲಿಬಾರದು, ಬಳಸಬಾರದು ಅಥವಾ ಕಲಿಯುವುದಾದರೆ, ಬಳಸುವುದಾದರೆ ಹೀಗೆ ಮಾತ್ರ ಕಲಿಯಬೇಕು, ಬಳಸಬೇಕು ಎಂದು ನಿಯಂತ್ರಿಸುವುದು ಭಾಷಾಸಮಸ್ಯೆಗೆ ಕಾರಣವಾಗುತ್ತದೆ. ಇದು ಸ್ಥಳೀಯ ಜನತೆಯನ್ನು ಭಾಷಿಕ ಬಿಕ್ಕಟ್ಟಿಗೆ ಒಳಗು ಮಾಡುತ್ತದೆ. ಏಕೀಕರಣ ನಂತರದ ಕರ್ನಾಟಕದಲ್ಲಿ ಉದ್ಭವವಾಗಿರುವ ಭಾಷಾಸಮಸ್ಯೆ ಇದೆ ಆಗಿದೆ. ಏಕೆಂದರೆ ಕರ್ನಾಟಕ ಏಕೀಕರಣವಾದ ನಂತರ ಇಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕನ್ನಡವನ್ನು ಅಭಿಮಾನದ ನೆಲೆಯಲ್ಲಿ ನೋಡಿ, ಕನ್ನಡಿಗರ ಒತ್ತಾಯಕ್ಕೆ ಕಡ್ಡಾಯವಾಗಿ ಕಲಿಯುವಂತೆ, ಬಳಸುವಂತೆ ಒತ್ತಡ ಉಂಟುಮಾಡಿವೆ. ಹಾಗೆಯೇ ಇಂಗ್ಲಿಶ್, ಹಿಂದಿಗಳನ್ನು ಪರಕೀಯತೆಯ ನೆಲೆಯಲ್ಲಿ ನೋಡಿ ಅವುಗಳನ್ನು ನಿಯಂತ್ರಿಸುವ ಕೆಲಸ ಮಾಡಿವೆ. ಆದರೆ ಸಾಮಾನ್ಯ ಜನರು ಇದುವರೆಗೆ ಚರ್ಚಿಸಿರುವ ಯಾವ ವಿಚಾರಗಳ ಬಗೆಗೂ ಆಲೋಚಿಸಿಲ್ಲ. ಅವರೆಲ್ಲರೂ ಬದುಕಿನ ಭಾಗವಾದ ಭಾಷೆಗೆ ಮೊದಲ ಆದ್ಯತೆ ನೀಡಿ ಕಲಿತು, ಬಳಸಿ ಬದುಕಿನ ಕಡೆಗೆ ಆಸಕ್ತರಾಗಿದ್ದಾರೆ. ಹೀಗಾಗಿ ಸರ್ಕಾರದ ನಿಲುವು ಮತ್ತು ಸಾಮಾನ್ಯಜನರ ಭಾಷಾಆಯ್ಕೆಯ ನಡುವೆ ವ್ಯತ್ಯಾಸ ಉಂಟಾಗಿದೆ. ಇದು ಕರ್ನಾಟಕದ ಜನರು ಸರ್ಕಾರಗಳ ಭಾಷಾನೀತಿಗಳನ್ನು ಧಿಕ್ಕರಿಸಿ ಭಾಷೆ ಮತ್ತು ಭಾಷಾಮಾಧ್ಯಮದಲ್ಲಿ ಕಲಿಯುವಂತೆ, ಬಳಸುವಂತೆ ಮಾಡಿದೆ.

ಇಂತಹ ಸಂದರ್ಭದಲ್ಲಿ ಕರ್ನಾಟಕದಲ್ಲಿನ ಸರ್ಕಾರಗಳು ಮಾತೃಭಾಷೆಗಳು ಮತ್ತು ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಅಭಿಮಾನದ ನೆಲೆಯಲ್ಲಿ ನೋಡಿ ಮಗು ತನ್ನ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿಯೇ ಕಲಿಯಬೇಕು ಎಂದು ನೀತಿಯನ್ನು ಜಾರಿಗೊಳಿಸಿವೆ. ಆದರೆ ಉನ್ನತ ವ್ಯಾಸಂಗ, ವೃತ್ತಿಪರ ಶಿಕ್ಷಣದಲ್ಲಿನ ಬೋಧನಾಮಾಧ್ಯಮದ ಬಗೆಗೆ ಯಾವುದೇ ಸ್ಪಷ್ಟನಿರ್ಧಾರಗಳನ್ನು ತೆಗೆದುಕೊಂಡಿಲ್ಲ. ಮತ್ತು ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಉನ್ನತ ಮತ್ತು ವೃತ್ತಿಪರ ಶಿಕ್ಷಣವನ್ನು ಬೋಧಿಸುವ ವ್ಯವಸ್ಥೆ ಮಾಡಿಲ್ಲ. ಇದರಿಂದಾಗಿ ಕರ್ನಾಟಕ ಸರ್ಕಾರ ಮಗುವಿನ ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲಿ ಇರಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತಂದ ನಂತರದಲ್ಲಿಯೂ ರಾಜ್ಯದ ಉನ್ನತ ಮತ್ತು ವೃತ್ತಿಪರ ಶಿಕ್ಷಣ ಇಂಗ್ಲಿಶ್‌ನಲ್ಲಿ ಮುಂದುವರಿದಿದೆ. ಸರ್ಕಾರದ ಭಾಷಾನೀತಿಯ ಪ್ರಕಾರ ಮಗು ತನ್ನ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆಯಲ್ಲಿ ಕಲಿತು ಅನಂತರದಲ್ಲಿ ಯಾವ ಭಾಷಾಮಾಧ್ಯಮದಲ್ಲಿ ಬೇಕಾದರೂ ಕಲಿಯಬಹುದು. ಶಿಕ್ಷಣ ಸಂಸ್ಥೆಗಳು ಕಲಿಸಬಹುದು. ಇದು ಏಕೀಕರಣ ನಂತರದ ಕರ್ನಾಟಕದ ಭಾಷಾಸಮಸ್ಯೆಯ ಮೇಲೆ ತನ್ನದೇ ಆದ

ಪರಿಣಾಮ ಬೀರಿದೆ. ಇವುಗಳ ಬಗೆಗೆ ಕರ್ನಾಟಕದಲ್ಲಿ ಇದುವರೆಗೆ ಅಷ್ಟು ಸೂಕ್ಷ್ಮವಾದ ಚರ್ಚೆಗಳು ಆಗಿಲ್ಲ.

ಇದರಿಂದಾಗಿ ಕರ್ನಾಟಕ ಸರ್ಕಾರ ಪ್ರಾಥಮಿಕ ಹಂತದ ಶಿಕ್ಷಣಕ್ಕೆ ಸಂಬಂಧಿಸಿದಂತೆ ಬೋಧನಾ ಮಾಧ್ಯಮದ ವಿಚಾರವಾಗಿ ಜಾರಿಗೆ ತಂದಿರುವ ಭಾಷಾನೀತಿ ಸಂಪೂರ್ಣವಾಗಿ ಅನುಷ್ಠಾನಗೊಳ್ಳುವಲ್ಲಿ ವಿಫಲವಾಗಿದೆ. ಹೇಗೆಂದರೆ ಕರ್ನಾಟಕದಲ್ಲಿ ಪ್ರೌಢಶಾಲಾ ವಿದ್ಯಾಭ್ಯಾಸ ಮುಗಿದ ನಂತರ ವಿದ್ಯಾರ್ಥಿಗಳು ಪಿಯುಸಿ, ಡಿಪ್ಲೋಮೋ, ಐಟಿಐ ಮುಂತಾದ ಕೋರ್ಸ್‌ಗಳಿಗೆ ದಾಖಲಾಗುತ್ತಾರೆ. ಪಿಯುಸಿ ವಿದ್ಯಾಭ್ಯಾಸವನ್ನು ಮುಖ್ಯವಾಗಿ ಕಲಾ, ವಾಣಿಜ್ಯ ಮತ್ತು ವಿಜ್ಞಾನ ವಿಭಾಗವೆಂದು ಮೂರು ಭಾಗವಾಗಿ ವಿಂಗಡಿಸಲಾಗಿದೆ. ಕಲಾವಿಭಾಗದ ಬೋಧನೆಯನ್ನು ಹೊರತುಪಡಿಸಿದರೆ ಎಲ್ಲಾ ರೂಪದ ಶಿಕ್ಷಣವನ್ನು ಕಲಿಸಲು ಬೋಧನಾಮಾಧ್ಯಮವಾಗಿ ಇಂಗ್ಲಿಶ್‌ನ್ನು ಬಳಸಲಾಗಿದೆ. ಇದರಿಂದ ಜನತೆ ಒಂದು ಬಗೆಯ ತಪ್ಪು ಕಲ್ಪನೆಗೆ ಒಳಗಾಗಿದ್ದಾರೆ. ಅಂದರೆ ಕಲಾವಿಭಾಗದ ವಿಷಯಗಳ ಬೋಧನೆ ಎಂದರೆ ಕನ್ನಡ. ವಿಜ್ಞಾನ ಮತ್ತು ವಾಣಿಜ್ಯ ವಿಭಾಗದ ವಿಷಯಗಳ ಬೋಧನೆ ಎಂದರೆ ಇಂಗ್ಲಿಶ್ ಎಂದು ಭಾವಿಸಿದ್ದಾರೆ. ಇದಕ್ಕೆ ಪೂರಕವಾಗಿ ಕಾಲೇಜುಗಳಲ್ಲಿ ಉಪನ್ಯಾಸಕರು ಬೋಧನೆ ಮಾಡುತ್ತಿದ್ದಾರೆ. ಇದರಿಂದಾಗಿ ಪೋಷಕರು ತಮ್ಮ ಮಕ್ಕಳಿಗೆ ಉನ್ನತ ಹಂತದ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವ ಹಾಗೆ ಪ್ರಾಥಮಿಕ ಹಂತದಲ್ಲಿ ಭಾಷಾಮಾಧ್ಯಮದ ಶಿಕ್ಷಣವನ್ನು ಆಯ್ಕೆಮಾಡಿಕೊಂಡಿದ್ದಾರೆ. ಸಾಮಾನ್ಯವಾಗಿ ಈ ವಿಭಾಗಗಳ ವರ್ಗೀಕರಣ ಭಾಷೆಯ ಆಧಾರದಲ್ಲಿ ಆಗಿಲ್ಲ. ಆದರೂ ಕರ್ನಾಟಕದ ಶಿಕ್ಷಣಕ್ರಮದಲ್ಲಿ ಬಳಕೆ ಆಗುತ್ತಿರುವ ಬೋಧನಾಮಾಧ್ಯಮ ಜನತೆಯ ಮನಸಲ್ಲಿ ತಪ್ಪುಕಲ್ಪನೆಗಳನ್ನು ಹುಟ್ಟುಹಾಕಿದೆ. ಈ ತಪ್ಪು ಕಲ್ಪನೆಯನ್ನು ದೂರಮಾಡಿ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಗಳ ಅಭಿವೃದ್ಧಿಗಾಗಿ ದುಡಿಯಬೇಕಾದ ಬೋಧಕ ಮತ್ತು ಅಧಿಕಾರಿ ವರ್ಗ ಅಧಿಕಾರ, ಸ್ಥಾನಮಾನ, ಹಣದ ವ್ಯಾಮೋಹಕ್ಕೆ ಒಳಗಾಗಿ ಮಾತೃಭಾಷೆ ಮತ್ತು ಪ್ರಾದೇಶಿಕ ಭಾಷೆಗಳನ್ನು ಕಡೆಗಣಿಸಿವೆ. ಇದರಿಂದ ಕರ್ನಾಟಕದ ಉನ್ನತ ಶಿಕ್ಷಣ ಮತ್ತು ವೃತ್ತಿಪರ ಶಿಕ್ಷಣ ಇಂಗ್ಲಿಶ್ ಮಾಧ್ಯಮದಲ್ಲಿ ಮುಂದುವರಿದಿದೆ.

ಇದಕ್ಕೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಮಾತೃಭಾಷಾಮಾಧ್ಯಮದ ಶಾಲೆಗಳಲ್ಲಿ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಕಲಿಸುವ ವ್ಯವಸ್ಥೆ ಮಾಡಲಾಗಿದೆ. ಆದರೆ ಈ ಶಾಲೆಗಳಲ್ಲಿ ಅಗತ್ಯಕ್ಕೆ ಅನುಗುಣವಾಗಿ ಸಮರ್ಥವಾಗಿ ಕಲಿಸುವ ಇಂಗ್ಲಿಶ್ ಭಾಷಾಶಿಕ್ಷಕರು ಇಲ್ಲ. ಆ ವಿಧಾನಗಳನ್ನು ಶಿಕ್ಷಣ ಕ್ರಮದಲ್ಲಿ ಅಳವಡಿಸಿಲ್ಲ. ಇದರಿಂದಾಗಿ ಇಂಗ್ಲಿಶ್ ಭಾಷಾಶಿಕ್ಷಕರಾಗಿ ನೇಮಕ ಆಗಿರುವ ರಾಜ್ಯದ ಶಾಲೆ ಮತ್ತು ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಹೆಚ್ಚಿನ ಸಂಖ್ಯೆಯ ಇಂಗ್ಲಿಶ್ ಶಿಕ್ಷಕರು ಮತ್ತು ಉಪನ್ಯಾಸಕರಿಗೆ ಇಂಗ್ಲಿಶ್ ಭಾಷೆಯ ಸಾಮಾನ್ಯ ಜ್ಞಾನವಿಲ್ಲ. ಇವರು ಪರೀಕ್ಷೆಯಲ್ಲಿನ ಅಂಕಗಳು, ಪದೋನ್ನತಿ, ವಿವಿಧ ಮೀಸಲಾತಿಗಳ ಅಡಿಯಲ್ಲಿ ನೇಮಕ ಆಗಿರುವುದರಿಂದ ಇಂಗ್ಲಿಶ್ ಭಾಷೆಯ ಹಿಡಿತವಿಲ್ಲ. ಒಂದು ಭಾಷೆಯ ಮೇಲೆ ಹಿಡಿತವೆಂದರೆ ಅದು ಪರೀಕ್ಷೆಯಲ್ಲಿನ ಅಂಕಗಳ ಆಧಾರದಲ್ಲಿ ನಿರ್ಧಾರಿತವಾಗುವುದಿಲ್ಲ. ಅದು ಒಬ್ಬ ವ್ಯಕ್ತಿ ಸಂವಹನದ ಸಂದರ್ಭದಲ್ಲಿ ಅರ್ಥಪೂರ್ಣವಾಗಿ

ಬಳಸುವ ಸಾಮರ್ಥ್ಯದಿಂದ ಬರುವಂತಹದ್ದು. ಇದರಿಂದಾಗಿಯೇ ಇಂಗ್ಲಿಶ್ ಭಾಷಾಪರೀಕ್ಷೆಯಲ್ಲಿ ನೂರಕ್ಕೆ ೯೦, ೯೫ ಅಂಕಗಳನ್ನು ತೆಗೆದುಕೊಂಡ ವಿದ್ಯಾರ್ಥಿಗಳೂ ಕೂಡ ಸ್ವತಂತ್ರವಾಗಿ ಇಂಗ್ಲಿಶ್‌ನ್ನು ಒಂದು ಪುಟ ಬರೆಯಲು ಸಾಧ್ಯವಾಗದೆ ಅಥವಾ ಸಂವಹನದಲ್ಲಿ ಸ್ವತಂತ್ರವಾಗಿ ಅಭಿವ್ಯಕ್ತಿಪಡಿಸಲು ಸಾಧ್ಯವಾಗದೆ ಮುಜುಗರಕ್ಕೆ ಒಳಗಾಗಿದ್ದಾರೆ. ಹೀಗಿದ್ದರೂ ಅಭ್ಯರ್ಥಿಗಳು ಶಿಕ್ಷಕರ ನೇಮಕಾತಿಗಾಗಿ ನಡೆದಿರುವ ಪರೀಕ್ಷೆಯಲ್ಲಿ ಅಥವಾ ತಮ್ಮ ವ್ಯಾಸಂಗದ ಸಂದರ್ಭದಲ್ಲಿ ಗಳಿಸಿದ ಅಂಕಗಳ ಆಧಾರದಲ್ಲಿ ಇಂಗ್ಲಿಶ್ ಭಾಷಾಶಿಕ್ಷಕರಾಗಿ, ಉಪನ್ಯಾಸಕರಾಗಿ ನೇಮಕವಾಗಿದ್ದಾರೆ. ಇವರೆಲ್ಲರೂ ಶಾಲೆ, ಕಾಲೇಜುಗಳಲ್ಲಿ ಇರುವ ಪಠ್ಯಗಳನ್ನು ಓದಿ ಕನ್ನಡದಲ್ಲಿ ಅರ್ಥಗಳನ್ನು ನೀಡಿ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಕನಿಷ್ಟ ಅಂಕಗಳನ್ನು ಪಡೆದು ಉತ್ತೀರ್ಣವಾಗಲು ಏನು ಮಾಡಬೇಕೊ ಅಷ್ಟನ್ನು ಮಾತ್ರ ಮಾಡಿದ್ದಾರೆ. ಇಂದಿನ ಅಗತ್ಯಕ್ಕೆ ಅನುಗುಣವಾಗಿ ಇಂಗ್ಲೀಶ್‌ನ್ನು ಕಲಿಸುವ ಪ್ರಯತ್ನ ಮಾಡಿಲ್ಲ.

ಇದರಿಂದಾಗಿ ಕರ್ನಾಟಕದಲ್ಲಿ ವಿದ್ಯಾಭ್ಯಾಸ ಕಲಿತಿರುವ ವಿದ್ಯಾರ್ಥಿಗಳು ಶಾಲೆ ಮತ್ತು ಕಾಲೇಜುಗಳ ಪಠ್ಯದಲ್ಲಿ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಹತ್ತು-ಹನ್ನೆರಡು ವರ್ಷ ಕಲಿತಿದ್ದರೂ ಸ್ವತಂತ್ರವಾಗಿ ಅಭಿವ್ಯಕ್ತಿಸಲು ಸಾಧ್ಯವಾಗಿಲ್ಲ. ಹೀಗಾಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಲ್ಲಿ ಕಲಿತರೆ ನಮ್ಮ ಮಕ್ಕಳು ಇಂಗ್ಲಿಶ್‌ನಲ್ಲಿ ಸ್ವತಂತ್ರ ಅಭಿವ್ಯಕ್ತಿ ಸಾಮರ್ಥ್ಯ ಪಡೆಯುತ್ತಾರೆ. ಉತ್ತಮ ಗುಣಮಟ್ಟದ ಶಿಕ್ಷಣ ಕಲಿಯುತ್ತಾರೆ. ಹಾಗೆಯೇ ಒಳ್ಳೆಯ ಉದ್ಯೋಗ ಪಡೆಯುತ್ತಾರೆ ಎಂಬ ಕಾರಣಕ್ಕಾಗಿ ಆರ್ಥಿಕವಾಗಿ ಶ್ರೀಮಂತವಾಗಿರುವ ಪೋಷಕರು ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿದ್ದಾರೆ. ಆದರೆ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳು ಹೆಚ್ಚಿನದಾಗಿ ಖಾಸಗಿ ಆಡಳಿತ ಮಂಡಳಿಗಳ ಹಿಡಿತದಲ್ಲಿ ಇರುವುದರಿಂದ ಅವುಗಳು ದುಬಾರಿ ಶುಲ್ಕ ನಿಗದಿಪಡಿಸಿವೆ. ಇದರಿಂದ ಸಾಮಾನ್ಯ ಜನರು ತಮ್ಮ ಮಕ್ಕಳನ್ನು ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಲು ಸಾಧ್ಯವಾಗದೆ ಸರ್ಕಾರಿ ಶಿಕ್ಷಣ ಸಂಸ್ಥೆಗಳ ಮಾತೃಭಾಷಾಮಾಧ್ಯಮ ಅಥವಾ ಕನ್ನಡದ ಶಾಲೆಗಳಿಗೆ ದಾಖಲು ಮಾಡಿದ್ದಾರೆ. ಆದರೆ ಆರ್ಥಿಕವಾಗಿ ಬಲಿಷ್ಟರಾಗಿರುವವರು ತಮ್ಮ ಮಕ್ಕಳನ್ನು ದುಬಾರಿ ಶುಲ್ಕವಾದರೂ ತೆತ್ತು ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ. ಇದರಿಂದಾಗಿ ಖಾಸಗಿ ಶಿಕ್ಷಣ ಸಂಸ್ಥೆಗಳೆಂದರೆ ಶ್ರೀಮಂತರ ಮಕ್ಕಳು, ಶ್ರೇಷ್ಟರು, ಉನ್ನತರು, ಬುದ್ಧಿವಂತರು ಕಲಿಯುವ ಶಾಲೆಗಳು, ಸರ್ಕಾರಿ ಶಿಕ್ಷಣ ಸಂಸ್ಥೆಗಳೆಂದರೆ ಬಡವರ ಮಕ್ಕಳು, ಕನಿಷ್ಟರು, ಬುದ್ಧಿವಂತರಲ್ಲದವರು ಕಲಿಯುವ ಶಾಲೆಗಳು ಎಂಬಂತಾಗಿದೆ. ಇದು ಮತ್ತು ಮುಂದುವರೆದು ಸರ್ಕಾರಿ ಶಿಕ್ಷಣ ಸಂಸ್ಥೆಗಳೆಂದರೆ ಮಾತೃಭಾಷೆ ಇಲ್ಲವೆ ಕನ್ನಡ ಭಾಷಾಮಾಧ್ಯಮದ ಶಾಲೆಗಳು, ಖಾಸಗಿ ಶಿಕ್ಷಣ ಸಂಸ್ಥೆಗಳೆಂದರೆ ಇಂಗ್ಲಿಶ್‌ಮಾಧ್ಯಮದ ಶಾಲೆಗಳು ಎಂದೂ ವಿಂಗಡಣೆಯಾಗಲು ಕಾರಣವಾಗಿದೆ. ವಾಸ್ತವವಾಗಿ ಕರ್ನಾಟಕದಲ್ಲಿನ ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳೆಂದು ಮತ್ತು ಸರ್ಕಾರಿ ಶಾಲೆಗಳನ್ನು ಮಾತೃಭಾಷೆಯಿಲ್ಲವೆ ಕನ್ನಡದ ಶಾಲೆಗಳೆಂದು ವಿಂಗಡಣೆ ಮಾಡಿಲ್ಲ. ಆಡಳಿತಾತ್ಮಕ ಅನುಕೂಲಕ್ಕೆ ಮಾತ್ರ ಶಿಕ್ಷಣ ಸಂಸ್ಥೆಗಳನ್ನು ಖಾಸಗಿ ಮತ್ತು ಸರ್ಕಾರಿ ಎಂದು ವಿಂಗಡಣೆ ಮಾಡಲಾಗಿದೆ. ಆದರೆ

ಇವು ಇಂದು ಭಾಷಾಮಾಧ್ಯಮದ ಆಧಾರದಲ್ಲಿ ವಿಂಗಡಣೆಯಾಗಿ ಜನರಲ್ಲಿ ಮೇಲು-ಕೀಳು ಎಂಬ ಭಾವನೆ ಹುಟ್ಟಲು ಕಾರಣವಾಗಿದೆ.

ಇದಕ್ಕೆ ಪೂರಕವಾಗಿ ಕರ್ನಾಟಕದಲ್ಲಿರುವ ಸರ್ಕಾರಿ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಹೇಗೆಂದರೆ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಸರ್ಕಾರದ ಹಿಡಿತದಲ್ಲಿರವುದರಿಂದ ಅವು ಸರ್ಕಾರದ ಭಾಷಾನೀತಿಯನ್ನು ಯಥಾವತ್ತಾಗಿ ಅನುಷ್ಠಾನಕ್ಕೆ ತರವುದು ಅನಿವಾರ್ಯ. ಹೀಗಾಗಿ ಅವು ಭಾಷಾನೀತಿಯನ್ನು ಯಥಾವತ್ತಾಗಿ ಅನುಷ್ಠಾನಕ್ಕೆ ತರಲು ಪ್ರಯತ್ನಿಸಿವೆ. ಇದರಿಂದಲೂ ಸಾಕಷ್ಟು ಸಮಸ್ಯೆಗಳು ಉದ್ಭವವಾಗಿವೆ. ಅವುಗಳನ್ನು 'ಶಿಕ್ಷಣದಲ್ಲಿ ಭಾಷಾಬಳಕೆ ಮತ್ತು ಸಮಸ್ಯೆಗಳು' ಹಾಗೂ 'ಶಿಕ್ಷಣ ಮಾಧ್ಯಮ ಮತ್ತು ಭಾಷಾಬಳಕೆ' ಎಂಬ ಮುಂದಿನ ಅಧ್ಯಾಯಗಳಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಇನ್ನು ಖಾಸಗಿ ಶಿಕ್ಷಣ ಸಂಸ್ಥೆಗಳು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಸಮಾಜದಲ್ಲಿ ತುಂಬಾ ಪ್ರಭಾವಶಾಲಿ ವ್ಯಕ್ತಿಗಳ ಹಿಡಿತದಲ್ಲಿ ಇವೆ. ಇವರಿಗೆ ಭಾಷೆ, ಸಮಾಜ, ಸಾಹಿತ್ಯ, ಸಂಸ್ಕೃತಿ, ಕಲೆ, ವಿಜ್ಞಾನ ಇತ್ಯಾದಿಗಳು ಬೇಕಿಲ್ಲ. ಅವರಿಗೆ ಆರ್ಥಿಕ ಲಾಭವೊಂದೇ ಮುಖ್ಯ. ಹೀಗಾಗಿ ಸರ್ಕಾರದ ಭಾಷಾನೀತಿಯನ್ನು ಧಿಕ್ಕರಿಸಿ ಜನರ ಬೇಡಿಕೆಯ ಭಾಷಾಮಾಧ್ಯಮವಾದ ಇಂಗ್ಲಿಶ್‌ನಲ್ಲಿ ಶಿಕ್ಷಣ ಕಲಿಸುತ್ತಿದ್ದಾರೆ. ಇದಕ್ಕೆ ಸಂವಿಧಾನ ಭಾರತೀಯ ಪ್ರಜೆಗೆ ನೀಡಿರುವ ಭಾಷಾಸ್ವಾತಂತ್ರ್ಯ ಮತ್ತು ನ್ಯಾಯಾಲಯಗಳ ತೀರ್ಪು ನೇರವಾದ ಬೆಂಬಲವಾದರೆ ಸರ್ಕಾರಿ ಶಿಕ್ಷಣ ಸಂಸ್ಥೆಗಳ ಸ್ಥಿತಿಗತಿ, ಕಾರ್ಯವೈಖರಿ, ವ್ಯವಸ್ಥೆ ಇದೆ. ಅಂದರೆ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಸರ್ಕಾರದ ಹಿಡಿತದಲ್ಲಿವೆ. ಅವು ಸರ್ಕಾರದ ಭಾಷಾನೀತಿಯನ್ನು ಯಥಾವತ್ತಾಗಿ ಪಾಲನೆ ಮಾಡಬೇಕು. ಇದರ ಸರ್ಕಾರಿ ಶಾಲೆಗಳು ಮಕ್ಕಳಿಗೆ ಮಗುವಿನ ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಮಾತ್ರ ಶಿಕ್ಷಣ ಕಲಿಸಬೇಕು. ಆದರೆ ಈಗಾಗಲೆ ಚರ್ಚಿಸಿರುವ ಕಾರಣಗಳಿಂದಾಗಿ ಜನರು ಮಾತೃಭಾಷೆ ಅಥವಾ ಕನ್ನಡದಲ್ಲಿ ಕಲಿಯಲು ಆಸಕ್ತರಾಗಿಲ್ಲ. ಇದರಿಂದ ಪೋಷಕರು ತಮ್ಮ ಮಕ್ಕಳನ್ನು ಹೆಚ್ಚು ಹಣ ತೆತ್ತು ಖಾಸಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ಸೇರಿಸಿದ್ದಾರೆ.

ಹೀಗೆ ಶಿಕ್ಷಣ ಸಂಸ್ಥೆಗಳ ನಡುವೆ ಉಂಟಾಗಿರುವ ಅಸಮಾನತೆಗಳ ಬಗೆಗೆ ಸರ್ಕಾರಿ ಶಾಲೆ ಮತ್ತು ಕಾಲೇಜುಗಳಲ್ಲಿ ನಡೆದಿರುವ ಸಭೆ-ಸಮಾರಂಭಗಳಲ್ಲಿ ಭಾಗವಹಿಸಿ ಶಾಲೆ ಮತ್ತು ಕಾಲೇಜುಗಳಿಗೆ ಮೂಲಭೂತವಾಗಿ ಅಗತ್ಯವಿರುವ ಬೇಡಿಕೆಗಳನ್ನು ಈಡೇರಿಸುವ ಮಾತುಗಳನ್ನಾಡಿ ನೆರೆದಿರುವ ಜನರ ಕೈಯಲ್ಲಿ ಚಪ್ಪಾಳೆಯನ್ನು ತಟ್ಟಿಸಿಕೊಂಡಿರುವ ಬಹುತೇಕ ರಾಜಕಾರಣಿಗಳು ತಮ್ಮ ಅಧಿಕಾರದ ಅವಧಿ ಆ ಶಾಲೆ ಹಾಗೂ ಕಾಲೇಜುಗಳ ಅಭಿವೃದ್ಧಿಯ ಕಡೆಗೆ ಆಸಕ್ತಿ ವಹಿಸಿಲ್ಲ. ಏಕೆಂದರೆ ಶಿಕ್ಷಣ ಸಂಸ್ಥೆಗಳು ಸರ್ಕಾರಕ್ಕಾಗಲಿ, ರಾಜಕಾರಣಿಗಳಿಗಾಗಲಿ, ಅಧಿಕಾರಿಗಳಿಗಾಗಲಿ ಆರ್ಥಿಕ ಲಾಭ ತಂದು ಕೊಡುವ ಕ್ಷೇತ್ರವಲ್ಲ. ಅಲ್ಲದೆ ಇವರಲ್ಲಿ ಹೆಚ್ಚಿನವರು ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಕಲಿತಿಲ್ಲ, ಸರ್ಕಾರಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ದಾಖಲಿಸಿಲ್ಲ. ಹೀಗಾಗಿ ಭಾರತ ಸ್ವತಂತ್ರಗೊಂಡು ಆರು ದಶಕ ಮತ್ತು ಕರ್ನಾಟಕ ಏಕೀಕರಣಗೊಂಡು ಐದು ದಶಕ ಕಳೆದಿದ್ದರೂ ರಾಜ್ಯದ ಬಹುತೇಕ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಮೂಲಭೂತ ಸೌಕರ್ಯಗಳಿಲ್ಲದೆ, ಕಾಲಕಾಲಕ್ಕೆ ಸಮರ್ಪಕವಾಗಿ ಶಿಕ್ಷಕರ ನೇಮಕಾತಿಯಾಗದೆ

ಉಳಿದಿವೆ. ಹೀಗಾಗಿ ರಾಜ್ಯದ ಸರ್ಕಾರಿ ಸಂಸ್ಥೆಗಳ ಗುಣಮಟ್ಟ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಹೋಲಿಸಿದರೆ ಸ್ವಲ್ಪ ಹಿಂದೆ ಇದೆ. ಇದರಿಂದ ರಾಜ್ಯದಲ್ಲಿ ಆರ್ಥಿಕವಾಗಿ ಶ್ರೀಮಂತವಾಗಿರುವವರು ತಮ್ಮ ಮಕ್ಕಳನ್ನು ಸರ್ಕಾರಿ ಶಾಲೆಗಳಿಗೆ ಸೇರಿಸಲು ಹಿಂದೆ ಸರಿದಿದ್ದಾರೆ. ಇತ್ತೀಚಿನ ದಿನಗಳಲ್ಲಿ ಬಡವರು ಕೂಡ ಇದೇ ದಾರಿಯನ್ನು ಹಿಡಿದಿದ್ದಾರೆ. ಇದರಿಂದಾಗಿ ದೇಶದಲ್ಲಿ ಜನಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿದ್ದರೂ ಸರ್ಕಾರಿ ಶಾಲೆಗಳಿಗೆ ದಾಖಲಾಗುವ ವಿದ್ಯಾರ್ಥಿಗಳ ಸಂಖ್ಯೆ ಕ್ಷೀಣಿಸಿದೆ. ಇಂತಹ ಸಂದರ್ಭಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇರುವ ಶಾಲೆಗಳನ್ನು ಮುಚ್ಚುವ ಮಾತುಗಳನ್ನು ಸರ್ಕಾರ ಆಡಿದೆ.

ಸರ್ಕಾರಿ ಶಿಕ್ಷಣಗಳು ಇಂತಹ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಲು ಮತ್ತೊಂದು ಕಾರಣವೂ ಇದೆ. ಅದು ಕರ್ನಾಟಕದಲ್ಲಿರುವ ಕೆಲವು ರಾಜಕೀಯ ಮತ್ತು ಅಧಿಕಾರಯುತ ಪಟ್ಟಭದ್ರ ಹಿತಾಸಕ್ತಿಗಳು ವಿರೋಧ. ಏಕೆಂದರೆ ರಾಜ್ಯದಲ್ಲಿರುವ ಬಹುತೇಕ ಖಾಸಗಿ ಶಿಕ್ಷಣ ಸಂಸ್ಥೆಗಳು ರಾಜಕಾರಣಿಗಳು, ಮಠಾಧೀಶರು, ಅಧಿಕಾರಿಗಳ ಮತ್ತು ಆರ್ಥಿಕವಾಗಿ ಬಲಿಷ್ಟರಾದವರ ಒಡೆತನದಲ್ಲಿ ಇವೆ. ಇವರಿಗೆ ಸರ್ಕಾರಿ ಶಾಲೆಗಳನ್ನು ಅಭಿವೃದ್ಧಿಪಡಿಸಿದರೆ, ಸರ್ಕಾರಿ ಶಾಲೆ ಕಾಲೇಜುಗಳಲ್ಲಿ ಇಂದಿನ ಅಗತ್ಯಕ್ಕೆ ಅನುಗುಣವಾಗಿ ಭಾಷೆಗಳನ್ನು ಕಲಿಸಿದರೆ ಪೋಷಕರು ಹೆಚ್ಚು ಹಣವನ್ನು ತೆರಬೇಕಾಗುತ್ತದೆ ಎಂಬ ಕಾರಣಕ್ಕಾಗಿ ತಮ್ಮ ಮಕ್ಕಳನ್ನು ಖಾಸಗಿ ಶಾಲೆಗಳಿಗೆ ದಾಖಲು ಮಾಡಿಸುವುದಿಲ್ಲ. ಇದರಿಂದ ನಾವು ಶಾಲೆಗಳನ್ನು ಮುಚ್ಚುಬೇಕಾಗುತ್ತದೆ. ನಮ್ಮ ಶಾಲೆಗಳು ಉಳಿಯಬೇಕಾದರೆ, ಆರ್ಥಿಕವಾಗಿ ಲಾಭ ಪಡೆಯಬೇಕಾದರೆ ಸರ್ಕಾರಿ ಶಾಲೆಗಳು ಅಭಿವೃದ್ಧಿ ಹೊಂದದ ಹಾಗೆ ನೋಡಿಕೊಳ್ಳಬೇಕು. ಮತ್ತು ಜನರ ಬೇಡಿಕೆ ಅನುಗುಣವಾದ ಭಾಷಾಮಾಧ್ಯಮದಲ್ಲಿ ಶಿಕ್ಷಣ ಕಲಿಸಬೇಕು. ಆಗ ಮಾತ್ರ ನಮ್ಮ ಶಾಲೆಗಳು ಜೀವಂತವಾಗಿ ಉಳಿಯಲು ಸಾಧ್ಯ ಎಂದು ಖಾಸಗಿ ಆಡಳಿತ ಮಂಡಳಿಗಳು ಅರಿತಿವೆ. ಇದಕ್ಕೆ ರಾಜ್ಯ ಸರ್ಕಾರವು ತನ್ನ ಕಾರ್ಯಾಂಗ ಅಧಿಕಾರವನ್ನು ಚಲಾಯಿಸಿ, ೧೯.೧೦.೧೯೬೯ರಂದು ಹೊರಡಿಸಿರುವ ಪ್ರಾಥಮಿಕ ಶಾಲೆಗಳ ಸಹಾಯಾನುದಾನ ಸಂಹಿತೆಯನ್ನು ಬಳಸಿಕೊಂಡಿವೆ. ಈ ಸಂಹಿತೆಯ ೧೨ನೆಯ ನಿಯಮ ಹೀಗಿದೆ:

"೧೨. ಶಿಕ್ಷಣ ಮಾಧ್ಯಮ: (೧) ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮವು ಸಾಮಾನ್ಯವಾಗಿ ಪ್ರಾದೇಶಿಕ ಭಾಷೆ ಅಥವಾ ಮಗುವಿನ ಮಾತೃಭಾಷೆ ಆಗಿರತಕ್ಕದ್ದು.

(೨) ಭಾಷಾ ಅಲ್ಪಸಂಖ್ಯಾತರಿಗೆ ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ, ನಿರ್ದಿಷ್ಟಪಡಿಸಿರುವ ಷರತ್ತುಗಳಿಗೊಳಪಟ್ಟ ಅವರ ಮಾತೃಭಾಷೆಯಲ್ಲೆ ಬೋಧನೆಗೆ ವ್ಯವಸ್ಥೆ ಮಾಡತಕ್ಕದ್ದು.

ಇಂಗ್ಲಿಷ್ ಮಾಧ್ಯಮದ ಶಾಲೆಗಳನ್ನು ಅಥವಾ ಈಗಿರುವ ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮದ ವಿಭಾಗಗಳನ್ನು ಈ ಮುಂದೆ ಹೇಳಿರುವ ವಿದ್ಯಾರ್ಥಿ ವರ್ಗಗಳ ಪ್ರಯೋಜನಕ್ಕಾಗಿ, ನಿರ್ದೇಶಕರ ಅನುಮತಿಯೊಂದಿಗೆ ಪ್ರಾರಂಭಿಸಬಹುದು;

೧) ಇಂಗ್ಲಿಷ್ ಮಾತೃಭಾಷೆಯಾಗಿರುವ ವಿದ್ಯಾರ್ಥಿಗಳು;

೨) ಅಖಿಲ ಭಾರತ ಸೇವೆಗಳು, ಕೇಂದ್ರ ಸೇವೆಗಳು ಇತ್ಯಾದಿಗಳಿಗೆ ಹಾಗೂ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ವರ್ಗಾವಣೆಯಾಗುವುದಕ್ಕೆ ಬದ್ಧರಾಗಿರುವ ತಂದೆ-ತಾಯಿಯವರ ಮಕ್ಕಳು (ಆಯಾ ಇಲಾಖೆಯಿಂದ ಪ್ರಮಾಣಪತ್ರಗಳನ್ನು ಹಾಜರುಪಡಿಸಬೇಕು);

೩) ವಲಸೆ ಗುಂಪಿಗೆ ಸೇರಿದ ಮಕ್ಕಳು-ವಲಸೆ ಗುಂಪು ಎಂದರೆ ಯಾವ ಖಾಯಂ ವಾಸಸ್ಥಾನವೂ ಇರದವರು ಅಥವಾ ವ್ಯಾಪಾರ-ವ್ಯವಹಾರ ಅಥವಾ ಇತರ ಕಾರಣಗಳಿಂದಾಗಿ

ಎಂದರೆ ನಿರ್ಮಾಣ ಕಾಮಗಾರಿಗಳಲ್ಲಿ ಉದ್ಯೋಗದಲ್ಲಿರುವ ಕಾರ್ಮಿಕರಾಗಿರುವ ಕಾರಣದಿಂದಾಗಿ ಆಗಿಂದಾಗ್ಗೆ ರಾಜ್ಯದಿಂದ ರಾಜ್ಯಕ್ಕೆ ವಲಸೆ ಹೋಗುವವರು;

೪) ಒಂದಕ್ಕಿಂತ ಹೆಚ್ಚು ರಾಜ್ಯಗಳಲ್ಲಿ ಶಾಖೆಗಳನ್ನು ಹೊಂದಿರುವ ಬ್ಯಾಂಕುಗಳ, ಫರ್ಮುಗಳ ಹಾಗೂ ಇತರ ವ್ಯವಹಾರ ಸಂಸ್ಥೆಗಳ ಉದ್ಯೋಗಿಗಳ ಮತ್ತು ರಾಜ್ಯದಿಂದ ರಾಜ್ಯಕ್ಕೆ ವರ್ಗಾವಣೆಯಾಗಲು ಬದ್ಧರಾಗಿರುವ ಉದ್ಯೋಗಿಗಳ ಮಕ್ಕಳು (ಆಯಾ ಪ್ರಾಧಿಕಾರಗಳಿಂದ ಪ್ರಮಾಣಪತ್ರಗಳನ್ನು ಹಾಜರು ಪಡಿಸಬೇಕು);

೫) ಸ್ಥಳೀಯ ಶಾಲೆಗಳಲ್ಲಿ ಯಾವ ವ್ಯವಸ್ಥೆಯೂ ಇರದ, ಅಲ್ಪಸಂಖ್ಯಾತ ಭಾಷೆಯ ಮಾತೃಭಾಷೆ ಯಾಗಿರುವ ಮಕ್ಕಳು;

೬) ಅಂಥ ಶಾಲೆಗಳನ್ನು ನಿರ್ದೇಶಕರ ಅನುಮತಿ ಪಡೆದುಕೊಂಡಾದ ಮೇಲೆಯೇ ಪ್ರಾರಂಭಿಸಬೇಕು; ಮತ್ತು

೭) ಇಂಗ್ಲಿಷ್ ಮಾಧ್ಯಮದ ಶಾಲೆಯನ್ನು ಅಥವಾ ತರಗತಿಯನ್ನು ೧ ರಿಂದ ೪ ರವರೆಗಿನ ತರಗತಿಗಳನ್ನು ಒಟ್ಟಾಗಿ ತೆಗೆದುಕೊಂಡರೆ ಪ್ರತಿ ತರಗತಿಯಲ್ಲಿಯೂ ಕನಿಷ್ಠ ಸಂಖ್ಯೆ ೧೦ ಅಥವಾ ೩೦ ಇರಬೇಕೆಂಬ ಷರತ್ತಿಗೊಳಪಟ್ಟು ಪ್ರಾರಂಭಿಸಲು ಅನುಮತಿ ಕೊಡಬಹುದು. ೫ ರಿಂದ ೭ನೇ ತರಗತಿಯವರೆಗಿನ ತರಗತಿಗಳಿಗೆ ಕನಿಷ್ಠ ಸಂಖ್ಯೆ ಪ್ರತಿ ತರಗತಿಗೆ ೧೦ ಇರತಕ್ಕದ್ದು." [೩೪] ಎಂದು ಹೇಳಿದೆ.

ಇವುಗಳನ್ನು ಇಂಗ್ಲಿಶ್ ಮಾತೃಭಾಷೆಯಾಗಿರುವ ಮಕ್ಕಳು, ಕೇಂದ್ರ ಸರ್ಕಾರದ ನೌಕರಿಯಲ್ಲಿರುವ ನೌಕರರ ಮಕ್ಕಳು, ರಾಜ್ಯದಿಂದ ಅನ್ಯರಾಜ್ಯಕ್ಕೆ ವಲಸೆ ಹೋಗುವವರ ಮಕ್ಕಳು ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿತು ಸಮಾಜದಲ್ಲಿ ಪ್ರತಿಷ್ಠಿತ ಹುದ್ದೆಗಳನ್ನು ಪಡೆಯಬೇಕು. ಉತ್ತಮ ಬದುಕನ್ನು ಕಟ್ಟಿಕೊಳ್ಳಬೇಕು. ಉಳಿದವರು ಮಾತ್ರ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಕಲಿತು ತಮ್ಮ ಬದುಕನ್ನು ಕಳೆದುಕೊಳ್ಳಬೇಕೆ? ಕರ್ನಾಟಕದಲ್ಲಿ ನೆಲೆಸಿರುವವರಿಗೆ ಒಂದು ನೀತಿ, ಅನ್ಯರಾಜ್ಯಗಳಲ್ಲಿ ಕಾರ್ಯನಿರ್ವಹಿಸುತ್ತಾರೆ ಎಂಬ ಕಾರಣಕ್ಕೆ ಒಂದು ನೀತಿಯೇ? ಕೇಂದ್ರ ಸರ್ಕಾರದ ಸೇವೆಯಲ್ಲಿರುವ ಹೆಚ್ಚಿನ ನೌಕರರು ತಮ್ಮ ಪೂರ್ಣ ಸೇವಾವಧಿಯನ್ನು ಕರ್ನಾಟಕದಲ್ಲಿಯೇ ಪೂರ್ಣಗೊಳಿಸುತ್ತಾರೆ. ಹೀಗಿರುವಾಗ ಮೇಲೆ ಹೇಳಿದ ವರ್ಗಕ್ಕೆ ಸೇರಿದ ಮಕ್ಕಳು ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿತು ಉತ್ತಮ ಉದ್ಯೋಗಗಳನ್ನು ಪಡೆದು ಶ್ರೀಮಂತರಾಗಬೇಕು. ಬಡವರ ಮಕ್ಕಳು ಕನ್ನಡದಲ್ಲಿ ಕಲಿತು ಉದ್ಯೋಗವಿಲ್ಲದೆ ಮತ್ತಷ್ಟು ಬಡವರಾಗಬೇಕೆ? ಹೀಗೆ ಆಗಬಾರದು. ರಾಜ್ಯದಲ್ಲಿ ಇರುವ ಎಲ್ಲರೂ ರಾಜ್ಯಭಾಷೆಯಾದ ಕನ್ನಡ ಮಾಧ್ಯಮದಲ್ಲಿಯೇ ಕಲಿಯಬೇಕು. ಕನ್ನಡದಲ್ಲಿ ಕಲಿತವರಿಗೆ ಉದ್ಯೋಗ ಸಿಗುವಂತಹ ವ್ಯವಸ್ಥೆ ಕರ್ನಾಟಕದಲ್ಲಿ ನಿರ್ಮಾಣ ಆಗಬೇಕು. ಇದನ್ನು ರಾಜ್ಯಸರ್ಕಾರ ಮಾಡಬೇಕು ಎಂದು ಕನ್ನಡಪರ ಚಿಂತಕರು, ಹೋರಾಟಗಾರರು ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣವನ್ನು ವಿರೋಧಿಸಿದ್ದಾರೆ.

ಆದರೆ ಸಂವಿಧಾನದ ಚೌಕಟ್ಟು, ನ್ಯಾಯಾಲಯಗಳ ತೀರ್ಪಿಗೆ ವಿರುದ್ಧವಾಗಿ ಭಾಷಾನೀತಿಗಳನ್ನು ಜಾರಿಗೆ ತಂದು ಖಾಸಗಿ ಶಾಲೆಗಳಲ್ಲಿನ ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣವನ್ನು ತಡೆಗಟ್ಟಲು ಸಾಧ್ಯವಾಗದ ಸರ್ಕಾರಗಳು ತನ್ನ ಹಿಡಿತದಲ್ಲಿರುವ ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಮಾತ್ರ ಮಾತೃಭಾಷೆ ಇಲ್ಲವೆ ಕನ್ನಡದ ಶಿಕ್ಷಣವನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸಿವೆ. ಇದರಿಂದ ರಾಜ್ಯದಲ್ಲಿ ಭಾಷಾಮಾಧ್ಯಮದ ಆಧಾರದಲ್ಲಿ ಅಸಮಾನತೆ ಉಂಟಾಗಿದೆ. ಈ ಅಸಮಾನತೆಯನ್ನು ತಡೆಗಟ್ಟುವ

ನಿಟ್ಟಿನಲ್ಲಿ ಸಮಾನ ಶಿಕ್ಷಣಕ್ಕಾಗಿ ಹಕ್ಕೊತ್ತಾಯಗಳು ಆರಂಭಗೊಂಡಿವೆ. ಈ ಸಮಾನ ಶಿಕ್ಷಣದ ಹಕ್ಕೊತ್ತಾಯಕ್ಕೆ ಹೋರಾಡುತ್ತಿರುವ ಹೋರಾಟಗಾರರು ರಾಜ್ಯದಾದ್ಯಂತ ಏಕರೂಪದ ಶಿಕ್ಷಣವನ್ನು ಜಾರಿಗೆ ತರಬೇಕು. ರಾಜ್ಯದ ಎಲ್ಲಾ ಮಕ್ಕಳಿಗೂ ಅವರುಗಳ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡ ಭಾಷಾಮಾಧ್ಯಮದಲ್ಲಿ ಮಾತ್ರ ಶಿಕ್ಷಣ ದೊರಕುವಂತೆ ಮಾಡಬೇಕು. ಹಾಗೆಯೇ ಕರ್ನಾಟಕದಲ್ಲಿರುವ ಎಲ್ಲಾ ವಿದ್ಯಾರ್ಥಿಗಳಿಗೂ ಸಂವಹನ ರೂಪದ ಇಂಗ್ಲಿಶ್ ಭಾಷೆಯನ್ನು ಕಲಿಸುವ ವ್ಯವಸ್ಥೆ ನಿರ್ಮಾಣ ಮಾಡಬೇಕು ಎಂಬ ಬೇಡಿಕೆಯೊಂದಿಗೆ ತಮ್ಮ ಹೋರಾಟಗಳನ್ನು ಮುಂದುವರಿಸಿದ್ದಾರೆ. ಈ ಹೋರಾಟಗಳ ಸಂದರ್ಭದಲ್ಲಿಯೇ ಖಾಸಗಿ ಶಾಲೆಗಳಲ್ಲಿನ ಇಂಗ್ಲಿಶ್ ಮಾಧ್ಯಮದ ಶಿಕ್ಷಣವನ್ನು ನಿಯಂತ್ರಿಸಲು ಸಾಧ್ಯವಾಗದಿದ್ದರೆ ಸರ್ಕಾರಿ ಶಾಲೆಗಳಲ್ಲಿಯೂ ಇಂಗ್ಲಿಶ್ ಮಾಧ್ಯಮದ ಶಿಕ್ಷಣವನ್ನು ಜಾರಿಗೆ ತನ್ನಿ ಎಂಬ ಬೇಡಿಕೆಗಳು ಹುಟ್ಟಿಕೊಂಡಿವೆ.

ಇದಕ್ಕೆ ಪೂರಕವಾಗಿ ಕರ್ನಾಟಕದ ಶಿಕ್ಷಣ ಮಂತ್ರಿಗಳಾಗಿದ್ದ ಸನ್ಮಾನ್ಯ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ಪ್ರಾಥಮಿಕ ಹಂತದಲ್ಲಿ ಮಗುವಿನ ಮಾತೃಭಾಷಾಮಾಧ್ಯಮದ ಕಲಿಕೆ ಬಾಧಕವಾಗದಂತೆ ಸರ್ಕಾರಿ ಶಾಲೆಗಳಲ್ಲು ಆರನೇ ತರಗತಿಯಿಂದ ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣವನ್ನು ಆರಂಭಿಸುವ ಮಾತನ್ನಾಡಿದ್ದಾರೆ. ಹೀಗೆ ಭಾಷಾಮಾಧ್ಯಮದ ಕಲಿಕೆ ಕರ್ನಾಟಕದಲ್ಲಿ ಕಾಲದಿಂದ ಕಾಲಕ್ಕೆ ಬದಲಾದಂತೆ ತೀವ್ರವಾದ ಚರ್ಚೆಗೆ ಗ್ರಾಸವಾಗಿರುವ ವಿಷಯವಾಗಿದೆ. ಹಾಗೆಯೇ ಸಮಸ್ಯೆಗಳನ್ನು ಹುಟ್ಟುಹಾಕಿರುವ ವಿಷಯವೂ ಆಗಿದೆ. ಏಕೆಂದರೆ ಈಗಾಗಲೇ ಚರ್ಚಿಸಿರುವ ಹಾಗೆ ಆಡಳಿತ, ಶಿಕ್ಷಣ, ಉದ್ಯೋಗಗಳಲ್ಲಿ ಬಳಕೆಯಾಗಿರುವ, ಬಳಕೆಯಾಗುತ್ತಿರುವ ಭಾಷೆಗಳ ನಡುವೆ ಹೊಂದಾಣಿಕೆಯ ಕೊರತೆ ಇದೆ. ಇವುಗಳನ್ನು ಸರಿದೂಗಿಸುವ ನಿಟ್ಟಿನಲ್ಲಿ ಕರ್ನಾಟಕದ ಶಿಕ್ಷಣದಲ್ಲಿ ಭಾಷೆಗಳನ್ನು ಕಲಿಸುವ ಯೋಜನೆ ರೂಪಿಸಲಾಗಿದೆ. ಆದರೆ ಅವುಗಳು ಸಮರ್ಪಕವಾಗಿ ಅನುಷ್ಠಾನವಾಗಿಲ್ಲ. ಇದರಿಂದ ಭಾಷಾಮಾಧ್ಯಮದ ಸಮಸ್ಯೆ ತೀವ್ರಸ್ವರೂಪ ಪಡೆದುಕೊಂಡಿದೆ. ಅಲ್ಲದೆ ಇದು ಕರ್ನಾಟಕ ಸರ್ಕಾರ ಇದುವರೆಗೆ ಜಾರಿಗೆ ತಂದಿರುವ ಭಾಷಾನೀತಿಗಳನ್ನು ಅತಂತ್ರಗೊಳಿಸಿದೆ. ಇದು ಕರ್ನಾಟಕದಲ್ಲಿ ಶಿಕ್ಷಣ, ಆಡಳಿತ, ಉದ್ಯೋಗ, ನ್ಯಾಯಾಲಯ ಸೇರಿದಂತೆ ಭಾಷಿಕ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲೂ ಸಮಸ್ಯೆಗಳು ಉದ್ಭವವಾಗಲು ಕಾರಣವಾಗಿದೆ. ಇವುಗಳು ಭಾಷೆಯಿಂದ ಭಾಷೆಗೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿವೆ. ಇವುಗಳನ್ನು **'ಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು'** ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಹೀಗಾಗಿ ಒಂದು ಪ್ರದೇಶದಲ್ಲಿ ಬಳಕೆಯಾಗುವ ಭಾಷೆಯ ಬಗೆಗೆ ಜಾರಿಗೆ ತಂದ ಭಾಷಾನೀತಿಗಳು ಯಶಸ್ವಿಯಾಗಬೇಕಾದರೆ ಆ ಪ್ರದೇಶದ ಶಿಕ್ಷಣದಲ್ಲಿನ ವಿವಿಧ ಹಂತ ಹಾಗೂ ವಿಷಯಗಳ ಬೋಧನೆಯಲ್ಲಿ ಏಕರೂಪದ ಭಾಷೆಯ ಬಳಕೆ ಇರಬೇಕು. ಅಂದರೆ ಪ್ರಾಥಮಿಕ ಹಂತದಿಂದ ಉನ್ನತ ವ್ಯಾಸಂಗದವರೆಗೆ ವೃತ್ತಿಪರ ಶಿಕ್ಷಣ ಸೇರಿದಂತೆ ಆ ಪ್ರದೇಶದ ಎಲ್ಲಾ ಬಗೆಯ ಶಿಕ್ಷಣ ಆ ಭಾಷೆಯಲ್ಲಿ ಕಲಿಯುವಂತಿರಬೇಕು. ಹಾಗೆಯೇ ಆ ಪ್ರದೇಶದ ಆಡಳಿತ, ಶಿಕ್ಷಣ, ಉದ್ಯೋಗ ಮುಂತಾದ ಕ್ಷೇತ್ರಗಳಲ್ಲಿ ಆ ಭಾಷೆ ಬಳಕೆಯಾಗುತ್ತಿರಬೇಕು. ಒಂದು ವೇಳೆ ಆ ಪ್ರದೇಶದಲ್ಲಿನ ಆಡಳಿತ,

ಶಿಕ್ಷಣ, ಉದ್ಯೋಗ ಮುಂತಾದ ಕ್ಷೇತ್ರಗಳಲ್ಲಿ ಹೊಂದಾಣಿಕೆ ಇಲ್ಲದಿದ್ದರೆ ಹೊಂದಾಣಿಕೆಯಾಗುವ ರೀತಿಯಲ್ಲಿ ಅಲ್ಲಿನ ಸರ್ಕಾರಗಳು ಭಾಷಾನೀತಿಯನ್ನು ಜಾರಿಗೆ ತರಬೇಕು. ಒಂದಕ್ಕೊಂದು ಪೂರಕವಾಗಿರದಂತೆ ಪ್ರತ್ಯೇಕವಾಗಿ ಭಾಷಾನೀತಿಗಳನ್ನು ಜಾರಿಗೆ ತಂದರೆ ಆ ಭಾಷಾನೀತಿಗಳು ಸಂಪೂರ್ಣವಾಗಿ ಅನುಷ್ಠಾನಕ್ಕೆ ಬರುವಲ್ಲಿ ವಿಫಲವಾಗುತ್ತವೆ. ಅಲ್ಲದೆ ಇದು ಆ ಪ್ರದೇಶದಲ್ಲಿ ವಾಸಿಸುವ ಜನರ ನಡುವೆ ಭಾಷಿಕ ಸಮಸ್ಯೆ ಸೇರಿದಂತೆ ಸಾಮಾಜಿಕವಾದ, ರಾಜಕೀಯವಾದ, ಆರ್ಥಿಕವಾದ, ಸಾಂಸ್ಕೃತಿಕವಾದ ಅಸಮಾನತೆಗಳ ಹುಟ್ಟಿಗೆ ಕಾರಣವಾಗುತ್ತದೆ. ಇದರಿಂದಾಗಿಯೇ ಕರ್ನಾಟಕ ಸರ್ಕಾರ ೧೯೬೩ರಲ್ಲಿ ಕನ್ನಡವನ್ನು ಕರ್ನಾಟಕದ ಆಡಳಿತ ಭಾಷೆಯಾಗಿ ಬಳಕೆಗೆ ತರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತಂದಿದ್ದರೂ ಅದು ಸಂಪೂರ್ಣವಾಗಿ ಅನುಷ್ಠಾನಕ್ಕೆ ಬರುವಲ್ಲಿ ವಿಫಲವಾಗಿರುವುದು.

ಕರ್ನಾಟಕ ಸರ್ಕಾರ ಈ ಭಾಷಾನೀತಿಯನ್ನು ಜಾರಿಗೆ ತಂದಾಗ ಕರ್ನಾಟಕದ ಶಿಕ್ಷಣದಲ್ಲಿ ಕನ್ನಡ ಭಾಷೆಯನ್ನು ಕಲಿಯದೆಯೇ ಶಿಕ್ಷಣ ಪೂರ್ಣಗೊಳಿಸಲು ಸಾಧ್ಯವಿತ್ತು. ಇದನ್ನು ಗಮನಿಸದೆ ಕರ್ನಾಟಕ ಸರ್ಕಾರ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರುವ ಉದ್ದೇಶದಿಂದ ೧೯೬೩ರಲ್ಲಿ ಕರ್ನಾಟಕ ಸರ್ಕಾರ ಕರ್ನಾಟಕ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತಂದಿದೆ. ಆದರೆ ಶಾಲೆಗಳಲ್ಲಿ ಮಕ್ಕಳು ಕನ್ನಡವನ್ನು ಕಲಿಯದೆ ಆಡಳಿತದಲ್ಲಿ ಕನ್ನಡವನ್ನು ಬಳಸಲು ಹೇಗೆ ಸಾಧ್ಯ? ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಹಾಗೆಯೇ ಮಗು ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಯಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತಂದಾಗ ಸರ್ಕಾರಿ ಉದ್ಯೋಗಗಳ ಕಡಿತ, ಜಾಗತೀಕರಣದ ಪರಿಣಾಮವಾಗಿ ಕರ್ನಾಟಕದಲ್ಲಿ ಆರಂಭಗೊಂಡಿರುವ ಖಾಸಗಿ ಬಹುರಾಷ್ಟ್ರೀಯ ಕಂಪನಿ, ಕೈಗಾರಿಕೆ, ಉದ್ದಿಮೆಗಳಲ್ಲಿ ಇಂಗ್ಲಿಶ್ ಭಾಷಾಜ್ಞಾನವಿಲ್ಲದೆ ಉದ್ಯೊಗವೇ ಇಲ್ಲ ಎನ್ನುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ.

ಇವುಗಳನ್ನು ಗಮನಿಸಿದಾಗ ಕರ್ನಾಟಕ ಸರ್ಕಾರ ಆಡಳಿತ, ಶಿಕ್ಷಣದಲ್ಲಿ ಬಳಸಬೇಕಾದ, ಕಲಿಸಬೇಕಾದ ಭಾಷೆಗೆ ಸಂಬಂಧಿಸಿದಂತೆ ಭಾಷಾನೀತಿಯನ್ನು ಜಾರಿಗೆ ತಂದಾಗ ಕರ್ನಾಟಕದ ಆಡಳಿತ, ಶಿಕ್ಷಣ, ಉದ್ಯೋಗದ ಭಾಷೆಗಳ ನಡುವೆ ಹೊಂದಾಣಿಕೆಯ ಕೊರತೆ ಇರುವುದು ಸ್ಪಷ್ಟವಾಗುತ್ತದೆ. ಭಾಷಾನೀತಿಗಳನ್ನು ಜಾರಿಗೆ ಪೂರ್ವದಲ್ಲಿ ಸರ್ಕಾರಗಳು ಇದನ್ನು ಅರಿತು ಸಿದ್ಧತೆ ಮಾಡಿಕೊಳ್ಳಬೇಕು. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಇದಕ್ಕೆ ಸಿದ್ಧತೆಗಳನ್ನು ಮಾಡಿಕೊಂಡಿರಲಿಲ್ಲ. ಇದರಿಂದ ಕರ್ನಾಟಕದಲ್ಲಿ ಸರ್ಕಾರಗಳು ಭಾಷಾನೀತಿಗಳನ್ನು ಜಾರಿಗೆ ತಂದಾಗ ಸಮಸ್ಯೆಗಳು ಉದ್ಭವಿಸಿವೆ. ಇವು ದಿನದಿಂದ ದಿನಕ್ಕೆ ತೀವ್ರಸ್ವರೂಪವನ್ನು ಪಡೆದುಕೊಂಡಿವೆ. ಇವುಗಳನ್ನು ಸರಿಪಡಿಸಬೇಕಾದ ಸರ್ಕಾರಗಳು ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲೂ ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣವನ್ನು ಆರಂಭಿಸುವ ಮಾತುಗಳನ್ನಾಡಿವೆ. ಇದರಿಂದಾಗಿ 'ತಮ್ಮ ಭಾಷೆಯನ್ನು ಬಿಟ್ಟರೆ ತಮ್ಮತನ, ತಮ್ಮ ಸಂಸ್ಕೃತಿ ಉಳಿಯುವುದಿಲ್ಲ ಎಂಬ ಕಟು ಸತ್ಯವನ್ನು

ಅರಿತುಕೊಂಡಿದ್ದರಿಂದಲೇ ನಕ್ಷೆಯಲ್ಲಿ ಎಷ್ಟೇ ಸಣ್ಣದಿರಲಿ ಯುರೋಪಿನ ಪ್ರತಿಯೊಂದು ದೇಶವೂ ಪೂತದಂತೆ ತನ್ನ ಭಾಷೆಯಲ್ಲೇ ಆಡಳಿತ, ಶಿಕ್ಷಣ, ಉದ್ಯಮ, ನಿತ್ಯವ್ಯವಹಾರ, ಮೊದಲಾದ ಸಮಸ್ತಬೌದ್ಧಿಕ ಸಾಂಸ್ಕೃತಿಕ ವ್ಯಾಪಾರಗಳನ್ನು ನಡೆಸುತ್ತದೆ. ಈ ದೇಶಗಳಿಗೂ ಕರ್ನಾಟಕಕ್ಕು ಒಂದು ಮುಖ್ಯವಾದ ವ್ಯತ್ಯಾಸವಿದೆ. ತಮ್ಮ ದೇಶದ ಕೃಷಿ, ಉದ್ಯಮ ವ್ಯಾಪಾರಗಳು ತಮ್ಮ ಜನರಿಗೆ ಉದ್ಯೋಗವನ್ನು ಕೊಡುವ ಸಾಮರ್ಥ್ಯವನ್ನು ಹೊಂದಿವೆ. ಮಾತ್ರವಲ್ಲ, ಹೊಟ್ಟೆಪಾಡಿಗಾಗಿ ಪರದೇಶಕ್ಕೆ ಕಳುಹಿಸುವುದು ರಾಷ್ಟ್ರೀಯ ಅಗೌರವ ಎಂಬ ಪ್ರಜ್ಞೆ ಅವುಗಳಿಗೆ ಇದೆ. ಇಂಗ್ಲಿಷ್ ಮಾಧ್ಯಮದಲ್ಲಿ ಓದಿಸದಿದ್ದರೆ ನಮ್ಮ ಮಕ್ಕಳಿಗೆ ಕೆಲಸ ಸಿಗುವುದಿಲ್ಲ ಎಂಬ ಮಾತನ್ನು ಹೆತ್ತವರು ಮಾತ್ರವಲ್ಲ ಕರ್ನಾಟಕದ ರಾಜಕಾರಣಿಗಳು ಹೇಳುತ್ತಾರೆ. ಕರ್ನಾಟಕದ ಮಕ್ಕಳ ಉದ್ಯೋಗ ಸಮಸ್ಯೆಗಳನ್ನು ನಿವಾರಿಸಲು ತಾವು ಅಸಮರ್ಥರು ಎಂದು ಅವರು ಈ ಮೂಲಕ ಒಪ್ಪಿಕೊಳ್ಳುತ್ತಾರೆ[೩೫]' ಎಂದು ಡಾ.ಪಿ.ಮಹಾದೇವಯ್ಯನವರು ಇಲ್ಲಿನ ರಾಜಕಾರಣೆಗಳ ಮನಃಸ್ಥಿತಿಯನ್ನು ಹೊರಹಾಕಿದ್ದಾರೆ.

ಈ ಮನಃಸ್ಥಿತಿ ರಾಜಕಾರಣಿಗಳಿಗೆ ಇಂಗ್ಲಿಶ್ ಮೇಲಿನ ಭಾಷಿಕ ಪ್ರೀತಿ ಮತ್ತು ಕನ್ನಡ ಹಾಗೂ ಇತರ ಸ್ಥಳೀಯ ಭಾಷೆಗಳ ಮೇಲಿನ ವಿರೋಧದಿಂದ ಉದ್ಭವಿಸಿರುವುದಲ್ಲ. ಬದಲಾಗಿ ಈಗಾಗಲೇ ಚರ್ಚಿಸಿರುವ ಹಾಗೆ ಕರ್ನಾಟಕದಲ್ಲಿರುವ ಬಹುತೇಕ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳು ರಾಜಕಾರಣಿಗಳ ಹಿಡಿತದಲ್ಲಿರುವುದು. ಮತ್ತು ಅವರು ಇದರಿಂದ ಆರ್ಥಿಕ ಲಾಭ ಪಡೆಯುತ್ತಿರುವುದು. ಇದರಿಂದಾಗಿ ‘ಕನ್ನಡ ಭಾಷಾಮಾಧ್ಯಮ ಇಂದು ಸುಪ್ರೀಂಕೋರ್ಟ್‌ವರೆಗೆ ಏರಿ, ಅಲ್ಲಿ ಸೋಲು ಕಾಣುವುದರಲ್ಲಿ ರಾಜಕಾರಣಿಗಳ ಹುನ್ನಾರ ಅಡಗಿದೆ. ರಾಜಕಾರಣಿಗಳು ಶಿಕ್ಷಣವನ್ನು ವ್ಯಾಪಾರೀಕರಣ ಮಾಡಿರುವುದರ ಪರಿಣಾಮ ಭಾಷಾಮಾಧ್ಯಮಕ್ಕೆ ಆಪತ್ತು ಎದುರಾಗಿದೆ. ಯಾವ ರಾಜ್ಯಕ್ಕೂ ಇಲ್ಲದ ಸಮಸ್ಯೆ ನಮ್ಮ ರಾಜ್ಯಕ್ಕೆ ಬಂದಿದೆ ಎಂದರೆ ಏನರ್ಥ? ಈ ವಿಷಯಕ್ಕೆ ಸುಪ್ರೀಂಕೋರ್ಟ್‌ವರೆಗೆ ಹೋಗಬೇಕಾದ ಅಗತ್ಯವಿರಲಿಲ್ಲ. ಇಂಗ್ಲಿಶ್ ಹೇಗೆ ಅನಿವಾರ್ಯ ಎನಿಸುತ್ತಿದೆಯೋ ಅದೇ ರೀತಿ ಕನ್ನಡಕ್ಕೂ ಅನಿವಾರ್ಯತೆ ಸೃಷ್ಟಿಸುವ ಇಚ್ಛಾಶಕ್ತಿ ರಾಜಕಾರಣಿಗಳಲ್ಲಿ ಮರೆಯಾದ ಪರಿಣಾಮ ಭಾಷಾಮಾಧ್ಯಮ ನ್ಯಾಯಾಲಯದ ಮೆಟ್ಟಿಲೇರುವಂತಾಗಿದೆ[೩೬]' ಎಂದಿದ್ದಾರೆ ಸಾಹಿತಿ ವಿಜಯಾರವರು.

ಸಾಹಿತಿ ವಿಜಯಾರವರು ಹೇಳಿರುವ ಮೇಲಿನ ಮಾತುಗಳು ವಾಸ್ತವತೆಯಿಂದ ಕೂಡಿವೆ. ಏಕೆಂದರೆ ಯಾವುದೇ ಒಂದು ಭಾಷೆಯನ್ನು ಕಲಿಯುವಂತೆ ಮಾಡಲು ಅಲ್ಲಿನ ಸರ್ಕಾರಗಳು ಕೇವಲ ಭಾಷಾನೀತಿಯನ್ನು ಜಾರಿಗೆ ತಂದರಷ್ಟೇ ಸಾಲದು. ಅದರ ಕಲಿಕೆ ಅನಿವಾರ್ಯ ಎಂಬಂತಹ ಪರಿಸ್ಥಿತಿ ನಿರ್ಮಾಣ ಮಾಡಬೇಕು. ಭಾರತದಲ್ಲಿ ಆಂಗ್ಲರು ತಮ್ಮ ಆಡಳಿತದ ಅವಧಿಯಲ್ಲಿ ಮಾಡಿದ್ದು ಇದೇ ಕೆಲಸ. ಅವರು ಭಾರತದಲ್ಲಿ ಇಂಗ್ಲಿಶ್ ಭಾಷೆಯ ಬಳಕೆಯನ್ನು ಹೆಚ್ಚಿಸಲು ಭಾಷಾನೀತಿಗಳನ್ನು ತಂದಿಲ್ಲ. ಬದಲಾಗಿ ಭಾರತದ ಆಡಳಿತ, ವ್ಯವಹಾರ, ಉದ್ಯೋಗಗಳಲ್ಲಿ ಸೇರಿದಂತೆ ಎಲ್ಲಾ ಕ್ಷೇತ್ರಗಳಲ್ಲಿ ಅದರ ಬಳಕೆಯನ್ನು ಹೆಚ್ಚಿಸುವ ಕೆಲಸ ಮಾಡಿದರು. ಅಂದರೆ ಇಂಗ್ಲಿಶ್‌ನ್ನು ಭಾರತೀಯರು ಅನಿವಾರ್ಯವಾಗಿ ಕಲಿಯುವಂತಹ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದರು. ಇದರಿಂದ ಅಂದು ಭಾರತೀಯರಿಗೆ ಇಂಗ್ಲಿಶ್‌ನ್ನು ಕಲಿಯುವಂತೆ ಯಾವ ಭಾಷಾನೀತಿಗಳು ಒತ್ತಡಗಳನ್ನು ಹೇರದಿದ್ದರೂ

ಭಾರತೀಯರೇ ಆಸಕ್ತಿಯಿಂದ ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಕಲಿಯಲು ಆಸಕ್ತಿ ವಹಿಸಿದ್ದಾರೆ. ಹೀಗಾಗಿ ಕರ್ನಾಟಕದಲ್ಲಿ ಕನ್ನಡವನ್ನು ಅಥವಾ ಇತರ ಸ್ಥಳೀಯ ಭಾಷೆಗಳನ್ನು ಇಲ್ಲಿನ ಆಡಳಿತ, ಶಿಕ್ಷಣ, ಉದ್ಯೋಗದ ಭಾಷೆಯಾಗಿ ಬಳಕೆಗೆ ತರಬೇಕು ಎಂಬ ನಿಜವಾದ ಕಾಳಜಿ ಇಲ್ಲಿನ ಸರ್ಕಾರಗಳಿಗೆ ಇದ್ದರೆ ಸರ್ಕಾರಗಳು ಸ್ಥಳೀಯ ಭಾಷೆಗಳಿಗೆ ಅಂತಹ ಅನಿವಾರ್ಯತೆ ಸೃಷ್ಟಿಯಾಗುವಂತೆ ಮಾಡಬೇಕು. ಆಗ ಮಾತ್ರ ಸರ್ಕಾರಗಳು ಜಾರಿಗೆ ತಂದ ಭಾಷಾನೀತಿಗಳು ಅನುಷ್ಠಾನಕ್ಕೆ ಬರಲು ಸಾಧ್ಯವಾಗುತ್ತದೆ. ಇಲ್ಲದೆ ಹೋದರೆ ಅವು ಅನುಷ್ಠಾನಕ್ಕೆ ಬರದೆ ಹಾಗೆ ಉಳಿದುಕೊಳ್ಳುತ್ತವೆ. ಏಕೆಂದರೆ ಸರ್ಕಾರಗಳು ಜಾರಿಗೆ ತರುವ ಭಾಷಾನೀತಿಗಳು 'ಸಶಕ್ತ ಸಮಾಜವೊಂದರಲ್ಲಿ ಅಲ್ಪಸಂಖ್ಯಾತ ಭಾಷೆ ಅಳಿಸಿ ಹೋಗುವ ಅಥವ ಕರಗಿಹೋಗುವ ಇಲ್ಲವೇ ಉಳಿದುಕೊಳ್ಳುವ ಕ್ರಿಯೆಯನ್ನು ರಾಜ್ಯದ ಕಾನೂನು ಅಥವಾ ಅಧ್ಯಾದೇಶಗಳು ನಿಯಂತ್ರಿಸಲಾರವು. ರಾಜ್ಯಶಕ್ತಿಯು ಏನಿದ್ದರೂ ಭಾಷೆಯೊಂದು ಉಳಿದು ಬೆಳೆಯಲು ಸೂಕ್ತ ವಾತಾವರಣವನ್ನು ಕಲ್ಪಿಸಬಹುದು ಅಥವಾ ಭಾಷೆಯ ಬಳಕೆ ಮತ್ತು ಬೆಳವಣಿಗೆಗೆ ಪ್ರತಿರೋಧಗಳನ್ನು ಒಡ್ಡಬಹುದು[೩೭] ಅಷ್ಟೇ. ಅದರಾಚೆಗೆ ಮತ್ತಿನ್ನೇನು ಮಾಡಲಾರವು.

ಹೀಗಾಗಿ ಕರ್ನಾಟಕದಲ್ಲಿ ಬಹುಸಂಖ್ಯೆಯ ಜನ ೧೯೯೦ರಿಂದೀಚೆಗೆ ತಮ್ಮ ಮಾತೃಭಾಷೆ ಯಾವುದೇ ಇರಲಿ ಇಂಗ್ಲಿಶ್ ಕಲಿಯಲು ಆಸಕ್ತರಾಗಿದ್ದಾರೆ. ಆದರೆ ಅದು ಸಾಧ್ಯವಾಗಿಲ್ಲ ಎಂಬ ಕಾರಣಕ್ಕೆ ತಮ್ಮ ಮಕ್ಕಳಿಗಾದರೂ ಇಂಗ್ಲಿಶ್ ಕಲಿಸಿ ಅವರ ಬದುಕನ್ನು ಹಸನಾಗಿಸುವ ಹಂಬಲ ಹೊಂದಿದ್ದಾರೆ. ಇದಕ್ಕಾಗಿ ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ. ಇಲ್ಲಿ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿತ ಎಲ್ಲಾ ಮಕ್ಕಳಿಗೂ ಇಂಗ್ಲಿಶ್ ಭಾಷೆ ಬಂದಿದೆಯಾ, ಉದ್ಯೋಗ ಸಿಕ್ಕಿದೆಯಾ ಎನ್ನುವುದು ಬೇರೆ ಪ್ರಶ್ನೆ. ಆದರೆ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿತರೆ ಇಂಗ್ಲಿಶ್ ಭಾಷೆ ಬರುತ್ತೆ, ಉತ್ತಮ ಉದ್ಯೋಗದ ಅವಕಾಶಗಳು ದೊರಕುತ್ತವೆ ಎಂಬ ಭ್ರಮೆ ಮಾತ್ರ ಜನರ ಮನಸ್ಸುಗಳಲ್ಲಿ ಇದ್ದೇಇದೆ. ಇದರ ಹಿಂದಿನ ಸತ್ಯಾಸತ್ಯೆಗಳನ್ನು ನಾವು ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು ಎಂಬ ಭಾಗದಲ್ಲಿ ವಿವರವಾಗಿ ಗಮನಿಸಬಹುದಾದರು ಇಲ್ಲಿ ಉದ್ಯೋಗದ ಹಿನ್ನೆಲೆಯಲ್ಲಿ ಬಹುತೇಕರು ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಕಲಿಯದೆ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುತ್ತಿದ್ದಾರೆ ಎಂಬುದು ಮಾತ್ರ ವಾಸ್ತವ ಸಂಗತಿ. ಅದರಲ್ಲೂ ಸರ್ಕಾರಿ ಉದ್ಯೋಗಗಳ ಸಂಖ್ಯೆ ಕ್ಷೀಣಿಸುತ್ತಾ, ಖಾಸಗೀ ಕ್ಷೇತ್ರಗಳ ಆರ್ಥಿಕ ಲಾಭದಾಯಕ ಹುದ್ದೆಗಳ ಸಂಖ್ಯೆ ಹೆಚ್ಚಾಗುತ್ತಿದ್ದಂತೆ ಈ ಸಮಸ್ಯೆ ತೀವ್ರಸ್ವರೂಪ ಪಡೆದುಕೊಂಡಿದೆ. 'ಇಂತಹ ಸಂದರ್ಭದಲ್ಲಿ ಕನ್ನಡವನ್ನು ಅಭಿಮಾನದ ಪ್ರಶ್ನೆಯಾಗಿ ನೋಡಿದರೆ ಸಾಲದು. ನನ್ನ ದೃಷ್ಟಿಯಲ್ಲಿ ಕನ್ನಡವನ್ನು ಅನ್ನದ ಪ್ರಶ್ನೆಯನ್ನಾಗಿ ಪರಿಗಣಿಸಬೇಕು. ಉದ್ಯೋಗ ಮತ್ತು ಕನ್ನಡಕ್ಕೆ ಸಂಬಂಧವಿರಬೇಕು. ಆಗ ಕನ್ನಡಿಗರು ಉಳಿಯುತ್ತಾರೆ, ಕನ್ನಡವೂ ಉಳಿಯುತ್ತದೆ[೩೮]' ಎಂದಿದ್ದಾರೆ ಪ್ರೊ.ಬರಗೂರು ರಾಮಚಂದ್ರಪ್ಪನವರು.

ಹಾಗೆಯೇ ಇಂತಹ ಸಮಸ್ಯೆಗಳ ಶಮನಕ್ಕಾಗಿ. ೬೯ನೆ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಡಾ.ಯು.ಆರ್.ಅನಂತಮೂರ್ತಿಯವರು "ಖಾಸಗೀಕರಣದ ಈ ದಿನಗಳಲ್ಲಿ ಸರ್ಕಾರಿ ಉದ್ಯೋಗಾವಕಾಶಗಳು ತುಂಬಾ ಕಡಿಮೆಯಾಗುತ್ತಿವೆ. ಮೀಸಲಾತಿಯ ಮುಖೇನ ನಮ್ಮ ಸಮಾನತೆಯ ಹಸಿವನ್ನು ಪೂರೈಸುವ ಅವಕಾಶಗಳು ಕ್ರಮೇಣ ಇಲ್ಲವಾಗುತ್ತವೆ. ಬಡವರು ಇನ್ನೂ ದಿಕ್ಕೆಟ್ಟು ಬಡವರಾಗುತ್ತಾ ಹೋಗುವ ಸಮಾಜದಲ್ಲಿ ಸಂಪತ್ತನ್ನು ನಾವು ಯಾರಿಗಾಗಿ ಸೃಷ್ಟಿಸಬೇಕು? ಆದ್ದರಿಂದ ಸರ್ಕಾರದ ಕೆಲಸಗಳಿಗೆ ಅನ್ವಯಿಸುವ ಮೀಸಲಾತಿ ಎಲ್ಲ ಬಹುರಾಷ್ಟ್ರೀಯ ಸಂಸ್ಥೆಗಳಿಗೂ ಅನ್ವಯಿಸಬೇಕು. ಪ್ರೆಸಿಡೆಂಟ್ ಕೆನಡಿ ಕಪ್ಪು ಜನರಿಗೆ ಇಂತಹ ಮೀಸಲಾತಿ ಕಡ್ಡಾಯ ಮಾಡಿದ ಎಂದು ನಾನು ಕೇಳಿದ್ದೇನೆ. ಇಷ್ಟೇ ಸಾಲದು ಕರ್ನಾಟಕದಲ್ಲಿ ಅವರು ವ್ಯವಹಾರ ಮಾಡುವಾಗ ಕನ್ನಡ ಭಾಷೆಯನ್ನು ಬಳಸುವಂತೆ ಒತ್ತಾಯ ಮಾಡಬೇಕು. ಜಪಾನಿ ಭಾಷೆಯನ್ನು, ಅರೇಬಿಕ್ ಭಾಷೆಯನ್ನು, ಡಚ್ ಭಾಷೆಯನ್ನು ಆಯಾ ದೇಶದ ಕಂಪನಿಗಳು ಬಳಸುವುದಿಲ್ಲವೆ ಹಾಗೆ[೩೯]"ಎನ್ನುತ್ತಾರೆ. ಅಂದರೆ ಕರ್ನಾಟಕದಲ್ಲಿ ಸ್ಥಾಪನೆಯಾಗಿರುವ ಎಲ್ಲಾ ಖಾಸಗಿ ಕೈಗಾರಿಕೆಗಳು, ಉದ್ದಿಮೆಗಳು, ಬಹುರಾಷ್ಟ್ರೀಯ ಕಂಪನಿಗಳಲ್ಲಿ ಸ್ಥಳೀಯ ಜನರಿಗೆ ಉದ್ಯೋಗ ದೊರಕುವಂತಹ ಪರಿಸ್ಥಿತಿ ನಿರ್ಮಾಣ ಮಾಡಬೇಕು. ಅದರಲ್ಲೂ ವಿಶೇಷವಾಗಿ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ಕಾರಣ ಇಲ್ಲಿನ ಎಲ್ಲಾ ಬಹುರಾಷ್ಟ್ರೀಯ ಕಂಪನಿಗಳು, ಕೈಗಾರಿಕೆಗಳಲ್ಲಿ ಕನ್ನಡ ಬಲ್ಲವರಿಗೆ ಉದ್ಯೋಗದ ಅವಕಾಶಗಳು ದೊರಕುವಂತಹ ವ್ಯವಸ್ಥೆ ನಿರ್ಮಾಣವಾಗಬೇಕು. ಅದಕ್ಕಾಗಿ ಸರ್ಕಾರ ನಿಯಮಗಳನ್ನು ಜಾರಿಗೆ ತರಬೇಕು ಎಂದು ಒತ್ತಾಯಗಳನ್ನು ಸರ್ಕಾರದ ಮುಂದಿಡಲಾಗಿದೆ.

ಏಕೆಂದರೆ 'ಇಂಗ್ಲಿಶ್ ಎನ್ನುವುದು ಕೇವಲ ಮಾರುಕಟ್ಟೆಯ ಯಾಜಮಾನ್ಯಕ್ಕೆ ಮಾತ್ರ ಸೀಮಿತವಾಗಿಲ್ಲ. ಅದನ್ನು ಮೀರಿ 'ನವವಿಶ್ವವ್ಯವಸ್ಥೆ'ಯ ಸಾಂಸ್ಕೃತಿಕ ಪರಿಸರದ ಕೇಂದ್ರಶಕ್ತಿಯಾಗುತ್ತಿದೆ. ಆ ಪರಿಸರದ ಹಿಂದೆ ಸೈನಿಕ ಬಲ, ತಂತ್ರಜ್ಞಾನದ ಬಲ, ಬಂಡವಾಳದ ಬಲ, ವಿವಿಧ ಸಂಪರ್ಕ-ಸಂವಹನದ ಸಾಧನಗಳ ಬಲ ಮುಂತಾದ ಅನೇಕ ಸಂಗತಿಗಳು ಕಾರ್ಯನಿರ್ವಹಿಸುತ್ತಿವೆ. ಇವೆಲ್ಲವೂ ವಿವಿಧ ಸಾಮ್ರಾಜ್ಯಶಾಹಿ ದೇಶಗಳ ಬಂಡವಾಳಶಾಹಿಗಳ ನಿಯಂತ್ರಣದಲ್ಲಿರುವುದು ವಾಸ್ತವ ಸಂಗತಿ. ಇವೆಲ್ಲವೂ ಒಂದಕ್ಕೊಂದು ಪೂರಕವಾಗಿ ಕೆಲಸ ನಿರ್ವಹಿಸುತ್ತಿವೆ. ಹಾಗಾಗಿಯೇ ಇಂದಿನ ಎಲ್ಲ ಚಟುವಟಿಕೆಗಳಿಗೂ ಜಾಗತಿಕ ಆಯಾಮ ಬಂದೊದಗಿದೆ.'[೪೦] ಕರ್ನಾಟಕದಲ್ಲಿ ಕನ್ನಡಕ್ಕೂ ಈ ರೀತಿಯ ಆಯಾಮ ಕಲ್ಪಿಸುವ ಅಗತ್ಯತೆ ಇತ್ತು. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಆಡಳಿತ, ಶಿಕ್ಷಣ, ಉದ್ಯೋಗ, ತಂತ್ರಜ್ಞಾನಗಳ ಜೊತೆ ಪೂರಕ ವಾತಾವರಣ ಕಲ್ಪಿಸದೆ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಹೀಗೆ ಪೂರಕ ವಾತಾವರಣ ಕಲ್ಪಿಸದೆ ಭಾಷಾನೀತಿಗಳನ್ನು ಜಾರಿಗೆ ತಂದರೆ ಭಾಷೆ ಅಥವಾ ಭಾಷೆಗಳ ಅಭಿವೃದ್ಧಿ ಅಸಾಧ್ಯ. ಮತ್ತು ಇದರಿಂದ ಹಲವು ಸಮಸ್ಯೆಗಳು ಉದ್ಭವಿಸುತ್ತವೆ. ಹೀಗಾಗಿ ಭಾಷೆ ಅಥವಾ ಭಾಷೆಗಳನ್ನು ಅಭಿವೃದ್ಧಿಪಡಿಸಬೇಕಾದರೆ ಮೊದಲು ಆ ಪ್ರದೇಶದ ಭಾಷೆ-ಶಿಕ್ಷಣ-ಆಡಳಿತ-ಉದ್ಯೋಗ-ಜನರ ಬದುಕಿನ ನಡುವೆ ಹೊಂದಾಣಿಕೆ ಇರುವ ಹಾಗೆ ನಿಯಮಗಳನ್ನು ರೂಪಿಸಬೇಕು. ಇದನ್ನು ಸರ್ಕಾರಗಳು ಮಾಡಬೇಕು. ಆದರೆ

ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಈ ಕೆಲಸಗಳನ್ನು ಮಾಡಿಲ್ಲ. ಇದರಿಂದಾಗಿ ಏಕೀಕರಣದ ನಂತರದಲ್ಲಿ ಭಾಷಾಸಮಸ್ಯೆ ದೊಡ್ಡಮಟ್ಟದ ಬಿಕ್ಕಟ್ಟು ಸೃಷ್ಟಿಸಿರುವುದು.

ಇದನ್ನು ಕರ್ನಾಟಕದ ಜನತೆ ಸ್ವಲ್ಪ ತಡವಾಗಿ ಅರ್ಥಮಾಡಿಕೊಂಡಿದ್ದು ಕನ್ನಡ, ಕನ್ನಡಿಗರು ಉಳಿಯಬೇಕಾದರೆ ಕರ್ನಾಟಕದಲ್ಲಿ ಸೃಷ್ಟಿಯಾಗುವ ಪ್ರತಿಯೊಂದು ಹುದ್ದೆಯಲ್ಲೂ ಅದು ಸರ್ಕಾರಿ ಉದ್ಯೋಗವಿರಲಿ ಅಥವಾ ಖಾಸಗಿ ಕ್ಷೇತ್ರಗಳಲ್ಲಿನ ಉದ್ಯೋಗವಿರಲಿ ಕನ್ನಡಿಗರಿಗೆ ಮೀಸಲಾತಿ ಇರುವಂತಹ ನಿಯಮಗಳನ್ನು ಜಾರಿಗೆ ತರಬೇಕು ಎಂದು ಒತ್ತಾಯಗಳನ್ನು ಮಾಡಿದ್ದಾರೆ. ಇದರಿಂದಾಗಿ ಕರ್ನಾಟಕ ಸರ್ಕಾರ ೪-೮-೧೯೮೩ರ ಆದೇಶದ ಪ್ರಕಾರ 'ವಾಣಿಜ್ಯ ಬ್ಯಾಂಕುಗಳನ್ನು ಒಳಗೊಂಡಂತೆ ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ದಿಮೆಗಳಲ್ಲಿ ಕರ್ನಾಟಕದ ಜನರ ಉದ್ಯೋಗದ ಪರಿಸ್ಥಿತಿಯನ್ನು ಪರಿಶೀಲಿಸುವ ಸಲುವಾಗಿ ಡಾ.ಸರೋಜಿನಿ ಮಹಿಷಿ ನೇತೃತ್ವದ ಸಮಿತಿಯನ್ನು ನೇಮಿಸಲಾಗಿದೆ. ಅನಂತರ ೨೮.೬.೧೯೮೫ರ ಆದೇಶದಲ್ಲಿ ಈ ಸಮಿತಿಯ ವ್ಯಾಪ್ತಿಗೆ ಖಾಸಗಿ ಉದ್ಯಮಗಳನ್ನು ಸೇರಿಸಲಾಗಿದೆ. "ಈ ಸಮಿತಿಯು ಅಭಿಪ್ರಾಯಪಟ್ಟಂತೆ ಸರ್ಕಾರವು "ಕನ್ನಡಿಗರೆಂದರೆ ಅವರಿಗೆ ಕನ್ನಡದಲ್ಲಿ ಮಾತನಾಡಲು. ಓದಲು ಮತ್ತು ಬರೆಯಲು ಬರಬೇಕು-ಎಂದರೆ ಅವರಿಗೆ ವ್ಯಾವಹಾರಿಕ ಕನ್ನಡ ಜ್ಞಾನ ಇರಬೇಕು" ಎಂದು ದಿನಾಂಕ ೦೨.೦೨.೧೯೮೫ರ ಆದೇಶ ಸಂಖ್ಯೆ ಡಿಪಿಎಆರ್ ೩೭ ಎಸ್‌ಎಲ್‌ಸಿ-ಇದರಲ್ಲಿ[೮೧] ಸ್ಪಷ್ಟಪಡಿಸಿದೆ. ಈ ಸಮಿತಿ ತನ್ನ ಅಂತಿಮ ವರದಿಯನ್ನು ದಿನಾಂಕ ೩೦.೧೨.೧೯೮೯ರಂದು ಸರ್ಕಾರಕ್ಕೆ ಸಲ್ಲಿಸಿದೆ. ಅದರ ಪರಿಶೀಲನೆ ಮತ್ತು ಅನುಷ್ಠಾನಕ್ಕಾಗಿ ಸಂಸದರಾದ ಡಾ.ವಿ.ವೆಂಕಟೇಶ್ ಅವರ ನೇತೃತ್ವದಲ್ಲಿ ಕನ್ನಡ ಉದ್ಯೋಗ ಸಮಿತಿಯನ್ನು ನೇಮಕ ಮಾಡಿದೆ. ಅವುಗಳು ನೀಡಿದ ವರದಿಯನ್ನು ಆಧರಿಸಿ ಅನುಷ್ಠಾನಕ್ಕೆ ತರಲು ಸರ್ಕಾರದ ಮುಖ್ಯಕಾರ್ಯದರ್ಶಿಯವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿದೆ.

ಈ ಸಮಿತಿಯು 'ಸರೋಜಿನಿ ಮಹಿಷಿ ವರದಿಯು ಒಟ್ಟು ೫೮ ಶಿಫಾರಸ್ಸುಗಳಲ್ಲಿ ಒಳಗೊಂಡಿದೆ. ೧೨ ಶಿಫಾರಸ್ಸುಗಳನ್ನು ರಾಜ್ಯ ಸರ್ಕಾರವು ತನಗೆ ಒಪ್ಪುವ ಅವಕಾಶ ಇಲ್ಲವೆಂದು ತಿಳಿಸಿ ಕೈಬಿಟ್ಟಿದೆ. (ಶಿಫಾರಸ್ಸುಗಳ ಸಂಖ್ಯೆ ತಿರಸ್ಕರಿಸಿ ೨೨, ೨೭, ೩೨, ೩೭, ೩೮, ೩೯, ೪೭, ೫೧, ೫೨, ೫೪, ೫೫, ಮತ್ತು ೫೬) ಉಳಿದ ಶಿಫಾರಸ್ಸುಗಳ ಅನುಷ್ಠಾನಕ್ಕೆ ಕ್ರಮಕೈಗೊಂಡಿದೆ. ದಿನಾಂಕ ೨೩.೧೧.೧೯೯೦ರ ಆದೇಶ ಸಂಖ್ಯೆ.ಸಿಆಸುಇ೩ಎಸ್.ಎಲ್.ಸಿ.೯೦ ಇದರಲ್ಲಿ ಡಾ॥ ಸರೋಜಿನಿ ಮಹಿಷಿ ಸಮಿಯತಿಯ ಶಿಫಾರಸ್ಸುಗಳನ್ನು ಒಪ್ಪಿಕೊಂಡು ಅನುಷ್ಠಾನಕ್ಕೆ ಸೂಚಿಸಲಾಗಿದೆ. ಇದರ ಅನ್ವಯ ದಿನಾಂಕ ೧೮.೧.೧೯೯೧ರಂದು ಹೊರಟ ಆದೇಶವು (ಸಂಖ್ಯೆ ಸಿಆಸುಇ (ಸಾಕಾಮ) ೧೯೯ ಎಂಇಎ ೯೦) ಹೀಗೆ ಸೂಚಿಸುತ್ತದೆ. "ರಾಜ್ಯ ಸಾರ್ವಜನಿಕ ಉದ್ದಿಮೆಗಳಲ್ಲಿ ಎಲ್ಲಾ ಹಂತಗಳಲ್ಲಿ ಶೇಕಡಾ ೧೦೦ರಷ್ಟು ಕನ್ನಡಿಗರನ್ನು ನೇಮಕಾತಿ ಮಾಡಿಕೊಳ್ಳಬೇಕು. ವಿಶೇಷ ಪರಿಣತಿ ಬೇಕಾಗಿರುವ 'ಎ' ಮತ್ತು 'ಬಿ' ಹುದ್ದೆಗಳಿಗೆ ನೇಮಕಾತಿ ಮಾಡುವಾಗ ರಾಜ್ಯ ಸರ್ಕಾರದ ಅನುಮತಿಯನ್ನು ಪಡೆದು ಅನಂತರ ಮಾತ್ರ ನಿರ್ಬಂಧದಿಂದ ವಿನಾಯಿತಿಯನ್ನು ನೀಡಬಹುದು" ಜೊತೆಗೆ ಕನ್ನಡ ಭಾಷಾಜ್ಞಾನವಿರಬೇಕೆಂಬ ನಿಯಮವನ್ನು ರೂಪಿಸಲು ಸಂಬಂಧಪಟ್ಟವರಿಗೆ ಈ ಆದೇಶವು ಸೂಚಿಸುತ್ತದೆ. "ದಿನಾಂಕ

೧೮.೧.೧೯೯೧ರಂದು ಹೊರಡಿಸಿದ ಆದೇಶದ ಸಂಖ್ಯೆ ಸಿಐ ೪೫ ಐಎಪಿಸಿ ೯೦-ಇದರಲ್ಲಿ "ಕೇಂದ್ರ ಸಾರ್ವಜನಿಕ ಉದ್ದಿಮೆಗಳನ್ನು ಸ್ಥಾಪಿಸಲು ನೆಲ, ಜಲ, ವಿದ್ಯುಚ್ಛಕ್ತಿ ಮುಂತಾದವುಗಳನ್ನು ನೀಡುವಾಗ ಸದರಿ ಕೇಂದ್ರ ಸಾರ್ವಜನಿಕ ಉದ್ದಿಮೆಗಳಲ್ಲಿ ಗ್ರೂಪ್ 'ಸಿ' ಮತ್ತು 'ಡಿ' ಹುದ್ದೆಗಳಿಗೆ ಶೇಕಡ ೧೦೦ ರಷ್ಟು ಮತ್ತು 'ಬಿ' ಹುದ್ದೆಗಳಿಗೆ ಶೇ.೮೦ರಷ್ಟು ಕಡಿಮೆ ಇಲ್ಲದಂತೆ ಮತ್ತು ಗ್ರೂಪ್ 'ಎ' ಹುದ್ದೆಗಳಿಗೆ ಶೇಕಡ ೬೫ರಷ್ಟು ಕನ್ನಡಿಗರನ್ನು ನೇಮಿಸಿಕೊಳ್ಳಬೇಕೆಂಬ ಷರತ್ತನ್ನು ಹಾಕಬೇಕು" ಎಂದು ತಿಳಿಸಲಾಗಿದೆ[೪೨].

ಆದರೂ ಸರೋಜಿನಿ ಮಹಿಷಿ ಸಮಿತಿ ನೀಡಿದ ಸಲಹೆಗಳು ಮತ್ತು ಕರ್ನಾಟಕ ಸರ್ಕಾರ ಹೊರಡಿಸಿದ ಆದೇಶದಿಂದ ಕನ್ನಡ ಭಾಷೆ ಖಾಸಗಿ ಕ್ಷೇತ್ರದ ಕೈಗಾರಿಕೆ, ಉದ್ದಿಮೆ ಬಹುರಾಷ್ಟ್ರೀಯ ಕಂಪನಿಗಳಲ್ಲಿ ಉದ್ಯೋಗದ ಭಾಷೆಯಾಗಿ ಬಳಕೆಗೆ ಬಂದಿಲ್ಲ. ಏಕೆಂದರೆ 'ಸಂವಿಧಾನದ ಪ್ರಕಾರ ಜನರಿಂದ ಆಯ್ಕೆಯಾದ ಸರ್ಕಾರವು ರೂಪಿಸುವ ನೀತಿ-ನಿಯಮಗಳು ಸಮಾಜದ ವಿವಿಧ ವಲಯಗಳು ಅನುಸರಿಸಬೇಕಾಗುತ್ತದೆ. ಆದರೆ ಬಹುರಾಷ್ಟ್ರೀಯ ಕಂಪನಿಗಳಿಗೆ ಅವರದೇ ಆದ ನಿಯಮಗಳಿವೆ. ಸರ್ಕಾರದ ನಿಯಂತ್ರಣ ಇರಬಾರದು ಎಂಬುದೆ ಆರ್ಥಿಕ ಉದಾರೀಕರಣದ ಮೂಲ ನೀತಿ. ಆದ್ದರಿಂದ ಬಹುರಾಷ್ಟ್ರೀಯ ಕಂಪನಿಗಳು ಸರ್ಕಾರದ ನಿಯಂತ್ರಣಕ್ಕೆ ಒಳಗಾಗುವ ಬದಲು ಸರ್ಕಾರವನ್ನೇ ನಿಯಂತ್ರಿಸುವಷ್ಟು ಬಲಾಢ್ಯವಾಗಿವೆ. ವಿಶೇಷವಾಗಿ ರಾಜ್ಯ ಸರ್ಕಾರ ಅಷ್ಟೇ ಅಲ್ಲ ಕೇಂದ್ರ ಸರ್ಕಾರದ ನೀತಿನಿಯಮಗಳು ಸಹ ಈ ಕಂಪನಿಗಳಿಗೆ ಅನ್ವಯಿಸುವುದಿಲ್ಲ.[೪೩]' ಇನ್ನು ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ದಿಮೆಗಳ ನೇಮಕಾತಿಗಳ ವಿಚಾರಕ್ಕೆ ಬಂದಾಗ ರಾಜ್ಯಸರ್ಕಾರಗಳು ಕೇಂದ್ರ ಸರ್ಕಾರಕ್ಕೆ ಷರತ್ತುಗಳನ್ನು ವಿಧಿಸುವಷ್ಟು ಸ್ವಾಯತ್ತವಾಗಿವೆಯೇ? ಎಂಬುದನ್ನು ಯೋಚಿಸಬೇಕು. ರಾಜ್ಯ ಸರ್ಕಾರ ಒಕ್ಕೂಟ ವ್ಯವಸ್ಥೆಯಲ್ಲಿ ತನ್ನ ಶಕ್ತಿಯ ಮಿತಿಯನ್ನು ಅರಿಯದೆ ಭಾಷಾನೀತಿಯನ್ನು ಜಾರಿಗೊಳಿಸಿದೆ. ರಾಜ್ಯ ಸರ್ಕಾರಗಳು ತಾವು ಜಾರಿಗೊಳಿಸುವ ಭಾಷಾನೀತಿಯನ್ನು ಬಹುರಾಷ್ಟ್ರೀಯ ಕಂಪನಿಗಳು ಮತ್ತು ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ದಿಮೆಗಳು ಒಪ್ಪಿಕೊಳ್ಳುತ್ತವೆಯೇ? ಕರ್ನಾಟಕ ಸರ್ಕಾರಕ್ಕೆ ಬಹುರಾಷ್ಟ್ರೀಯ ಕಂಪನಿಗಳು ಮತ್ತು ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ದಿಮೆಗಳ ಮೇಲೆ ತನ್ನ ಹಿಡಿತವನ್ನು ಸ್ಥಾಪಿಸುವ ಶಕ್ತಿ ಇದೆಯೇ? ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳದೆ ತಂದಿವೆ. ಇದರಿಂದ ಕನ್ನಡ ಖಾಸಗಿ ವಲಯದಲ್ಲಿ ಉದ್ಯೋಗದ ಭಾಷೆಯಾಗಿ ಬಳಕೆಯಾಗಿಲ್ಲ. ಹೀಗಾಗಿ ವಲಯದ ಮೇಲೆ ಹಿಡಿತ ಸ್ಥಾಪಿಸುವ ಕೆಲಸವನ್ನು ಸರ್ಕಾರ ಮಾಡಬೇಕು.

ಆದರೆ ಖಾಸಗಿ ಕೈಗಾರಿಕೆ, ಉದ್ದಿಮೆ, ಕಂಪನಿಗಳಿಗೆ ಬೇಕಾಗಿರುವುದು ಸಾರ್ವಜನಿಕ ಸೇವೆ, ಸರ್ಕಾರದ ನೀತಿನಿಯಮಗಳನ್ನು ಪಾಲನೆ ಅಲ್ಲ. ತನ್ನ ವ್ಯಾಪಾರ, ವಹಿವಾಟು ಹೆಚ್ಚಬೇಕು. ಆರ್ಥಿಕವಾಗಿ ಲಾಭಗಳಿಸಬೇಕು. ಇದಕ್ಕೆ ಪೂರಕ ನಿಯಮಗಳನ್ನು ರೂಪಿಸಿಕೊಳ್ಳುತ್ತವೆಯೇ ಹೊರತು ಸರ್ಕಾರದ ನೀತಿಗಳನ್ನು ಒಪ್ಪಿಕೊಳ್ಳುವುದಿಲ್ಲ. ಇಲ್ಲಿ ಉತ್ಪಾದನೆಯಾಗುವ ಉತ್ಪನ್ನಗಳಿಗೆ ಗ್ರಾಹಕರು ಸ್ಥಳೀಯ ಪ್ರದೇಶದ, ಮಾತೃಭಾಷೆಯನ್ನೇ ಬಳಸುವ ಬಡವರಲ್ಲ. ಬದಲಾಗಿ ಇಂಗ್ಲಿಷ್ ಭಾಷೆ ಕಲಿತ

ಮಧ್ಯಮ ಮತ್ತು ಶ್ರೀಮಂತ ವರ್ಗ. ಈ ವರ್ಗಗಳ ಮನಸ್ಸನ್ನು ಆಕರ್ಷಿಸಲು ಅಂದರೆ ತಮ್ಮ ಕಂಪನಿ, ಕೈಗಾರಿಕೆಗಳಲ್ಲಿ ಉತ್ಪಾದನೆಯಾದ ವಸ್ತುಗಳನ್ನು ಮಾರಾಟ ಮಾಡಲು ಮಧ್ಯಮ ಮತ್ತು ಶ್ರೀಮಂತ ವರ್ಗದ ಭಾಷೆ ಬಳಸುವುದು ಅನಿವಾರ್ಯ. ಹೀಗಾಗಿ ಇವರು ತಮ್ಮ ಕಂಪನಿ, ಕೈಗಾರಿಕೆಗಳ ಉನ್ನತ ಹುದ್ದೆಗೆ ನೌಕರರನ್ನು ನೇಮಕ ಮಾಡಿಕೊಳ್ಳುವಾಗ ಹೆಚ್ಚಿನದಾಗಿ ಇಂಗ್ಲಿಶ್ ಭಾಷೆ ಬಲ್ಲವರಿಗೆ ಆದ್ಯತೆ ನೀಡಿವೆ. ಸರ್ಕಾರದ ಭಾಷಾನೀತಿಯ ಪ್ರಕಾರ ಕನ್ನಡ ಬಲ್ಲವರನ್ನು ತಮ್ಮ ಉದ್ದಿಮೆಗಳಲ್ಲಿ ಕೆಲಸಕ್ಕೆ ನೇಮಕ ಮಾಡಿಕೊಂಡರೆ ಇವರಿಗೆ ಸಮರ್ಥವಾದ ಆಡಳಿತ ಮತ್ತು ವ್ಯವಹಾರದ ಜ್ಞಾನವಿದ್ದಾಗಲೂ ಭಾಷೆಯ ಕಾರಣದಿಂದ ವ್ಯವಹಾರಕ್ಕೆ ಸಂಬಂಧಪಟ್ಟ ವಿಷಯಗಳನ್ನು ಸಂಬಂಧಪಟ್ಟವರಿಗೆ ಸಮರ್ಥವಾಗಿ ಮನವರಿಕೆ ಮಾಡಿಕೊಡಲು ಸಾಧ್ಯವಾಗುವುದಿಲ್ಲ. ಇದರಿಂದ ಕಂಪನಿ ನಷ್ಟಕ್ಕೆ ಒಳಗಾಗಬೇಕಾಗುತ್ತದೆ ಎಂಬ ಕಾರಣಕ್ಕಾಗಿ ಸರ್ಕಾರದ ಭಾಷಾನೀತಿಯನ್ನು ತಿರಸ್ಕರಿಸಿ ತಮಗೆ ಬೇಕಾದ ಭಾಷೆ ಬಲ್ಲವರನ್ನು ತಮ್ಮ ಉದ್ದಿಮೆಗಳಲ್ಲಿ ಕೆಲಸಕ್ಕೆ ನೇಮಕ ಮಾಡಿಕೊಂಡಿದ್ದಾರೆ.

ಏಕೆಂದರೆ ಸರ್ಕಾರದ 'ಅಧಿಕಾರಿಗಳು ಅಥವಾ ಸರ್ಕಾರ ಇಂದು ಖಾಸಗೀ ಕ್ಷೇತ್ರಕ್ಕೆ ಆದೇಶ ನೀಡುವಂತಹ ಶಕ್ತಿಗಳನ್ನು ಉಳಿಸಿಕೊಂಡಿಲ್ಲ. ಖಾಸಗೀ ಕ್ಷೇತ್ರದ ಪದತಲದಲ್ಲಿ ಅಧಿಕಾರಿಗಳು ಮತ್ತು ಸರ್ಕಾರಗಳು ಬಿದ್ದಿವೆ. ಇದು ಜಾಗತೀಕರಣದ ವಿವಿಧ ನೀತಿಗಳ ಫಲ. ಅಲ್ಪಸಂಖ್ಯಾತ ಖಾಸಗಿಯವರ ಆದೇಶದಂತೆ ಸರ್ಕಾರಗಳು ತನ್ನ ನೀತಿಗಳನ್ನು ರೂಪಿಸುವುದೇ ಇಂದಿನ ಆಡಳಿತದ ವೈಖರಿ. ಎಲ್ಲ ಅಭಿವೃದ್ಧಿ ಯೋಜನೆಗಳನ್ನು ಗಮನಿಸಿದರೆ ಇದು ಅರ್ಥವಾದೀತು. ಕನ್ನಡ ಬರುವವರನ್ನು ದುರ್ಬಲರು ಎಂದು ಭಾವಿಸುವಾಗ ಕನ್ನಡ ಬರುವ ಅಧಿಕಾರಿಯನ್ನು ನೇಮಿಸುವ ಮಾತೆಲ್ಲಿಯದು? ಅಲ್ಲದೆ ಬಹುರಾಷ್ಟ್ರೀಯ ಕಂಪನಿಗಳಿಗೆ ಸ್ಥಳೀಯ ಭಾಷೆಗಳ ಹಿತಾಸಕ್ತಿ ಮುಖ್ಯವಾಗಿರುವುದಿಲ್ಲ. ಕನ್ನಡತ್ವ ಪ್ರತಿಪಾದಿಸುವವರನ್ನು ಸಂಸ್ಥೆಗಳ ಶತೃಗಳನ್ನಾಗಿ ಭಾವಿಸಲಾಗುತ್ತಿದೆ. ಅನೇಕ ವೇಳೆ ಸ್ಥಳೀಯರಿಗಿಂತ ಹೊರಗಿನವರನ್ನೇ ಉದ್ಯೋಗಕ್ಕೆ ಆಯ್ಕೆಮಾಡಿಕೊಳ್ಳಲಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಬಹುರಾಷ್ಟ್ರೀಯ ಸಂಸ್ಥೆಗಳಿಗೆ ಅಂತರಾಷ್ಟ್ರೀಯ ವಹಿವಾಟುಗಳುಗಳು ಮುಖ್ಯವಾಗಿರುತ್ತವೆ. ಆ ಉದ್ಯಮಗಳಿಗೆ ಜಾಗತಿಕ ಯಜಮಾನನಿರುತ್ತಾನೆ. ವ್ಯವಹಾರ ಅವನಿಗೆ ಅರ್ಥವಾಗಬೇಕೇ ಹೊರತು ಸರ್ಕಾರಕ್ಕಲ್ಲ. ಜನರಿಗಂತು ಅಲ್ಲವೇ ಅಲ್ಲ. ಆದ್ದರಿಂದ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೊಳಿಸಲು ಇರುವ ನಿಜವಾದ ಅಡ್ಡಿಗಳೆಂದರೆ ಈಗಿರುವ ಅಧಿಕಾರಶಾಹಿ ಮತ್ತು ಅದನ್ನು ಘೋಷಿಸುತ್ತಿರುವ ಸರ್ಕಾರಗಳು ಹಾಗೂ ಅವುಗಳನ್ನು ನಿಯಂತ್ರಿಸುತ್ತಿರುವ ಖಾಸಗೀ ಬಂಡವಾಳಶಾಹಿ ವರ್ಗ[೪೪].

ಇದು ಕರ್ನಾಟಕದಲ್ಲಿನ ಸರ್ಕಾರಗಳು ಕನ್ನಡವನ್ನು ಉದ್ಯೋಗದ ಭಾಷೆಯಾಗಿ ಬಳಕೆಗೆ ತರಲು ಮಾಡಿರುವ ಪ್ರಯತ್ನಗಳನ್ನು ವಿಫಲಗೊಳಿಸಿದೆ. ಆದರೂ ಇಲ್ಲಿನ ಕನ್ನಡಪರ ಹೋರಾಟಗಾರರು ಖಾಸಗಿ ಕೈಗಾರಿಕೆಗಳು, ಬಹುರಾಷ್ಟ್ರೀಯ ಕಂಪನಿಗಳ ಮೇಲೆ ಆಗಾಗ ದಾಳಿ ಮಾಡಿದ್ದಾರೆ. ಖಾಸಗಿ ಕ್ಷೇತ್ರದಲ್ಲಿ ಕನ್ನಡದ ಬಳಕೆಗಾಗಿ ಒತ್ತಾಯ ಮಾಡಿದ್ದಾರೆ. ಇಂತಹ ಸಂದರ್ಭಗಳಲ್ಲಿ ಕನ್ನಡಪರ ಹೋರಾಟಗಾರರು ಖಾಸಗಿ ಕಂಪನಿಗಳ ಮಾಲೀಕರ ಬಳಿ ಹಣಸುಲಿಗೆ ಮಾಡಲು ಇಂತಹ

ದಾಳಿಗಳನ್ನು ಮಾಡಿದ್ದಾರೆ ಎಂಬ ಆರೋಪಗಳು ಎದುರಿಸಿದ್ದಾರೆ. ಈ ಆರೋಪ ಏನೇ ಇದ್ದರೂ ಸರ್ಕಾರದ ಭಾಷಾನೀತಿಯ ಹಿಂದಿನ ಉದ್ದೇಶ ಮತ್ತು ಖಾಸಗಿ ಕಂಪನಿಗಳ ಸ್ಥಾಪನೆಯ ಹಿಂದಿನ ಉದ್ದೇಶಗಳು ಬೇರೆ ಬೇರೆಯೇ ಆಗಿವೆ. ಇದರಲ್ಲಿ ಮುಖ್ಯವಾಗಿ ಸರ್ಕಾರಗಳು ಜನಸಮುದಾಯಗಳ ಭಾಷಿಕ, ಸಾಹಿತ್ಯಕ, ಸಾಂಸ್ಕೃತಿಕ, ಶೈಕ್ಷಣಿಕ, ಸಾಮಾಜಿಕ, ರಾಜಕೀಯ, ಆರ್ಥಿಕ, ಔದ್ಯೋಗಿಕ ಅಭಿವೃದ್ಧಿಗೆ ಪೂರಕವಾಗಿ ಯೋಜನೆಗಳನ್ನು ರೂಪಿಸಿವೆ. ಅವುಗಳಿಗೆ ಅನುಗುಣವಾಗಿ ಆದೇಶಗಳನ್ನು ಹೊರಡಿಸಿ ಅವುಗಳನ್ನು ಅನುಷ್ಠಾನಕ್ಕೆ ತರುವಂತೆ ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳಿಗೆ ಆದೇಶಿಸಲಾಗಿದೆ. ಆದರೆ ಖಾಸಗಿ ಕಂಪನಿಗಳಿಗೆ ಇವ್ಯಾವುಗಳು ಬೇಡ. ಅವುಗಳಿಗೆ ಮುಖ್ಯವಾಗಿ ಬೇಕಿರುವುದು ಆರ್ಥಿಕ ಲಾಭ ಮತ್ತು ಪ್ರಸಿದ್ಧಿ. ಇವುಗಳನ್ನು ಪಡೆಯಲು ಅವು ಯಾವ ಕಾರ್ಯಕ್ಕು ಸಿದ್ಧ. ಹೀಗಾಗಿ ಸರ್ಕಾರದ ಭಾಷಾನೀತಿ ಮತ್ತು ಖಾಸಗಿ ಉದ್ದಿಮೆಗಳ ನಡುವೆ ಇರುವ ಉದ್ದೇಶಗಳಲ್ಲಿ ವೈರುಧ್ಯಗಳು ಉಂಟಾಗಿವೆ. ಈ ವೈರುಧ್ಯಗಳು ಸರ್ಕಾರಗಳು ಜನಸಮುದಾಯಗಳ ಹಿತಕ್ಕಾಗಿ ರೂಪಿಸುವ ಯಾವುದೇ ನಿಯಮಗಳನ್ನು ಅನುಷ್ಠಾನಗೊಳ್ಳದಂತೆ ತಡೆಯಬಲ್ಲ ಶಕ್ತಿ ಹೊಂದಿವೆ. ಇದು ಭಾಷಾವಿಷಯಕ್ಕೆ ಸಂಬಂಧಿಸಿದ ವಿಷಯಗಳಿಗೂ ಅನ್ವಯಿಸುತ್ತದೆ. ಹೀಗಾಗಿ ಕರ್ನಾಟಕದಲ್ಲಿ ಸರ್ಕಾರಗಳು ಭಾಷಾಕಲಿಕೆ ಮತ್ತು ಬಳಕೆಗೆ ಸಂಬಂಧಿಸಿಂತೆ ಜಾರಿಗೆ ತಂದಿರುವ ಭಾಷಾನೀತಿಗಳು ಅನುಷ್ಠಾನವಾಗಲು ವಿಫಲವಾಗಿವೆ. ಇದಕ್ಕೆ ಕಳೆದ ಶತಮಾನದ ತೊಂಭತ್ತರ ದಶಕದಲ್ಲಿ ಹುಟ್ಟಿಕೊಂಡ ಜಾಗತೀಕರಣ, ಖಾಸಗೀಕರಣ ಮತ್ತು ಸಾಫ್ಟ್‌ವೇರ್ ಕ್ಷೇತ್ರಗಳು ಮತ್ತಷ್ಟು ಪುಷ್ಟಿನೀಡಿ ಕರ್ನಾಟಕದ ಭಾಷಾಸಮಸ್ಯೆಯನ್ನು ತೀವ್ರಗೊಳಿಸಿವೆ.

**೨.೪ ಜಾಗತೀಕರಣ, ಖಾಸಗೀಕರಣ ಮತ್ತು ಸಾಫ್ಟ್‌ವೇರ್‌ನ ಉಗಮ: ಕರ್ನಾಟಕದ ಭಾಷಾಸಮಸ್ಯೆ**

ಈಗಾಗಲೇ ಪ್ರಸ್ತಾವನೆಯಲ್ಲಿ ಚರ್ಚಿಸಿರುವ ಹಾಗೆ ವಿಶ್ವದಲ್ಲಿ ಆರ್ಥಿಕವಾಗಿ ಬಲಿಷ್ಟವಾದ ದೇಶಗಳು ತಮ್ಮ ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳ ವೃದ್ಧಿಗಾಗಿ ಜಾಗತೀಕರಣವನ್ನು ಹುಟ್ಟುಹಾಕಿವೆ. ಇದಕಾಗಿ ಈ ದೇಶಗಳು ಅಭಿವೃದ್ಧಿ ಹೊಂದುತ್ತಿರುವ ಮತ್ತು ಹಿಂದುಳಿದ ದೇಶಗಳ ಜೊತೆ ಅಭಿವೃದ್ಧಿಯ ಹೆಸರಿನಲ್ಲಿ ಆರ್ಥಿಕ ಒಪ್ಪಂದಗಳನ್ನು ಮಾಡಿಕೊಂಡಿವೆ. ಈ ಆರ್ಥಿಕ ಒಪ್ಪಂದಗಳು ಅಭಿವೃದ್ಧಿ ಹೊಂದುತ್ತಿರುವ ಮತ್ತು ಹಿಂದುಳಿದ ದೇಶಗಳಲ್ಲಿನ ಅಭಿವೃದ್ಧಿಗೆ ಎಷ್ಟು ಪೂರಕವಾಗಿವೆ ಅಥವಾ ಮಾರಕವಾಗಿವೆ ಎಂಬುದು ಬೇರೆಯದೇ ಆದ ವಿಷಯ. ಆದರೆ ಈ ರೀತಿಯ ಒಪ್ಪಂದಗಳು ಹಿಂದುಳಿದ ಮತ್ತು ಅಭಿವೃದ್ದಿ ಹೊಂದುತ್ತಿರುವ ದೇಶಗಳಲ್ಲಿನ ಸ್ಥಳೀಯ ಭಾಷೆ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ಆಡಳಿತ, ವಿಜ್ಞಾನ, ಜನಜೀವನದ ಇತ್ಯಾದಿಗಳ ಮೇಲೆ ಎಂತಹ ಪರಿಣಾಮಗಳನ್ನು ಉಂಟುಮಾಡಿವೆ ಎಂಬುದು ಬಹಳ ಸೂಕ್ಷ್ಮವಾಗಿ ಗಮನಿಸಬೇಕಿರುವ ವಿಷಯ. ಏಕೆಂದರೆ ವಿಶ್ವದಲ್ಲಿ ಆರ್ಥಿಕವಾಗಿ ಬಲಿಷ್ಟವಾಗಿರುವ ದೇಶಗಳು ಅಭಿವೃದ್ಧಿಯ ಹೆಸರಿನಲ್ಲಿ ಹಿಂದುಳಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ತಮ್ಮದೇ ಆದ ವ್ಯಾಪಾರ ಕೇಂದ್ರ, ಕೈಗಾರಿಕೆಗಳು ಮತ್ತು ಕಂಪನಿಗಳನ್ನು ಆರಂಭಿಸಿವೆ. ಈ ಕೈಗಾರಿಕೆ, ಕಂಪನಿಗಳಿಗೆ ಸ್ಥಾಪನೆಗೆ ಅಲ್ಲಿನ ಸರ್ಕಾರಗಳು ವಿಶೇಷವಾದ ರಿಯಾಯಿತಿಯ ದರದಲ್ಲಿ ವಿದ್ಯುತ್, ಭೂಮಿ, ತೆರಿಗೆಯಲ್ಲಿ ವಿನಾಯಿತಿಗಳನ್ನು ನೀಡಿವೆ.

ಆದರೆ ಈ ರೀತಿಯಾಗಿ ಇಲ್ಲಿನ ಸರ್ಕಾರಗಳಿಂದ ವಿಶೇಷವಾದ ರಿಯಾಯಿತಿ ಪಡೆದಿವೆ. ಆದರೆ ಸ್ಥಳೀಯ ಭಾಷೆಯನ್ನು ತನ್ನ ವ್ಯವಹಾರದ ಭಾಷೆಯಾಗಿ ಬಳಸಲು ಒಪ್ಪಂದಕ್ಕೆ ಮಾತ್ರ ಸಹಿಹಾಕಿಲ್ಲ.

ಏಕೆಂದರೆ ಈಗಾಗಲೇ ಹೇಳಿದ ಹಾಗೆ ಈ ಕಂಪನಿಗಳು ತಮ್ಮ ವ್ಯವಹಾರವನ್ನು ಯಾವುದೇ ಒಂದು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತಗೊಳಿಸಿಕೊಂಡಿರುವುದಿಲ್ಲ. ಜೊತೆಗೆ ಅವು ತನ್ನ ಕೇಂದ್ರ ಕಛೇರಿಯನ್ನು ಒಂದು ದೇಶದಲ್ಲಿ ಹೊಂದಿದ್ದರೆ ತನ್ನ ಘಟಕಗಳನ್ನು ವಿಶ್ವದ ಮೂಲೆ ಮೂಲೆಯಲ್ಲಿಯೂ ತೆರೆದಿವೆ. ಇಂತದ ಸಂದರ್ಭದಲ್ಲಿ ಎಲ್ಲಾ ರಾಜ್ಯ ಮತ್ತು ದೇಶಗಳ ಭಾಷೆಯಲ್ಲಿ ವ್ಯವಹಾರ ನಡೆಸುವುದು ಕಷ್ಟವೆಂದು ಎಲ್ಲಾ ರಾಜ್ಯ ಮತ್ತು ದೇಶಗಳಿಗೆ ಅನ್ವಯವಾಗುವ ಹಾಗೆ ಎಲ್ಲರಿಗೂ ಅರ್ಥವಾಗುವ ಹಾಗೆ ವಿಶ್ವದಲ್ಲಿ ಹೆಚ್ಚು ಮನ್ನಣೆ ಗಳಿಸಿರುವ, ಹೆಚ್ಚು ದೇಶಗಳಲ್ಲಿ ಬಳಕೆಯಲ್ಲಿರುವ ಇಂಗ್ಲಿಶ್‌ನ್ನು ತಮ್ಮ ವ್ಯವಹಾರದ ಭಾಷೆಯಾಗಿ ಬಳಸುತ್ತಿವೆ. ಏಕೆಂದರೆ ಈ ಕಂಪನಿ, ಕೈಗಾರಿಕೆ ಉದ್ದಿಮೆಗಳ ಜವಾಬ್ದಾರಿ ಹೊತ್ತವರು ವಿಶ್ವದ ನಾನಾಭಾಗಗಳ ವ್ಯವಹಾರ, ವಹಿವಾಟು, ಅವುಗಳ ಏರಿಳಿತ, ದಿನನಿತ್ಯದ ಬದಲಾವಣೆ ಇತ್ಯಾದಿಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸುತ್ತಿರಬೇಕಾಗುತ್ತದೆ. ಇಂಗ್ಲಿಶ್ ಭಾಷೆಯ ಜ್ಞಾನವಿಲ್ಲದೆ ಕೇವಲ ಸ್ಥಳೀಯ ಭಾಷಾಜ್ಞಾನದಿಂದ ಈ ಅಂಶಗಳನ್ನು ಗಮನಿಸಲು ಸಾಧ್ಯವಾಗುವುದಿಲ್ಲ. ವೇಗವಾಗಿ ಬೆಳೆಯುತ್ತಿರುವ ಇಂದಿನ ವೈಜ್ಞಾನಿಕ ಯುಗದಲ್ಲಿ ತಮ್ಮ ಕಂಪನಿ, ಕಾರ್ಖಾನೆ, ಕೈಗಾರಿಕೆಗಳ ಅಸ್ತಿತ್ವ ಉಳಿಸಿಕೊಳ್ಳಬೇಕಾದರೆ ಈ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು ಮತ್ತು ಇಂದಿನ ಕಂಪ್ಯೂಟರೀಕರಣಗೊಂಡಿರುವ ವ್ಯವಸ್ಥೆಗೆ ಹೊಂದಿಕೊಂಡಿರುವ ನೌಕರರನ್ನು ನೇಮಕ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ನಮ್ಮ ಕಂಪನಿಗಳನ್ನು ಉಳಿಸಕೊಳ್ಳುವುದೇ ದುಸ್ಥರವಾಗುತ್ತದೆ ಎಂಬ ಕಾರಣಕ್ಕಾಗಿ ಜಾಗತೀಕರಣದ ಪರಿಣಾಮವಾಗಿ ಆರಂಭಗೊಂಡಿರುವ ಖಾಸಗಿ ಕಂಪನಿಗಳು, ಕೈಗಾರಿಕೆಗಳಲ್ಲಿ ಉನ್ನತ ಹುದ್ದೆಗಳನ್ನು ಸ್ಥಳೀಯ ಪ್ರದೇಶದ ಭಾಷೆ ಮಾತ್ರ ಬಳಕೆ ಮಾಡುವವರಿಗೆ ನೀಡಿಲ್ಲ. ಬದಲಾಗಿ ಸ್ಥಳೀಯ ಭಾಷೆಯ ಜೊತೆಗೆ ಇಂಗ್ಲಿಶ್ ಮತ್ತು ಕಂಪ್ಯೂಟರ್‌ನ ತಿಳುವಳಿಕೆ ಇರುವವರನ್ನು ನೇಮಕ ಮಾಡಿಕೊಂಡಿವೆ. ಇದಕ್ಕಾಗಿ ತಮ್ಮ ಕಂಪನಿಗಳಿಗೆ, ಕಾರ್ಖಾನೆಗಳಿಗೆ ಉದ್ಯೋಗಿಗಳನ್ನು ನೇಮಕ ಮಾಡಿಕೊಳ್ಳುವಾಗ ಇಂಗ್ಲಿಶ್ ಭಾಷಾಜ್ಞಾನ ಕಡ್ಡಾಯವೆಂದು ನೇಮಕಾತಿ ಪೂರ್ವದಲ್ಲಿಯೇ ಷರತ್ತನ್ನು ಹಾಕಿವೆ. ಈ ರೀತಿಯ ಷರತ್ತುನ್ನು ಹಾಕುವ ಪದ್ಧತಿ ಇಂದು ಕರ್ನಾಟಕದಲ್ಲಿರುವ ಬಹುರಾಷ್ಟ್ರೀಯ ಕಂಪನಿಗಳಲ್ಲಿ, ಖಾಸಗಿ ಉದ್ದಿಮೆಗಳಲ್ಲಿ ಕೆಲಸ ನೌಕರರಿಗೆ ಮಾತ್ರವಲ್ಲ, ಕರ್ನಾಟಕದಲ್ಲಿ ಕನ್ನಡಿಗರಿಂದಲೇ ಸ್ಥಾಪನೆಯಾಗಿರುವ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಕರಾಗಿ, ಉಪನ್ಯಾಸಕರಾಗಿ ಅಷ್ಟೇ ಅಲ್ಲ ಪ್ರಥಮ ಮತ್ತು ದ್ವಿತೀಯ ದರ್ಜೆ ಸಹಾಯಕರಾಗಿ ಕೆಲಸ ಮಾಡುವ ನೌಕರರಿಗೂ ಅನ್ವಯಿಸುವ ಹಾಗೆ ಬೆಳೆದುಬಿಟ್ಟಿದೆ.

ಇಂತಹ ಪರಿಸ್ಥಿತಿ ದೇಶದ ಯಾವುದೇ ಭಾಗದಲ್ಲೂ ಇಲ್ಲ. ಏಕೆಂದರೆ ಕರ್ನಾಟಕದ ರಾಜಧಾನಿಯಾದ ಬೆಂಗಳೂರು ಭಾರತದ ಸಾಫ್ಟ್‌ವೇರ್ ರಾಜಧಾನಿಯಾಗಿದೆ. ಇಲ್ಲಿನ ಕಂಪನಿಗಳಲ್ಲಿ ನಡೆಯುವ ಕೆಲಸ-ಕಾರ್ಯಗಳು ಕರ್ನಾಟಕ ಅಥವಾ ಭಾರತಕ್ಕೆ ಸೀಮಿತವಾದವಲ್ಲ. ಅವು ವಿದೇಶಗಳಿಗೆ ಸಂಬಂಧಪಟ್ಟ ವ್ಯವಹಾರಗಳು. ಅಲ್ಲಿನ ಬಹುತೇಕ ಕಂಪನಿಗಳ ವ್ಯವಹಾರಗಳಿಗೆ

ಸಂಬಂಧಪಟ್ಟ ಮಾಹಿತಿಗಳು ದಾಖಲೆಗಳಾಗಿ ರೂಪುಪಡೆಯುವುದೇ ಇಲ್ಲಿನ ಐಷಾರಾಮಿ ಕೊಠಡಿಗಳಲ್ಲಿ ಕುಳಿತು ಕಾರ್ಯನಿರ್ವಹಿಸುವ ಭಾರತೀಯ ತಂತ್ರಜ್ಞರಿಂದ. ಈ ತಂತ್ರಜ್ಞರು ತಮಗೆ ಬೇಕಾದ ಭಾಷೆಯಲ್ಲಿ ಅವುಗಳನ್ನು ಸಿದ್ಧಪಡಿಸಲು ಸಾಧ್ಯವಿಲ್ಲ. ಏಕೆಂದರೆ ಇಲ್ಲಿನ ತಂತ್ರಜ್ಞರಿಗೆ ಮತ್ತು ಈ ಕಂಪನಿಗಳ ಮಾಲೀಕರಿಗೆ ಆದಾಯದ ಮೂಲವಾಗಿರುವುದೇ ವಿದೇಶಿ ಬಂಡವಾಳಶಾಹಿಗಳು. ಹೀಗಾಗಿ ಇಲ್ಲಿನ ತಂತ್ರಜ್ಞರು ಬಂಡವಾಳಶಾಹಿಗೆ ಅನುಕೂಲವಾದ ಭಾಷೆಯಲ್ಲಿ ಕೆಲಸ ಮಾಡಿಕೊಡಬೇಕೆ ಹೊರತು ತಮಗೆ ಅನುಕೂಲವಾಗುವ ಭಾಷೆ ಅಥವಾ ಸ್ಥಳೀಯ ಪ್ರದೇಶದ ಭಾಷೆಯಲ್ಲಿ ಅಲ್ಲ. ಹೀಗಾಗಿ ಭಾರತೀಯ ತಂತ್ರಜ್ಞರು ಭಾರತದಲ್ಲೇ ಕುಳಿತು ಕೆಲಸ ಮಾಡುವಾಗ ಇಂಗ್ಲಿಶ್ ಬಳಸುವುದು ಅನಿವಾರ್ಯ ಆಗಿದೆ. ಹೀಗಾಗಿ ಜಾಗತೀಕರಣದ ನಂತರದ ಕರ್ನಾಟಕ ರಾಜಧಾನಿಯಾದ ಬೆಂಗಳೂರು ಸೇರಿದಂತೆ ಇತರ ಸ್ಥಳಗಳಲ್ಲಿ ಆರಂಭವಾಗಿರುವ ಖಾಸಗಿ ಕಂಪನಿಗಳು, ಕೈಗಾರಿಕೆಗಳು ಮತ್ತು ಸಾಫ್ಟ್‌ವೇರ್ ಕಂಪನಿಗಳಲ್ಲಿ ಇಲ್ಲಿನ ಸ್ಥಳೀಯ ಭಾಷೆಗಾಗಲಿ, ಭಾಷಿಕರಿಗಾಗಲಿ ಪ್ರಾಧಾನ್ಯತೆ ನೀಡಿಲ್ಲ. ಬದಲಾಗಿ ಸ್ಥಳೀಯ ಭಾಷೆಗಳ ಸ್ಥಾನವನ್ನು ಇಂಗ್ಲಿಶ್ ಆಕ್ರಮಿಸಿಕೊಂಡಿದೆ.

ಇದರಿಂದಾಗಿ ಇಲ್ಲಿ ಸಿಗುವ ಡಾಲರ್‌ಗಳ ಲೆಕ್ಕದ ಸಂಬಳವನ್ನು ಪಡೆಯಲು ಕರ್ನಾಟಕದಲ್ಲಿನ ಜನತೆ ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ ಭಾಷೆಗಳನ್ನು ಕಲಿಯಲು ಮುಂದಾಗಿದ್ದಾರೆ. ಇದರಿಂದ ಸರ್ಕಾರಗಳು ಬದಲಾದ ಕಾಲಕ್ಕೆ ಅನುಗುಣವಾಗಿ ವಿದ್ಯಾರ್ಥಿಗಳಿಗೆ ಭಾಷೆಗಳನ್ನು ಕಲಿಸಲು ತನ್ನ ಭಾಷಾನೀತಿಗಳನ್ನು ಬದಲಾವಣೆ ಮಾಡಿವೆ. ಇದರಿಂದಾಗಿ "ಇಂದು ತೀವ್ರವಾಗಿ ಬದಲಾಗುತ್ತಿರುವ ಕಾಲದಲ್ಲಿನ ರಾಜಕೀಯ ಆರ್ಥಿಕ ಒತ್ತಡಗಳು ವಿಶೇಷ ಪರಿಣಾಮವನ್ನು ಉಂಟುಮಾಡುತ್ತಿವೆ. ಖಾಸಗಿ (ವಿದೇಶಿ) ಬಂಡವಾಳದ ವಲಸೆಯ ಪ್ರವೃತ್ತಿಯನ್ನು ಹೆಚ್ಚಿಸಿದೆ. ಇದು ಶಿಕ್ಷಣ ಮತ್ತು ಭಾಷಾನೀತಿಗಳ ಮೇಲೆ ಪ್ರಭಾವ ಬೀರುತ್ತಿದೆ. ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ಈ ಮೊದಲು ಐದನೆಯ ತರಗತಿಯಿಂದ ಇಂಗ್ಲಿಶನ್ನು ಕಲಿಸಲಾಗುತ್ತಿತ್ತು. ಈಗ ಅದನ್ನು ಒಂದನೆಯ ತರಗತಿಯಿಂದಲೇ ಕಲಿಸಲು ಆರಂಭಿಸಲಾಗಿದೆ. ಚೀನಾ, ರಶ್ಯಾ ಮತ್ತು ಜಪಾನಿಂತಹ ದೇಶಗಳ ಶಿಕ್ಷಣದಲ್ಲಿ ಇಂಗ್ಲಿಶ್ ಸ್ಥಾನಪಡೆದುಕೊಳ್ಳುವ ಮೂಲಕ ಅಲ್ಲಿನ ಭಾಷಿಕ ಪರಿಸರವನ್ನು ದ್ವಿಭಾಷಿಕ ಅಥವಾ ಬಹುಭಾಷಿಕ ಪರಿಸರವನ್ನಾಗಿ ಬದಲಾಯಿಸುತ್ತಿವೆ. ಇದೂ ಕೂಡ ಬದಲಾಗುತ್ತಿರುವ ಜಾಗತಿಕ ಮಾರುಕಟ್ಟೆಯ ವಿನ್ಯಾಸಗಳು:ಆರ್ಥಿಕ ನೀತಿಗಳ ಮತ್ತು ಖಾಸಗಿ ವಿದೇಶಿ ಬಂಡವಾಳದ ಒತ್ತಡದ ಪರಿಣಾಮವಾಗಿಯೇ ಸಂಭವಿಸುತ್ತಿದೆ[೪೫]." ಎನ್ನುತ್ತಾರೆ ಡಾ.ರಂಗನಾಥ ಕಂಟನಕುಂಟೆ.

ಇವುಗಳ ವಾಸ್ತವದ ಅರಿವಿಲ್ಲದೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ತಮ್ಮ ರಾಜಕೀಯ ಲಾಭಕ್ಕಾಗಿ ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಕನ್ನಡಿಗರ ಬದುಕಲ್ಲಿ ಬೆಳಕನ್ನು ಮೂಡಿಸುವ ಹಾಗೆ ಭಾಷಾನೀತಿಗಳನ್ನು ಜಾರಿಗೊಳಿಸಿವೆ. ಇದರಿಂದಾಗಿ ಖಾಸಗಿ ಕಂಪನಿಗಳು ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ ವ್ಯವಹಾರಗಳನ್ನು ನಡೆಸುತ್ತಿವೆ. ಅದಕ್ಕನುಗುಣವಾಗಿ ನೌಕರರನ್ನು ನೇಮಕ ಮಾಡಿಕೊಂಡಿವೆ. ಇವುಗಳ ಮೇಲೆ ಸರ್ಕಾರಗಳು ಯಾವುದೇ ಕ್ರಮಗಳನ್ನು

ಕೈಗೊಂಡಿಲ್ಲ. ಕ್ರಮಕೈಗೊಳ್ಳುವ ಅಧಿಕಾರ ಕೂಡ ಹೊಂದಿಲ್ಲ. ಹೀಗಾಗಿ ಸರ್ಕಾರಗಳು ಖಾಸಗಿ ಕಂಪನಿ, ಕೈಗಾರಿಕೆ, ಉದ್ದಿಮೆಗಳ ಮೇಲೆ ನಾಡು, ನುಡಿ, ಸಂಸ್ಕೃತಿಯ ವಿಚಾರದಲ್ಲಿ ಹಿಡಿತ ಸ್ಥಾಪಿಸುವ ಅಧಿಕಾರ ಹೊಂದಿ ಅವುಗಳ ರಕ್ಷಣೆಗೆ ದಿಟ್ಟನಿಲುವನ್ನು ತಳೆಯಬೇಕಾಗುತ್ತದೆ. ಇವುಗಳ ಜೊತೆಗೆ ವೈಜ್ಞಾನಿಕ ಕ್ಷೇತ್ರದಲ್ಲಾದ ಹೊಸಹೊಸ ಆವಿಷ್ಕಾರಗಳು, ಅವುಗಳ ಬೆಳಕಿನಲ್ಲಿ ರೂಪುಪಡೆದ ಕಂಪ್ಯೂಟರ್, ಇಂಟರ್‌ನೆಟ್‌ನಂತಹ ಹೊಸಹೊಸ ತಂತ್ರಜ್ಞಾನಗಳಿಗೆ ತಕ್ಕಂತೆ ಸ್ಥಳೀಯ ಭಾಷೆಗಳನ್ನು ಅತಿವೇಗವಾಗಿ ಅಭಿವೃದ್ಧಿಪಡಿಸುವ, ಅದಕ್ಕೆ ಜನರು ಹೊಂದಿಕೊಳ್ಳುವ ಹಾಗೆ ತರಬೇತಿ ನೀಡುವ, ಮಾಹಿತಿ ಒದಗಿಸುವ ಕೆಲಸಗಳನ್ನು ಸರ್ಕಾರಗಳು ಮಾಡಬೇಕಾಗುತ್ತದೆ. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಈ ಕೆಲಸಗಳನ್ನು ಮಾಡುತ್ತಿಲ್ಲ. ಬದಲಾಗಿ ಜನರು ಮೊದಲು ಇಂಗ್ಲಿಶ್‌ನಲ್ಲಿ ಕಲಿತು ಅದು ಹಳತಾಗಿ ಹೊಸತನ್ನು ನಿರೀಕ್ಷಿಸುತ್ತಿದ್ದಾಗ ಹಳತನ್ನು ಕನ್ನಡೀಕರಿಸುವ ಯೋಜನೆಗಳಿಗೆ ಸಿದ್ಧತೆ ಮಾಡಿಕೊಳ್ಳಲಾಗಿದೆ.

ಇದರಿಂದಾಗಿ ಕನ್ನಡದ ಜನರು ವೈಜ್ಞಾನಿಕ, ತಂತ್ರಜ್ಞಾನ ಕ್ಷೇತ್ರಗಳಲ್ಲಾಗಿರುವ ಬದಲಾವಣೆಗಳನ್ನು ಜನರು ಮೊದಲು ಇಂಗ್ಲಿಶ್‌ನಲ್ಲಿ ಕಲಿತು, ಬಳಸಿದ್ದಾರೆ. ಹೀಗಾಗಿ ಮಾತೃಭಾಷೆಗಳು ಮತ್ತು ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಕರ್ನಾಟಕದಲ್ಲಿನ ಸರ್ಕಾರಗಳು ಜಾರಿಗೆ ಆದೇಶಿಸಿರುವ ಭಾಷಾನೀತಿಗಳು ಅನುಷ್ಠಾನವಾಗದೆ ರಾಜ್ಯದ ಜನತೆಯಲ್ಲಿ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಸಾಹಿತ್ಯಕ, ಔದ್ಯೋಗಿಕ ಅಸಮಾನತೆಗಳನ್ನು ಹುಟ್ಟುಹಾಕಿ ಭಾಷಾಸಮಸ್ಯೆಗಳನ್ನು ಜೀವಂತವಾಗಿ ಉಳಿಸಿವೆ. ಆದುದರಿಂದ ಮಾತೃಭಾಷೆಗಳು ಮತ್ತು ಪ್ರಾದೇಶಿಕ ಭಾಷೆಗಳ ಅಸ್ತಿತ್ವದ ಉಳಿವು ಮತ್ತು ಅಭಿವೃದ್ಧಿ ಇಂಗ್ಲಿಶ್ ಅಥವಾ ಹಿಂದಿ ಭಾಷೆಗಳನ್ನು ನಿಯಂತ್ರಿಸುವುದರಲ್ಲಿ ಇಲ್ಲ. ಜಾಗತಿಕ ಪ್ರಪಂಚದ ವೇಗಕ್ಕೆ ಅನುಗುಣವಾಗಿ ಆಡಳಿತ, ಶಿಕ್ಷಣಮಾಧ್ಯಮ, ಉದ್ಯೋಗ, ವಿಜ್ಞಾನ, ತಂತ್ರಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಮಾತೃಭಾಷೆಗಳು ಮತ್ತು ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಅಭಿವೃದ್ಧಿ ಪಡಿಸುವುದರಲ್ಲಿ ಹಾಗೂ ವಿವಿಧ ಇಲಾಖೆ ಮತ್ತು ಕ್ಷೇತ್ರಗಳಲ್ಲಿ ಬಳಕೆಯಾಗುತ್ತಿರುವ ಭಾಷೆಗಳ ನಡುವೆ ಹೊಂದಾಣಿಕೆ ತರುವುದರಲ್ಲಿ ಇದೆ.

**ಟಿಪ್ಪಣೆಗಳು**

೧. ಮರುಳಯ್ಯ ಸಾ.ಶಿ., ಕನ್ನಡ ಭಾಷಾಲೋಕ ಮತ್ತು ಪೂರಕ ಸಾಹಿತ್ಯ, ಪುಟ ೬೭

೨. ಅದೇ, ಪುಟ ೬೭.

೩. ಕೆಂಪೇಗೌಡ ಕೆ., ಕನ್ನಡ ಭಾಷಾಚರಿತ್ರೆ, ಪುಟ ೭೪

೪. ಅದೇ, ಪುಟ ೭೪

೫. ಮರುಳಯ್ಯ ಸಾ.ಶಿ., ಕನ್ನಡ ಭಾಷಾಲೋಕ ಮತ್ತು ಪೂರಕ ಸಾಹಿತ್ಯ, ಪುಟ ೩೪

೬. ಅದೇ ಪುಟ ೩೫

೭. ಹಂಪ ನಾಗರಾಜಯ್ಯ, ಮೂಲ ಚೂಲ, ಪುಟ ೯೧

೮. ಗೋವಿಂದರಾಜು ಸಿ.ಆರ್., (ಸಂ) ಕೆರಿಮನಿ ಸಿ.ವಿ., ಚೆಲುವ ಕನ್ನಡ, ಪುಟ ೧೫

೯. ಚಂದ್ರಶೇಖರ್ ಎಸ್., ವಸಾಹಾತುಕಾಲೀನ ಕರ್ನಾಟಕ, ಪುಟ ೧೬೨

೧೦. ಅದೇ, ಪುಟ ೧೬೩

೧೧. ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ಪುಟ ೧೭

೧೨.ಅದೇ, ಪುಟ ೧೬
೧೩.ಅದೇ, ಪುಟ ೧೬
೧೪.ಅದೇ, ಪುಟ ೧೭
೧೫.ಅದೇ, ಪುಟ ೧೫,
೧೬.ಅದೇ, ಪುಟ ೧೮
೧೭.ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಆಡಳಿತದಲ್ಲಿ ಕನ್ನಡ ಪ್ರಮುಖ ಆದೇಶಗಳು, ಸುತ್ತೋಲೆಗಳು, ಪುಟ ೮
೧೮.ಗೋವಿಂದರಾಜು ಸಿ.ಆರ್., ಗೋಕಾಕ್ ವರದಿ, ಪುಟ ೫
೧೯.ಅದೇ, ಪುಟ ೬
೨೦.ಸುದರ್ಶನ ಸ.ರ, ಶಿಕ್ಷಣಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೫೩
೨೧.ಗೋವಿಂದರಾಜು ಸಿ.ಆರ್., ಗೋಕಾಕ್ ವರದಿ, ಪುಟ ೭
೨೨.ಸುದರ್ಶನ ಸ.ರ., ಶಿಕ್ಷಣಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೮೬
೨೩.ಅದೇ, ಪುಟ ೮೮
೨೪.ಅದೇ, ಪುಟ ೯೦
೨೫.ಹಾ.ಮಾ.ನಾಯಕ, ಕನ್ನಡವನ್ನು ಕಟ್ಟುವ ಕೆಲಸ. ದ್ವಿತೀಯ ಪಿಯುಸಿ ಕನ್ನಡ ಭಾಷಾಪಠ್ಯಪುಸ್ತಕ, ಪುಟ ೧೦೭
೨೬.ಎಂ.ಎಂ.ಬಡ್ಡಿ ಭಾರತದ ಸಂವಿಧಾನ, ಪುಟ ೧೦೨
೨೭.ಅದೇ, ಪುಟ ೯೭
೨೮.ಅದೇ, ಪುಟ ೧೦೦
೨೯.ನಾರಾಯಣ ಕೆ.ವಿ., ನಮ್ಮೊಡನೆ ನಮ್ಮನುಡಿ, ಪುಟ ೫
೩೦.ನಾರಾಯಣ ಕೆ.ವಿ., ನಮ್ಮೊಡನೆ ನಮ್ಮ ನುಡಿ, ಪುಟ ೩
೩೧.ಅದೇ, ಪುಟ ೪
೩೨.ಸ್ಕುಟನ್ಯಾಬ್ ಕಾಂಗಾಸ್, (ಅನು) ಓ ಎಲ್ ನಾಗಭೂಷಣಸ್ವಾಮಿ, ಕನ್ನಡ ಅಧ್ಯಯನ,ಪುಟ ೧೦೬
೩೩.ನಾರಾಯಣ ಕೆ.ವಿ., ಕನ್ನಡ ಜಗತ್ತು ಅರ್ಧಶತಮಾನ, ಪುಟ ೧೫
೩೪.ಸುದರ್ಶನ.ಸ.ರ., ಶಿಕ್ಷಣ ಮಾಧ್ಯಮ: ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೬೮
೩೫.ಮಹಾದೇವಯ್ಯ ಪಿ., (ಸಂ) ಅಶೋಕ ಕುಮಾರ ರಂಜೇರೆ, ಆಡಳಿತ ಕನ್ನಡ, ಪುಟ ೮೯
೩೬.ವಿಜಯಕರ್ನಾಟಕ ದಿನಪತ್ರಿಕೆ, ದಿನಾಂಕ ೨೨ ಸೆಪ್ಟೆಂಬರ್ ೨೦೧೪, ನಮ್ಮ ಬೆಂಗಳೂರು ಗ್ರಾಮಾಂತರ, ಪುಟ ೩
೩೭.ಸ್ಕುಟನ್ಯಾಬ್ ಕಾಂಗಾಸ್, (ಅನು) ಓ ಎಲ್ ನಾಗಭೂಷಣಸ್ವಾಮಿ, ಕನ್ನಡ ಅಧ್ಯಯನ, ಪುಟ ೯೦
೩೮.ಬರಗೂರು ರಾಮಚಂದ್ರಪ್ಪ, ಕನ್ನಡ ಪ್ರಜ್ಞೆ, ಪುಟ ೧೨೧
೩೯.ಮಹಾದೇವಯ್ಯ ಪಿ., (ಸಂ) ಅಶೋಕ ಕುಮಾರ ರಂಜೇರೆ, ಆಡಳಿತ ಕನ್ನಡ, ಪುಟ ೯೦
೪೦.ರಂಗನಾಥ ಕಂಟನಕುಂಟೆ, ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ, ಪುಟ ೨೯೮
೪೧.ಬರಗೂರು ರಾಮಚಂದ್ರಪ್ಪ, ಕನ್ನಡ ಪ್ರಜ್ಞೆ, ಪುಟ ೧೨೨
೪೨.ಅದೇ ಪುಟ ೧೨೧
೪೩.ಅದೇ ಪುಟ ೧೨೧
೪೪.ರಂಗನಾಥ ಕಂಟನಕುಂಟೆ, ಜನಭಾಷೆ ಮತ್ತು ಪ್ರಭುತ್ವಭಾಷೆಗಳ ಸಂಘರ್ಷ, ಪುಟ ೫೩
೪೫.ಅದೇ ಪುಟ ೫

**ಅಧ್ಯಾಯ-೩**

**ಶಿಕ್ಷಣ ಮತ್ತು ಭಾಷೆ**

೩.೧ ಶಿಕ್ಷಣದಲ್ಲಿ ಭಾಷಾಬಳಕೆಯ ಸ್ವರೂಪ ಮತ್ತು ಸಮಸ್ಯೆಗಳು

೩.೨ ಪ್ರಥಮ ಭಾಷೆಯಾಗಿ ಮಾತೃಭಾಷಾಕಲಿಕೆ ಮತ್ತು ಸಮಸ್ಯೆಗಳು

೩.೩ ಭಾಷಾಅಲ್ಪಸಂಖ್ಯಾತರು: ಪ್ರಥಮ ಭಾಷೆಯಾಗಿ ಮಾತೃಭಾಷಾಕಲಿಕೆ ಮತ್ತು ಸಮಸ್ಯೆಗಳು

೩.೪ ದ್ವಿತೀಯ ಮತ್ತು ತೃತೀಯ ಭಾಷಾಕಲಿಕೆ ಮತ್ತು ಸಮಸ್ಯೆಗಳು

೩.೫ ಭಾರತದಲ್ಲಿ ಇಂಗ್ಲಿಶ್ ಕಲಿಕೆಯ ಆರಂಭ ಮತ್ತು ಉದ್ದೇಶ

೩.೬ ಏಕೀಕರಣ ನಂತರದ ಕರ್ನಾಟಕ: ಇಂಗ್ಲಿಶ್ ಕಲಿಕೆ ಮತ್ತು ಸಮಸ್ಯೆಗಳು

## ಅಧ್ಯಾಯ-೩

# ಶಿಕ್ಷಣ ಮತ್ತು ಭಾಷೆ

### ೩.೧ ಶಿಕ್ಷಣದಲ್ಲಿ ಭಾಷಾಬಳಕೆಯ ಸ್ವರೂಪ ಮತ್ತು ಸಮಸ್ಯೆಗಳು

"ಭಾರತ ಸಂವಿಧಾನದಲ್ಲಿರುವ ರಾಜ್ಯನೀತಿಯ ನಿರ್ದೇಶಕ ತತ್ವಗಳ ೪೫ನೇ ಅನುಚ್ಛೇದದಲ್ಲಿ 'ರಾಜ್ಯವೂ ಈ ಸಂವಿಧಾನವು ಪ್ರಾರಂಭವಾದಾಗಿನಿಂದ ಹತ್ತು ವರ್ಷಗಳ ಅವಧಿಯೊಳಗಾಗಿ ಎಲ್ಲ ಮಕ್ಕಳು ಹದಿನಾಲ್ಕು ವರ್ಷ ವಯಸ್ಸಿನವರಾಗುವವರೆಗೂ ಅವರಿಗೆ ಉಚಿತವಾದ ಹಾಗೂ ಕಡ್ಡಾಯವಾದ ವಿದ್ಯಾಭ್ಯಾಸವನ್ನು ಒದಗಿಸಲು ಶ್ರಮಿಸತಕ್ಕದ್ದು' ಎಂಬುದಾಗಿ ನಮೂದಿಸಲಾಗಿದೆ[೧]." ಸಂವಿಧಾನದಲ್ಲಿ ಅಳವಡಿಸಲಾಗಿರುವ ಈ ನಿಯಮದ ಜೊತೆಗೆ ಆಧುನಿಕ ಜಗತ್ತಿನಲ್ಲಿ ಮಗು ಶಿಕ್ಷಣವಿಲ್ಲದೆ ಬದುಕುವುದು ಕಷ್ಟ. ಆಧುನಿಕ ಕಾಲದ ಬದುಕಿನ ಒತ್ತಡ ಮತ್ತು ಭಾರತ ಸಂವಿಧಾನದ ಕಠಿಣ ನಿಯಮದಿಂದಾಗಿ ದೇಶದ ಪ್ರತಿಯೊಂದು ಮಗುವಿಗೂ ಶಿಕ್ಷಣ ಕಲಿಸುವ ವ್ಯವಸ್ಥೆ ನಿರ್ಮಾಣ ಮಡುವುದು ರಾಜ್ಯಸರ್ಕಾರಗಳ ಕರ್ತವ್ಯವಾಗಿದೆ. ಹಾಗೆಯೇ ಶಿಕ್ಷಣ ಕಲಿಯುವುದು ಮಕ್ಕಳ ಕೆಲಸವಾಗಿದೆ. ಹೀಗೆ ಅನಿವಾರ್ಯವಾದ ಶಿಕ್ಷಣವನ್ನು ವಿದ್ಯಾರ್ಥಿಗಳು ಕಲಿಯಲು ಮತ್ತು ಶಿಕ್ಷಕರು ಕಲಿಸಲು ಭಾಷೆ ಅಗತ್ಯ. ಭಾಷೆಯಿಲ್ಲದೆ ಶಿಕ್ಷಣ ಅಸಾಧ್ಯ (ಮಾತು ಬರದ ಮೂಗರಿಗೆ ಶಿಕ್ಷಣ ಕಲಿಸಲು ಅವರದೇ ಆದ ಒಂದು ಭಾಷೆಯ ಅಗತ್ಯವಿದೆ). ಹೀಗಾಗಿ ಭಾಷೆ ಮತ್ತು ಶಿಕ್ಷಣದ ನಡುವೆ ಅನನ್ಯ ಸಂಬಂಧ ಬೆಳೆದು ಭಾಷೆ ಶಿಕ್ಷಣದಲ್ಲಿ ಒಂದು ಭಾಗವಾಗಿದೆ.

ಹೀಗೆ ಶಿಕ್ಷಣದಲ್ಲಿ ಒಂದು ಭಾಗವಾಗಿರುವ ಭಾಷೆ ಎರಡು ರೀತಿಯಲ್ಲಿ ಬಳಕೆಯಾಗುತ್ತಿದೆ. ೧)ಪಠ್ಯಕ್ರಮದಲ್ಲಿ ಒಂದು ಭಾಷೆಯಾಗಿ ಕಲಿಸಲು ೨) ಇತರ ವಿಷಯಗಳನ್ನು ಕಲಿಸಲು ಬೋಧನಾ ಮಾಧ್ಯಮವಾಗಿ. ಈ ಎರಡು ಕ್ರಮಗಳಲ್ಲಿ ಭಾಷೆಯನ್ನು ಬಳಸುವ ಉದ್ದೇಶದಲ್ಲಿ ಭಿನ್ನತೆಯಿದೆ. ಇವುಗಳ ಸ್ವರೂಪ ಕರ್ನಾಟಕದ ಶಿಕ್ಷಣದಲ್ಲಿ ಹೇಗಿರಬೇಕು ಎಂಬುದಕ್ಕೆ ಸಂಬಂಧಿಸಿದಂತೆ ಶಿಫಾರಸ್ಸು ಮಾಡಲು ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಹಲವು ಸಮಿತಿಗಳನ್ನು ನೇಮಕ ಮಾಡಿವೆ. ಇವುಗಳಲ್ಲಿ ಜೆ.ಬಿ.ಮಲ್ಲಾರಾಧ್ಯ, ಡಾ.ವಿ.ಕೃ.ಗೋಕಾಕ್, ಎಚ್.ನರಸಿಂಹಯ್ಯ, ಚಂದ್ರಶೇಖರ ಪಾಟೀಲ ಮತ್ತು ಬರಗೂರು ರಾಮಚಂದ್ರಪ್ಪ ನೇತೃತ್ವದಲ್ಲಿ ರಚನೆಯಾಗಿದ್ದ ಸಮಿತಿಗಳು ಪ್ರಮುಖವಾಗಿವೆ. ಈ ಸಮಿತಿಗಳು ಕರ್ನಾಟಕದ ಶಿಕ್ಷಣದಲ್ಲಿ ಬಳಕೆಯಾಗಬೇಕಾದ ಭಾಷಾಕ್ರಮಕ್ಕೆ ಸಂಬಂಧಿಸಿದಂತೆ ವರದಿಯನ್ನು ಸಲ್ಲಿಸುವಾಗ ಆಯಾ ಕಾಲದ ಕರ್ನಾಟಕದ ಭಾಷಾಪರಿಸ್ಥಿತಿ, ಜನತೆಯ ಒತ್ತಡ, ಭಾಷಿಕ ಅಗತ್ಯಗಳನ್ನು ಮುಖ್ಯವಾಗಿಸಿಕೊಂಡು ತಮ್ಮ ವರದಿಗಳಲ್ಲಿ ಭಾಷಾಸಮಸ್ಯೆಯ ಪರಿಹಾರಕ್ಕೆ ಶಿಫಾರಸ್ಸುಗಳನ್ನು ಮಾಡಿವೆ. ಇವುಗಳ ಆಧಾರದಲ್ಲಿ ರಾಜ್ಯದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕರ್ನಾಟಕದ ಶಿಕ್ಷಣದಲ್ಲಿ ಬಳಕೆಯಾಗಬೇಕಾದ ಭಾಷೆಗೆ ಸಂಬಂಧಿಸಿದಂತೆ ನೀತಿಗಳನ್ನು ಜಾರಿಗೊಳಿಸಿವೆ.

ಆದರೆ ಈ ಸಮಿತಿಗಳು ತಾವು ಮಾಡಿದ ಶಿಫಾರಸ್ಸುಗಳನ್ನು ಸರ್ಕಾರ ಭಾಷಾನೀತಿಯಾಗಿ ಆದೇಶ ಹೊರಡಿಸಿ, ಅವುಗಳನ್ನು ಅನುಷ್ಠಾನಗೊಳಿಸುವಂತೆ ಸಂಬಂಧಪಟ್ಟ ಇಲಾಖೆ ಅಧಿಕಾರಿಗಳು ಮತ್ತು ನೌಕರರಿಗೆ ಸೂಚಿಸಿದರೆ ಅದಕ್ಕೆ ಎದುರಾಗುವ ತೊಡಕುಗಳು ಏನು? ಅದರಿಂದ ಉದ್ಭವಿಸುವ ಸಮಸ್ಯೆಗಳು ಏನು? ಅವುಗಳ ಪರಿಹಾರಕ್ಕೆ ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳಬೇಕು? ಎಂಬುದರ ಬಗೆಗೆ ಈ ಸಮಿತಿಗಳು ಸೂಕ್ತ ಸಲಹೆಗಳನ್ನು ನೀಡಿಲ್ಲ. ಆದರೂ ಜನತೆಯ ಒತ್ತಡದಿಂದಾಗಿ ಮೇಲಿನ ಸಮಿತಿಗಳು ನೀಡಿರುವ ವರದಿಯನ್ನು ಆಧರಿಸಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕೆಲವು ಸಲ ತನ್ನ ಅಧಿಕಾರದ ವ್ಯಾಪ್ತಿಯೊಳಗೂ, ಮತ್ತೆ ಕೆಲವು ಸಲ ತನ್ನ ಅಧಿಕಾರದ ವ್ಯಾಪ್ತಿಯನ್ನು ಮೀರಿ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಇವುಗಳನ್ನು ಅನುಷ್ಠಾನಕ್ಕೆ ತರುವಂತೆ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ಸೂಚಿಸಲಾಗಿದೆ. ಇದರಿಂದ ಶಿಕ್ಷಣ ಇಲಾಖೆಯ ಅಧಿಕಾರಿಗಳು ಸಂಕಷ್ಟಕ್ಕೆ ಒಳಗಾಗಿದ್ದಾರೆ. ಏಕೆಂದರೆ ಒಂದು ಪ್ರಭುತ್ವಶಕ್ತಿ ಅಥವಾ ಪ್ರಭುತ್ವ ಶಕ್ತಿಯಿಂದ ರಚನೆಯಾದ ಸಮಿತಿ ಅಥವಾ ಆಯೋಗಗಳು ರೂಪಿಸುವ ಭಾಷಾಯೋಜನೆ ಮತ್ತು ಪ್ರಭುತ್ವಶಕ್ತಿ ಜಾರಿಗೆ ತರುವ ಭಾಷಾನೀತಿಯ ಹಿಂದೆ ಆ ಪ್ರದೇಶದ ಭಾಷಾಸಮಸ್ಯೆಗೆ ಪರಿಹಾರವನ್ನು ಹುಡುಕುವ ಉದ್ದೇಶ ಇರುವುದಿಲ್ಲ. ಬದಲಾಗಿ ಆ ಪ್ರದೇಶದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಪ್ರಬಲವಾಗಿರುವ ಜನಸಮುದಾಯಗಳ ಒಲೈಕೆ ಮುಖ್ಯವಾಗಿರುತ್ತದೆ. ಅದರಲ್ಲೂ ಭಾರತದಂತಹ ಪ್ರಜಾಪ್ರಭುತ್ವ ದೇಶದಲ್ಲಿ ಆಡಳಿತ ನಡೆಸಿರುವ ರಾಜಕೀಯ ಪಕ್ಷಗಳಿಗೆ ತಮ್ಮ ಮತಬ್ಯಾಂಕ್, ಆರ್ಥಿಕ ಶಕ್ತಿಗಳ ಪರವಾದ ಅಭಿಮತ ಇದೆ. ಹೀಗಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಜಾರಿಗೆ ತಂದಿರುವ ಭಾಷಾನೀತಿಗಳು ಕರ್ನಾಟಕದ ಎಲ್ಲಾ ಭಾಷಾಸಮುದಾಯಗಳ ಮಕ್ಕಳ ಕಲಿಕೆಗೆ ಸುಲಭವಾಗಿಲ್ಲ. ಮತ್ತು ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಅಭಿವೃದ್ಧಿಗೆ ಪೂರಕವಾಗಿಯೂ ಇಲ್ಲ. ಇದಕ್ಕೆ ಬದಲಾಗಿ ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ವಿದ್ಯಾರ್ಥಿಗಳು, ಶಿಕ್ಷಕರು ಮತ್ತು ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ಒತ್ತಡಕ್ಕೆ ಸಿಲುಕಿಸಿದೆ.

ಹೀಗಾಗಿ ಈ ಅಧ್ಯಾಯದಲ್ಲಿ ಶಿಕ್ಷಣದಲ್ಲಿ ಭಾಷೆಯನ್ನು ಭಾಷೆಯಾಗಿ ಕಲಿಸುವಾಗ ಅದರ ಉದ್ದೇಶವೇನು? ಅವುಗಳ ಬಳಕೆಯ ಸ್ವರೂಪವೇನು? ಸರ್ಕಾರಗಳು ಜಾರಿಗೆ ತಂದಿರುವ ಭಾಷಾನೀತಿಯಿಂದ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಒತ್ತಡಕ್ಕೆ ಒಳಗಾಗಲು ಕಾರಣವೇನು? ಶಿಕ್ಷಣ ಇಲಾಖೆಯ ಅಧಿಕಾರಿಗಳು ಸರ್ಕಾರಗಳ ಭಾಷಾನೀತಿಗಳನ್ನು ಯಥಾವತ್ತಾಗಿ ಅನುಷ್ಠಾನಕ್ಕೆ ತರಲು ಇದ್ದ ಅಡತಡೆಗಳು ಯಾವುವು? ಅನುಷ್ಠಾನಕ್ಕೆ ತರಲು ಪ್ರಯತ್ನಿಸಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳು ಯಾವುವು? ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಈಗಾಗಲೇ ಚರ್ಚಿಸಿರುವ ಹಾಗೆ ಕರ್ನಾಟಕ ಏಕೀಕರಣಗೊಳ್ಳುವ ಪೂರ್ವದಲ್ಲಿ ಕನ್ನಡ ಭಾಷೆಯನ್ನಾಡುವ ಜನರು ಬೇರೆಬೇರೆ ವಿವಿಧ ಆಡಳಿತ ವಲಯಗಳಲ್ಲಿ ಹಂಚಿಹೋಗಿದ್ದರು. ಇಲ್ಲಿ ಅನ್ಯಭಾಷೆಗಳ ಪ್ರಭಾವ ಪ್ರಬಲವಾಗಿ ಇದ್ದುದರಿಂದ ಕನ್ನಡದ ಮಕ್ಕಳು ಕನ್ನಡವನ್ನು ಮತ್ತು ಕನ್ನಡದಲ್ಲಿ ಶಿಕ್ಷಣ ಕಲಿಯಲು ಸಾಧ್ಯವಾಗಿಲ್ಲ. ಇದರಿಂದ ಕನ್ನಡದ ಮಕ್ಕಳು ಶಿಕ್ಷಣಕ್ಕಾಗಿ ಅನ್ಯಭಾಷೆಯನ್ನು

ಅವಲಂಭಿಸಿದ್ದರು. ಇದು ಕನ್ನಡ ಮಕ್ಕಳು ಕಲಿಕೆಯಲ್ಲಿ ಹಿಂದೆ ಉಳಿದುಕೊಳ್ಳಲು ಮತ್ತು ಶಿಕ್ಷಣದಿಂದ ವಂಚಿತವಾಗಲು ಕಾರಣವಾಗಿತ್ತು. ಮತ್ತು ಇದು ಕನ್ನಡಿಗರನ್ನು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ಔದ್ಯೋಗಿಕವಾಗಿ ಹಿಂದುಳಿಯುವಂತೆ ಮಾಡಿತ್ತು. ಹೀಗಾಗಿ ಅನ್ಯಭಾಷಾಸಮುದಾಯಗಳ ಆಡಳಿತದ ಅಧೀನಕ್ಕೆ ಒಳಗಾಗಿದ್ದ ಕನ್ನಡಿಗರಲ್ಲಿ ನಾವು ಅಭಿವೃದ್ಧಿ ಹೊಂದಬೇಕಾದರೆ ಅನ್ಯಭಾಷಾಸಮುದಾಯಗಳ ಆಡಳಿತದ ಅಧೀನತೆಯಿಂದ ಬಿಡುಗಡೆ ಪಡೆಯಬೇಕು. ಅಂದರೆ ಕನ್ನಡದ ಮಕ್ಕಳು ಕನ್ನಡ ಮತ್ತು ಕನ್ನಡದಲ್ಲಿ ಕಲಿಯುವಂತ ವ್ಯವಸ್ಥೆ ನಿರ್ಮಾಣ ಆಗಬೇಕು. ಇದಕ್ಕಾಗಿ ಕನ್ನಡವನ್ನು ಮಾತನಾಡುವವರೆಲ್ಲಾ ಒಂದು ಆಡಳಿತ ವ್ಯಾಪ್ತಿಗೆ ಒಳಪಡಬೇಕು. ಆಗ ಮಾತ್ರ ಕನ್ನಡದ ಮಕ್ಕಳಿಗೆ ಕನ್ನಡವನ್ನು ಮತ್ತು ಕನ್ನಡದಲ್ಲಿ ಕಲಿಸಲು ಸಾಧ್ಯ ಎಂದು ನಂಬಿದ್ದರು.

ಹೀಗಾಗಿ ಕರ್ನಾಟಕ ಏಕೀಕರಣಗೊಂಡ ನಂತರ ಕನ್ನಡಿಗರಲ್ಲಿನ ಒಂದು ವರ್ಗ ಕರ್ನಾಟಕದಲ್ಲಿ ಕಲಿಯುವ ಕನ್ನಡಿಗರ ಪ್ರತಿಯೊಂದು ಮಗು ಕನ್ನಡವನ್ನು ಕಡ್ಡಾಯವಾಗಿ ಕಲಿಯಬೇಕು. ಎಲ್ಲ ವಿವಿಧ ಶಿಕ್ಷಣ ಕನ್ನಡದಲ್ಲಿ ಕಲಿಯುವ ವ್ಯವಸ್ಥೆ ನಿರ್ಮಾಣವಾಗಬೇಕು. ಇದನ್ನು ಹೊರತುಪಡಿಸಿ ಉಳಿದ ಭಾಷೆಗಳನ್ನು ಮತ್ತು ಭಾಷಾಮಾಧ್ಯಮದಲ್ಲಿ ಕಲಿಯುವುದು, ಕಲಿಸುವುದು ನ್ಯಾಯಯುತವಾದುದಲ್ಲ ಎಂದು ಕರ್ನಾಟಕದ ಶಿಕ್ಷಣದಲ್ಲಿ ಕನ್ನಡವನ್ನು ಕಡ್ಡಾಯವಾಗಿ ಕಲಿಸುವ ನಿಯಮ ಜಾರಿಗೆ ತರುವಂತೆ ಸರ್ಕಾರಗಳ ಮೇಲೆ ಒತ್ತಡ ಉಂಟುಮಾಡಿದ್ದಾರೆ. ಇದರ ಮುಖ್ಯ ಉದ್ದೇಶ ಅನ್ಯಭಾಷೆ ಮತ್ತು ಭಾಷಾಮಾಧ್ಯಮದ ಕಲಿಕೆಯ ಒತ್ತಡದಿಂದ ಕನ್ನಡದ ಮಕ್ಕಳನ್ನು ಮುಕ್ತಗೊಳಿಸಿ ಕನ್ನಡವನ್ನು ರಕ್ಷಿಸಿಕೊಳ್ಳುವುದೇ ಹೊರತು ಕರ್ನಾಟಕದ ಇತರ ಭಾಷಾಸಮುದಾಯಗಳ ಮಕ್ಕಳ ಮೇಲೆ ಕನ್ನಡದ ಕಲಿಕೆಯನ್ನು ಹೇರುವುದಾಗಿರಲಿಲ್ಲ. ಆದರೆ ಭಾರತ ಸ್ವತಂತ್ರಗೊಂಡ ನಂತರ ದೇಶದ ಆಡಳಿತದಲ್ಲಿ ಇಂಗ್ಲಿಶ್ ಮತ್ತು ಹಿಂದಿ ಭಾಷೆಗಳ ಪ್ರಾಬಲ್ಯ ಹೆಚ್ಚಾಗಿ ಕನ್ನಡದಂತಹ ಪ್ರಾದೇಶಿಕ ಭಾಷೆಗಳ ಕಲಿಕೆ ಮತ್ತು ಬಳಕೆಯ ಮೇಲೆ ಬಹುದೊಡ್ಡ ಒತ್ತಡವನ್ನು ಉಂಟುಮಾಡಿವೆ. ಇದರಿಂದಾಗಿ ಕನ್ನಡ ಭಾಷಿಕ ಸಮುದಾಯ ಇಂಗ್ಲಿಶ್ ಮತ್ತು ಹಿಂದಿಗಳ ಎದುರಿಗೆ ತನ್ನನ್ನು ರಕ್ಷಿಸಿಕೊಳ್ಳಲು ಕರ್ನಾಟಕದ ಶಿಕ್ಷಣದಲ್ಲಿ ಕನ್ನಡವನ್ನು ಏಕೈಕ ಪ್ರಥಮ ಮತ್ತು ಕಡ್ಡಾಯ ವಿಷಯವಾಗಿಸುವ ಮೂಲಕ ಕರ್ನಾಟಕದ ಇತರ ಭಾಷಿಕ ಸಮುದಾಯಗಳ ಮಕ್ಕಳಿಗೆ ಬಲವಂತವಾಗಿ ಕಲಿಸುವ ಕೆಲಸ ಮಾಡುತ್ತಿವೆ. ಇದು ಕರ್ನಾಟಕದ ಶಿಕ್ಷಣ ಮತ್ತು ಭೂಪ್ರದೇಶದಲ್ಲಿ ಹಲವು ಸಮಸ್ಯೆಗಳ ಉಗಮಕ್ಕೆ ಕಾರಣವಾಗಿದೆ.

ಏಕೆಂದರೆ ಭಾರತ ಬಹುಭಾಷೆಗಳನ್ನು ಒಳಗೊಂಡಿರುವ ದೇಶ. ಇಲ್ಲಿ ಕೆಲವು ಸಮುದಾಯಗಳು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಂಖಿಕವಾಗಿ ಪ್ರಬಲವಾಗಿದ್ದರೆ ಮತ್ತೆ ಕೆಲವು ಸಮುದಾಯಗಳು ಹಿಂದೆ ಉಳಿದುಕೊಂಡಿವೆ. ಅದರಲ್ಲೂ ಆಂಗ್ಲರು ಭಾರತದಲ್ಲಿ ರಾಜಕೀಯ ಅಧಿಕಾರ ಪಡೆದು ಆಡಳಿತ ನಡೆಸಲು ಆರಂಭಿಸಿದ ನಂತರ ಸ್ಥಳೀಯ ಭಾಷಿಕ ಸಮುದಾಯಗಳು ಭಾಷಿಕವಾಗಿ ಮಾತ್ರವಲ್ಲದೆ, ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಸಂಕಷ್ಟಕ್ಕೆ ಒಳಗಾಗಿವೆ. ಇದರಲ್ಲಿ ಭಾರತದ ಪ್ರಬಲ ಭಾಷಿಕ

ಸಮುದಾಯಗಳ ಪಾತ್ರವೇ ದೊಡ್ಡದು. ಏಕೆಂದರೆ ಆಂಗ್ಲರು ಭಾರತಕ್ಕೆ ಬರುವ ಪೂರ್ವದಲ್ಲಿ ಭಾರತದ ಪ್ರಬಲ ಭಾಷಿಕ ಸಮುದಾಯಗಳು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಒಂದು ರೀತಿಯ ಅಧಿಪತ್ಯ ಸ್ಥಾಪಿಸಿದ್ದರು. ಆಂಗ್ಲರ ಆಡಳಿತ ಈ ಅಧಿಪತ್ಯಕ್ಕೆ ಪೆಟ್ಟು ಕೊಟ್ಟಿದೆ. ಇದು ಮತ್ತಷ್ಟು ಮುಂದುವರಿದು ಸ್ಥಳೀಯ ಭಾಷಾಸಮುದಾಯಗಳ ಅಸ್ತಿತ್ವಕ್ಕೆ ಧಕ್ಕೆಯಾಗುವ ಒತ್ತಡದ ಪರಿಸ್ಥಿತಿಯನ್ನು ಉಂಟುಮಾಡಿದೆ. ಇದನ್ನು ಆರಂಭದಲ್ಲಿ ಸಮರ್ಥವಾಗಿ ಅರ್ಥಮಾಡಿಕೊಳ್ಳದ ಅಂದಿನ ಭಾರತೀಯರು ಉದ್ಯೋಗ, ಪ್ರತಿಷ್ಠೆ, ಉನ್ನತಸ್ಥಾನ, ಜಾತಿ ಅಸಮಾನತೆಯ ನಿರ್ಮೂಲನೆ, ವೈಚಾರಿಕಜ್ಞಾನ ಇತ್ಯಾದಿಗಳ ಹೆಸರಲ್ಲಿ ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಕಲಿಯಲು ಆರಂಭಿಸಿದ್ದಾರೆ. ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಕಲಿಯುವುದರಿಂದ ಸಂವಹನದ ಇಂಗ್ಲಿಶ್ ಭಾಷೆಯ ಮೇಲೆ ಹಿಡಿತ ಸ್ಥಾಪಿಸಲು ಸಾಧ್ಯವಾಗದಿದ್ದಾಗ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುವ ಮೂಲಕ ಸಂವಹನದ ಇಂಗ್ಲಿಶ್ ಮೇಲೆ ಹಿಡಿತ ಸ್ಥಾಪಿಸಲು ಪ್ರಯತ್ನಿಸಿದ್ದಾರೆ. ಇದು ದೇಶೀಯ ಭಾಷಾಸಮುದಾಯಗಳಲ್ಲಿ ಆತಂಕದ ವಾತಾವರಣ ಉಂಟುಮಾಡಿದೆ. ಈ ಸ್ಥಿತಿಯನ್ನು ಕಂಡು ನಮ್ಮ ಹಿರಿಯರು 'ಆಡಳಿತ ಶಿಕ್ಷಣ ಕ್ಷೇತ್ರಗಳ ಕುರುಡುತನ ಹಾಗೂ ಬಂಜರುತನಗಳು ಅನ್ಯಭಾಷಾ ಮಾಧ್ಯಮದ ಕೊಡುಗೆಗಳಾಗಿವೆ. ಗುರು–ಶಿಷ್ಯರ ಸಂಬಂಧಗಳು ಜನ–ಸರ್ಕಾರಗಳ ಸಂಬಂಧಗಳು ಸಂವಹನದ ಕೊರತೆಯಿಂದಾಗಿ ಹದಗೆಟ್ಟಿವೆ. ಅಕ್ಷರಸ್ಥರ ಸಂಖ್ಯೆ ತೀರಾ ಕಡಿಮೆಯಿರುವ ಭಾರತದಂಥ ದೇಶದಲ್ಲಿ ಇದು ತುಂಬಾ ಅಪಾಯಕಾರಿಯಾದ ಪರಿಸ್ಥಿತಿಯಾಗಿದೆ. ಇದನ್ನು ಅರಿತುಕೊಂಡು ಅನೇಕ ಹಿರಿಯರು ಸ್ವಾತಂತ್ರ್ಯಪೂರ್ವ ದಿನಗಳಿಂದಲೆ ನಮ್ಮ ದೇಶದಲ್ಲಿ ನಮ್ಮ ದೇಶಭಾಷೆಗಳಿಗೆ ಸಲ್ಲಬೇಕಾದ ಸ್ಥಾನಮಾನದ ಬಗೆಗೆ ಪ್ರತಿಪಾದಿಸುತ್ತಾ ಬಂದಿದ್ದಾರೆ.[೨]'

ಇದರಿಂದ ಪ್ರೇರಿತಗೊಂಡು ಭಾರತೀಯ ಪ್ರಬಲ ಭಾಷಾಸಮುದಾಯಗಳು ಎರಡನೇ ಅಧ್ಯಾಯದಲ್ಲಿ ಚರ್ಚಿಸಿರುವ ಹಾಗೆ ಭಾರತ ಸ್ವಾತಂತ್ರ್ಯ ಹೋರಾಟದ ಜೊತೆಜೊತೆಯಲ್ಲಿಯೇ ತಮ್ಮ ಭಾಷೆಯ ಆಧಾರದಲ್ಲಿ ಪ್ರತ್ಯೇಕ ರಾಜ್ಯದ ಬೇಡಿಕೆಯಿಟ್ಟು ಹೋರಾಟಗಳನ್ನು ಮಾಡಿದ್ದಾರೆ. ಇದರ ಮುಖ್ಯ ಉದ್ದೇಶ ತಮ್ಮ ಭಾಷೆಯ ಆಧಾರದಲ್ಲಿ ಪ್ರತ್ಯೇಕ ರಾಜ್ಯ ರಚನೆಯಾದರೆ ಆ ಭೂಪ್ರದೇಶದಲ್ಲಿ ನಾವು ರಾಜಕೀಯ ಅಧಿಕಾರ ಪಡೆಯುತ್ತೇವೆ. ಇದರಿಂದ ನಾವು ನಮ್ಮ ಭಾಷಾಅಭಿವೃದ್ಧಿಗೆ ಪೂರಕವಾದ ನಿಯಮಗಳನ್ನು ರೂಪಿಸಿಕೊಂಡು ಭಾಷೆಗಳನ್ನು ರಕ್ಷಿಸಿಕೊಳ್ಳಬಹುದು ಎಂಬುದಾಗಿತ್ತು. ಆದರೆ ದೇಶದಲ್ಲಿ ಭಾಷೆಯ ಆಧಾರದಲ್ಲಿ ರಾಜ್ಯಗಳನ್ನು ರಚನೆ ಮಾಡಿದರೆ ಯಾವ ಭಾಷೆಯ ಆಧಾರದಲ್ಲಿ ರಾಜ್ಯ ರಚನೆಯಾಗಿರುತ್ತದೋ ಆ ಭಾಷಿಕರು ಆ ರಾಜ್ಯದಲ್ಲಿ ಪ್ರಬಲರಾಗುತ್ತರೆ. ಇವರು ತಮ್ಮ ಭಾಷೆಯನ್ನು ಉಳಿಸಿಕೊಳ್ಳಲು ಆ ರಾಜ್ಯದಲ್ಲಿರುವ ಇತರ ಭಾಷಿಕರಿಗೆ ತಮ್ಮ ಭಾಷೆಯನ್ನು ಕಲಿಯುವಂತಹ, ಬಳಸುವಂತಹ ಒತ್ತಡವನ್ನು ಉಂಟುಮಾಡಿ ಆ ರಾಜ್ಯದ ಭಾಷಾಅಲ್ಪಸಂಖ್ಯಾತರ ಮೇಲೆ ತಮ್ಮ ಅಧಿಪತ್ಯ ಸ್ಥಾಪಿಸುತ್ತಾರೆ. ಆ ಮೂಲಕ ಭಾಷಾಅಲ್ಪಸಂಖ್ಯಾತ ಸಮುದಾಯಗಳ ನಾಶಕ್ಕೆ ಕಾರಣ ಆಗಬಹುದು. ಹೀಗೆ ದೇಶದಲ್ಲಿ ಭಾಷೆಯ ಆಧಾರದಲ್ಲಿ ರಾಜ್ಯ ರಚನೆ ಮಾಡಿದರೆ ಪ್ರಬಲವಲ್ಲದ ಭಾಷಾಸಮುದಾಯಗಳು ತನ್ನ ಅಸ್ತಿತ್ವವನ್ನೆ ಕಳೆದುಕೊಳ್ಳಬಹುದು. ಇದು ಪ್ರಜಾತಾಂತ್ರಿಕ

ವ್ಯವಸ್ಥೆಗೆ ಮಾರಕವಾದುದು. ಹೀಗಾಗಿ ದೇಶದಲ್ಲಿನ ಪ್ರತಿಯೊಂದು ಭಾಷಾಸಮುದಾಯಗಳಿಗೂ ತನ್ನ ಭಾಷೆಯನ್ನು ಕಲಿಯಲು, ಬಳಸಲು ಸ್ವತಂತ್ರವಿರಬೇಕು. ಅಲ್ಲದೆ ಸ್ವತಂತ್ರ ಭಾರತದಲ್ಲಿ ಯಾವ ಭಾಷಾ ಸಮುದಾಯವು ಇನ್ನೊಂದು ಭಾಷಾಸಮುದಾಯದ ಮೇಲೆ ತನ್ನ ಭಾಷಿಕ ಅಧಿಪತ್ಯವನ್ನು ಸ್ಥಾಪಿಸಿ ಅವುಗಳ ನಾಶಕ್ಕೆ ಕಾರಣವಾಗಬಾರದು. ಅಂತಹ ಪರಿಸ್ಥಿತಿ ನಿರ್ಮಾಣವಾದರೆ ದೇಶದ ಹೆಚ್ಚಿನ ಜನಸಮುದಾಯಗಳು ಭಾಷೆ ನಾಶ ಹೊಂದುತ್ತವೆ. ಇದರಿಂದ ಆ ಸಮುದಾಯಗಳ ವಿಶೇಷತೆ, ಜ್ಞಾನ, ತಿಳುವಳಿಕೆ, ಪರಂಪರೆ ಇತ್ಯಾದಿಗಳೆಲ್ಲವನ್ನು ಕಳೆದುಕೊಳ್ಳುತ್ತೇವೆ ಎಂಬುದನ್ನು ಸಂವಿಧಾನ ತಜ್ಞರು ಅರಿತಿದ್ದರು.

ಇದರಿಂದ ಭಾರತದ ಯಾವೊಬ್ಬ ಪ್ರಜೆಗೂ ಭಾಷೆಯ ಕಾರಣದಿಂದ ತೊಂದರೆ ಆಗಬಾರದು ಎಂದು ಭಾವಿಸಿ ಭಾರತ ಸಂವಿಧಾನದ ೨೯ನೇ ಅನುಚ್ಛೇದದ (೧ನೇ) ಭಾಗವು "ಭಾರತ ರಾಷ್ಟ್ರ ಕ್ಷೇತ್ರದಲ್ಲಿ ವಾಸಿಸುವ ಯಾವುದೇ ನಾಗರಿಕನಿಗೆ ತಾನು ವಾಸಿಸುತ್ತಿರುವ ಭಾರತದ ಯಾವುದೇ ಭಾಗದಲ್ಲಿ ತನಗಿಷ್ಟವಾದ ಭಾಷೆಯಲ್ಲಿ ಮಾತನಾಡುವ, ತನಗೆ ಇಷ್ಟವಾದ ಭಾಷೆಯಲ್ಲಿ ಬರೆಯುವ ಮತ್ತು ತನಗಿಷ್ಟವಾದ ಸಾಂಸ್ಕೃತಿಕ ಪರಂಪರೆಯನ್ನು ಆಚರಿಸುವ ಅಧಿಕಾರ[೩]"ವನ್ನು ಕಲ್ಪಿಸಿದ್ದಾರೆ. ಹಾಗೆಯೇ ೩೫೦ಎ ಅನುಚ್ಛೇದದಲ್ಲಿ "ಭಾಷಾ ಅಲ್ಪಸಂಖ್ಯಾತ ವರ್ಗಗಳಿಗೆ ಸೇರಿದ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ಹಾಗೆ ಶಿಕ್ಷಣವು ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯಲ್ಲಿ ದೊರೆಯುವುದಕ್ಕಾಗಿ ತಕ್ಕಷ್ಟು ಸೌಕರ್ಯಗಳಿರುವಂತೆ ಉಪಬಂಧವನೇರ್ಪಡಿಸಲು ಪ್ರತಿಯೊಂದು ರಾಜ್ಯವೂ ಆ ರಾಜ್ಯದಲ್ಲಿರತಕ್ಕ ಪ್ರತಿಯೊಂದು ಸ್ಥಾನೀಯ ಪ್ರಾಧಿಕಾರಿಯು ಪ್ರಶ್ನಿಸತಕ್ಕದ್ದು[೪]" ಎಂಬ ನಿಯಮವನ್ನು ಅಳವಡಿಸಿದ್ದಾರೆ.

ಹೀಗಾಗಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ತಮಗೆ ಇಚ್ಚೆ ಬಂದ ಹಾಗೆ ಭಾಷಾಕಲಿಕೆ ಮತ್ತು ಬಳಕೆಗೆ ಸಂಬಂಧಿಸಿದಂತೆ ನೀತಿಗಳನ್ನು ಜಾರಿಗೊಳಿಸಲು ಸಾಧ್ಯವಿಲ್ಲ. ಕೇಂದ್ರ ಸರ್ಕಾರ ಸಂವಿಧಾನದ ಚೌಕಟ್ಟಿಗೆ ಒಳಪಟ್ಟು ಭಾಷಾನೀತಿಗಳನ್ನು ಜಾರಿಗೆ ತರಬೇಕಾದರೆ, ರಾಜ್ಯಸರ್ಕಾರಗಳು ಸಂವಿಧಾನದ ಚೌಕಟ್ಟು ಮತ್ತು ಕೇಂದ್ರ ಸರ್ಕಾರದ ಭಾಷಾನೀತಿಗೆ ಅಧೀನವಾಗಿ ಭಾಷಾನೀತಿಗಳನ್ನು ಜಾರಿಗೆ ತರಬೇಕಾಗಿದೆ. ಇವುಗಳನ್ನು ಧಿಕ್ಕರಿಸಿ ಜನತೆಯ ಒತ್ತಡಕ್ಕೆ ಮಣಿದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಭಾಷಾನೀತಿಗಳನ್ನು ಜಾರಿಗೆ ತಂದರೆ ಅಂತಹ ಭಾಷಾನೀತಿಗಳನ್ನು ದೇಶದ ನ್ಯಾಯಾಲಯಗಳಲ್ಲಿ ಪ್ರಶ್ನಿಸಬಹುದು. ಹೀಗಿದ್ದರೂ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕರ್ನಾಟಕದ ಬಹುಸಂಖ್ಯಾತರ ಒತ್ತಡಕ್ಕೆ ಮಣಿದು ಭಾರತ ಸಂವಿಧಾನ ಭಾರತೀಯ ಪ್ರಜೆಗೆ ನೀಡಿರುವ ಭಾಷಾಸ್ವಾತಂತ್ರ್ಯ ಮತ್ತು ಕೇಂದ್ರ ಸರ್ಕಾರದ ಭಾಷಾನೀತಿಯ ಚೌಕಟ್ಟನ್ನು ಮೀರಿ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಹೀಗಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷಾಸಮಸ್ಯೆಗಳು ಹೊಸ ರೂಪ ಪಡೆದಿವೆ. ಇವುಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಂಡು ಮುಂದಿನ ಭಾಗಗಳಲ್ಲಿ ಚರ್ಚಿಸಲಾಗಿದೆ.

ಕರ್ನಾಟಕದ ಶಾಲೆಗಳಲ್ಲಿ ಮಕ್ಕಳಿಗೆ ಭಾಷೆಗಳನ್ನು ಕಲಿಸುವ ವಿಚಾರದಲ್ಲಿ ಇದುವರೆಗೆ ಚರ್ಚಿಸಿದ ಹಾಗೆ ವಿವಿಧ ಬಗೆಯ ಒತ್ತಡ ಮತ್ತು ಉದ್ದೇಶಗಳು ಇವೆ. ಇದರಿಂದಾಗಿ ಕರ್ನಾಟಕದಲ್ಲಿ ವಿದ್ಯಾರ್ಥಿಗಳು ಪ್ರೌಢಶಿಕ್ಷಣ ಪೂರ್ಣಗೊಳ್ಳುವ ಹೊತ್ತಿಗೆ ಮೂರು ಭಾಷೆಗಳನ್ನು ಕಲಿಯುವುದು ಕಡ್ಡಾಯವಾಗಿದೆ. ಇವುಗಳನ್ನು ಮಕ್ಕಳಿಗೆ ಕಲಿಸುವ ಉದ್ದೇಶದ ಹಿನ್ನೆಲೆಯಲ್ಲಿ ಒಟ್ಟು ಮೂರು ಭಾಗಗಳಾಗಿ ವಿಂಗಡಣೆ ಮಾಡಲಾಗಿದೆ. ಇವುಗಳನ್ನು ಕ್ರಮವಾಗಿ ಪ್ರಥಮ ಭಾಷಾಕಲಿಕೆ, ದ್ವಿತೀಯ ಭಾಷಾಕಲಿಕೆ ಮತ್ತು ತೃತೀಯ ಭಾಷಾಕಲಿಕೆ ಎಂದು ಕರೆಯಲಾಗುತ್ತಿದೆ. ಇದು ಮಗುವಿನ ಕಲಿಕೆಯ ಸಾಮರ್ಥ್ಯವನ್ನು ಆಧರಿಸಿ ವಿವಿಧ ತರಗತಿಗಳಿಗೆ ಬದಲಾಗುವಂತೆ ಒಂದು, ಎರಡು ಮತ್ತು ಮೂರು ಭಾಷೆಗಳನ್ನು ಕಲಿಸಲಾಗುತ್ತಿದೆ. ಇವು ವಿದ್ಯಾರ್ಥಿಗಳ ಕಲಿಕೆಯ ಗುಣಮಟ್ಟ, ಕಾಲದ ಅಗತ್ಯ ಮತ್ತು ಸ್ಥಳೀಯ ಪ್ರದೇಶ ಜನರ ಒತ್ತಡಕ್ಕೆ ಅನುಗುಣವಾಗಿ ಬದಲಾಗಿವೆ. ಈ ಬದಲಾವಣೆಗಳು ಏನೇ ಇದ್ದರೂ ಮೂರು ಭಾಷೆಗಳನ್ನು ಕಲಿಸುವುದರ ಹಿಂದೆ ಮೇಲ್ನೋಟಕ್ಕೆ ಜನಸಮುದಾಯಗಳು ಹಿತ, ರಾಜ್ಯ ಮತ್ತು ದೇಶದ ಆಡಳಿತಕ್ಕೆ ಅನುಕೂಲ ಮಾಡಿಕೊಳ್ಳುವುದು, ಜಾಗತಿಕ ಪ್ರಪಂಚಕ್ಕೆ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸುವ ಉದ್ದೇಶವಿದೆ. ಆದರೆ ಇವುಗಳ ಆಂತರ್ಯದಲ್ಲಿ ಬೇರೆಯದೇ ಆದ ಉದ್ದೇಶವಿದೆ. ಹಾಗೆಯೇ ಅವು ಬೀರಿರುವ ಪ್ರಭಾವ ಮತ್ತು ಉಂಟುಮಾಡಿರುವ ಪರಿಣಾಮಗಳು ಭಯಾನಕವಾಗಿವೆ. ಈ ಎಲ್ಲವುಗಳನ್ನು ಇಲ್ಲಿ ವಿಸ್ತೃತವಾಗಿ ಚರ್ಚಿಸುವ ಪ್ರಯತ್ನ ಮಾಡುತ್ತಿಲ್ಲ.

ಏಕೆಂದರೆ ಇವುಗಳನ್ನು ವಿಸ್ತೃತವಾಗಿ ಚರ್ಚಿಸುವ ಪ್ರಯತ್ನವನ್ನು ಮಾಡಿದರೆ ಅಧ್ಯಯನ ಬೇರೆಯದೆ ಆದ ಕಡೆಗೆ ಹೊರಳುವ ಸಾಧ್ಯತೆ ಇದೆ. ಇವುಗಳೇ ಒಂದು ಪ್ರತ್ಯೇಕ ಸಂಶೋಧನಾ ಪ್ರಬಂಧಕ್ಕೆ ವಿಷಯವಾಗುವಷ್ಟು ವಿಸ್ತಾರವಾಗಿರುವುದರಿಂದ ಅವುಗಳನ್ನು ಇಲ್ಲಿ ಅಧ್ಯಯನಕ್ಕೆ ಪೂರಕವಾಗಿ ಮಾತ್ರ ಬಳಸಿಕೊಳ್ಳಲಾಗಿದೆ. ಇದುವರೆಗೆ ಚರ್ಚಿಸಿದ ಹಾಗೆ ಭಾಷಾನೀತಿಗಳನ್ನು ಜಾರಿಗೊಳಿಸುವುದರ ಹಿಂದೆ ಬೀರಿರುವ ಒಳ ಅಂಶಗಳು ಏನೇ ಇದ್ದರೂ ಕಾಲದ ಅಗತ್ಯ, ಸಂವಿಧಾನದ ಚೌಕಟ್ಟು, ನ್ಯಾಯಾಲಯಗಳ ತೀರ್ಪು ಮತ್ತು ಕೇಂದ್ರ ಸರ್ಕಾರದ ಭಾಷಾನೀತಿಗೆ ಅಧೀನವಾಗಿ ರಾಜ್ಯಸರ್ಕಾರಗಳು ಕಾಲದಿಂದ ಕಾಲಕ್ಕೆ ಕರ್ನಾಟಕದ ಶಿಕ್ಷಣದಲ್ಲಿ ಭಾಷೆಗಳನ್ನು ಕಲಿಸುವ ಕ್ರಮದಲ್ಲಿ ಬದಲಾವಣೆ ಮಾಡಿವೆ. ಇವುಗಳನ್ನು ಬಿ.ಮಲ್ಲಿಕಾರ್ಜುನ್‌ರವರು ಒಟ್ಟು ಐದು ಹಂತಗಳಾಗಿ ವಿಂಗಡಿಸಿದ್ದಾರೆ. ಆ ಐದು ಹಂತಗಳು ಹೀಗಿವೆ. "(a) First Phase: Before 1956 - prior to the formation of Karnataka, (b) Second Phase: 1956 to 1982 - after the formation of Karnataka, (c) Third Phase: 1982 to 1988 - after the Gokak Committee recommendations, and (d) Fourth Phase: 1989 onwards after the intervention of the judiciary. We are now in the Fifth Phase: Fifth Phase- the evolving Challenges of the new millennium, but this stage is hardly recognized either by the bureaucracy or the political leaders." ಇದಕ್ಕೆ ಸಂಬಂಧಿಸಿದಂತೆ ಅವರು ನೀಡಿರುವ ವಿವರಣೆಯನ್ನು ಅನುಬಂಧ–೧ ರಲ್ಲಿ ನೀಡಲಾಗಿದೆ.

ಇವುಗಳನ್ನು ಗಮನಿಸಿದಾಗ ೧೯೮೧-೮೨ರವರೆಗೂ ಪ್ರೌಢಶಾಲಾ ಹಂತದಲ್ಲಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯದೆಯೇ ಶಿಕ್ಷಣವನ್ನು ಪೂರ್ಣಗೊಳಿಸಬಹುದಿತ್ತು. ಇದರಿಂದ ಕನ್ನಡದ ಮಕ್ಕಳು ಹೆಚ್ಚಿನ ಅಂಕಗಳಿಗಾಗಿ ಕನ್ನಡ ಬದಲಿಗೆ ಸಂಸ್ಕೃತವನ್ನು ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು ಕಲಿಯುತ್ತಿದ್ದರು. ಇನ್ನು ಎರಡನೇ ಭಾಷೆಯಾಗಿ ಇಂಗ್ಲಿಶ್‌ನ್ನು ಆಯ್ದುಕೊಂಡು, ನಾಮಕಾವಸ್ಥೆಗೆ ಎಂಬಂತೆ ತೃತೀಯ ಭಾಷೆಯಾಗಿ ಕನ್ನಡವನ್ನು ಆಯ್ಕೆಮಾಡಿಕೊಂಡು ಕಲಿಯುತ್ತಿದ್ದರು. ಇದು ಕನ್ನಡದ ಪರ ಅಭಿಮಾನ ಹೊಂದಿದ್ದ ಚಿಂತಕರು, ಹೋರಾಟಗಾರರನ್ನು ಕೆರಳುವಂತೆ ಮಾಡಿದೆ. ಏಕೆಂದರೆ ತೃತೀಯ ಭಾಷಾಕಲಿಕೆ ೫೦ ಅಂಕಗಳ ಪರೀಕ್ಷೆಯಾಗಿದ್ದು ಇದನ್ನು ಫಲಿತಾಂಶಕ್ಕೆ ಪರಿಗಣಿಸುತ್ತಿರಲಿಲ್ಲ. ಇದರಿಂದ ಕನ್ನಡವನ್ನು ಕಲಿಯುವುದರ ಕಡೆಗೆ ವಿದ್ಯಾರ್ಥಿಗಳು ಅಷ್ಟು ಆಸಕ್ತಿ ವಹಿಸುತ್ತಿರಲಿಲ್ಲ. ಕರ್ನಾಟಕ ಏಕೀಕರಣವಾಗಿ ಇಷ್ಟು ವರ್ಷಗಳಾದರೂ ಕನ್ನಡವನ್ನು ಕಡ್ಡಾಯವಾಗಿ ಕಲಿಯಲೇಬೇಕಾದ ಒತ್ತಡವಿಲ್ಲ. ಕರ್ನಾಟಕದ ಶಾಲೆಗಳಲ್ಲಿ ಮಕ್ಕಳು ಕನ್ನಡವನ್ನು ಕಲಿಯದಿದ್ದರೆ ೧೯೬೩ರ ಕರ್ನಾಟಕ ರಾಜಭಾಷಾ ಅಧಿನಿಯಮದ ಪ್ರಕಾರ ಕನ್ನಡ ಆಡಳಿತ ಭಾಷೆಯಾಗಿ ಬಳಕೆಯಾಗುವುದು, ಕನ್ನಡ ಉಳಿಯುವುದು ಹೇಗೆ? ಕರ್ನಾಟಕದಲ್ಲಿ ಇದೇ ಪರಿಸ್ಥಿತಿ ಮುಂದುವರೆದರೆ ಕನ್ನಡ ಕಲಿಯುವವರೆ ಇಲ್ಲವಾಗುತ್ತಾರೆ. ಕನ್ನಡವೂ ಇಲ್ಲವಾಗುತ್ತದೆ. ಇದರಿಂದ ಕರ್ನಾಟಕ ಏಕೀಕರಣದ ಉದ್ದೇಶ ಫಲಿಸುವುದಿಲ್ಲ. ಕರ್ನಾಟಕ ಏಕೀಕರಣದ ಉದ್ದೇಶ ಫಲಿಸಬೇಕಾದರೆ ಕರ್ನಾಟಕದಲ್ಲಿ ಕನ್ನಡದ ಕಲಿಕೆಯನ್ನು ಕಡ್ಡಾಯಗೊಳಿಸಬೇಕು ಎಂದು ಕರ್ನಾಟಕ ಸರ್ಕಾರದ, ಮೇಲೆ ತಿಳಿಸಿದ ಭಾಷಾನೀತಿಯ ವಿರುದ್ಧವಾಗಿ ತೀವ್ರಸ್ವರೂಪದ ಹೋರಾಟಗಳು ಆರಂಭವಾಗಿವೆ. ಆಗ ರಾಜ್ಯ ಸರ್ಕಾರ ಈ ಸಮಸ್ಯೆಯ ಪರಿಹಾರಕ್ಕಾಗಿ ಸೂಕ್ತವಾದ ಸಲಹೆಗಳನ್ನು ನೀಡಲು ಕರ್ನಾಟಕದ ಪ್ರಸಿದ್ಧ ಸಾಹಿತಿಗಳಾದ ವಿ.ಕೃ.ಗೋಕಾಕ್‌ರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚನೆ ಮಾಡಿದೆ. ಈ ಸಮಿತಿ ಅಂದಿನ ಕರ್ನಾಟಕದ ಭಾಷಾಪರಿಸ್ಥಿತಿ ಮತ್ತು ಒತ್ತಡಗಳಿಗೆ ಒಳಗಾಗಿ ಕರ್ನಾಟಕದ ಶಿಕ್ಷಣದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೆ ತನ್ನದೇ ಆದ ರೀತಿಯಲ್ಲಿ ಶಿಫಾರಸುಗಳನ್ನು ಮಾಡಿದೆ. ಇವುಗಳನ್ನು ಅಧ್ಯಾಯ ಎರಡರಲ್ಲಿ ಉಲ್ಲೇಖ ಮಾಡಲಾಗಿದೆ.

ಕರ್ನಾಟಕದಲ್ಲಿನ ಭಾಷಾಬಳಕೆಗೆ ಸಂಬಂಧಿಸಿದಂತೆ ಡಾ.ವಿ.ಕೃ.ಗೋಕಾಕ್ ಸಮಿತಿ ಮಾಡಿರುವ ಶಿಫಾರಸ್ಸುಗಳನ್ನು ಗಮನಿಸಿದಾಗ ಕನ್ನಡ ಭಾಷೆಯ ಬಗೆಗೆ ಸಂಪೂರ್ಣವಾದ ಒಲವು ತೋರಿರುವುದು ಕಂಡುಬರುತ್ತದೆ. ಅದಕ್ಕೆ ಮೂಲ ಕಾರಣ ಮೇಲೆ ಹೇಳಿದ ಹಾಗೆ ಕನ್ನಡಿಗರ ಬೇಡಿಕೆಯನ್ನು ಈಡೇರಿಸಬೇಕಾದ ಒತ್ತಡದಲ್ಲಿ ಸಿಲುಕಿದ್ದುದು. ಇದರ ಜೊತೆಗೆ ಡಾ.ವಿ.ಕೃ.ಗೋಕಾಕ್ ನೇತೃತ್ವದ ಸಮಿತಿ ರಚನೆಯಾದ ನಂತರ ಈ ಸಮಿತಿ ಸಂಸ್ಕೃತ ಭಾಷೆಯ ಪರವಾಗಿ ಕೆಲಸ ಮಾಡುತ್ತಿದೆ ಎಂದು ಚಂದ್ರಶೇಖರ ಪಾಟೀಲ, ಬಸವರಾಜ ಕಟ್ಟೀಮನಿ, ಎಂ.ಎಂ.ಕಲಬುರ್ಗಿ, ಚನ್ನವೀರ ಕಣವಿ, ಗುಂಜೆಟ್ಟಿ ಮುಂತಾದವರು ೧೯೮೦ರ ಅಕ್ಟೋಬರ್ ೨೩ರಂದು ಧಾರವಾಡದ ಟ್ರೈನಿಂಗ್ ಕಾಲೇಜಿನಲ್ಲಿ ಗೋಕಾಕ್ ಸಮಿತಿ ಬೈಠಕ್ ಮಾಡುವುದೆಂದು ತಿಳಿದು ಅದರ ವಿರುದ್ಧವಾಗಿ 'ಗೋಕಾಕ್, ಗೋ ಬ್ಯಾಕ್' ಎಂದು ಘೋಷಣೆಗಳನ್ನು ಕೂಗಿದ್ದರು. ಇದರಿಂದಾಗಿ ಗೋಕಾಕ್ ಸಮಿತಿಯು ಕನ್ನಡವನ್ನು

ಏಕೈಕ ಕಡ್ಡಾಯ ಪ್ರಥಮ ಭಾಷೆಯಾಗಿ ಮಾಡಿ ೧೫೦ ಅಂಕಗಳಿಗೆ ಪರೀಕ್ಷಾ ವಿಷಯವನ್ನಾಗಿ ಮಾಡಲು ಶಿಫಾರಸು ಮಾಡಿದೆ. ಆದರೆ ಈ ಸಮಿತಿಯು ಸ್ವತಂತ್ರ ಸಂವಿಧಾನವನ್ನು ಒಳಗೊಂಡಿರುವ ಭಾರತದಂತಹ ಪ್ರಜಾಪ್ರಭುತ್ವ ದೇಶ ಮತ್ತು ಕರ್ನಾಟಕದಂತಹ ಬಹುಭಾಷಿಕ ಪ್ರದೇಶದಲ್ಲಿ ಹೀಗೆ ಏಕಪಕ್ಷೀಯವಾಗಿ ಮಾಡಿದ ಶಿಫಾರಸ್ಸುಗಳನ್ನು ಸರ್ಕಾರ ಭಾಷಾನೀತಿಯ ರೂಪದಲ್ಲಿ ಜಾರಿಗೆ ತಂದರೆ ಅದು ಇಲ್ಲಿನ ಅಲ್ಪಸಂಖ್ಯಾತ ಭಾಷಾಸಮುದಾಯಗಳ ಅಸ್ತಿತ್ವದ ಮೇಲೆ ಉಂಟುಮಾಡಬಹುದಾದ ಪರಿಣಾಮಗಳ ಬಗ್ಗೆ ಅಷ್ಟು ಸೂಕ್ಷ್ಮವಾಗಿ ಗಮನ ಹರಿಸಿಲ್ಲ.

ಏಕೆಂದರೆ ಮೇಲೆ ಹೇಳಿದ ಹಾಗೆ ಕನ್ನಡ ಭಾಷೆಯ ಪರವಾಗಿ ರಾಜ್ಯದಾದ್ಯಂತ ಉಂಟಾದ ತೀವ್ರ ಚಳುವಳಿಗಳು ಗೋಕಾಕ್ ಸಮಿತಿ ಕನ್ನಡ ಭಾಷೆಯ ಪರವಾದ ವರದಿ ನೀಡುವಂತೆ ಮಾಡಿವೆ. ಇದರಿಂದ ಈ ಸಮಿತಿ ನೀಡಿದ ವರದಿ ಏಕಪಕ್ಷೀಯವಾಗಿದ್ದುದರಿಂದ ಅದನ್ನು ಅನುಷ್ಠಾನಕ್ಕೆ ತರಲು ಕಾನೂನಿನ ತೊಡಕುಗಳು ಸಹಜವಾಗಿಯೇ ಇದ್ದವು. ಇದರಿಂದ ಸರ್ಕಾರ ಗೋಕಾಕ್ ಸಮಿತಿ ನೀಡಿದ ವರದಿಯನ್ನು ಜಾರಿಗೆ ತರಲು ಸರ್ಕಾರ ಹಿಂದೆ ಸರಿದಿದೆ. ಇದರಿಂದ ಮತ್ತೆ ಕೆರಳಿದ ಕನ್ನಡ ಪರಸಂಘಟಕರು ಮತ್ತು ಸಾಹಿತಿಗಳು ಗೋಕಾಕ್ ಸಮಿತಿ ನೀಡಿದ ವರದಿಯನ್ನು ಜಾರಿಗೆ ತರುವಂತೆ ಸರ್ಕಾರದ ಮೇಲೆ ಪ್ರತಿಭಟನೆ, ಹೋರಾಟಗಳ ಮೂಲಕ ಒತ್ತಡ ಉಂಟುಮಾಡಿದ್ದಾರೆ. ಇದರಿಂದಾಗಿ ಆಗಿನ ಮುಖ್ಯಮಂತ್ರಿಗಳಾದ ಆರ್.ಗುಂಡೂರಾವ್‌ರವರು ಒಂದು ಸಭೆಯಲ್ಲಿ "ಗೋಕಾಕ್ ವರದಿಯನ್ನು ಯಥಾವತ್ತಾಗಿ ಜಾರಿಗೆ ತರುವುದಾಗಿ ತಿಳಿಸಿದ್ದಾರೆ. ಆದರೆ ಅಲ್ಪಸಂಖ್ಯಾತ ಕಾಂಗ್ರೆಸ್ ನಾಯಕರೊಬ್ಬರು ಕನ್ನಡವನ್ನು ಏಕೈಕ ಪ್ರಥಮ ಭಾಷೆ ಮಾಡುವುದರಿಂದ, ಉರ್ದು ಭಾಷಿಕರಿಗೆ ಅನ್ಯಾಯವಾಗುತ್ತದೆಂದು ವಿಧಾನಸೌದಕ್ಕೆ ಜನರನ್ನು ಕರೆತಂದು"[೫] ಪ್ರತಿಭಟಿಸಿದ್ದಾರೆ.

ಇದರಿಂದಾಗಿ ಗೋಕಾಕ್ ಸಮಿತಿ ನೀಡಿದ ವರದಿಯನ್ನು ಕರ್ನಾಟಕ ಸರ್ಕಾರ ತಕ್ಷಣದಿಂದ ಜಾರಿಗೆ ತರಲು ಆಸಕ್ತಿಯನ್ನು ವಹಿಸಿಲ್ಲ. ಮತ್ತೆ ಕೆರಳಿದ ಕನ್ನಡಪರವಾದ ಹೋರಟಗಾರರು ಗೋಕಾಕ್ ಸಮಿತಿ ನೀಡಿರುವ ವರದಿಯನ್ನು ತಕ್ಷಣದಿಂದಲೇ ಜಾರಿಗೆ ತರಬೇಕೆಂದು ಒತ್ತಾಯಿಸಿ ರಾಜ್ಯದಾದ್ಯಂತ ಪ್ರತಿಭಟನೆ, ಹೋರಾಟಗಳು ಆರಂಭಿಸಿದ್ದಾರೆ. ಇವರ ಜೊತೆಗೆ ಕನ್ನಡಿಗರ ಒತ್ತಾಯಕ್ಕೆ ಮಣಿದು ಡಾ.ರಾಜ್‌ಕುಮಾರ್ ಕೂಡ ಹೋರಾಟಕ್ಕಿಳಿದಿದ್ದಾರೆ. ಪರಿಣಾಮವಾಗಿ ಗೋಕಾಕ್ ಸಮಿತಿ ನೀಡಿದ್ದ ವರದಿಯನ್ನು ಅನುಷ್ಠಾನಕ್ಕೆ ತರುವಂತೆ ಕರ್ನಾಟಕದಲ್ಲಿ ಹೋರಾಟಗಳು ತೀವ್ರಸ್ವರೂಪ ಪಡೆದುಕೊಂಡಿದ್ದವು. ಇದನ್ನರಿತ ಅಂದಿನ ಮುಖ್ಯಮಂತ್ರಿ ಆರ್.ಗುಂಡೂರಾವ್ ಕನ್ನಡಿಗರ ಭಾವನೆಗಳಿಗೆ ಧಕ್ಕೆ ತರಬಾರದು ಎಂದು ಭಾರತ ಸಂವಿಧಾನದ ನಿಯಮಾವಳಿಗಳನ್ನು ಮೀರಿ ಗೋಕಾಕ್ ಸಮಿತಿ ಮಾಡಿದ ಶಿಫಾರಸ್ಸುಗಳ ಬಗೆಗೆ ವಿಧಾನಮಂಡಲದಲ್ಲಿ ಚರ್ಚೆಯನ್ನು ನಡೆಸಿ ಅದರಲ್ಲಿ ಅಲ್ಪ ಮಾರ್ಪಾಡುಗಳನ್ನು ಮಾಡಿ ಸರ್ಕಾರಿ ಆಜ್ಞೆಸಂಖ್ಯೆ. ಇಡಿ ೧೧೩ ಎಸ್‌ಒಎಚ್ ೭೯, ಬೆಂಗಳೂರು, ೨೦ನೇ ಜುಲೈ ೧೯೮೨ರಂದು ೧೯೮೭-೮೮ನೇ ಶೈಕ್ಷಣಿಕ ಸಾಲಿನಿಂದ ಅನುಸರಿಸುವ ಭಾಷಾಕ್ರಮವು ಈ ರೀತಿಯಿರುತ್ತದೆ ಎಂದು ಹೇಳಿದೆ. ಆ ಪ್ರಕಾರವಾಗಿ-

"೧) ಪ್ರೌಢಶಾಲಾಹಂತದಲ್ಲಿ ೧೯೮೭-೮೮ನೇ ಶೈಕ್ಷಣಿಕ ಸಾಲಿನಿಂದ ಅನುಸರಿಸುವ ಭಾಷಾಕ್ರಮವು ಈ ರೀತಿಯಿರುತ್ತದೆ. ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡಬೇಕು.

ಅ) ಪ್ರಥಮ ಭಾಷೆ: ಕನ್ನಡ ಏಕೈಕ ಪ್ರಥಮ ಭಾಷೆ (೧೨೫ ಅಂಕ)

ಆ) ಇವುಗಳಲ್ಲಿ ಇನ್ನೆರಡು ಭಾಷೆಗಳು: ಉರ್ದು, ತಮಿಳು, ತೆಲುಗು, ಮರಾಠಿ, ಇಂಗ್ಲಿಶ್, ಹಿಂದಿ, ಸಂಸ್ಕೃತ, ಅರೇಬಿಕ್, ಪರ್ಷಿಯನ್ ಮಲಯಾಳಂ ಮತ್ತು ಕನ್ನಡ (೧೦೦)

ಸೂಚನೆ: ೧೦ ವರ್ಷಗಳವರೆಗೆ ೧೫ ಕೃಪಾಂಕಗಳನ್ನು (ಅ) ಕನ್ನಡ ಮಾತೃಭಾಷೆಯಲ್ಲದವರಿಗೆ ಪ್ರಥಮ ಭಾಷೆಯ ಪರೀಕ್ಷೆಯಲ್ಲಿ ಮತ್ತು (ಆ) ಹಿಂದಿ ಮಾತೃಭಾಷೆಯಲ್ಲದವರಿಗೆ ಹಿಂದಿ ಭಾಷೆಯಲ್ಲಿ ಕೊಡಲಾಗುವುದು

೨) ರಾಜ್ಯದ ಹೊರಗಿನಿಂದ ಬಂದು ೮, ೯ ಮತ್ತು ೧೦ನೇ ತರಗತಿಗಳಿಗೆ ಸೇರುವ ವಿದ್ಯಾರ್ಥಿಗಳು ಆವರೆಗೆ ಕನ್ನಡವನ್ನು ಕಲಿತಿಲ್ಲದಿದ್ದಲ್ಲಿ ಅವರು ಇಂಗ್ಲಿಷ್ ಅಥವಾ ಹಿಂದಿಯನ್ನು ಪ್ರಥಮ ಭಾಷೆಯಾಗಿ ತೆಗೆದುಕೊಳ್ಳಲು ಅನುಮತಿಸಬಹುದು.

೩) ಕನ್ನಡೇತರ ಶಾಲೆಗಳಲ್ಲಿ ೧೯೮೨-೮೩ನೆಯ ಶೈಕ್ಷಣಿಕ ವರ್ಷದಿಂದಲೇ ೧ನೆಯ ತರಗತಿಯಿಂದ ಕನ್ನಡ ಬೋಧನೆ ಆರಂಭವಾಗುವುದು.
೧ನೆಯ ಪ್ಯಾರಾದಲ್ಲಿ ಸೂಚಿಸಿರುವ ಪ್ರೌಢಶಾಲೆಗಳ ಭಾಷಾಕ್ರಮವು ೧೯೮೭-೮೮ನೆಯ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವುದು

೪) ೧೯೮೭-೮೮ನೆಯ ಶೈಕ್ಷಣಿಕ ವರ್ಷದಿಂದ ೮ನೆಯ ತರಗತಿಗೆ ಸೇರುವ ವಿದ್ಯಾರ್ಥಿಗಳು ಸಂಸ್ಕೃತವನ್ನು ಪ್ರಥಮ ಭಾಷೆಯಾಗಿ ಆಗಲಿ ಸಂಯೋಜಿತ ಪ್ರಥಮ ಭಾಷೆಯಾಗಿ ಆಗಲಿ ತೆಗೆದುಕೊಳ್ಳುವಂತಿಲ್ಲ. ಆದಾಗ್ಯೂ ಅವರು ಸಂಸ್ಕೃತವನ್ನು ಮೂರನೆಯ ಭಾಷೆಯಾಗಿ ತೆಗೆದುಕೊಳ್ಳಬಹುದು. ೧ನೆಯ ಪ್ಯಾರಾದಲ್ಲಿ ಸೂಚಿಸಿರುವ ಭಾಷಾಕ್ರಮವು ೧೯೮೭-೮೮ನೆಯ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವವರೆಗೆ ಇದು ಮುಂದುವರಿಯುತ್ತದೆ."[೬] ಎಂದು ಹೇಳಿದೆ.

ಇದನ್ನು ಗಮನಿಸಿದಾಗ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರ ಒತ್ತಡ ಮತ್ತು ಹಿತಾಸಕ್ತಿಗಾಗಿ ರೂಪಿಸಲಾದ ಭಾಷಾಯೋಜನೆ ಮತ್ತು ಅದರ ಆಧಾರದಲ್ಲಿ ಜಾರಿಗೆ ತರಲಾದ ಭಾಷಾನೀತಿಯಿಂದಾಗಿ ಕರ್ನಾಟಕದಲ್ಲಿನ ಭಾಷಾಅಲ್ಪಸಂಖ್ಯಾತರು ಕನ್ನಡವನ್ನು ಕಡ್ಡಾಯ ಪ್ರಥಮ ಭಾಷೆಯಾಗಿ ಕಲಿಯಬೇಕಾದ ಒತ್ತಡಕ್ಕೆ ಸಿಲುಕಿರುವುದು ಸ್ಪಷ್ಟವಾಗುತ್ತದೆ. ಜೊತೆಗೆ ಕನ್ನಡವನ್ನು ಮಾತೃಭಾಷೆಯಾಗುಳ್ಳ ಮಕ್ಕಳಿಗೆ ಸಮನಾಗಿ ೧೨೫ ಅಂಕಗಳಿಗೆ ಕನ್ನಡವನ್ನು ಕಲಿಯಬೇಕಾದ ಒತ್ತಡಕ್ಕೆ ಒಳಗಾಗಿದ್ದಾರೆ. ಇದು ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರ ಬೇಡಿಕೆಗಳನ್ನು ಈಡೇರಿಸಲು ಹೋಗಿ ಭಾಷಾಅಲ್ಪಸಂಖ್ಯಾತರಿಗೆ ಕನ್ನಡದ ಕಲಿಕೆಯ ಒತ್ತಡ ಉಂಟುಮಾಡಿದ ಹಾಗೆ ಆಗಿದೆ. ಭಾಷಾಅಲ್ಪಸಂಖ್ಯಾತರಿಗೆ ಅವರ ಮಾತೃಭಾಷೆಗಳನ್ನು ಕಲಿಯಲು ಅವಕಾಶ ಕಲ್ಪಿಸಲು ಸಾಧ್ಯವಿದ್ದಾಗಲು ಬಹುಸಂಖ್ಯಾತರ ಒತ್ತಡಕ್ಕೆ ಒಳಗಾಗಿ ಅಲ್ಪಸಂಖ್ಯಾತರಿಗೆ ಅವರ ಮಾತೃಭಾಷೆಯನ್ನು ಕಲಿಯಲು ಅವಕಾಶ ಮಾಡಿಕೊಡದೆ ತನ್ನ ಭಾಷೆ ಕಲಿಯುವಂತೆ ಒತ್ತಡ ಹೇರುವುದು ಭಾರತದಂತಹ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಸಂವಿಧಾನ ಬಾಹಿರ. ಹೀಗಾಗಿ ಮೇಲೆ ಉಲ್ಲೇಖಿಸಿರುವ ಕರ್ನಾಟಕ ಸರ್ಕಾರದ ಭಾಷಾನೀತಿಯ ವಿರುದ್ಧ ಭಾಷಾಅಲ್ಪಸಂಖ್ಯಾತರು ಪ್ರತಿಭಟನೆ, ಹೋರಾಟಗಳನ್ನು ಮಾಡಿದ್ದಾರೆ.

ಭಾಷಾಅಲ್ಪಸಂಖ್ಯಾತರ ಹೋರಾಟಗಳಿಗೆ ಕರ್ನಾಟಕ ಸರ್ಕಾರ ಮಣಿಯದಿದ್ದಾಗ ಕರ್ನಾಟಕ ಸರ್ಕಾರದ ಈ ಭಾಷಾನೀತಿಯ ವಿರುದ್ಧವಾಗಿ ಕರ್ನಾಟಕದ ಉಚ್ಚನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿದೆ.

ಇದನ್ನು ಪರಿಗಣನೆಗೆ ತೆಗೆದುಕೊಂಡಿರುವ ಕರ್ನಾಟಕದ "ಉಚ್ಚನ್ಯಾಯಲಯುವು ದಿನಾಂಕ ೨೭ನೇ ಜನವರಿ ೧೯೮೪ರಂದು ತನ್ನ ತೀರ್ಪಿನಲ್ಲಿ ದಿನಾಂಕ ೨೦ನೇ ಜುಲೈ ೧೯೮೨ರ ಸರ್ಕಾರಿ ಆದೇಶವು ಭಾರತ ಸಂವಿಧಾನದ ಅನುಚ್ಛೇದ ೧೪, ೨೯(೧) ಮತ್ತು ೩೦(೧) ರ ವಿಧಿಗಳ ಉಲ್ಲಂಘನೆಯಾಗುವುದರಿಂದ ಕರ್ನಾಟಕ ಸರ್ಕಾರದ ಭಾಷಾನೀತಿಯನ್ನು ಅನೂರ್ಜಿತವೆಂದು ಘೋಷಿಸಿದೆ. ಆದರೂ ನ್ಯಾಯಾಲಯವೂ ಪ್ರಾಥಮಿಕ ಶಿಕ್ಷಣದ ಸಾಮಾನ್ಯ ಮಾದರಿಯಂತೆ ಮಾತೃಭಾಷೆಯ ಜೊತೆಗೆ ಮತ್ತೊಂದು ಭಾಷೆಯ ಕಲಿಕೆಯನ್ನು ಕಡ್ಡಾಯಗೊಳಿಸಿದೆ. ಪ್ರಾಥಮಿಕ ತರಗತಿಯಿಂದ ಎರಡು ಭಾಷೆಗಳ ಪೈಕಿ ಒಂದಾಗಿ ಕನ್ನಡವನ್ನು ಬೋಧಿಸಲು ಮತ್ತು ಪ್ರೌಢಶಾಲಾ ಹಂತದಲ್ಲಿ ಕನ್ನಡವನ್ನು ಮೂರು ಭಾಷೆಗಳ ಪೈಕಿ ಒಂದು ಕಡ್ಡಾಯ ಭಾಷೆಯನ್ನಾಗಿ ಅಳವಡಿಸಲು ಸೂಕ್ತ ಆದೇಶ ಅಥವಾ ನಿಯಮವನ್ನು ರೂಪಿಸಿ ಅದನ್ನು ಕನ್ನಡ ಮಾತೃಭಾಷೆಯಾದ ಎಲ್ಲರಿಗೂ ಮತ್ತು ರಾಜ್ಯದ ಶಾಶ್ವತ ನಿವಾಸಿಗಳಾದ ಮತ್ತು ಶಾಶ್ವತ ನಿವಾಸಿಗಳಾಗುವ ಭಾಷಾಅಲ್ಪಸಂಖ್ಯಾತರಿಗೂ ಅನ್ವಯಿಸಲು ಅವಕಾಶವನ್ನು ನೀಡಿದೆ."[೭]

ಕರ್ನಾಟಕ ಉಚ್ಚನ್ಯಾಯಾಲಯದ ಈ ತೀರ್ಪನ್ನು ಪ್ರಶ್ನಿಸಿ ರಾಜ್ಯ ಸರ್ಕಾರವು ಮತ್ತೆ ದೇಶದ ಸರ್ವೋಚ್ಛ ನ್ಯಾಯಾಲಯದಲ್ಲಿ ದಾವೆಯನ್ನು ಹೂಡಿದೆ. ಇದರ ನಡುವೆಯೇ ರಾಜ್ಯ ಸರ್ಕಾರವು ದಿನಾಂಕ ೧೯ನೇ ಜೂನ್ ೧೯೮೯ರ ಆದೇಶದಲ್ಲಿ ಭಾಷಾನೀತಿಯನ್ನು ನಿರೂಪಿಸಿ ಆದೇಶ ಹೊರಡಿಸಿದೆ. ಆ ಆದೇಶದ ಪ್ರಕಾರ ೧ ರಿಂದ ೪ನೇ ತರಗತಿಯವರೆಗೆ ಮಕ್ಕಳು ಅಲ್ಲಿ ತಿಳಿಸಿದ ೮ ಭಾಷೆಗಳ (ಕನ್ನಡ ಮತ್ತು ಇಂಗ್ಲೀಷ್ ಸೇರಿದಂತೆ) ಪೈಕಿ ಒಂದು ಭಾಷೆಯನ್ನು ಮಾತ್ರ ಕಡ್ಡಾಯವಾಗಿ ಕಲಿಯಬೇಕು. ೫ ರಿಂದ ೭ನೇ ತರಗತಿಯವರೆಗೆ ಕನ್ನಡವನ್ನು ಪ್ರಥಮ ಭಾಷೆಯಾಗಿ ಅಭ್ಯಾಸ ಮಾಡದ ವಿದ್ಯಾರ್ಥಿಗಳಿಗೆ ಕನ್ನಡವನ್ನು ಕಲಿಸುವುದು. ಆದರೆ ಕನ್ನಡ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣರಾಗುವುದು ಕಡ್ಡಾಯವಲ್ಲ. ಮತ್ತು ೮ ರಿಂದ ೧೦ನೇ ತರಗತಿವರೆಗೆ ಮೂರು ಭಾಷೆಗಳ ಪೈಕಿ ಒಂದು ಭಾಷಾವಿಷಯವನ್ನಾಗಿ ಕನ್ನಡವನ್ನು ಕಡ್ಡಾಯವಾಗಿ ಕಲಿಯಬೇಕು ಎಂದು ಹೇಳಿದೆ. ಇದಾದ ನಂತರ ರಾಜ್ಯ ಸರ್ಕಾರ ಸಲ್ಲಿಸಿದ್ದ ಅರ್ಜಿಯನ್ನು ಪರಿಶೀಲಿಸಿದ ಸರ್ವೋಚ್ಚ ನ್ಯಾಯಾಲಯವು ದಿನಾಂಕ ೮ನೇ ಡಿಸೆಂಬರ್ ೧೯೯೩ರ ತೀರ್ಪಿನಲ್ಲಿ ರಾಜ್ಯ ಉಚ್ಛನ್ಯಾಯಾಲಯದ ಆದೇಶವನ್ನು ಮತ್ತು ಉಚ್ಛನ್ಯಾಯಾಲಯದ ಆದೇಶಾನುಸಾರ ಹೊರಡಿಸಿದ ದಿನಾಂಕ ೧೯ನೇ ಜೂನ್ ೧೯೮೯ರ ಸರ್ಕಾರಿ ಆದೇಶದ ಸಿಂಧುತ್ವವನ್ನು ಎತ್ತಿಹಿಡಿದಿದೆ. ಮುಂದುವರಿದು ಭಾಷಾನೀತಿಯನ್ನು ಹೇಗೆ ಪರಿಣಾಮಕಾರಿಯಾಗಿ ಜಾರಿಗೊಳಿಸಬೇಕೆಂದು ರಾಜ್ಯಕ್ಕೆ ತಿಳಿದಿದೆ ಎಂದು ಹಾಗೂ ಇದರಲ್ಲಿ ನ್ಯಾಯಾಲಯವು ಮಧ್ಯೆ ಪ್ರವೇಶಿಸಬಾರದು ಎಂದು ಹೇಳಿದೆ. ಸರ್ವೋಚ್ಛ ನ್ಯಾಯಾಲಯದ ತೀರ್ಪಿನ ಪ್ರಕಾರ ರಾಜ್ಯ ಸರ್ಕಾರ ೧೯೯೪ರಲ್ಲಿ ಮತ್ತೊಂದು ಭಾಷಾನೀತಿಯನ್ನು ಹೊರಡಿಸಿ ತನ್ನ ರಾಜ್ಯಪತ್ರದಲ್ಲಿ ಪ್ರಕಟಿಸಿದೆ. ಇದನ್ನು ಅನುಬಂಧ-೨ರಲ್ಲಿ ನೀಡಲಾಗಿದೆ.

ಈ ಭಾಷಾನೀತಿಯಲ್ಲಿ ಕರ್ನಾಟಕ ಸರ್ಕಾರವು ಸರ್ವೋಚ್ಚ ನ್ಯಾಯಾಲಯದ ತೀರ್ಪಿಗೆ ಬದ್ಧವಾಗಿ ತನ್ನ ಭಾಷಾನೀತಿಯನ್ನು ಪುನರ್ ಪರಿಶೀಲಿಸಿ ಏಕೈಕ ಪ್ರಥಮ ಭಾಷೆಯಾಗಿದ್ದ

ಕನ್ನಡವನ್ನು ಬದಲಾಯಿಸಿ ಮಗುವು ತನ್ನ ಮಾತೃಭಾಷೆಯನ್ನು ಇಲ್ಲವೆ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯಬಹುದೆಂದು ಮಾರ್ಪಡಿಸಿದೆ. ಹಾಗೆಯೇ ತ್ರಿಭಾಷಾ ಸೂತ್ರದ ಅನ್ವಯ ಮಗುವು ಪ್ರೌಢಶಾಲಾ ಹಂತದಲ್ಲಿ ಮೂರು ಭಾಷೆಗಳನ್ನು ಕಡ್ಡಾಯವಾಗಿ ಕಲಿಬೇಕಾಗಿರುವುದರಿಂದ ಆ ಮೂರು ಭಾಷೆಗಳಲ್ಲಿ ಅಂದರೆ ಪ್ರಥಮ, ದ್ವಿತೀಯ ಮತ್ತು ತೃತೀಯ ಭಾಷೆಗಳಲ್ಲಿ ಒಂದಾಗಿ ಕನ್ನಡವನ್ನು ಕಲಿಯುವುದು ಕಡ್ಡಾಯ ಎಂದು ಆದೇಶಿಸಿದೆ. ಈ ಭಾಷಾನೀತಿ ಕರ್ನಾಟಕದ ಪ್ರೌಢಶಾಲಾ ಹಂತದಲ್ಲಿ ಈಗಲೂ ಚಾಲ್ತಿಯಲ್ಲಿದೆ. ಪ್ರಸ್ತುತ ಕರ್ನಾಟಕದಲ್ಲಿನ ಪ್ರೌಢಶಾಲಾ ಹಂತದಲ್ಲಿ ಚಾಲ್ತಿಯಲ್ಲಿರುವ ಭಾಷಾನೀತಿಯ ಪ್ರಕಾರ ಭಾಷಾಸಂಯೋಜನೆ ಈ ಕೆಳಗಿನಂತಿದೆ.

"ಸರ್ಕಾರದ ಭಾಷಾನೀತಿಯಂತೆ ಪರೀಕ್ಷಾ ಮಂಡಳಿಯು ನಿಗದಿಪಡಿಸಿರುವ ಯಾವುದಾದರು ೮ ಪ್ರಥಮ ಭಾಷೆಗಳಲ್ಲಿ ಒಂದನ್ನು ಪ್ರಥಮ ಭಾಷೆಯಾಗಿ, ೨ ದ್ವಿತೀಯ ಭಾಷೆಗಳಲ್ಲಿ ಒಂದನ್ನು ದ್ವಿತೀಯ ಭಾಷೆಯಾಗಿ ಮತ್ತು ೮ ತೃತೀಯ ಭಾಷೆಗಳಲ್ಲಿ ಒಂದನ್ನು ತೃತೀಯ ಭಾಷೆಯಾಗಿ ಆಯ್ಕೆ ಮಾಡಿಕೊಂಡು ಪರೀಕ್ಷಾ ಮಂಡಳಿಯ ನಿಗದಿಪಡಿಸಿದ ಭಾಷಾ ಸಂಯೋಜನೆಯಂತೆ ಪರೀಕ್ಷೆಯನ್ನು ತೆಗೆದುಕೊಳ್ಳಬೇಕು. ಭಾಷಾ ಸಂಯೋಜನೆಯನ್ನು ಉಲ್ಲಂಘಿಸುವ ಯಾವುದೇ ವಿದ್ಯಾರ್ಥಿಯ ಫಲಿತಾಂಶವನ್ನು ಪ್ರಕಟಿಸಲಾಗುವುದಿಲ್ಲ.

ಪ್ರಥಮ, ದ್ವಿತೀಯ, ತೃತೀಯ ಭಾಷೆಗಳಲ್ಲಿ ಯಾವುದಾದರು ಒಂದನ್ನು ಕನ್ನಡ ಭಾಷೆಯಾಗಿ ಆಯ್ಕೆ ಮಾಡಿಕೊಳ್ಳುವುದು ಕಡ್ಡಾಯವಾಗಿರುತ್ತದೆ.

ಪ್ರಥಮ ಭಾಷೆಯನ್ನಾಗಿ ಆಯ್ಕೆ ಮಾಡಿಕೊಂಡ ಭಾಷೆಯನ್ನು ತೃತೀಯ ಭಾಷೆಯಾಗಿ ಆಯ್ಕೆಮಾಡಿಕೊಳ್ಳಬಾರದು. ಪ್ರಥಮ ದ್ವಿತೀಯ ಹಾಗೂ ತೃತೀಯ ಭಾಷೆಗಳು ಹಾಗೂ ಅವುಗಳ ಸಂಕೇತಗಳು

| First language | Code | Second language | Code | Third language | Code |
|---|---|---|---|---|---|
| Kannada | 01K | English | 31E | Hindi | 61H |
| Telugu | 04L | Kannada | 33K | Kannada | 62K |
| Hindi | 06H | | | English | 63E |
| Marati | 08M | | | Arabic | 64A |
| Tami Tamil | 10T | | | Persian | 65P |
| Urdu | 12U | | | Urdu | 66U |
| English | 14E | | | Sanskrit | 67S |
| Sanskrit | 16S | | | Konkani | 68D/K |

ಎಸ್‌ಎಸ್‌ಎಲ್‌ಸಿ ಪರೀಕ್ಷೆಗೆ ವಿದ್ಯಾರ್ಥಿಗಳು ತೆಗೆದುಕೊಳ್ಳಬಹುದಾದ ಭಾಷಾಸಂಯೋಜನೆ

| | | | |
|---|---|---|---|
| 4L 31E 62K | 8M 31E 62K | 10T 31E 62K | 6H 31E 62K |
| 4L 33K 61H | 8M 33K 61H | 10T 33K 61H | 6H 33K 63E |
| 4L 33K 63E | 8M 33K 63E | 10T 33K 63E | 6H 33K 64A |
| 4L 33K 64A | 8M 33K 64A | 10T 33K 64A | 6H 33K 65P |
| 4L 33K 65P | 8M 33K 65P | 10T 33K 65P | 6H 33K 66U |
| 4L 33K 66U | 8M 33K 66U | 10T 33K 66U | 6H 33K 67S |
| 4L 33K 67S | 8M 33K 67S | 10T 33K 67S | 6H 33K 68D/K |
| 1K 33K 68D/K | 8M 33K 68D/K | 10T 33K 68D/K | |

| | | | |
|---|---|---|---|
| 1K 31E 61H | 12U 31E 62K | 16S 31E 62K | 14E 33K 61H |
| 1K 31E 64A | 12U 33K 61H | 16S 33K 61H | 14E 33K 64A |
| 1K 31E 65P | 12U 33K 63E | 16S 33K 63E | 14E 33K 65P |
| 1K 31E 67S | 12U 33K 64A | 16S 33K 64A | 14E 33K 66U |
| 1K 31E 66U | 12U 33K 65P | 16S 33K 65P | 14E 33K 67S |
| 1K 31E 68D/K | 12U 33K 67S | 16S 33K 66U | 14E 33K 68D/K |
| | 12U 33K 68D/K | 16S 33K 68D/K | |

(ಪುಟ ೨, ಎಸ್.ಎಸ್.ಎಲ್.ಸಿ ಮಾರ್ಗದರ್ಶಿ)

ಈ ನಿಯಮದನ್ವಯ ಕರ್ನಾಟಕ ರಾಜ್ಯ ಪಠ್ಯಕ್ರಮದಲ್ಲಿ ಪ್ರೌಢಶಿಕ್ಷಣ ಕಲಿಯುತ್ತಿರುವ ವಿದ್ಯಾರ್ಥಿಗಳು ಪ್ರಥಮ, ದ್ವಿತೀಯ ಮತ್ತು ತೃತೀಯ ಭಾಷೆಯಾಗಿ ಒಟ್ಟು ಮೂರು ಭಾಷೆಗಳನ್ನು ಕಲಿಯುವುದು ಕಡ್ಡಾಯವಾಗಿದೆ. ಆದರೆ ಇಲ್ಲಿ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷೆಗಳಿಗೂ ಸಮಾನಸ್ಥಾನ ಕಲ್ಪಿಸಿಲ್ಲ. ಕನ್ನಡ ಮತ್ತು ಇಂಗ್ಲಿಶ್‌ಗೆ ಪ್ರಥಮ, ದ್ವಿತೀಯ ಮತ್ತು ತೃತೀಯ ಭಾಷೆಯಾಗಿ ಮೂರೂ ಸ್ಥಾನಗಳಲ್ಲಿ ಕಲಿಯುವ ಅವಕಾಶವನ್ನು ಕಲ್ಪಿಸಲಾಗಿದ್ದರೆ ತೆಲಗು, ಮರಾಠಿ, ತಮಿಳು ಭಾಷೆಗಳಿಗೆ ಪ್ರಥಮ ಭಾಷೆಯ ಸ್ಥಾನವನ್ನು ಮಾತ್ರ ಕಲ್ಪಿಸಿಕೊಡಲಾಗಿದೆ. ಇನ್ನು ಹಿಂದಿ, ಉರ್ದು ಮತ್ತು ಸಂಸ್ಕೃತಗಳಿಗೆ ಪ್ರಥಮ ಮತ್ತು ತೃತೀಯ ಭಾಷೆಯಾಗಿ ಕಲಿಯುವ ಎರಡು ಸ್ಥಾನವನ್ನು ಕಲ್ಪಿಸಿಕೊಡಲಾಗಿದ್ದರೆ ಅರೇಬಿಕ್, ಪರ್ಷಿಯನ್ ಮತ್ತು ಕೊಂಕಣಿ ಭಾಷೆಗಳಿಗೆ ತೃತೀಯ ಭಾಷೆಯಾಗಿ ಕಲಿಯುವ ಅವಕಾಶವನ್ನು ಮಾತ್ರ ಕಲ್ಪಿಸಿಕೊಡಲಾಗಿದೆ. ಇಲ್ಲಿ ಸಂಸ್ಕೃತ ಕರ್ನಾಟಕದ ಯಾರ ಮಾತೃಭಾಷೆಯೂ ಅಲ್ಲ. ಆದರೂ ಅದಕ್ಕೆ ಪ್ರಥಮ ಭಾಷೆಯ ಸ್ಥಾನ ಕಲ್ಪಿಸಲಾಗಿದೆ. ಅಲ್ಲದೆ ತೃತೀಯ ಭಾಷೆಯ ಸ್ಥಾನವನ್ನೂ ನೀಡಲಾಗಿದೆ. ಆದರೆ ತೆಲುಗು, ಮರಾಠಿ ಮತ್ತು ತಮಿಳು ಭಾಷೆಗಳು ಕರ್ನಾಟಕದಲ್ಲಿ ವಾಸಿಸುವ ಭಾಷಾಅಲ್ಪಸಂಖ್ಯಾತರ ಮಾತೃಭಾಷೆಗಳಾಗಿವೆ ಎಂಬ ಕಾರಣಕ್ಕಾಗಿ ಪ್ರಥಮ ಭಾಷೆಯ ಸ್ಥಾನವನ್ನು ನೀಡಲಾಗಿದೆ. ಆದರೆ ಕೊಂಕಣಿ ಸ್ಥಳೀಯ ಪ್ರದೇಶದ ಜನರ

ಮಾತೃಭಾಷೆ ಆಗಿದ್ದರೂ ತೃತೀಯ ಭಾಷೆಯ ಸ್ಥಾನವನ್ನು ಮಾತ್ರ ಕಲ್ಪಿಸಲಾಗಿದೆ. ಕೊಂಕಣಿ ಭಾಷೆಯ ಜೊತೆಯಲ್ಲಿ ತೃತೀಯ ಭಾಷೆಯಾಗಿ ಕಲಿಯಲು ಅವಕಾಶ ಮಾಡಿಕೊಟ್ಟಿರುವ ಇತರ ಭಾಷೆಗಳಾದ ಅರೇಬಿಕ್ ಮತ್ತು ಪರ್ಷಿಯನ್ ಭಾರತೀಯ ಭಾಷೆಗಳಲ್ಲ. ಆದರೂ ಕೊಂಕಣಿಯನ್ನು ಅರೇಬಿಕ್ ಮತ್ತು ಪರ್ಷಿಯನ್ ಭಾಷೆಗಳ ಪಟ್ಟಿಗೆ ಸೇರಿಸಲಾಗಿದೆ. ಅಲ್ಲದೆ ಹೀಗೆ ಕಲಿಸಲಾಗುವ ಮೂರು ಭಾಷೆಗಳ ಪೈಕಿ ಒಂದು ಭಾಷೆಯಾಗಿ ಕನ್ನಡವನ್ನು ಕಲಿಯುವುದು ಮತ್ತು ಪರೀಕ್ಷೆಯಲ್ಲಿ ಉತ್ತೀರ್ಣವಾಗುವುದು ಕಡ್ಡಾಯವಾಗಿದೆ. ಇದೇ ರೀತಿ ಪದವಿಪೂರ್ವ ಹಂತದಲ್ಲಿ ಕನ್ನಡ, ಇಂಗ್ಲಿಶ್, ತಮಿಳು, ಮಲಯಾಳಂ, ಮರಾಠಿ, ಹಿಂದಿ, ತೆಲುಗು, ಉರ್ದು, ಸಂಸ್ಕೃತ, ಅರೇಬಿಕ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಯಾವುದಾದರು ಎರಡು ಭಾಷೆಗಳನ್ನು ಕಲಿಯುವುದು ಕಡ್ಡಾಯವಾಗಿದೆ. ಹಾಗೆಯೇ ಪದವಿ ಹಂತದಲ್ಲೂ (ಮೊದಲೆರಡು ವರ್ಷ) ಎರಡು ಭಾಷೆಗಳನ್ನು ಕಲಿಯುವುದು ಕಡ್ಡಾಯ.

ಹೀಗೆ ಕರ್ನಾಟಕದಲ್ಲಿ ಭಾಷೆಗಳನ್ನು ಕಲಿಸುವಾಗ ಪ್ರಥಮಭಾಷೆ, ದ್ವಿತೀಯಭಾಷೆ ಮತ್ತು ತೃತೀಯಭಾಷೆ ಎಂದು ಮೂರು ರೀತಿಯಲ್ಲಿ ವಿಂಗಡಣೆ ಮಾಡಲಾಗಿದೆ. ಇದರ ಉದ್ದೇಶ ಮತ್ತು ಗುರಿಗಳನ್ನು ಕುರಿತು ಪಠ್ಯಪುಸ್ತಕಗಳ ನಿರ್ದೇಶನ ಮಂಡಲವು ತನ್ನದೇ ಆದ ಕ್ರಮದಲ್ಲಿ ಸ್ಫುಟಗೊಳಿಸಿದೆ. ಅವುಗಳಲ್ಲಿ ಆಯ್ದವುಗಳನ್ನು ಈ ಕೆಳಗೆ ಉಲ್ಲೇಖಿಸಲಾಗಿದೆ.

**ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಸುವಾಗ**

೧. "ಉತ್ತಮ ಶ್ರವಣ, ಉತ್ತಮ ಅರ್ಥಗ್ರಹಣ ಹಾಗೂ ಶೀಘ್ರವಾಚನ ಸಾಧ್ಯವಾಗುವಂತೆ ವಿದ್ಯಾರ್ಥಿಗಳ ಬುದ್ಧಿಶಕ್ತಿಯನ್ನು ಬೆಳೆಸಬೇಕು.

೨. ಮನೋರಂಜನ, ಜ್ಞಾನಾರ್ಜನ, ಸಾಹಿತ್ಯಾಭಿರುಚಿ ಹಾಗೂ ಸೂಕ್ಷ್ಮಪರಿಜ್ಞಾನದ ತೃಪ್ತಿಗಾಗಿ ಸ್ವತಂತ್ರ ಅಭ್ಯಾಸವನ್ನು ಮುಂದುವರೆಸಲು ವಿದ್ಯಾರ್ಥಿಗಳನ್ನು ಸಮರ್ಥರನ್ನಾಗಿ ಮಾಡುವುದು.

೩. ಅವರ ರಸಗ್ರಹಣ ಶಕ್ತಿ, ಕಲ್ಪಕತೆ, ಸ್ವಂತಿಕೆ ಹಾಗೂ ಸೃಜನಶೀಲತೆ ಉದ್ದೀಪ್ತವಾಗುವಂತೆ ಹವಣಿಸುವುದು.

೪. ಉಕ್ತ ಹಾಗೂ ಲಿಖಿತ ಅಭಿವ್ಯಕ್ತಿಯ ಒಳ್ಳೆಯ ವಿಕಾಸ ವಿದ್ಯಾರ್ಥಿಗಳಲ್ಲಿ ರೂಪುಗೊಳ್ಳುವಂತೆ ನೋಡಿಕೊಳ್ಳುವುದು.

೫. ಶುದ್ಧ ಉಚ್ಚಾರ ದಿನದಿನಕ್ಕೆ ಬೆಳೆಯುತ್ತಿರುವ ಶಬ್ದಕೋಶ, ಭಾಷೆಯ ದೇಹರಚನೆ ಇಲ್ಲವೆ ವಾಕ್ಯಗಳ ಮೈಕಟ್ಟನ್ನು ಚೆನ್ನಾಗಿ ಅರಿತುಕೊಂಡು ಅದನ್ನು ಉಚಿತವಾಗಿ, ದೋಷ ರಹಿತವಾಗಿ ಹಾಗೂ ಪರಿಣಾಮಕಾರಿಯಾಗಿ ಉಪಯೋಗಿಸುವ ಜಾಣ್ಮೆ ಇವು ವಿದ್ಯಾರ್ಥಿಗಳಲ್ಲಿ ಬೆಳೆಸುವಂತೆ ಪ್ರಯತ್ನಿಸುವುದು.

೬. ವ್ಯಾಕರಣ, ಭಾಷೆಯಲ್ಲಿನ ಮುಖ್ಯ ಸಾಹಿತ್ಯ ಪ್ರಕಾರಗಳು ಹಾಗೂ ಮಹತ್ವದ ಕವಿ ಹಾಗೂ ಸಾಹಿತಿಗಳು: ಈ ವಿಷಯಗಳು ಹಾಗೂ ವ್ಯಕ್ತಿಗಳ ಪರಿಚಯ ಮಾಡಿಕೊಡುವುದು.

೭. ವಿದ್ಯಾರ್ಥಿಗಳಿಗೆ ಈ ನಾಡು ಹಾಗೂ ರಾಷ್ಟ್ರ ತಮ್ಮದು, ಭಾಷೆ ತಮ್ಮದು, ಸಾಹಿತ್ಯ ಹಾಗೂ ಸಂಸ್ಕೃತಿ ತಮ್ಮದೆಂಬ ಭಾವನೆ ಜಾಗೃತವಾಗುವಂತೆ ಪಠ್ಯಕ್ರಮವನ್ನು, ಪಠ್ಯಸಾಮಗ್ರಿಯನ್ನು ಹಾಗೂ ಬೋಧನಾ ವಿಧಾನವನ್ನು ರೂಪಿಸಬೇಕು.

**ದ್ವಿತೀಯ ಭಾಷೆಯಾಗಿ ಕಲಿಸುವಾಗ**

೧. ಬಳಕೆ ಮಾತಿನ ಹಾಗೂ ರೇಡಿಯೋ ಭಾಷಣಗಳ ಅರ್ಥಗ್ರಹಣ, ಘಟನೆಗಳು ಮಾಡಿದ ವರ್ಣನೆಗಳು ಇಲ್ಲವೆ ಟೀಕೆ ಟಿಪ್ಪಣಿಗಳು ಹಾಗೂ ವಿಚಾರಗಳ ಕ್ರಮಾನುಗತಿ: ಇವುಗಳ ಅರ್ಥಮಾಡಿಕೊಳ್ಳುವುದು.

೨. ವಾಕ್ಯಗಳನ್ನು ಹಾಗೂ ಉದ್ಧೃತ ಗದ್ಯಭಾಗಗಳ ಅರ್ಥವನ್ನು ತಿಳಿದುಕೊಂಡು ಸ್ಪಷ್ಟವಾಗಿ ಓದುವುದು ಕವಿತೆಗಳನ್ನು ಅವುಗಳ ತಾಳ, ಲಯ ಹಾಗೂ ಉಚಿತ ಸ್ವರಭಾರ ಇಲ್ಲವೆ ಕಾಕುವನ್ನು ಲಕ್ಷಿಸಿ ಹೇಳುವುದು

೩. ಪುಸ್ತಕ ಸಂಗ್ರಹಾಲಯದಲ್ಲಿಯ ಪುಸ್ತಕಗಳನ್ನೂ ಮಾಸಿಕಗಳನ್ನೂ ವೃತ್ತಪತ್ರಿಕೆಗಳನ್ನು ಓದಲು ನೈಜ ಲವಲವಿಕೆಯನ್ನು ಬೆಳೆಸಿಕೊಳ್ಳುವುದು.

೪. ಮೊದಲು ಓದಿಕೊಳ್ಳದೆ ಇದ್ದ ಉದ್ಧೃತ ಭಾಗಗಳ ಅರ್ಥಗ್ರಹಣ ಇಲ್ಲವೆ ಸಾರಗ್ರಹಣವನ್ನು ಕುರಿತು ಪ್ರಶ್ನೆಗಳಿಗೆ ಉತ್ತರಗಳನ್ನು ಬರೆಯುವುದು, ಅರ್ಥಮರ್ಥ ಸೂಚಿಸಿದ ಇಲ್ಲವೆ ತುಣುಕು ತುಣುಕಾಗಿ ಕೊಟ್ಟ ಕತೆಗಳಲ್ಲಿ ಬಿಟ್ಟಿರುವ ವಿವರಗಳನ್ನು ತುಂಬುವುದು ಇಲ್ಲವೆ ಸಂಪೂರ್ಣವಾಗಿ ಮುಕ್ತಾಯಗೊಳಿಸುವುದು, ಜಾಹಿರಾತು ಕೊಟ್ಟ ಹುದ್ದೆಗಳಿಗಾಗಿ ಅರ್ಜಿಗಳನ್ನು ಬರೆಯುವುದು, ಎಲ್ಲರಿಗೂ ಗೊತ್ತಿರುವ ವಿಷಯಗಳ ಮೇಲೆ ಚಿಕ್ಕ ಚಿಕ್ಕ ಪ್ಯಾರಗಳನ್ನು ಬರೆಯುವುದು ಸಾಧ್ಯವಿದ್ದರೆ ಚಿಕ್ಕ ನಿಬಂಧಗಳನ್ನು ಬರೆಯುವುದು.

೫. ಸಾಧ್ಯವಿದ್ದರೆ ಸಾದಾ ವಿಷಯಗಳನ್ನು ಕುರಿತು ಕಲಿತ ಭಾಷೆಯಲ್ಲಿ ಮಾತನಾಡುವುದು, ಸಂಭಾಷಣೆಯನ್ನು ಹಾಗೂ ಲೇಖನವನ್ನೂ ಉಳಿದ ಆಧುನಿಕ ಭಾಷೆಗಳ ವ್ಯಾಸಂಗದಲ್ಲಿ ನಿರೀಕ್ಷಿಸಬಹುದು. ಇಂಗ್ಲೀಷಿನಲ್ಲಿ ಇದು ಸುಲಭಸಾಧ್ಯವಲ್ಲ.

**ತೃತೀಯ ಭಾಷೆಯಾಗಿ ಕಲಿಸುವಾಗ**

೧. ವೃತ್ತ ಪತ್ರಿಕೆಗಳನ್ನೂ ವ್ಯವಹಾರ ಪತ್ರಗಳನ್ನೂ ಚಿಕ್ಕ ಚಿಕ್ಕ ಕಥೆಗಳನ್ನೂ ಪಠ್ಯಪುಸ್ತಕದಲ್ಲಿರುವ ಸರಳ ಗದ್ಯ–ಪದ್ಯವನ್ನೂ ಓದಿ ಅರ್ಥಮಾಡಿಕೊಳ್ಳುವ ಶಕ್ತಿಯನ್ನು ವಿದ್ಯಾರ್ಥಿಗಳಲ್ಲಿ ಬೆಳೆಸುವುದು

೨. ದೈನಂದಿನ ವ್ಯವಹಾರದಲ್ಲಿ ಆ ಭಾಷೆಯಲ್ಲಿ ಮಾತನಾಡುವ ಅನುಕೂಲವನ್ನು ಮಾಡಿಕೊಡುವುದು

೩. ಆ ಭಾಷೆಯ ವ್ಯಾಕರಣ ಮೂಲತತ್ವ ಹಾಗೂ ರೂಢಿಗಳನ್ನು ತಿಳಿಸಿಕೊಡುವುದು.

೪. ಅರ್ಜಿಗಳನ್ನು ಬರೆಯುವುದು, ಪತ್ರಗಳನ್ನು ಪಠ್ಯಪುಸ್ತಕಗಳಲ್ಲಿಯ ವಿಷಯಗಳ ಮೇಲೆ ಒಂದೆರಡು ಪ್ಯಾರಾಗಳು, ಭಾಷೆಯಲ್ಲಿರುವ ಕೆಲವು ಪ್ಯಾರಾಗಳ ಭಾಷಾಂತರಗಳು ಹೀಗೆ ಲೇಖನ ಕಾರ್ಯವನ್ನೆಸಗುವ ಸಾಮರ್ಥ್ಯವನ್ನು ವಿದ್ಯಾರ್ಥಿಗಳು ಪಡೆದಿರಬೇಕು.

೫. ಆ ಭಾಷೆಯಲ್ಲಿ ಮಾಡಿದ ಉಪನ್ಯಾಸಗಳನ್ನು ತಿಳಿದುಕೊಳ್ಳುವ ಯೋಗ್ಯತೆ ಬಂದಿರಬೇಕು."[೮]

ಎಂದು ಹೇಳಲಾಗಿದೆ. ಈ ಅಂಶಗಳನ್ನು ಗಮನಿಸಿದಾಗ ಪ್ರಥಮ ಭಾಷೆಯಾಗಿ ಕನ್ನಡವನ್ನು ಕಲಿಸುವಾಗ ಭಾಷೆ ಮತ್ತು ಭಾಷಿಕರ ನಡುವೆ ಭಾವನಾತ್ಮಕ ಸಂಬಂಧ ಬೆಸೆಯುವ ಉದ್ದೇಶವಿದ್ದರೆ ದ್ವಿತೀಯ ಮತ್ತು ತೃತೀಯ ಭಾಷೆಯಾಗಿ ಕನ್ನಡವನ್ನು ಕಲಿಸುವಾಗ ವ್ಯಾವಹಾರಿಕ ಉದ್ದೇಶವಿದೆ. ಈ ಹಿನ್ನೆಲೆಯಲ್ಲಿ ಮಗುವಿನ ಪ್ರಥಮ ಭಾಷೆ ಮಾತೃಭಾಷೆಯಾಗಿರಬೇಕು. ದ್ವಿತೀಯ ಮತ್ತು ತೃತೀಯ ಭಾಷೆಗಳು ಪ್ರಾದೇಶಿಕ ಮತ್ತು ಇತರ ಭಾಷೆಗಳು ಆಗಿರಬೇಕು ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ. ಇದಕ್ಕೆ ಪೂರಕವಾಗಿ ಯೋಜನೆಗಳು ರೂಪಿತವಾಗಿ ಭಾಷಾನೀತಿಗಳು ಜಾರಿಯಾಗಿವೆ. ಇದರಿಂದಾಗಿ ರಾಜ್ಯಪಠ್ಯಕ್ರಮದಲ್ಲಿ ಕಲಿಯುತ್ತಿರುವ ಮಕ್ಕಳು ಪ್ರಾದೇಶಿಕ ಭಾಷೆಯಾದ ಕನ್ನಡ ಮತ್ತು ವಿದೇಶಿ ಭಾಷೆಯಾದ ಇಂಗ್ಲಿಶ್ ಈ ಎರಡರಲ್ಲಿ ಒಂದನ್ನು ದ್ವಿತೀಯ ಭಾಷೆಯಾಗಿ ಕಲಿಯಬೇಕಿದೆ. ಹೀಗೆಯೇ ಹಿಂದಿ, ಕನ್ನಡ, ಇಂಗ್ಲಿಶ್, ಅರೇಬಿಕ್, ಪರ್ಷಿಯನ್, ಉರ್ದು, ಸಂಸ್ಕೃತ ಮತ್ತು ಕೊಂಕಣಿ ಈ ಎಂಟು ಭಾಷೆಗಳಲ್ಲಿ ಒಂದನ್ನು ತೃತೀಯ ಭಾಷೆಯಾಗಿ ಕಲಿಯಬೇಕಿದೆ. ಆದರೆ ಇದುವರೆಗೆ ವ್ಯಕ್ತವಾಗಿರುವ ಅಭಿಪ್ರಾಯಗಳ ಪ್ರಕಾರ ಕರ್ನಾಟಕದಲ್ಲಿ ಎಲ್ಲಾ ಮಕ್ಕಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗಿಲ್ಲ. ಇದಕ್ಕೆ ಹಲವು ಕಾರಣಗಳು ಇವೆ. ಅವುಗಳನ್ನು **'ಪ್ರಥಮ ಭಾಷೆಯಾಗಿ ಮಾತೃಭಾಷಾಕಲಿಕೆ ಮತ್ತು ಸಮಸ್ಯೆಗಳು'** ಎಂಬ ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

## ೩.೨ ಪ್ರಥಮ ಭಾಷೆಯಾಗಿ ಮಾತೃಭಾಷಾಕಲಿಕೆ ಮತ್ತು ಸಮಸ್ಯೆಗಳು

ಈ ಹಿಂದೆ ಪ್ರಸ್ತಾಪಿಸಿರುವ ಪಠ್ಯಪುಸ್ತಕ ನಿರ್ದೇಶನ ಮಂಡಲ, ಭಾಷಾವಿದ್ವಾಂಸರು, ಶಿಕ್ಷಣತಜ್ಞರು, ಮನೋವಿಜ್ಞಾನಿಗಳು ಇದುವರೆಗೆ ನಡೆಸಿರುವ ಚರ್ಚೆಗಳನ್ನು ಗಮನಿಸಿದಾಗ "ಕಲಿತದ್ದನ್ನು ಚೆನ್ನಾಗಿ ಗ್ರಹಿಸಲು, ಗ್ರಹಿಸಿದ್ದನ್ನು ಮನನ ಮಾಡಿಕೊಳ್ಳಲು, ಮನನ ಮಾಡಿಕೊಂಡದ್ದನ್ನು ಸಮರ್ಥವಾಗಿ ಅಭಿವ್ಯಕ್ತಿಸಲು ಮಗುವಿಗಾಗಲಿ/ವಿದ್ಯಾರ್ಥಿಗಾಗಲಿ ತನ್ನ ಭಾಷೆಗಿಂತ ಸಮರ್ಥವಾದ ಸಾಧನ ಮತ್ತೊಂದಿಲ್ಲ."[೯] ಎಂಬುದು ಸ್ಪಷ್ಟವಾಗುತ್ತದೆ. ಹೀಗಾಗಿ ಮಗುವಿನ ಮಾತೃಭಾಷೆಯನ್ನು ಶಿಕ್ಷಣದಲ್ಲಿ ಪ್ರಥಮ ಭಾಷೆಯಾಗಿ ಕಲಿಸಬೇಕು. ಏಕೆಂದರೆ ಮಗು ಶಾಲೆಗೆ ಬರುವ ಮುನ್ನ ತನ್ನ ಮಾತೃಭಾಷೆಯಲ್ಲಿ ಅರ್ಥೈಸುವ, ಮಾತನಾಡುವ ಕೌಶಲಗಳನ್ನು ಪಡೆದಿರುತ್ತದೆ. ಇದರಿಂದ ಮಗುವಿಗೆ ಓದುವುದು ಮತ್ತು ಬರೆಯುವುದನ್ನು ಸುಲಭವಾಗಿ ಕಲಿಸಿಕೊಡಬಹುದು. ಇದು ಮಗುವಿಗೆ ಇತರ ವಿಷಯಗಳ ಗ್ರಹಿಕೆ, ಕಲಿಕೆ ಮತ್ತು ಅಭಿವ್ಯಕ್ತಿಗೆ ಅನುಕೂಲವಾಗುತ್ತದೆ. ಹಾಗೂ ಮಗು ತನ್ನ ಸಮುದಾಯದ ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಮತ್ತು ಜೀವನ ವಿಧಾನಗಳನ್ನು ಸುಲಭವಾಗಿ ತಿಳಿಯಲು ಸಾಧ್ಯವಾಗುತ್ತದೆ.

ಇದು ಸಾಧ್ಯವಾದರೆ ಮಗು ಸ್ವಂತಿಕೆ, ಸೃಜನಶೀಲತೆ ಪಡೆದುಕೊಂಡು ಸ್ವತಂತ್ರ ಅಭಿವ್ಯಕ್ತಿ ಸಾಮರ್ಥ್ಯ ಪಡೆಯುತ್ತದೆ. ಮತ್ತು ಮಗು ತನ್ನ ಮಾತೃಭಾಷೆಯ ಜೊತೆಗೆ ಭಾವನಾತ್ಮಕ ಸಂಬಂಧ ಹೊಂದುತ್ತದೆ. ಮಾತೃಭಾಷೆಯಲ್ಲದ ಬೇರೊಂದು ಭಾಷೆಯನ್ನು ಮಗುವಿಗೆ ಪ್ರಥಮ ಭಾಷೆಯಾಗಿ ಕಲಿಸುವುದರಿಂದ ಈ ಆಶಯ ಈಡೇರುವುದಿಲ್ಲ. ಆದುದರಿಂದ ಮಗುವಿನ ಪ್ರಥಮ ಭಾಷೆಯ ಕಲಿಕೆಗೆ ಮಾತೃಭಾಷೆಯೇ ಪ್ರಥಮ ಆದ್ಯತೆ ಆಗಬೇಕು. ಇದು ಸಾಧ್ಯವಾಗದಿದ್ದಾಗ ಮಾತ್ರ ಎರಡನೇ ಮಾತೃಭಾಷೆಯೆಂದು ಪರಿಗಣಿಸಲ್ಪಟ್ಟಿರುವ ಪ್ರಾದೇಶಿಕ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಬೇಕು ಎಂಬುದು ಶಿಕ್ಷಣ ತಜ್ಞರು, ಭಾಷಾವಿಜ್ಞಾನಿಗಳ ಅಭಿಪ್ರಾಯವಾಗಿದೆ. ಇದನ್ನು ನ್ಯಾಯಾಲಯಗಳೂ ಮಾನ್ಯ ಮಾಡಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯಸರ್ಕಾರವೂ ೧೯೯೪ರ ತನ್ನ ಭಾಷಾನೀತಿಯಲ್ಲಿ "ಸಾಮಾನ್ಯವಾಗಿ ಮಗುವಿನ ಮಾತೃಭಾಷೆಯೇ ಮಾಧ್ಯಮವಾಗಬೇಕೆಂದು ನಿರೀಕ್ಷೆಯಿರುವ ೧ ರಿಂದ ೪ನೇ ತರಗತಿಯವರಗೆ ಈಗಾಗಲೇ ಅನುಬಂಧ-೧ ರಲ್ಲಿ ತಿಳಿಸಿರುವ ಭಾಷೆಗಳ ಪೈಕಿ ಒಂದು ಮಾತೃಭಾಷೆ ಇಲ್ಲವೆ ಕನ್ನಡ ಮಾತ್ರ ಕಡ್ಡಾಯ ಭಾಷೆಯಾಗಿರುತ್ತದೆ" ಎಂದು ಹೇಳಿದೆ. ಇದಕ್ಕೆ ವೈಜ್ಞಾನಿಕ ಹಿನ್ನೆಲೆ ಇರುವುದು ಮೇಲೆ ಚರ್ಚಿಸಿರುವ ಅಂಶಗಳಿಂದ ಸ್ಪಷ್ಟವಾಗುತ್ತದೆ.

ಆದರೆ ಸರ್ಕಾರಗಳು ಹೀಗೆ ವೈಜ್ಞಾನಿಕ ಕಾರಣ ನೀಡಿ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯಬೇಕು ಎಂದು ಭಾಷಾನೀತಿಯನ್ನು ಜಾರಿಗೊಳಿಸಿದಾಗ ಆ ಸರ್ಕಾರದ ಆಡಳಿತದ ವ್ಯಾಪ್ತಿಯಲ್ಲಿರುವ ಎಲ್ಲಾ ಶಾಲೆಗಳಲ್ಲಿ ಕಲಿಯುವ ಮಕ್ಕಳು ಆ ಪ್ರಕಾರವಾಗಿ ಭಾಷೆಯನ್ನು ಆಯ್ಕೆಮಾಡಿಕೊಂಡು ಕಲಿಯಬೇಕಾಗುತ್ತದೆ. ಇದಕ್ಕೆ ಸರ್ಕಾರಗಳು ಪೂರಕ ವ್ಯವಸ್ಥೆ ಮಾಡಬೇಕು. ಅಂದರೆ ಪ್ರತಿಯೊಂದು ಶಾಲೆಯಲ್ಲೂ ಮಕ್ಕಳಿಗೆ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಅನುಕೂಲವಾಗುವಂತೆ ಭಾಷಾಶಿಕ್ಷಕರನ್ನು

ನೇಮಕ ಮಾಡಬೇಕು. ಹಾಗೆಯೇ ಮಕ್ಕಳ ಮಾತೃಭಾಷಾಕಲಿಕೆಗೆ ಪೂರಕವಾದ ಅಗತ್ಯ ಪಠ್ಯಪುಸ್ತಕ ಮತ್ತು ಇತರ ಪರಿಕರಗಳನ್ನು ಸೂಕ್ತಕಾಲಕ್ಕೆ ವಿದ್ಯಾರ್ಥಿಗಳ ಕಲಿಕೆಗೆ ಅನುಕೂಲವಾಗುವಂತೆ ಪೂರೈಸಬೇಕು. ಇಂತಹ ಕೆಲಸಗಳನ್ನು ನಿರ್ವಹಿಸದೆ ವೈಜ್ಞಾನಿಕ ಕಾರಣಗಳನ್ನು ನೀಡಿ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯನ್ನು ಮಕ್ಕಳು ಪ್ರಥಮ ಭಾಷೆಯಾಗಿ ಕಲಿಯುವಂತೆ ಭಾಷಾನೀತಿಗಳನ್ನು ಜಾರಿಗೊಳಿಸುವುದು ಅವೈಜ್ಞಾನಿಕ. ಏಕೆಂದರೆ ಸರ್ಕಾರದ ಭಾಷಾನೀತಿಯನ್ನು ಪಾಲನೆ ಮಾಡಬೇಕಾದರೆ ಮೇಲೆ ಹೇಳಿದಂತಹ ಮೂಲಭೂತ ಪರಿಕರಗಳ ಅಗತ್ಯವಿದೆ. ಇವುಗಳನ್ನು ಒದಗಿಸದೆ ಶಿಕ್ಷಣ ಸಂಸ್ಥೆಗಳು ಸರ್ಕಾರದ ಭಾಷಾನೀತಿಯನ್ನು ಅನುಷ್ಠಾನಗೊಳಿಸಲು ಸಾಧ್ಯವಿಲ್ಲ. ಹೀಗಾಗಿ ಕರ್ನಾಟಕದಲ್ಲಿರುವ ಎಲ್ಲಾ ಶಿಕ್ಷಣ ಸಂಸ್ಥೆಗಳು ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಜಾರಿಗೆ ತಂದಿರುವ ಭಾಷಾನೀತಿಯ ಆಶಯಕ್ಕೆ ಅನುಗುಣವಾಗಿ ಭಾಷೆಗಳನ್ನು ಕಲಿಸುತ್ತಿಲ್ಲ.

ಇದರಿಂದಾಗಿ ಜನಹಿತದಿಂದ ಸರ್ಕಾರಗಳು ಜಾರಿಗೆ ತಂದಿರುವ ಭಾಷಾನೀತಿಗಳು ಸಮರ್ಪಕವಾಗಿ ಅನುಷ್ಠಾನಗೊಳ್ಳದೆ ಹಾಗೆ ಉಳಿದುಕೊಂಡಿವೆ. ಇಂತಹ ಸಂದರ್ಭದಲ್ಲಿ ಸರ್ಕಾರಗಳು ರಾಜ್ಯದಲ್ಲಿ ಭಾಷಿಕ ಸಮುದಾಯಗಳ ಹಿತಕ್ಕಾಗಿ ಜಾರಿಗೆ ತಂದಿರುವ ಭಾಷಾನೀತಿಯನ್ನು ಶಿಕ್ಷಣ ಸಂಸ್ಥೆಗಳು ಸಂಪೂರ್ಣವಾಗಿ ಅನುಷ್ಠಾನಕ್ಕೆ ತಂದಿವೆಯೇ? ಅವುಗಳ ಲಾಭ ಭಾಷಾಸಮುದಾಯಗಳಿಗೆ ಆಗುತ್ತಿದೆಯೇ? ಆಗದೇ ಇದ್ದರೆ ಅದಕ್ಕೆ ಕಾರಣಗಳು ಏನು? ಸರ್ಕಾರದ ಭಾಷಾನೀತಿಯನ್ನು ಅನುಷ್ಠಾನಕ್ಕೆ ತರಲು ಶಿಕ್ಷಣ ಸಂಸ್ಥೆಗಳಿಗೆ ಎದುರಾಗಿರುವ ಸಮಸ್ಯೆಗಳು ಯಾವುವು? ಅವುಗಳನ್ನು ಪರಿಹರಿಸುವ ಬಗೆ. ಹೇಗೆ? ಎಂಬಿತ್ಯಾದಿಗಳನ್ನು ಪ್ರಶ್ನೆಗಳನ್ನು ಕೇಳಿಕೊಂಡು, ಸರ್ಕಾರದ ಭಾಷಾನೀತಿಯನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸಿದ ಸಂದರ್ಭದಲ್ಲಿ ಎದುರಾಗಿರುವ ಸಮಸ್ಯೆಗಳನ್ನು ಪರಿಹರಿಸುವ ಕೆಲಸವನ್ನು ಸರ್ಕಾರಗಳು ಮಾಡಬೇಕು. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಇವುಗಳ ಬಗೆಗೆ ನಿರ್ಲಕ್ಷ್ಯ ವಹಿಸಿವೆ. ಇದರಿಂದಾಗಿ ಕರ್ನಾಟಕದಲ್ಲಿ ಕನ್ನಡ ಭಾಷಿಕ ಸಮುದಾಯ ಕರ್ನಾಟಕ ಸರ್ಕಾರ ಜನಹಿತದಿಂದ ಜಾರಿಗೆ ತಂದಿರುವ ಭಾಷಾನೀತಿಗಳು ಸಂಪೂರ್ಣವಾಗಿ ಅನುಷ್ಠಾನವಾಗಿಲ್ಲ. ಇದಕ್ಕೆ ಮುಖ್ಯಕಾರಣ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳಿಗೆ ಕನ್ನಡದ ಬಗೆಗಿನ ನಿರ್ಲಕ್ಷ್ಯದ ಧೋರಣೆ. ಕರ್ನಾಟಕ ಸರ್ಕಾರ ಈ ಕೂಡಲೆ ಎಚ್ಚೆತ್ತು ಮಗುವಿನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುವಂತೆ ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳು ಮತ್ತು ನೌಕರರಿಗೆ ಆದೇಶೀಸಬೇಕೆಂದು ಒತ್ತಡ ಉಂಟುಮಾಡಿದ್ದಾರೆ. ಇದರಿಂದಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಶಿಕ್ಷಣ ಇಲಾಖೆಯ ಅಧಿಕಾರಿಗಳು ಮತ್ತು ನೌಕರರಿಗೆ ತಾನು ಜಾರಿಗೆ ತಂದಿರುವ ಭಾಷಾನೀತಿಯನ್ನು ಯಥಾವತ್ತಾಗಿ ಪಾಲನೆ ಮಾಡಬೇಕು. ಸರ್ಕಾರದ ಭಾಷಾನೀತಿಗಳನ್ನು ಉಲ್ಲಂಘಿಸುವವರ ವಿರುದ್ಧ ಶಿಸ್ತುಕ್ರಮ ಜರುಗಿಸಲಾಗುವುದು ಎಂದು ಸುತ್ತೋಲೆ ಹೊರಡಿಸಿವೆ. ಇದರಿಂದಾಗಿ ವಿದ್ಯಾರ್ಥಿಗಳು, ಶಿಕ್ಷಕರು, ಶಾಲಾ ಮುಖ್ಯಸ್ಥರು, ಆಡಳಿತ ಮಂಡಳಿಗಳು ಒತ್ತಡಕ್ಕೆ ಒಳಗಾಗಿವೆ.

ಏಕೆಂದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ತಾವು ಭಾಷಾನೀತಿಯನ್ನು ಜಾರಿಗೆ ತಂದ ನಂತರ ತನ್ನ ಆರ್ಥಿಕ ಕೊರತೆಯ ನೆಪ ನೀಡಿ ಭಾಷಾನೀತಿಗಳ ಅನುಷ್ಠಾನಕ್ಕೆ ಅಗತ್ಯವಾದ ಹಣಕಾಸಿನ ನೆರವು, ಸಮರ್ಪಕವಾಗಿ ಶಿಕ್ಷಕರ ನೇಮಕ, ಸೂಕ್ತಕಾಲಕ್ಕೆ ಪಠ್ಯಪುಸ್ತಕಗಳ ರಚನೆ ಮತ್ತು ವಿತರಣೆ, ಅವುಗಳಿಗೆ ಬೇಕಾದ ಅನುಮತಿ ಹಾಗೂ ಇತರೆ ಅಗತ್ಯ ಪರಿಕರಗಳನ್ನು ಸೂಕ್ತ ಸಂದರ್ಭದಲ್ಲಿ ಒದಗಿಸಿಲ್ಲ. ಇದರಿಂದಾಗಿ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಇಕ್ಕಟ್ಟಿನ ಪರಿಸ್ಥಿತಿಗೆ ಸಿಲುಕಿದ್ದಾರೆ. ಏಕೆಂದರೆ ಸರ್ಕಾರ ಭಾಷಾಕಲಿಕೆಗೆ ಸಂಬಂಧಿಸಿದಂತೆ ಈಗಾಗಲೇ ಉಲ್ಲೇಖಿಸಿರುವ ಹಾಗೆ ಭಾಷಾನೀತಿಯನ್ನು ಜಾರಿಗೆ ತಂದಿದೆ. ಇದಕ್ಕನುಗುಣವಾಗಿ ವಿದ್ಯಾರ್ಥಿಗಳು ಶಾಲೆಗಳಲ್ಲಿ ಭಾಷೆಗಳನ್ನು ಆಯ್ಕೆಕೊಂಡು ಕಲಿಯಬೇಕಿದೆ. ಶಿಕ್ಷಣ ಸಂಸ್ಥೆಗಳು ಕಲಿಸಬೇಕಿದೆ. ಇಲ್ಲಿ ಸರ್ಕಾರದ ನಿಯಮಾವಳಿಯ ಪ್ರಕಾರ ಕೆಲವು ಹಂತಗಳಲ್ಲಿ ಕೆಲವು ಭಾಷೆಗಳ ಕಲಿಕೆ ಮತ್ತು ಪರೀಕ್ಷೆ ಕಡ್ಡಾಯವಾಗಿದ್ದರೆ ಮತ್ತೆ ಕೆಲವು ಹಂತಗಳಲ್ಲಿ ಕೆಲವು ಭಾಷೆಗಳ ಕಲಿಕೆ ಮತ್ತು ಪರೀಕ್ಷೆಗೆ ವಿನಾಯಿತಿ ಇದೆ. ಇದು ವಿದ್ಯಾರ್ಥಿಗಳ ಕಲಿಕೆಯ ಹಂತ ಮತ್ತು ಗುಣಮಟ್ಟವನ್ನು ಆಧರಿಸಿ ನಿರ್ಧಾರಿತವಾಗಿದೆ. ಯಾವ ಹಂತದಲ್ಲಿ ಭಾಷಾಕಲಿಕೆಯನ್ನು ಕಡ್ಡಾಯಗೊಳಿಸಿ, ಪರೀಕ್ಷಾ ವಿಷಯವನ್ನಾಗಿಸಲಾಗಿದೆಯೋ ಆ ಹಂತದಲ್ಲಿ ವಿದ್ಯಾರ್ಥಿಗಳು ಉತ್ತೀರ್ಣವಾಗುವುದು ಕಡ್ಡಾಯ.

ಇಲ್ಲದಿದ್ದರೆ ವಿದ್ಯಾರ್ಥಿಗಳು ಮುಂದಿನ ಹಂತದ ಶಿಕ್ಷಣಕ್ಕೆ ಪ್ರವೇಶ ಪಡೆಯಲು ಅನರ್ಹರಾಗುತ್ತಾರೆ. ಇಂತಹ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಸಮರ್ಪಕವಾಗಿ ಭಾಷೆಗಳನ್ನು ಕಲಿಸಲು ಸರ್ಕಾರ ಶಿಕ್ಷಕರನ್ನು ನೇಮಕ ಮಾಡಬೇಕು. ಇದಕ್ಕಾಗಿ ಶಾಲೆಗಳಿಗೆ ಭಾಷಾಶಿಕ್ಷಕರ ಹುದ್ದೆಗಳನ್ನು ಮಂಜೂರು ಮಾಡಬೇಕು. ಆದರೆ ಕರ್ನಾಟಕದಲ್ಲಿರುವ ಎಲ್ಲಾ ಶಾಲೆಗಳಲ್ಲಿ ವಿದ್ಯಾರ್ಥಿಗಳು ಮಾತೃಭಾಷೆಗಳನ್ನು ಕಲಿಯುವುದಕ್ಕೆ ಅನುಕೂಲವಾಗುವಂತೆ ಅವರ ಮಾತೃಭಾಷೆಯನ್ನು ಬೋಧಿಸುವ ಶಿಕ್ಷಕರ ಹುದ್ದೆಗಳು ಮಂಜೂರು ಆಗಿಲ್ಲ. ಏಕೆಂದರೆ ಸರ್ಕಾರದ ಭಾಷಾನೀತಿಯಲ್ಲಿ ವಿದ್ಯಾರ್ಥಿಗಳ ಕಲಿಕೆಯ ಮಾಧ್ಯಮವನ್ನು ಆಧರಿಸಿ ಅವರಿಗೆ ಪ್ರಥಮ ಭಾಷೆಯನ್ನು ಕಲಿಸಬೇಕು. ಇಲ್ಲವೆ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಸಬೇಕು ಎಂದು ಹೇಳಿದೆ. ಅದಕ್ಕನುಗುಣವಾಗಿ ಪ್ರಥಮ ಭಾಷಾಕಲಿಕೆಯ ಶಿಕ್ಷಕರ ಹುದ್ದೆಗಳನ್ನು ಮಂಜೂರು ಮಾಡಿದೆ. ಹೀಗೆ ಮಂಜೂರಾಗಿರುವ ಭಾಷಾಶಿಕ್ಷಕರ ಹುದ್ದೆಗಳು ಕೆಲವು ಕಡೆ ಭರ್ತಿಯಾಗದೆ ಖಾಲಿ ಉಳಿದಿವೆ. ಈ ಹುದ್ದೆಗಳನ್ನು ತುಂಬಲು ಸರ್ಕಾರಗಳು ತನ್ನ ಆರ್ಥಿಕತೆಯ ನೆಪ ನೀಡಿ ಹಿಂದೆ ಸರಿದಿವೆ. ಅನಂತರದಲ್ಲಿ ಸರ್ಕಾರಗಳು ಭಾಷಾಶಿಕ್ಷಕರ ಹುದ್ದೆಗಳಿಗೆ ಶಿಕ್ಷಕರನ್ನು ನೇಮಕ ಮಾಡುವ ಪ್ರಯತ್ನ ಮಾಡಿದ್ದರೂ ಅದಕ್ಕೆ ಸಾಕಷ್ಟು ಸಮಯ ತೆಗೆದುಕೊಂಡಿವೆ.

ಇನ್ನು ಶಾಲೆಗಳಲ್ಲಿ ಭಾಷಾಶಿಕ್ಷಕರು ಕರ್ತವ್ಯ ನಿರ್ವಹಿಸುತ್ತಿರುವ ಕಡೆಗಳಲ್ಲಿ ನಿವೃತ್ತಿಯಾದರೆ ಅಥವಾ ವರ್ಗಾವಣೆಯಾಗಿ ಭಾಷಾಶಿಕ್ಷಕರ ಹುದ್ದೆ ಖಾಲಿಯಾದರೆ ಆ ಹುದ್ದೆಗಳನ್ನು ತಕ್ಷಣದಿಂದಲೇ ಭರ್ತಿಮಾಡುವ ಪ್ರಕ್ರಿಯೆ ಚಾಲ್ತಿಯಲ್ಲಿಲ್ಲ. ಖಾಲಿಯಾದ ಹುದ್ದೆಗಳನ್ನು ತುಂಬಲು ಸರ್ಕಾರಗಳು ಹಲವು ವರ್ಷಗಳನ್ನು ತೆಗೆದುಕೊಂಡಿವೆ. ಶಿಕ್ಷಕರ ನೇಮಕಾತಿ ಪ್ರಕ್ರಿಯೆ ಹೀಗಿರುವಾಗ ವಿವಿಧ

ಉದ್ದೇಶಗಳನ್ನು ಇರಿಸಿಕೊಂಡು ವಿದ್ಯಾರ್ಥಿಗಳು ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕು. ಪರೀಕ್ಷೆಯಲ್ಲಿ ಉತ್ತೀರ್ಣವಾಗಬೇಕು ಎಂದರೆ ಉತ್ತೀರ್ಣವಾಗುವುದು ಹೇಗೆ? ಎಂಬ ಪ್ರಶ್ನೆಗಳು ಸಹಜವಾಗಿ ಉದ್ಭವಿಸುತ್ತವೆ. ಏಕೆಂದರೆ ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡುವ ಸಂದರ್ಭದಲ್ಲಿ ಮೌಲ್ಯಮಾಪಕರು ಶಾಲೆ/ಕಾಲೇಜುಗಳಲ್ಲಿ ಭಾಷಾಶಿಕ್ಷಕರು ಇದ್ದರೆ? ಅಥವಾ ಇರಲಿಲ್ಲವೆ? ಮಕ್ಕಳಿಗೆ ಶಾಲೆ/ಕಾಲೇಜುಗಳಲ್ಲಿ ಭಾಷಾಶಿಕ್ಷಕರು ಸಮರ್ಥವಾಗಿ ಭಾಷೆಗಳನ್ನು ಕಲಿಸಿದ್ದಾರೆಯೇ? ಅಥವಾ ಇಲ್ಲವೆ? ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಶಾಲೆ/ಕಾಲೇಜುಗಳಲ್ಲಿ ಸೂಕ್ತ ವಾತಾವರಣ ಇತ್ತೆ? ಅಥವಾ ಇಲ್ಲವೆ? ಎಂಬಿತ್ಯಾದಿ ಪ್ರಶ್ನೆಗಳು ಮೌಲ್ಯಮಾಪನಕ್ಕೆ ಮಾನದಂಡವಾಗಿರುವ ಅಂಶಗಳಾಗಿಲ್ಲ.

ಇಡೀ ರಾಜ್ಯದ ಎಲ್ಲಾ ಶಾಲೆ/ಕಾಲೇಜುಗಳಿಗೆ ಸಮಾನವಾಗಿ ಅನ್ವಯವಾಗುವ ಹಾಗೆ ರಾಜ್ಯದಲ್ಲಿ ಮೌಲ್ಯಮಾಪನ ಪ್ರಕ್ರಿಯೆ ನಡೆಯುತ್ತಿದೆ. ಇಲ್ಲಿ ಭಾಷಾಶಿಕ್ಷಕರು ಇದ್ದ ಶಾಲೆ/ಕಾಲೇಜುಗಳಲ್ಲಿನ ವಿದ್ಯಾರ್ಥಿಗಳು ಮತ್ತು ಇಲ್ಲದೆ ಇದ್ದ ಶಾಲೆ/ಕಾಲೇಜುಗಳಲ್ಲಿನ ವಿದ್ಯಾರ್ಥಿಗಳು ಒಂದೆ. ಇವರ ನಡುವೆ ಯಾವ ವ್ಯತ್ಯಾಸವೂ ಇಲ್ಲ. ಹೀಗಿರುವಾಗ ಶಾಲೆ/ಕಾಲೇಜುಗಳಲ್ಲಿ ಶಿಕ್ಷಕರು ಇಲ್ಲದ ವಿದ್ಯಾಥಿಗಳು, ಶಾಲೆ/ಕಾಲೇಜುಗಳಲ್ಲಿ ಶಿಕ್ಷಕರು ಇರುವ ವಿದ್ಯಾರ್ಥಿಗಳಿಗೆ ಸಮನಾಗಿ ಭಾಷೆಗಳನ್ನು ಕಲಿಯುವುದು ಹೇಗೆ? ಪರೀಕ್ಷೆಯಲ್ಲಿ ಉತ್ತೀರ್ಣವಾಗುವುದು ಹೇಗೆ? ಅದರಿಂದ ವಿದ್ಯಾರ್ಥಿಗಳು ಅನುಭವಿಸುತ್ತಿರುವ ಸಮಸ್ಯೆಗಳೇನು? ಎಂಬುದರ ಬಗೆಗೆ ಕರ್ನಾಟಕದ ಸಂದರ್ಭದಲ್ಲಿ ವಿಸ್ತೃತವಾದ ಚರ್ಚೆಗಳು ಇದುವರೆಗೆ ಆಗಿಲ್ಲ. ಆದರೂ ಶಾಲೆ/ಕಾಲೇಜುಗಳಲ್ಲಿ ಕರ್ನಾಟಕ ಸರ್ಕಾರದ ಭಾಷಾನೀತಿಯ ಪ್ರಕಾರ ಭಾಷಾಆಯ್ಕೆ ಕಡ್ಡಾಯವಾಗಿರುವುದರಿಂದ ವಿದ್ಯಾರ್ಥಿಗಳು ಭಾಷೆಗಳನ್ನು ಆಯ್ಕೆಮಾಡಿಕೊಂಡು ಕಲಿಯುತ್ತಿದ್ದಾರೆ. ಆದರೆ ರಾಜ್ಯದಲ್ಲಿರುವ ಎಲ್ಲಾ ವಿದ್ಯಾರ್ಥಿಗಳು ಇದುವರೆಗೆ ಚರ್ಚಿಸಿದ ಕಾರಣಗಳಿಂದಾಗಿ ಭಾಷೆಗಳನ್ನು ಕಲಿಯಲು ಸಾಧ್ಯವಾಗದೆ ಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ.

ಹೀಗಿದ್ದರೂ ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಭಾಷಾನೀತಿಯಿಂದ ಉದ್ಭವಿಸಿರುವ ಇಂತಹ ಸಮಸ್ಯೆಗಳ ಬಗೆಗೆ ಭಾಷೆಯ ಬಗೆಗೆ ಹೋರಾಟ ಮಾಡಿರುವ ಹೋರಾಟಗಾರರಾಗಲಿ, ಸಮಸ್ಯೆಗಳನ್ನು ಎದುರಿಸಿರುವ ಅಧಿಕಾರಗಳಾಗಲಿ, ಸಂಬಂಧಪಟ್ಟ ಜನಪ್ರತಿನಿಧಿಗಳಾಗಲಿ, ಪೋಷಕರುಗಳಾಗಲಿ ಇದುವರೆಗೆ ಸೂಕ್ಷ್ಮವಾಗಿ ಗಮನಿಸಿಲ್ಲ. ಆದರೆ ಕರ್ನಾಟಕ ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಕನ್ನಡದ ಮಕ್ಕಳಿಗೆ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಸುತ್ತಿಲ್ಲ, ಸರ್ಕಾರ ಜನಪರವಾದ ಭಾಷಾನೀತಿಗಳನ್ನು ಜಾರಿಗೆ ತಂದಿದ್ದರು ಶಿಕ್ಷಣ ಇಲಾಖೆಯ ಅಧಿಕಾರಿಗಳು ಖಾಸಗಿ ಶಿಕ್ಷಣ ಸಂಸ್ಥೆಗಳ ಜೊತೆ ಒಪ್ಪಂದ ಮಾಡಿಕೊಂಡು ಸರ್ಕಾರದ ಭಾಷಾನೀತಿಯನ್ನು ಪಾಲಿಸದೆ ಕರ್ತವ್ಯ ಲೋಪ ಎಸಗುತ್ತಿದ್ದಾರೆ. ಇಂತಹ ಅಧಿಕಾರಿಗಳ ಮೇಲೆ ಸರ್ಕಾರ ಶಿಸ್ತುಕ್ರಮ ಜರುಗಿಸಿಲ್ಲ. ಇದೇ ಸರ್ಕಾರದ ಭಾಷಾನೀತಿಯ ಪ್ರಕಾರ ಶಿಕ್ಷಣದಲ್ಲಿ ಭಾಷೆಗಳು ಬಳಕೆಯಾಗದಿರಲು ಕಾರಣ ಎಂದು ಆರೋಪಿಸಿ ಕನ್ನಡಪರ ಚಿಂತಕರು, ಹೋರಾಟಗಾರರು ಪ್ರತಿಭಟನೆಗಳನ್ನು ಮಾಡಿದ್ದಾರೆ.

ಇದು ಶಿಕ್ಷಣ ಇಲಾಖೆಯ ಕೆಲವು ಅಧಿಕಾರಿಗಳು, ಶಿಕ್ಷಕರು ವರ್ತಿಸಿರುವ ರೀತಿಯನ್ನು ಗಮನಿಸಿದಾಗ ಸತ್ಯದಿಂದ ಕೂಡಿದೆ ಅನಿಸುತ್ತದೆ. ಆದರೆ ಇದು ಎಲ್ಲಾ ಸಂದರ್ಭಗಳಲ್ಲಿಯೂ ಒಪ್ಪುವಂತಹ ವಿಚಾರವಲ್ಲ. ಏಕೆಂದರೆ ಸರ್ಕಾರದ ಭಾಷಾನೀತಿಯನ್ನು ಯಥಾವತ್ತಾಗಿ ಜಾರಿಗೆ ತರಲು ಇದುವರೆಗೆ ಚರ್ಚಿಸಿದ ಹಾಗೆ ಕೆಲವು ತೊಡಕುಗಳು ಇವೆ. ಇವುಗಳನ್ನು ಪರಿಹರಿಸುವ ಕಾರ್ಯವನ್ನು ಸರ್ಕಾರಗಳು ಸಮರ್ಪಕವಾಗಿ ಮಾಡಿಲ್ಲ. ಹೀಗಾಗಿ ಕರ್ನಾಟಕ ಸರ್ಕಾರ ಭಾಷೆಗಳನ್ನು ಕಲಿಸುವ ವಿಚಾರಕ್ಕೆ ಸಂಬಂಧಿಸಿದ ಹಾಗೆ ಭಾಷಾನೀತಿಯನ್ನು ಜಾರಿಗೆ ತಂದು ಅದನ್ನು ಸಂಬಂಧಪಟ್ಟ ಅಧಿಕಾರಿಗಳು ಮತ್ತು ನೌಕರರಿಗೆ ಯಥಾವತ್ತಾಗಿ ಅನುಷ್ಠಾನಕ್ಕೆ ತರುವಂತೆ ಸೂಚಿಸಿ ಒತ್ತಡವನ್ನು ಉಂಟುಮಾಡಿರುವಾಗ ಅಧಿಕಾರಿಗಳು, ನೌಕರರು ಸಮಸ್ಯೆಗೆ ಒಳಗಾಗಿದ್ದಾರೆ.

ಸರ್ಕಾರ ಭಾಷಾಕಲಿಕೆ, ಕಲಿಸುವಿಕೆಗೆ ಸಂಬಂಧಿಸಿದ ಹಾಗೆ ಭಾಷಾನೀತಿಗಳನ್ನು ಜಾರಿಗೆ ತಂದು ಅವುಗಳ ಅನುಷ್ಠಾನಕ್ಕೆ ಪ್ರಯತ್ನಿಸುತ್ತಿರುವಾಗ ಉದ್ಭವಿಸಿರುವ ಇಂತಹ ಸಮಸ್ಯೆಗಳ ಸಂದರ್ಭದಲ್ಲಿಯೇ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕರ್ನಾಟಕವನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ವಿದೇಶಿ ಬಂಡವಾಳ ಹೂಡಿಕೆಗೆ ಅವಕಾಶ ಮಾಡಿಕೊಟ್ಟು ಖಾಸಗಿ ವಲಯವನ್ನು ಪ್ರಬಲಗೊಳಿಸಿವೆ. ಅದರಲ್ಲೂ ೧೯೯೦ರ ನಂತರ ಜಾಗತೀಕರಣದ ಪರಿಣಾಮವಾಗಿ ಭಾರತದಲ್ಲಿ ಪ್ರಬಲವಾಗಿ ಬೆಳವಣಿಗೆಯಾದ ಸಾಫ್ಟ್‌ವೇರ್ ಇಂಜಿನಿಯರಿಂಗ್ ಕ್ಷೇತ್ರ ಮತ್ತು ಅಲ್ಲಿನ ವೇಗದ ಬದಲಾವಣೆಗಳು, ಇಲ್ಲಿ ಸಾಮಾನ್ಯ ಹುದ್ದೆ ನಿರ್ವಹಿಸಲು ಸೃಷ್ಟಿಯಾದ ಇಂಗ್ಲಿಶ್ ಭಾಷೆಯ ಅನಿವಾರ್ಯತೆ, ಈ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುವವರಿಗೆ ದೊರಕಿದ ಆಕರ್ಷಕ ಸಂಬಳ ಮತ್ತು ಅತ್ಯಾಧುನಿಕ ಸೌಲಭ್ಯಗಳು ಮಾತೃಭಾಷಾಮಾಧ್ಯಮದಲ್ಲಿ ಕಲಿಯುವವರ ಆಸಕ್ತಿಯನ್ನು ಕುಂಠಿತಗೊಳಿಸಿದೆ. ಇದೇ ಪರಿಸ್ಥಿತಿ ಖಾಸಗಿ ವಲಯದಲ್ಲಿನ ಇತರ ಕೈಗಾರಿಕೆ ಮತ್ತು ಬಹುರಾಷ್ಟ್ರೀಯ ಕಂಪನಿಗಳಲ್ಲೂ ಇದೆ. ಖಾಸಗಿ ವಲಯದಲ್ಲಿ ಉನ್ನತ ಹುದ್ದೆಗೆ ಬಡ್ತಿ ಪಡೆಯಲು ಮಾತ್ರವಲ್ಲ, ಸಾಮಾನ್ಯ ಕೆಳಸ್ತರದ ಹುದ್ದೆಗಳನ್ನು ಪಡೆಯಲು ಇಂಗ್ಲಿಶ್ ಭಾಷಾಜ್ಞಾನ ಅನಿವಾರ್ಯ ಎಂಬಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಇಲ್ಲಿ ಇಂಗ್ಲಿಶ್‌ನ ಜ್ಞಾನವಿಲ್ಲದ ಪ್ರತಿಭಾವಂತರು ಪ್ರತಿಭಾವಂತರಲ್ಲದ ಇಂಗ್ಲಿಶ್ ಬಲ್ಲವರಿಗಿಂತ ಕೆಳಗೆ ತಳ್ಳಲ್ಪಟ್ಟಿದ್ದಾರೆ. ಜೊತೆಗೆ ಕರ್ನಾಟಕ ಏಕೀಕರಣ ಆದಾಗಿನಿಂದಲೂ ರಾಜ್ಯ ಮತ್ತು ಕೇಂದ್ರ ಸರ್ಕಾರದ ಆಡಳಿತ ಮತ್ತು ಇತರ ಉನ್ನತ ಹುದ್ದೆಗಳ ನೇಮಕಾತಿಗೆ ಅಳವಡಿಸಿದ್ದ ಇಂಗ್ಲಿಶ್ ಭಾಷಾಜ್ಞಾನದ ಅನಿವಾರ್ಯತೆ ಮುಂದುವರಿದಿದೆ. ಇದರಲ್ಲಿ ಯಾವುದೇ ಬದಲಾವಣೆಗಳನ್ನು ಮಾಡಿಲ್ಲ.

ಇವುಗಳ ಪೂರೈಕೆಗಾಗಿ ಕರ್ನಾಟಕದ ಶಿಕ್ಷಣದಲ್ಲಿ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಕಲಿಸಲಾಗುತ್ತಿದೆ. ಆದರೆ ಇಂದಿನ ಬೇಡಿಕೆಗೆ ಅನುಗುಣವಾಗಿ ಇಂಗ್ಲಿಶ್‌ನ್ನು ಕಲಿಸುವಲ್ಲಿ ನಮ್ಮ ಶಿಕ್ಷಣ ಕ್ರಮ ಮತ್ತು ಅದನ್ನು ಅನುಸರಿಸುತ್ತಿರುವ ಶಾಲೆ-ಕಾಲೇಜುಗಳು ವಿಫಲವಾಗಿವೆ. ಇದು ಕರ್ನಾಟಕದ ಶ್ರೀಮಂತ ಮತ್ತು ಮಧ್ಯಮ ವರ್ಗದವರು ಜನರು ತಮ್ಮ ಮಕ್ಕಳನ್ನು ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಲು ಕಾರಣವಾಗಿದೆ. ಇದರ ಜೊತೆಗೆ ಕರ್ನಾಟಕದಲ್ಲಿ ವಾಸಿಸುತ್ತಿರುವ

ಸ್ಥಳೀಯ ಜನಸಮುದಾಯಗಳ ಮಕ್ಕಳು ಬೇರೆಬೇರೆ ಕಾರಣಗಳಿಂದ ತಮ್ಮ ಮಾತೃಭಾಷಾಮಾಧ್ಯಮದಲ್ಲಿ ಕಲಿಯದೆ ಅನ್ಯಭಾಷಾಮಾಧ್ಯಮದಲ್ಲಿ ಕಲಿಯುತ್ತಿದ್ದಾರೆ. ಅಂದರೆ ಕನ್ನಡದ ಮಕ್ಕಳು ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ, ಭಾಷಾಅಲ್ಪಸಂಖ್ಯಾತರ ಮಕ್ಕಳು ಕನ್ನಡ ಇಲ್ಲವೆ ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯುತ್ತಿದ್ದಾರೆ. ಇಂತಹ ಕಡೆಗಳಲ್ಲಿ ಮಗುವಿನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುತ್ತಿಲ್ಲ. ಮಗುವಿನ ಕಲಿಕೆಯ ಮಾಧ್ಯಮ ಯಾವುದಾಗಿದೆಯೋ ಅದನ್ನೆ ಮಗುವಿಗೆ ಪ್ರಥಮ ಭಾಷೆಯಾಗಿ ಕಲಿಸಲಾಗುತ್ತಿದೆ. ಇದಕ್ಕೆ ಈಗಾಗಲೇ ಉಲ್ಲೇಖಿಸಿರುವ ಸರ್ಕಾರದ ಭಾಷಾನೀತಿಯಲ್ಲಿ ಅವಕಾಶವಿದೆ. ಹೀಗಾಗಿ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುವ ಕನ್ನಡ ಅಥವಾ ಇತರ ಭಾಷಾಅಲ್ಪಸಂಖ್ಯಾತರ ಮಕ್ಕಳ ಪ್ರಥಮ ಭಾಷೆ ಇಂಗ್ಲಿಶ್ ಆಗಿದೆ. ಹಾಗೆಯೇ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಯುವ ಭಾಷಾಅಲ್ಪಸಂಖ್ಯಾತರ ಮಕ್ಕಳ ಪ್ರಥಮ ಭಾಷೆ ಕನ್ನಡವಾಗಿದೆ. ಇದರಿಂದಾಗಿ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವವರ ಸಂಖ್ಯೆ ಕರ್ನಾಟಕದ ಜನಸಮುದಾಯಗಳ ಜನಸಂಖ್ಯೆಯ ಬೆಳವಣಿಗೆಯ ಅನುಪಾತದಲ್ಲಿ ನೋಡಿದರೆ ಕುಸಿತ ಕಂಡಿದೆ. ಇದರ ಸ್ವರೂಪ ಭಾಷೆಯಿಂದ ಭಾಷೆಗೆ ಭಿನ್ನವಾಗಿದೆ. ಇದು ಇದುವರೆಗೆ ಚರ್ಚಿಸಿದ ಅಂಶಗಳಿಂದ ಸ್ಪಷ್ಟವಾಗಿದೆ. ಹೀಗಾಗಿ ಪ್ರಥಮ ಭಾಷಾಕಲಿಕೆ ಮತ್ತು ಸಮಸ್ಯೆಗಳನ್ನು ಈ ಅಧ್ಯಯನದಲ್ಲಿ ಮೂರು ಭಾಗವಾಗಿ ವಿಂಗಡಿಸಿಕೊಳ್ಳಲಾಗಿದೆ. ೧) ಕನ್ನಡಿಗರು: ಪ್ರಥಮ ಭಾಷೆಯಾಗಿ ಮಾತೃಭಾಷಾಕಲಿಕೆ ಮತ್ತು ಸಮಸ್ಯೆಗಳು ೨) ಭಾಷಾಅಲ್ಪಸಂಖ್ಯಾತರು: ಪ್ರಥಮಭಾಷೆಯಾಗಿ ಮಾತೃಭಾಷಾ ಕಲಿಕೆ ಮತ್ತು ಸಮಸ್ಯೆಗಳು ೩) ಅನ್ಯಭಾಷೆ: ಪ್ರಥಮ ಭಾಷೆಯಾಗಿ ಕಲಿಕೆ ಮತ್ತು ಸಮಸ್ಯೆಗಳು.

**ಕನ್ನಡಿಗರು: ಪ್ರಥಮ ಭಾಷೆಯಾಗಿ ಕನ್ನಡ ಕಲಿಕೆ ಮತ್ತು ಸಮಸ್ಯೆಗಳು:** ಕರ್ನಾಟಕ ಏಕೀಕರಣ ಹೋರಾಟ ಈಗಾಗಲೇ ಚರ್ಚಿಸಿರುವ ಹಾಗೆ ಕನ್ನಡದ ಮಗುವಿಗೆ ಕನ್ನಡವನ್ನೇ ಪ್ರಥಮ ಭಾಷೆಯಾಗಿ ಕಲಿಸುವಂತಹ ವ್ಯವಸ್ಥೆ ನಿರ್ಮಾಣ ಆಗಬೇಕು. ಇದರಿಂದ ಮಗುವಿಗೆ ಕಲಿಕೆ ಸುಲಭವಾಗುತ್ತದೆ ಮತ್ತು ಕನ್ನಡದ ಮಕ್ಕಳಿಗೆ ಕನ್ನಡಿಗರ ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ ಮತ್ತು ಜೀವನ ವಿಧಾನ ಇತ್ಯಾದಿಗಳ ಪರಿಚಯ ಮಾಡಿಕೊಡಲು ಅನುಕೂಲವಾಗುತ್ತದೆ. ಇದು ಕನ್ನಡದ ಮಗುವಿಗೆ ಕನ್ನಡ ಭಾಷೆಯ ಜೊತೆಗೆ ಭಾವನಾತ್ಮಕ ಸಂಬಂಧ ಬೆಳೆಸುತ್ತದೆ. ಈ ಪ್ರಕ್ರಿಯೆ ಚಾಲ್ತಿಯಲ್ಲಿದ್ದರೆ ಕನ್ನಡ ಭಾಷೆಯ ಅಸ್ತಿತ್ವಕ್ಕೆ ತೊಂದರೆ ಇಲ್ಲ ಎಂಬ ಕಾರಣಕ್ಕಾಗಿ ಕನ್ನಡದ ಮಗುವಿಗೆ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಸುವ ವ್ಯವಸ್ಥೆ ನಿರ್ಮಾಣವಾಗಬೇಕು ಎಂಬ ಆಶಯದೊಂದಿಗೆ ಆರಂಭಗೊಂಡದ್ದು ಸ್ಪಷ್ಟವಾಗಿದೆ. ಇದು ಮಾತೃಭಾಷೆಗಳನ್ನು ಉಳಿಸಿಕೊಳ್ಳುವ ಮತ್ತು ಮಗುವಿಗೆ ಕಲಿಕೆಯನ್ನು ಸುಲಭಗೊಳಿಸುವ ನಿಟ್ಟಿನಲ್ಲಿ ಹಾಗೂ ಮಗುವಿಗೆ ಮಗುವಿನ ಮಾತೃಭಾಷೆಯ ಜೊತೆಗೆ ಭಾವನಾತ್ಮಕ ಸಂಬಂಧ ಬೆಸೆಯುವ ನಿಟ್ಟಿನಲ್ಲಿ ಉತ್ತಮ ಬೆಳವಣಿಗೆ.

ಆದರೆ ೧೯೮೨ರವರೆಗೆ ಕರ್ನಾಟಕದಲ್ಲಿ ಮಕ್ಕಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯದೆ ಶಿಕ್ಷಣ ಪೂರ್ಣಗೊಳಿಸಲು ಸಾಧ್ಯವಿತ್ತು. ಇದರಿಂದ ಕನ್ನಡದ ಮಕ್ಕಳು ಪ್ರೌಢಶಾಲಾ ಹಂತದಲ್ಲಿ ಹೆಚ್ಚು ಅಂಕಗಳು ಸಿಗುತ್ತವೆ ಎಂಬ ಕಾರಣಕ್ಕಾಗಿ ಕನ್ನಡವನ್ನು ಪ್ರಥಮ

ಭಾಷೆಯಾಗಿ ಆಯ್ಕೆ ಮಾಡಿಕೊಳ್ಳದೆ ಸಂಸ್ಕೃತ ಭಾಷೆಯನ್ನು ಆಯ್ಕೆ ಮಾಡಿಕೊಂಡು ಕಲಿಯುತ್ತಿದ್ದರು. ಇದು ಕನ್ನಡಪರ ಚಿಂತಕರು ಮತ್ತು ಹೋರಾಟಗಾರರನ್ನು ಕೆರಳಿಸಿದೆ. ಹೀಗಾಗಿ ಕನ್ನಡಪರ ಚಿಂತಕರು, ಹೋರಾಟಗಾರರು ಕರ್ನಾಟಕ ಸರ್ಕಾರದ ಈ ಭಾಷಾನೀತಿಗೆ ಪ್ರತಿಭಟನೆ, ಹೋರಾಟಗಳ ಮೂಲಕ ತೀವ್ರತರದ ವಿರೋಧ ವ್ಯಕ್ತಪಡಿಸಿದ್ದಾರೆ. ಇದು ಮತ್ತಷ್ಟು ಹೆಚ್ಚಾದರೆ ರಾಜ್ಯದಲ್ಲಿ ಹಿಂಸೆ, ಅಶಾಂತಿಯ ವಾತಾವರಣ ನಿರ್ಮಾಣವಾಗಬಹುದು ಎಂದರಿತ ಅಂದಿನ ಆರ್.ಗುಂಡೂರಾವ್ ನೇತೃತ್ವದ ಸರ್ಕಾರವು ಈ ಸಮಸ್ಯೆಗೆ ಪರಿಹಾರ ಸೂಚಿಸಲು ೧೯೮೦ ಜುಲೈ ೫ ರಂದು ಡಾ.ವಿ.ಕೃಗೋಕಾಕ್ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚನೆ ಮಾಡಿದೆ. ಈ ಸಮಿತಿಯ ರಚನೆಗೆ ಈಗಾಗಲೇ ಚರ್ಚಿಸಿರುವ ಹಾಗೆ ವಿರೋಧಗಳು ವ್ಯಕ್ತವಾಗಿರುವುದರಿಂದ ಈ ಸಮಿತಿಯು ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರಪರ ಏಕಮುಖಿ ಕಾಳಜಿಯನ್ನು ಹೊಂದಿ ಕರ್ನಾಟಕದಲ್ಲಿ ಕನ್ನಡವನ್ನು ಏಕೈಕ ಪ್ರಥಮ ಭಾಷೆಯಾಗಿ ಕಲಿಸುವಂತೆ ನಿಯಮ ರೂಪಿಸಲು ಸರ್ಕಾರಕ್ಕೆ ಶಿಫಾರಸು ಮಾಡಿದೆ. ಇದರ ಆಧಾರದಲ್ಲಿ ಸ್ವಲ್ಪ ಬದಲಾವಣೆಯೊಂದಿಗೆ ಕರ್ನಾಟಕದ ಸರ್ಕಾರ ೧೯೮೨ರಲ್ಲಿ ಪ್ರೌಢಶಾಲಾ ಹಂತದಲ್ಲಿ ಕನ್ನಡವನ್ನು ಏಕೈಕ ಪ್ರಥಮ ಭಾಷೆಯೆಂದು ಘೋಷಿಸಿ ಆದೇಶ ಹೊರಡಿಸಿದೆ. ಇದು ಕರ್ನಾಟಕದಲ್ಲಿನ ಭಾಷಾಅಲ್ಪಸಂಖ್ಯಾತರ ಭಾಷಾಸ್ವಾತಂತ್ರ್ಯಕ್ಕೆ ಅಡ್ಡಿಯಾದ್ದರಿಂದ ಸರ್ಕಾರದ ಈ ಭಾಷಾನೀತಿಗೆ ವಿರೋಧಗಳು ವ್ಯಕ್ತವಾಗಿವೆ. ಇದರಿಂದ ಸರ್ಕಾರದ ಈ ಭಾಷಾನೀತಿಯ ವಿರುದ್ಧ ನ್ಯಾಯಾಲಯದಲ್ಲಿ ಕೇಸನ್ನು ದಾಖಲಿಸಲಾಗಿದೆ. ನ್ಯಾಯಾಲಯವು ಇದನ್ನು ಪರಿಗಣನೆಗೆ ತೆಗೆದುಕೊಂಡು ಕರ್ನಾಟಕ ಸರ್ಕಾರದ ಭಾಷಾನೀತಿಯು ಸಂವಿಧಾನದ ೧೪, ೨೯ ಮತ್ತು ೩೦ನೇ ಅನುಚ್ಛೇದಗಳನ್ನು ಉಲ್ಲಂಘಿಸುತ್ತದೆ ಎಂದು ಅನೂರ್ಜಿತಗೊಳಿಸಿದೆ. ಇದರಿಂದ ಕರ್ನಾಟಕದ ಸರ್ಕಾರವು ೧೯೯೪ರಲ್ಲಿ ತನ್ನ ಭಾಷಾನೀತಿಯನ್ನು ಬದಲಾವಣೆ ಮಾಡಿ ಹೊಸ ಆದೇಶ ಹೊರಡಿಸಿದೆ.

ಇದರ ಪ್ರಕಾರ ಮಗು ತನ್ನ ಪ್ರಾಥಮಿಕ ಶಿಕ್ಷಣದಲ್ಲಿ ಪ್ರಥಮ ಭಾಷೆಯಾಗಿ ಮಾತೃಭಾಷೆ ಇಲ್ಲವೆ ಕನ್ನಡವನ್ನು ಮಾತ್ರ ಕಡ್ಡಾಯವಾಗಿ ಕಲಿಯಬೇಕು ಎಂದು ಹೇಳಿದೆ. ಆದರೆ ಕರ್ನಾಟಕದಲ್ಲಿ ಈ ಭಾಷಾನೀತಿ ಸಂಪೂರ್ಣವಾಗಿ ಇದುವರೆಗೆ ಅನುಷ್ಠಾನವಾಗಿಲ್ಲ. ಏಕೆಂದರೆ ಈ ಭಾಷಾನೀತಿಯಲ್ಲಿ ಸಾಮಾನ್ಯವಾಗಿ ಮಗುವಿನ ಮಾತೃಭಾಷೆಯೇ ಮಾಧ್ಯಮವಾಗಬೇಕೆಂದು ನಿರೀಕ್ಷೆಯಿರುವ ೧ ರಿಂದ ೪ನೇ ತರಗತಿಯವರಗೆ ಅನುಬಂಧ-೧ ರಲ್ಲಿ ತಿಳಿಸಿರುವ ಭಾಷೆಗಳ ಪೈಕಿ ಒಂದು ಮಾತೃಭಾಷೆ ಅಥವಾ ಕನ್ನಡ ಮಾತ್ರ ಕಡ್ಡಾಯ ಭಾಷೆಯಾಗಿರುತ್ತದೆ ಎಂದು ಹೇಳಲಾಗಿದೆ. ಇದರಲ್ಲಿ ಇಂಗ್ಲಿಶ್‌ನ್ನು ಪ್ರಥಮ ಭಾಷೆಗಳ ಪಟ್ಟಿಯಲ್ಲಿ ಸೇರಿಸಿ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯಲು ಅವಕಾಶ ಕಲ್ಪಿಸಿಕೊಡಲಾಗಿದೆ. ಇದರ ಉದ್ದೇಶ ಕರ್ನಾಟಕದಲ್ಲಿರುವ ಆಂಗ್ಲೋ-ಇಂಡಿಯನ್ನರ ಮಕ್ಕಳು ಅವರ ಮಾತೃಭಾಷಾಮಾಧ್ಯಮದಲ್ಲಿ ಶಿಕ್ಷಣ ಕಲಿಯಲಿ ಎಂಬುದಾಗಿದೆ. ಈ ಪ್ರಕಾರವಾಗಿ ರಾಜ್ಯದಲ್ಲಿರುವ ಎಲ್ಲಾ ಮಕ್ಕಳು ತಮ್ಮ ಮಾತೃಭಾಷಾಮಾಧ್ಯಮ ಇಲ್ಲವೆ ಕನ್ನಡ ಮಾಧ್ಯಮದಲ್ಲಿ ಮಾತ್ರ ಕಲಿಯಬೇಕು. ಆದರೆ ಕರ್ನಾಟಕದಲ್ಲಿ ಎಲ್ಲಾ ಮಕ್ಕಳು ತಮ್ಮ ಮಾತೃಭಾಷೆ ಅಥವಾ ಕನ್ನಡ ಭಾಷಾಮಾಧ್ಯಮದಲ್ಲಿ

ಶಿಕ್ಷಣ ಕಲಿಯುತ್ತಿಲ್ಲ. ಇದಕ್ಕೆ ಬೇರೆಬೇರೆಯದೇ ಆದ ಕಾರಣಗಳು ಇವೆ. ಇವುಗಳನ್ನು 'ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು' ಎಂಬ ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇಲ್ಲಿ ಮಗುವಿನ ಮಾತೃಭಾಷಾ ಮಾಧ್ಯಮದ ಕಲಿಕೆ ಮತ್ತು ಅದರ ಹಿಂದಿನ ಸಮಸ್ಯೆಗಳು ಏನೇ ಇದ್ದರೂ ಮಗುವಿನ ಕಲಿಕಾಮಾಧ್ಯಮ ಪ್ರಥಮ ಭಾಷಾಕಲಿಕೆ ಮೇಲೆ ತನ್ನದೇ ಆದ ಪರಿಣಾಮ ಉಂಟುಮಾಡಿದೆ. ಇದರಿಂದಾಗಿ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಯುವ ಮಕ್ಕಳು ಮಾತ್ರ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಿವೆ. ಕನ್ನಡವನ್ನು ಹೊರತುಪಡಿಸಿ ಉಳಿದ ಭಾಷಾಮಾಧ್ಯಮದಲ್ಲಿ ಕಲಿಯುತ್ತಿರುವ ಕನ್ನಡದ ಮಕ್ಕಳು ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವುದರಿಂದ ವಂಚಿತವಾಗಿವೆ.

ಅದರಲ್ಲೂ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮಗಳಲ್ಲಿ ಕಲಿಯುತ್ತಿರುವ ಹೆಚ್ಚಿನ ಕನ್ನಡದ ಮಕ್ಕಳು ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವುದರಿಂದ ವಂಚಿತವಾಗಿವೆ. ಏಕೆಂದರೆ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳು ಕೇಂದ್ರಸರ್ಕಾರದ ಅಧೀನದಲ್ಲಿ ಬರುವ ಮಂಡಳಿಗಳಿಂದ ಮಾನ್ಯತೆ ಪಡೆದವುಗಳಾಗಿವೆ. ಹೀಗಾಗಿ ಇವು ಆ ಮಂಡಳಿ ಅಥವಾ ಕೇಂದ್ರಸರ್ಕಾರದ ಭಾಷಾನೀತಿ ಮತ್ತು ಶಿಕ್ಷಣ ನೀತಿಗಳನ್ನು ಅನುಸರಿಸಿವೆ. ಕೇಂದ್ರಸರ್ಕಾರದ ಭಾಷಾನೀತಿಯಲ್ಲಿ ಕನ್ನಡಕ್ಕೆ ಹೆಚ್ಚಿನ ಪ್ರಾತಿನಿಧ್ಯ ನೀಡದೇ ಇರುವುದರಿಂದ ಈ ಶಿಕ್ಷಣ ಸಂಸ್ಥೆಗಳಲ್ಲಿ ಕನ್ನಡದ ಕಲಿಕೆಗೆ ಹೆಚ್ಚಿನ ಅವಕಾಶಗಳು ಇರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಕನ್ನಡಿಗರ ಒತ್ತಾಯಕ್ಕೆ ಮಣಿದು ಕರ್ನಾಟಕದಲ್ಲಿರುವ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಲ್ಲಿಯು ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯಲು ಅವಕಾಶ ಕಲ್ಪಿಸಲಾಗಿದೆ. ಆದರೆ ಕನ್ನಡವನ್ನೇ ಪ್ರಥಮ ಭಾಷೆಯಾಗಿ ಕಲಿಯಬೇಕು ಎಂಬ ಕಡ್ಡಾಯ ನಿಯಮವಿಲ್ಲ. ಮತ್ತು ರಾಜ್ಯದಲ್ಲಿರುವ ಎಲ್ಲಾ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಲ್ಲಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವುದಕ್ಕೆ ಪೂರಕ ವ್ಯವಸ್ಥೆಯೂ ಇಲ್ಲ. ಸಾಮಾನ್ಯವಾಗಿ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಲ್ಲಿ ಸರ್ಕಾರದ ಭಾಷಾನೀತಿಗಿಂತ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳ ಧೋರಣೆ ಪ್ರಧಾನವಾಗಿದೆ. ಏಕೆಂದರೆ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳನ್ನು ಆರಂಭಿಸಿರುವವರು ಆರ್ಥಿಕವಾಗಿ ಶ್ರೀಮಂತರಾಗಿದ್ದಾರೆ. ಇವರಿಗೆ ಸಾಮಾಜಿಕ ಸೇವೆ, ಭಾಷಾಅಭಿಮಾನ, ಮಕ್ಕಳ ಕಲಿಕೆಗೆ ಅನುಕೂಲವಾಗುವ ನಿಯಮಗಳಿಗಿಂತ ಲಾಭ ಪ್ರಧಾನವಾಗಿದೆ. ಹೀಗಾಗಿ ಹೆಚ್ಚಿನ ಲಾಭವನ್ನು ತಂದುಕೊಡುವ ಭಾಷೆ ಮತ್ತು ಮಾಧ್ಯಮಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದಾರೆ. ಜಾಗತೀಕರಣದ ಪರಿಣಾಮವಾಗಿ ಇಂಗ್ಲಿಷ್, ಫ್ರೆಂಚ್, ಸ್ಪ್ಯಾನಿಷ್ ತರದ ಭಾಷೆಗಳಿಗೆ ಹೆಚ್ಚಿನ ಬೇಡಿಕೆ ಉಂಟಾಗಿರುವುದರಿಂದ ಮತ್ತು ಭಾರತದ ಸಂದರ್ಭದಲ್ಲಿ ಕೇಂದ್ರದ ಮಟ್ಟದಲ್ಲಿ ಹಿಂದಿಗೆ ಬೇಡಿಕೆ ಹೆಚ್ಚಾಗಿರುವುದರಿಂದ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಲ್ಲಿ ಇಂಗ್ಲಿಷ್, ಫ್ರೆಂಚ್, ಸ್ಪ್ಯಾನಿಷ್, ಹಿಂದಿ ತರದ ಭಾಷೆಗಳನ್ನು ಕಲಿಸುವುದಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾರೆ. ಹೀಗಾಗಿ ರಾಜ್ಯದಲ್ಲಿರುವ ಹೆಚ್ಚಿನ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಲ್ಲಿ ಕನ್ನಡ ಕಡೆಗಣಿಸಲ್ಪಟ್ಟಿದೆ.

ಇದರ ಜೊತೆಗೆ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಲ್ಲಿ ಕನ್ನಡವನ್ನು ಕಡೆಗಣಿಸುವುದಕ್ಕೆ ಮತ್ತೊಂದು ಕಾರಣವೂ ಇದೆ. ಅದೇನೆಂದರೆ ಸಾಮಾನ್ಯವಾಗಿ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಿಗೆ ಮಕ್ಕಳನ್ನು ದಾಖಲಿಸಿರುವ ಪೋಷಕರು ಆರ್ಥಿಕವಾಗಿ ಶ್ರೀಮಂತರು ಮತ್ತು ಕೇಂದ್ರ ಸರ್ಕಾರ ಹಾಗೂ ಖಾಸಗಿ ವಲಯದ ಉನ್ನತ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರಾಗಿದ್ದಾರೆ. ಇವರು ದೇಶದ ನಾನಾಭಾಗಗಳಿಂದ ಬಂದವರು ಮತ್ತು ನಾನಾಭಾಗಗಳಿಗೆ ವರ್ಗಾವಣೆಯಾಗುವವರಾಗಿದ್ದಾರೆ. ಇವರು ತಮ್ಮ ಮಕ್ಕಳನ್ನು ರಾಜ್ಯಪಠ್ಯಕ್ರಮದ ಶಾಲೆಗಳಿಗೆ ದಾಖಲು ಮಾಡಿದರೆ ಬೇರೆ ರಾಜ್ಯಕ್ಕೆ ವರ್ಗಾವಣೆಯಾದಾಗ ಮಕ್ಕಳ ಶಿಕ್ಷಣಕ್ಕೆ ತೊಂದರೆಯಾಗುತ್ತದೆ ಎಂಬ ಕಾರಣಕ್ಕಾಗಿ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಿಗೆ ದಾಖಲು ಮಾಡಿದ್ದಾರೆ. ಇಲ್ಲಿ ಆರ್ಥಿಕವಾಗಿ, ಔದ್ಯೋಗಿಕವಾಗಿ ಶ್ರೀಮಂತರಾಗಿರುವವರ ಮಕ್ಕಳು ಓದುವುದರಿಂದ ಮಕ್ಕಳ ಕಲಿಕೆ ಮತ್ತು ಕಲಿಸುವಿಕೆಯ ಗುಣಮಟ್ಟವನ್ನು ಮತ್ತೆ ಮತ್ತೆ ಪರೀಕ್ಷಿಸಲಾಗಿದೆ. ಮತ್ತು ವಿದ್ಯಾರ್ಥಿಗಳ ಕಲಿಕೆಗೆ ಅಗತ್ಯ ಸೌಲಭ್ಯಗಳನ್ನು ಸೂಕ್ತರೀತಿಯಲ್ಲಿ ಒದಗಿಸಲಾಗಿದೆ. ಇದರಿಂದಾಗಿ ರಾಜ್ಯದ ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಕಲಿಯುತ್ತಿರುವ ಮಕ್ಕಳ ಕಲಿಕೆಯ ಗುಣಮಟ್ಟಕ್ಕಿಂತ ಈ ಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳ ಗುಣಮಟ್ಟ ಅಂಕಗಳ ದೃಷ್ಟಿಯಲ್ಲಿ ಉತ್ತಮವಾಗಿದೆ. ಇದರಿಂದಾಗಿ ರಾಜ್ಯದಲ್ಲಿ ಆರ್ಥಿಕವಾಗಿ ಶ್ರೀಮಂತರಾಗಿರುವವರು ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣ ಲಭ್ಯವಾಗುತ್ತಿದೆ ಎಂಬ ಕಾರಣಕ್ಕಾಗಿ ತಮ್ಮ ಮಕ್ಕಳನ್ನು ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ.

ಇದರಿಂದಾಗಿ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದ ಶಾಲೆಗಳಲ್ಲಿ ದೇಶದ ನಾನಾಭಾಗಗಳ, ಬೇರೆಬೇರೆ ಭಾಷೆಗಳನ್ನು ಮಾತೃಭಾಷೆಯಾಗುಳ್ಳ ಮಕ್ಕಳು ಒಂದೇ ತರಗತಿಯಲ್ಲಿ ಕಲಿಯುತ್ತಿದ್ದಾರೆ. ಇವರೆಲ್ಲರಿಗೂ ಅವರ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಲು ಅವರ ಮಾತೃಭಾಷೆಗೆ ತಕ್ಕಂತೆ ಶಿಕ್ಷಕರನ್ನು ನೇಮಕ ಮಾಡಿಕೊಳ್ಳಬೇಕು. ಅವರಿಗೆ ವೇತನವನ್ನು ನೀಡಬೇಕು. ಇದು ಶಿಕ್ಷಣ ಸಂಸ್ಥೆಗಳ ಮುಖ್ಯಸ್ಥರಿಗೆ ಆರ್ಥಿಕವಾಗಿ ಮತ್ತು ಆಡಳಿತಾತ್ಮಕವಾಗಿ ಹೆಚ್ಚು ಹೊರೆಯಾಗುತ್ತದೆ. ಇದರಿಂದಾಗಿ ಈ ಶಿಕ್ಷಣ ಸಂಸ್ಥೆಗಳು ಕರ್ನಾಟಕ ಸರ್ಕಾರದ ಭಾಷಾನೀತಿಯನ್ನು ಪಾಲಿಸದೆ ತಮ್ಮ ಅನುಕೂಲಕ್ಕೆ ತಕ್ಕಂತೆ ಮಕ್ಕಳಿಗೆ ಭಾಷೆಗಳನ್ನು ಕಲಿಸುತ್ತಿದ್ದಾರೆ. ಇವು ಕೇಂದ್ರ ಸರ್ಕಾರದ ಅಧೀನಕ್ಕೆ ಬರುವುದರಿಂದ ರಾಜ್ಯ ಸರ್ಕಾರಗಳಿಗೆ ತಾವು ಜಾರಿಗೆ ತಂದ ಭಾಷಾನೀತಿಯನ್ನು ಯಥಾವತ್ತಾಗಿ ಅನುಷ್ಠಾನಕ್ಕೆ ತರಬೇಕು ಎಂದು ಕಟ್ಟುನಿಟ್ಟಿನ ಆದೇಶ ಮಾಡುವ ಅಧಿಕಾರವಿಲ್ಲ. ಇದೂ ಕೂಡ ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಕ್ರಮದಲ್ಲಿ ಕಲಿಯುತ್ತಿರುವ ಕನ್ನಡದ ಮಕ್ಕಳು ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗದೆ ಇರುವುದಕ್ಕೆ ಕಾರಣವಾಗಿದೆ.

ಇನ್ನು ಸರ್ಕಾರಿ ಶಿಕ್ಷಣ ಸಂಸ್ಥೆಗಳ ಪರಿಸ್ಥಿತಿ ಇದಕ್ಕಿಂತ ಭಿನ್ನ. ರಾಜ್ಯದಲ್ಲಿರುವ ಹೆಚ್ಚಿನ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ಸರ್ಕಾರಿ ಶಾಲೆಗಳು ಕನ್ನಡ ಇಲ್ಲವೆ ಮಾತೃಭಾಷಾಮಾಧ್ಯಮದ ಶಾಲೆಗಳಾಗಿವೆ. ಇವು ರಾಜ್ಯಸರ್ಕಾರದ ಓಡಿತದಲ್ಲಿರುವುದರಿಂದ ಕರ್ನಾಟಕ ಸರ್ಕಾರದ ಭಾಷಾನೀತಿಯನ್ನು

ಯಥಾವತ್ತಾಗಿ ಪಾಲಿಸುವುದು ಅನಿವಾರ್ಯವಾಗಿದೆ. ಇದರಿಂದಾಗಿ ರಾಜ್ಯದಲ್ಲಿರುವ ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಿದೆ. ಆದರೆ ಕನ್ನಡಪರ ಚಿಂತಕರ, ಹೋರಾಟಗಾರರ ಆಶಯ ಅಥವಾ ಕರ್ನಾಟಕ ಸರ್ಕಾರದ ಉದ್ದೇಶಿತ ಭಾಷಾನೀತಿಗೆ ಅನುಗುಣವಾಗಿ ರಾಜ್ಯದಲ್ಲಿರುವ ಎಲ್ಲಾ ಶಾಲೆಗಳಲ್ಲಿ ಕನ್ನಡದ ಮಕ್ಕಳು ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗಿಲ್ಲ. ಏಕೆಂದರೆ ಸರ್ಕಾರಗಳು ಕನ್ನಡಿಗರ ಹಿತಕ್ಕಾಗಿ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಸಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತಂದಿದ್ದರೂ ಅದಕ್ಕೆ ಅನುಗುಣವಾಗಿ ರಾಜ್ಯದಲ್ಲಿರುವ ಎಲ್ಲಾ ಶಾಲೆ/ಕಾಲೇಜುಗಳಿಗೆ ಸಮರ್ಪಕವಾಗಿ ಶಿಕ್ಷಕರನ್ನು ನೇಮಿಸಿಲ್ಲ. ಸೂಕ್ತಕಾಲಕ್ಕೆ ಪಠ್ಯಪುಸ್ತಕಗಳನ್ನು ಒದಗಿಸಬೇಕು. ಆದರೆ ಕರ್ನಾಟಕದಲ್ಲಿ ಇದುವರೆಗೆ ಆಡಳಿತ ನಡೆಸಿರುವ ಯಾವ ಸರ್ಕಾರಗಳು ಈ ಕೆಲಸಗಳನ್ನು ಸಮರ್ಪಕವಾಗಿ ಮಾಡಿಲ್ಲ. ಇದರಿಂದಾಗಿ ಸರ್ಕಾರಗಳು ಮಗುವಿಗೆ ಅದರ ಮಾತೃಭಾಷೆಯನ್ನೇ ಪ್ರಥಮ ಭಾಷೆಯಾಗಿ ಕಲಿಸಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತಂದಿದ್ದರು ಆ ಪ್ರಕಾರವಾಗಿ ಶಿಕ್ಷಣ ಸಂಸ್ಥೆಗಳು ಕಲಿಸಲು ಮತ್ತು ವಿದ್ಯಾರ್ಥಿಗಳು ಕಲಿಯಲು ಸಾಧ್ಯವಾಗಿಲ್ಲ. ಇದನ್ನು ಅರ್ಥಮಾಡಿಕೊಂಡು ಸಮಸ್ಯೆಗಳನ್ನು ಪರಿಹರಿಸಬೇಕಾದ ಸರ್ಕಾರಗಳು ತನ್ನ ಆರ್ಥಿಕತೆಯ ನಷ್ಟ, ಶಿಕ್ಷಕರ ನೇಮಕಾತಿ ಪ್ರಕ್ರಿಯೆಯಲ್ಲಿನ ಗೊಂದಲ, ನಿರಾಸಕ್ತಿ ಇತ್ಯಾದಿ ಕಾರಣಗಳಿಂದಾಗಿ ರಾಜ್ಯದಲ್ಲಿರುವ ಎಲ್ಲಾ ಕನ್ನಡ ಭಾಷಾಮಾಧ್ಯಮದ ಶಾಲೆಗಳಿಗೆ ಸೂಕ್ತ ಸಂದರ್ಭಕ್ಕೆ ಕನ್ನಡ ಶಿಕ್ಷಕರನ್ನು ನೇಮಕ ಮಾಡಿಲ್ಲ. ಇದರಿಂದಾಗಿ ರಾಜ್ಯಸರ್ಕಾರದ ಹಿಡಿತದಲ್ಲಿರುವ ಕನ್ನಡ ಮಾಧ್ಯಮದ ಶಿಕ್ಷಣ ಸಂಸ್ಥೆಗಳಲ್ಲಿ ಕಲಿತಿರುವ ಎಲ್ಲಾ ಕನ್ನಡದ ಮಕ್ಕಳು ಕನ್ನಡವನ್ನು ಪ್ರಥಮ ಭಾಷೆಯಾಗಿ ಸಮರ್ಪಕವಾಗಿ ಕಲಿತಿಲ್ಲ.

ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಇಂತಹ ಸಮಸ್ಯೆಗಳ ನಡುವೆಯೇ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ 'ಕನ್ನಡ ಭಾಷಾ ಬೋಧಕರಿಗೆ ಒಂದು ರೀತಿಯ ವೇತನವನ್ನು ಇಂಗ್ಲಿಶ್ ಭಾಷೆಯ, ಇತರೆ ವಿಜ್ಞಾನ ವಿಷಯಗಳ ಬೋಧಕರಿಗೆ ಮತ್ತೊಂದು ರೀತಿಯ ವೇತನವನ್ನು ನೀಡಲಾಗುತ್ತಿದೆ. ಕೆಲವು ಸಂಸ್ಥೆಗಳಲ್ಲಿ ಇಂಗ್ಲಿಶ್ ಮತ್ತು ವಿಜ್ಞಾನ ವಿಷಯಗಳ ಬೋಧಕರಿಗೆ ಪೂರ್ಣಾವಧಿಯ ಖಾಯಂ ನೇಮಕಾತಿಯ ಲೆಕ್ಕದಲ್ಲಿ ಅಧಿಕ ವೇತನ ನೀಡಿದರೆ, ಕನ್ನಡ ಭಾಷೆಯ ಬೋಧಕರಿಗೆ ಗಂಟೆಗಳ ಆಧಾರದ ಮೇಲೆ ಕನಿಷ್ಠ ವೇತನ ನೀಡುವ ಪದ್ಧತಿಯು ಆಚರಣೆಯಲ್ಲಿದೆ. ಖ್ಯಾತ ಭಾಷಾವಿದ್ವಾಂಸರಾದ ಡಿ.ಪಿ.ಪಟ್ಟನಾಯಕ್ ಅವರು ತಮ್ಮ 'ಭಾಷೆ ಮತ್ತು ಆರ್ಥಿಕ ಅವಕಾಶ' ಎನ್ನುವ ಲೇಖನದಲ್ಲಿ ಈ ಬಗೆಗೆ ವಿವರವಾಗಿ ಚರ್ಚಿಸಿದ್ದಾರೆ. ಅವರೆನ್ನುವಂತೆ "ನಮ್ಮ ದೇಶದಲ್ಲಿ ಐಚ್ಚಿಕ ವಿಷಯಗಳನ್ನು ಬೋಧಿಸುವ ಶಿಕ್ಷಕರ ಸ್ಥಾನಮಾನಕ್ಕಿಂತ ಭಾಷಾವಿಷಯವನ್ನು ಬೋಧಿಸುವ ಶಿಕ್ಷಕರ ಸ್ಥಾನಮಾನ ಕೆಳಮಟ್ಟದಲ್ಲಿದೆ. ಮತ್ತೆ ಭಾಷಾವಿಷಯಗಳನ್ನು ಬೋಧಿಸುವ ಶಿಕ್ಷಕರಲ್ಲಿ ಇಂಗ್ಲಿಶ್ ಮತ್ತು ಇತರ ಭಾಷೆಗಳನ್ನು ಇತರ ವಿದೇಶಿ ಭಾಷೆಗಳನ್ನು ಬೋಧಿಸುವ ಶಿಕ್ಷಕರ ಸ್ಥಾನಮಾನ ಮಾತೃಭಾಷೆಯನ್ನು ಬೋಧಿಸುವ ಶಿಕ್ಷಕರಿಗಿಂತ ಉನ್ನತವಾಗಿದೆ"[೧೦]

ಸರ್ಕಾರಗಳು ತಾನು ಜಾರಿಗೆ ತಂದ ಭಾಷಾನೀತಿ ಸಂಪೂರ್ಣವಾಗಿ ಅನುಷ್ಠಾನವಾಗದೇ ಇರುವುದಕ್ಕೆ ಈ ಅಂಶಗಳು ಪ್ರಮುಖ ಕಾರಣವೆಂದು ಭಾವಿಸಿಯೇ ಇಲ್ಲ. ಆದರೂ ಶಿಕ್ಷಣ ಸಂಸ್ಥೆಗಳು ಸರ್ಕಾರದ ಭಾಷಾನೀತಿಯ ಪ್ರಕಾರ ಮಗುವಿನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುತ್ತಿಲ್ಲ. ಇದು ಸರ್ಕಾರದ ಭಾಷಾನೀತಿಯ ಉಲ್ಲಂಘನೆ. ಹೀಗೆ ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸುವ ಶಿಕ್ಷಣ ಸಂಸ್ಥೆಗಳ ಮೇಲೆ ಶಿಸ್ತುಕ್ರಮ ಜರುಗಿಸಲಾಗುವುದು ಎಂಬಂತಹ ಮಾತುಗಳನ್ನಾಡುತ್ತಲೆ ಮಗುವಿನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಬೇಕು. ಅದು ಸಾಧ್ಯವಾಗದ ಕಡೆಗೆ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಸಬೇಕು ಎಂದು ಒತ್ತಡ ಉಂಟುಮಾಡಲಾಗಿದೆ. ಆದರೆ ಕನ್ನಡ ಮಾತೃಭಾಷೆಯಾಗಿರದ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಕನ್ನಡವನ್ನು ಕಡ್ಡಾಯ ಪ್ರಥಮ ಭಾಷೆಯಾಗಿ ಕಲಿಸಲು ಪ್ರಯತ್ನಸಿರುವುದರಿಂದ ಹಲವು ಸಮಸ್ಯೆಗಳು ಉದ್ಭವವಾಗಿವೆ. ಇವುಗಳನ್ನು **'ಅನ್ಯಭಾಷೆ:ಪ್ರಥಮ ಭಾಷೆಯಾಗಿ ಕಲಿಕೆ ಮತ್ತು ಸಮಸ್ಯೆಗಳು'** ಎಂಬ ಭಾಗದಲ್ಲಿ ಚರ್ಚಿಸಲಾಗಿದೆ. ಇನ್ನು ಕರ್ನಾಟಕದ ಪ್ರೌಢಶಿಕ್ಷಣದಲ್ಲಿ ವಿವಿಧ ಉದ್ದೇಶಗಳಿಗಾಗಿ ಮೂರು ಭಾಷೆಗಳನ್ನು ಕಲಿಸಲಾಗುತ್ತಿದೆ. ಇಲ್ಲಿ ಮಾತೃಭಾಷೆಯನ್ನೇ ಪ್ರಥಮ ಭಾಷೆಯಾಗಿ ಕಡ್ಡಾಯವಾಗಿ ಕಲಿಸಬೇಕು ಎಂಬ ನಿಯಮವಿಲ್ಲ.

ಹಾಗೆಯೇ ಪದವಿಪೂರ್ವ ಮತ್ತು ಪದವಿ ಹಂತದ ಮೊದಲೆರಡು ವರ್ಷಗಳ ವಿದ್ಯಾಭ್ಯಾಸದ ಸಂದರ್ಭದಲ್ಲಿ ವಿದ್ಯಾರ್ಥಿಗಳು ಎರಡು ಭಾಷೆಗಳನ್ನು ಕಲಿಯುವುದು ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಕಡ್ಡಾಯವಾಗಿದೆ. ಆದರೆ ಇಲ್ಲಿ ಪ್ರಥಮ ಭಾಷೆಯಾಗಿ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಡ್ಡಾಯವಾಗಿ ಕಲಿಯಬೇಕು ಎಂಬ ನಿಯಮವಿಲ್ಲ. ಇದರಿಂದಾಗಿ ರಾಜ್ಯದ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಯುತ್ತಿರುವ ಕನ್ನಡದ ವಿದ್ಯಾರ್ಥಿಗಳು ಮಾತ್ರ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಿದ್ದಾರೆ. ಉಳಿದವರಲ್ಲಿ ಹೆಚ್ಚಿನವರು ಇಂಗ್ಲಿಶ್, ಹಿಂದಿ, ಮತ್ತು ಸಂಸ್ಕೃತಗಳನ್ನು ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು ಕಲಿಯುತ್ತಿದ್ದಾರೆ. ಹೀಗಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಕರ್ನಾಟಕ ಏಕೀಕರಣ ಹೋರಾಟದ ಹಿಂದಿನ ಆಶಯ ಹಾಗೂ ಕನ್ನಡ ಮತ್ತು ಕನ್ನಡಿಗರು ಜೊತೆ ಭಾವನಾತ್ಮಕ ಸಂಬಂಧ ಬೆಸೆಯುವ ಉದ್ದೇಶದಿಂದ ರೂಪಿಸಿ, ಜಾರಿಗೆ ತರಲಾಗಿರುವ ಪ್ರಥಮ ಭಾಷಾಕಲಿಕೆ ಯಶಸ್ವಿಯಾಗಿ ಅನುಷ್ಠಾನಕ್ಕೆ ಬರುವಲ್ಲಿ ವಿಫಲವಾಗಿದೆ. ಹೀಗಾಗಿ ಮಕ್ಕಳ ಮಾತೃಭಾಷೆ ಕಡ್ಡಾಯ ಕಲಿಕಾಮಾಧ್ಯಮ ಆಗುವವರೆಗೂ ಕಲಿಕಾಮಾಧ್ಯಮವನ್ನು ಆಧರಿಸಿ ಪ್ರಥಮ ಭಾಷೆಯನ್ನು ಕಲಿಸುವ ಪದ್ಧತಿಯನ್ನು ಬದಲಾಯಿಸಿ ಮಕ್ಕಳ ಮಾತೃಭಾಷೆಯ ಆಧಾರದಲ್ಲಿ ಕಡ್ಡಾಯವಾಗಿ ಪ್ರಥಮ ಭಾಷೆಯನ್ನು ಕಲಿಸುವ ವ್ಯವಸ್ಥೆ ರೂಪಿಸಬೇಕು. ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಲು ಸಾಧ್ಯ ಆಗದಿದ್ದಾಗ ರಾಜ್ಯಭಾಷೆಯಾದ ಕನ್ನಡವನ್ನು ಕಡ್ಡಾಯವಾಗಿ ಕಲಿಸಿ ಪರೀಕ್ಷೆಯನ್ನು ಐಚ್ಛಿಕಗೊಳಿಸಬೇಕು. ಇದರಿಂದ ಕನ್ನಡದ ಮಕ್ಕಳು ಕನ್ನಡಪನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಾರೆ. ಭಾಷಾಅಲ್ಪಸಂಖ್ಯಾತರ ಮಕ್ಕಳು ಅನ್ಯಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವುದರಿಂದ

ಎದುರಾಗಿರುವ ಸಮಸ್ಯೆಗಳಿಂದ ಮುಕ್ತರಾಗುತ್ತಾರೆ. ಇದು ಕರ್ನಾಟಕ ಏಕೀಕರಣ ಹೋರಾಟದ ಆಶಯ ಮತ್ತು ಕನ್ನಡಿಗರ ಬೇಡಿಕೆಯ ಈಡೇರಿಕೆಗೆ ಹಾಗೂ ಭಾಷಾಅಲ್ಪಸಂಖ್ಯಾತರ ಪ್ರಥಮ ಭಾಷಾಕಲಿಕೆಯ ಸಮಸ್ಯೆಗೆ ಸೂಕ್ತಪರಿಹಾರವಾಗಿ ಕಾಣುತ್ತದೆ.

**೩.೩ ಭಾಷಾಅಲ್ಪಸಂಖ್ಯಾತರು: ಪ್ರಥಮ ಭಾಷೆಯಾಗಿ ಮಾತೃಭಾಷಾಕಲಿಕೆ ಮತ್ತು ಸಮಸ್ಯೆಗಳು**

ಪ್ರಥಮ ಭಾಷೆಯಾಗಿ ಮಾತೃಭಾಷಾಕಲಿಕೆ ಮತ್ತು ಸಮಸ್ಯೆಗಳು ಎಂಬ ಭಾಗದಲ್ಲಿ ಈಗಾಗಲೇ ಚರ್ಚಿಸಿರುವ ಹಾಗೆ ಮಗುವಿನ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯನ್ನು ಶಿಕ್ಷಣದಲ್ಲಿ ಪ್ರಥಮ ಭಾಷೆಯಾಗಿ ಕಲಿಸುವುದು ಉತ್ತಮ. ಆದರೆ ಈ ಹಿಂದೆಯೇ ಚರ್ಚಿಸಿರುವ ಹಾಗೆ ೧೯೫೬ರಲ್ಲಿ ಕರ್ನಾಟಕ ಏಕೀಕರಣಗೊಂಡರು ೧೯೮೨ರವರೆಗೂ ಕರ್ನಾಟಕದ ಪ್ರೌಢಶಿಕ್ಷಣದಲ್ಲಿ ಇಂತಹದೇ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಡ್ಡಾಯವಾಗಿ ಕಲಿಯಬೇಕು ಎಂಬ ನಿಯಮವಿರಲಿಲ್ಲ. ಸರ್ಕಾರದ ಭಾಷಾನೀತಿಯ ಪ್ರಕಾರ ಪ್ರಥಮ ಭಾಷಾಕಲಿಕೆಯ ಪಟ್ಟಿಯಲ್ಲಿರುವ ಯಾವ ಭಾಷೆಯನ್ನು ಬೇಕಾದರು ಪ್ರಥಮ ಭಾಷೆಯಾಗಿ ಕಲಿಯಬಹುದಿತ್ತು. ಆದರೆ ತಮಗಿಷ್ಟ ಬಂದ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಅವಕಾಶಗಳು ಎಲ್ಲಾ ಶಾಲೆಗಳಲ್ಲಿ ಇರಲಿಲ್ಲ. ಇದರಿಂದ ಮಕ್ಕಳು ಶಾಲೆಗೆ ದಾಖಲಾದಾಗ ತಾವು ದಾಖಲಾದ ಶಾಲೆಯಲ್ಲಿ ಯಾವ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಲಾಗುತ್ತಿತ್ತೋ ಆ ಭಾಷೆಯನ್ನು ಮಾತ್ರ ಪ್ರಥಮ ಭಾಷೆಯಾಗಿ ಕಲಿಯುತ್ತಿದ್ದರು. ಕೆಲವೊಮ್ಮೆ ತಾವು ಸೇರಿದ ಶಾಲೆಯಲ್ಲಿ ಪ್ರಥಮ ಭಾಷಾಕಲಿಕೆಯಲ್ಲಿ ಭಾಷೆಗಳನ್ನು ಆಯ್ಕೆಮಾಡಿಕೊಳ್ಳಲು ಅವಕಾಶವಿದ್ದಾಗ ತಮಗೆ ಅಗತ್ಯ ಮತ್ತು ಆಸಕ್ತಿಯಿರುವ ಭಾಷೆಯನ್ನು ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು ಕಲಿಯುತ್ತಿದ್ದರು.

ಆದರೆ ೧೯೭೯ರಲ್ಲಿ ಡಿ.ದೇವರಾಜ ಅರಸುರವರು ರಾಜ್ಯದ ಮುಖ್ಯಮಂತ್ರಿಯಾಗಿದ್ದಾಗ ಕರ್ನಾಟಕದ 'ಶಾಲಾ ಪಠ್ಯಕ್ರಮದಲ್ಲಿನ ಭಾಷೆಗಳಿಗೆ ಸಂಬಂಧಿಸಿದಂತೆ ಸಮಸ್ಯೆ ಹುಟ್ಟಿತು. ಅದು ಪ್ರೌಢಶಾಲೆಗಳಲ್ಲಿ 'ಭಾಷಾಮಾಧ್ಯಮ'ದ ವಿಚಾರಗಳನ್ನು ಕುರಿತದ್ದು. ಅದುವರೆಗಿನ ಶಿಕ್ಷಣ ನೀತಿಯ ಪ್ರಕಾರ ಕನ್ನಡ, ಇಂಗ್ಲಿಷ್, ತೆಲುಗು, ತಮಿಳು ಮೊದಲಾದ ಮಾತೃಭಾಷೆಗಳ ಜೊತೆಗೆ ಸಂಸ್ಕೃತವನ್ನು ಸಹ ಪ್ರಥಮ ಭಾಷಾ ಸ್ಥಾನದಲ್ಲಿ ಕಲಿಯಬಹುದಾಗಿತ್ತು. ಇದು ಯಾವುದೇ ಮಾಧ್ಯಮದ ಪ್ರೌಢಶಾಲಾ ವಿದ್ಯಾರ್ಥಿಗಳಿಗಾದರೂ ಅನ್ವಯ ಆಗುವಂಥದ್ದು. ಒಂದನೇ ತರಗತಿಯಿಂದ ತಮ್ಮ ಮಾತೃಭಾಷೆಯಲ್ಲಿ ಓದಿದವರಿಗೆ ಏಕಾಏಕಿ ಎಂಟನೇ ತರಗತಿಯಿಂದ ಹೊಸ ಭಾಷೆಯಾದ ಸಂಸ್ಕೃತವನ್ನು ಕಲಿಯಲು ಅನುವು ಮಾಡಿಕೊಡಲಾಗಿತ್ತು. ಅಂದರೆ ಸಂಸ್ಕೃತವನ್ನು ಮಾತೃಭಾಷೆಗೆ ಸರಿಸಮವೆಂದು ಪರಿಗಣಿಸುವುದು. ಕೇವಲ ಪ್ರೌಢಶಾಲೆಯಲ್ಲಿ ಓದಲು ಆರಂಭಿಸುವ ಸಂಸ್ಕೃತವು ಹಿಂದಿನ ಏಳು ವರುಷಗಳಲ್ಲಿ ಓದಿದ ಭಾಷೆಯೊಂದಕ್ಕೆ ಸಮವೆಂದು ಅಳವಡಿಸಿದ್ದರು. ಇದೊಂದು ಅವೈಜ್ಞಾನಿಕ ಶಿಕ್ಷಣ ನೀತಿ ಆಗಿತ್ತು. ಕನ್ನಡಿಗರು ಸಹ ಹೆಚ್ಚಿನ ಅಂಕ ಗಳಿಸುವ ದೃಷ್ಟಿಯಿಂದ 'ಕನ್ನಡ'ದ ಜೊತೆಗೆ ಸಂಸ್ಕೃತವನ್ನು ಪ್ರಥಮ ಭಾಷೆಯನ್ನಾಗಿ ಕಲಿಯಲು ಆಯ್ಕೆಮಾಡಿಕೊಳ್ಳುತ್ತಿದ್ದರು. ಅಲ್ಲದೆ ಈ ಭಾಷೆಯ ಪ್ರೋತ್ಸಾಹಕ್ಕಾಗಿ ಅಧ್ಯಾಪಕರು ಹೆಚ್ಚು ಅಂಕಗಳನ್ನು ನೀಡುತ್ತಿದ್ದುದು ಉಂಟು.'[೧೧]

ಇದರಿಂದ ಹತ್ತನೇ ತರಗತಿಯಲ್ಲಿ ಹೆಚ್ಚಿನ ರ್‍ಯಾಂಕ್‌ಗಳು ಸಂಸ್ಕೃತವನ್ನು ಕಲಿಯುತ್ತಿದ್ದವರ ಪಾಲಾಗುತ್ತಿದ್ದವು. ಇದರಿಂದ ಕನ್ನಡವನ್ನು ಮಾತೃಭಾಷೆಯಾಗುಳ್ಳ ಮಕ್ಕಳು ಹೆಚ್ಚಿನ ಅಂಕಗಳಿಗಾಗಿ ಕನ್ನಡದ ಬದಲಿಗೆ ಸಂಸ್ಕೃತವನ್ನು ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು ಕಲಿಯಲು ಆರಂಭಿಸಿದ್ದರು. ಇದರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗಿತ್ತು. ಅಲ್ಲದೆ ಈಗಾಗಲೇ ಚರ್ಚಿಸಿರುವ ಹಾಗೆ ಕರ್ನಾಟಕ ಏಕೀಕರಣ ಆಗಿ ಎರಡು ದಶಕಗಳು ಕಳೆದ ನಂತರದಲ್ಲಿಯೂ ಕರ್ನಾಟಕದಲ್ಲಿ ಕನ್ನಡ ಕಲಿಯದೆ ಶಿಕ್ಷಣ ಪೂರ್ಣಗೊಳಿಸಲು ಸಾಧ್ಯವಿತ್ತು. ಹೀಗೆ ಕನ್ನಡವನ್ನು ಕಲಿಯದೆ ಕರ್ನಾಟಕದಲ್ಲಿ ಶಿಕ್ಷಣ ಪೂರ್ಣಗೊಳಿಸುವುದು ಒಂದು ಕಡೆಯಾದರೆ ಕನ್ನಡ ಭಾಷೆಯನ್ನು ಆಯ್ಕೆಮಾಡಿಕೊಂಡವರು ರ್‍ಯಾಂಕ್‌ನಿಂದ ವಂಚಿತರಾಗುತ್ತಿದ್ದದ್ದು ಮತ್ತೊಂದು ಕಡೆ. ಇವು ಕನ್ನಡಾಭಿಮಾನಿಗಳನ್ನು ಕೆರಳಿಸಿದೆ. ಇದರಿಂದಾಗಿ ಕರ್ನಾಟಕ ಏಕೀಕರಣಗೊಂಡು ಇಷ್ಟು ವರ್ಷಗಳಾದರೂ ಕನ್ನಡವನ್ನು ಕಲಿಯದೆ ಕರ್ನಾಟಕದಲ್ಲಿ ಶಿಕ್ಷಣ ಪೂರ್ಣಗೊಳಿಸಲು ಸಾಧ್ಯವಿದೆಯಲ್ಲಾ, ಅದು ಸಾಧ್ಯವಾಗಬಾರದು. ಕರ್ನಾಟಕದಲ್ಲಿ ಶಿಕ್ಷಣ ಕಲಿಯುವ ಪ್ರತಿಯೊಂದು ಮಗುವೂ ಪ್ರಾಥಮಿಕ ಹಂತದಿಂದ ಪ್ರೌಢಶಿಕ್ಷಣ ಪೂರ್ಣಗೊಳಿಸುವುದರ ಒಳಗಾಗಿ ಒಂದು ಭಾಷೆಯಾಗಿ ಕನ್ನಡವನ್ನು ಕಡ್ಡಾಯವಾಗಿ ಕಲಿಯುವಂತೆ ಮಾಡಬೇಕು ಎಂದು ಹೋರಾಟ ಮಾಡಿದ್ದಾರೆ. ಇದು ೧೯೮೦ರ ಸುಮಾರಿನಲ್ಲಿ ತೀವ್ರಸ್ವರೂಪ ಪಡೆದುಕೊಂಡಿದೆ. ಈ ಸಮಸ್ಯೆಯನ್ನು ಪರಿಹರಿಸಲು ಸಲಹೆ ನೀಡುವುದಕ್ಕಾಗಿ ಕನ್ನಡದ ಪ್ರಸಿದ್ಧ ಸಾಹಿತಿಗಳಾದ ಡಾ.ವಿ.ಕೃ.ಗೋಕಾಕ್ ನೇತೃತ್ವದಲ್ಲಿ ಒಂದು ಸಮಿತಿ ನೇಮಿಸಲಾಗಿದೆ. ಈ ಸಮಿತಿ ನೀಡಿರುವ ವರದಿ ಅನ್ವಯ ಕರ್ನಾಟಕ ಸರ್ಕಾರ ಅಲ್ಪ ಮಾರ್ಪಾಡು ಮಾಡಿ "ದಿನಾಂಕ:೨೦/೦೭/೧೯೮೨ರ ಸಂಖ್ಯೆ ಇಡಿ/೧೧೩/ ಎಸ್‌ಓಹೆಚ್/ ೧೯೭೪ರಲ್ಲಿ ಮಾರ್ಪಡಿಸಿದ ಆದೇಶವನ್ನು ಹೊರಡಿಸಿದೆ"[೧೨]. ಇದರ ಪ್ರಕಾರ ಕರ್ನಾಟಕದಲ್ಲಿ ಪ್ರೌಢಶಿಕ್ಷಣ ಕಲಿಯುವ ಪ್ರತಿಯೊಬ್ಬ ವಿದ್ಯಾರ್ಥಿಯು ಪ್ರೌಢಶಾಲಾ ಹಂತದಲ್ಲಿ ೧೨೫ ಅಂಕಗಳುಳ್ಳ ಕನ್ನಡವನ್ನು ಏಕೈಕ ಪ್ರಥಮ ಭಾಷೆಯಾಗಿ ಕಲಿಯಬೇಕಾದ ಒತ್ತಡ ಸೃಷ್ಟಿಯಾಗಿದೆ.

ಮೇಲಿನ ಅಂಶಗಳು, ಗೋಕಾಕ್ ಸಮಿತಿ ನೀಡಿರುವ ವರದಿ ಮತ್ತು ೧೯೮೨ರಲ್ಲಿ ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಭಾಷಾನೀತಿಯನ್ನು ಗಮನಿಸಿದಾಗ ಕನ್ನಡವನ್ನು ಕಲಿಯುವವರಿಗೆ ರ್‍ಯಾಂಕ್‌ಗಳು ದೊರಕುತ್ತಿಲ್ಲ. ಮತ್ತು ಹೆಚ್ಚಿನ ಅಂಕಗಳಿಗಾಗಿ ಕರ್ನಾಟಕದಲ್ಲಿನ ಕನ್ನಡದ ಮಕ್ಕಳು ಮತ್ತು ಕನ್ನಡವನ್ನು ಕಲಿಯದೆ ಸಂಸ್ಕೃತವನ್ನು ಕಲಿಯುತ್ತಿದ್ದಾರೆ. ಸಂಸ್ಕೃತ ಯಾರ ಮಾತೃಭಾಷೆಯೂ ಅಲ್ಲ. ಆದರೂ ಅದನ್ನು ಪ್ರಥಮ ಭಾಷೆಯಲ್ಲಿ ಸೇರಿಸಲಾಗಿದೆ. ಆದ್ದರಿಂದ ಅದನ್ನು ಪ್ರಥಮ ಭಾಷಾಕಲಿಕೆಯ ಪಟ್ಟಿಯಿಂದ ತೆಗೆದುಹಾಕಬೇಕು ಎಂಬ ಹಿನ್ನೆಲೆಯಲ್ಲಿ ಹುಟ್ಟಿದ ಹೋರಾಟ ಕರ್ನಾಟಕದಲ್ಲಿನ ಭಾಷಾಅಲ್ಪಸಂಖ್ಯಾತ ಸಮುದಾಯದ ಮಕ್ಕಳು ಕನ್ನಡವನ್ನು ಪ್ರಥಮ ಏಕೈಕ ಕಡ್ಡಾಯ ಭಾಷೆಯಾಗಿ ಕಲಿಯಬೇಕಾದ ಒತ್ತಡಕ್ಕೆ ಸಿಲುಕುವಂತೆ ಮಾಡಿದೆ. ಇದು ಕನ್ನಡವನ್ನು ಉಳಿಸಿಕೊಳ್ಳುವ ಮತ್ತು ಪ್ರಬಲಗೊಳಿಸುವ ಉದ್ದೇಶದಿಂದ ಜಾರಿಗೆ ತರಲಾದ ಭಾಷಾನೀತಿಯಿಂದ ಉದ್ಭವವಾದ ಸಮಸ್ಯೆ. ಇದರಿಂದ ಕರ್ನಾಟಕದಲ್ಲಿನ ಭಾಷಾಅಲ್ಪಸಂಖ್ಯಾತರು ಹಲವು ಸಮಸ್ಯೆಗನ್ನು ಎದುರಿಸಬೇಕಾಗಿದೆ.

ಅವುಗಳನ್ನು 'ಅನ್ಯಭಾಷೆಯನ್ನು: ಪ್ರಥಮ ಭಾಷೆಯಾಗಿ ಕಲಿಕೆ ಮತ್ತು ಸಮಸ್ಯೆಗಳು' ಎಂಬ ಭಾಗದಲ್ಲಿ ಚರ್ಚಿಸಲಾಗಿದೆ.

ಕರ್ನಾಟಕ ಸರ್ಕಾರ ೧೯೮೨ರಲ್ಲಿ ಜಾರಿಗೆ ತಂದ ಕನ್ನಡ ಭಾಷೆಯ ಪರವಾದ ಭಾಷಾನೀತಿಗೆ ಕರ್ನಾಟಕದಲ್ಲಿನ ಎಲ್ಲಾ ಕನ್ನಡಿಗರ ಸಮ್ಮತಿಯಿರಲಿಲ್ಲ. ಏಕೆಂದರೆ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುತ್ತಿದ್ದ ಕನ್ನಡದ ಮಕ್ಕಳು ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಿದ್ದರು. ಸರ್ಕಾರದ ಈ ಭಾಷಾನೀತಿಯಿಂದಾಗಿ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುವ ಕನ್ನಡದ ಮಕ್ಕಳೂ ಕೂಡ ಕನ್ನಡವನ್ನು ಕಡ್ಡಾಯವಾಗಿ ಪ್ರಥಮ ಭಾಷೆಯಾಗಿ ಕಲಿಯಬೇಕಾಯಿತು. ಅಲ್ಲದೆ ಶಿಕ್ಷಣ ಸಂಸ್ಥೆಗಳಲ್ಲಿ ಈಗಾಗಲೇ ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿ ಬೋಧಿಸುತ್ತಿದ್ದ ಶಿಕ್ಷಕರಿಗೆ ನಿರುದ್ಯೋಗದ ಸಮಸ್ಯೆ ಎದುರಾಗುವ ಪರಿಸ್ಥಿತಿ ನಿರ್ಮಾಣವಾಯಿತು. ಇಂಗ್ಲಿಶ್ ಸೇರಿದಂತೆ ಎಲ್ಲಾ ಭಾಷಾಅಲ್ಪಸಂಖ್ಯಾತರ ಭಾಷಾಮಾಧ್ಯಮದ ಪ್ರೌಢಶಾಲೆಗಳಲ್ಲೂ ಕನ್ನಡ ಭಾಷಾಶಿಕ್ಷಕರನ್ನು ಕಡ್ಡಾಯವಾಗಿ ನೇಮಕ ಮಾಡಿಕೊಳ್ಳಬೇಕಾದ ಅನಿವಾರ್ಯತೆ ಉಂಟಾಯಿತು. ಹೀಗೆ ಸಂಸ್ಕೃತದ ವಿರೋಧವಾಗಿ ಹುಟ್ಟಿದ ಭಾಷಾಹೋರಾಟ ಕರ್ನಾಟಕದಲ್ಲಿನ ಭಾಷಾಅಲ್ಪಸಂಖ್ಯಾತರು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವುದರಿಂದ ವಂಚಿತರಾಗುವಂತೆ ಮಾಡಿದೆ. ಅಲ್ಲದೆ ಸರ್ಕಾರದ ಈ ಭಾಷಾನೀತಿ ಶಿಕ್ಷಣ ಸಂಸ್ಥೆಗಳು ಆಡಳಿತಾತ್ಮಕವಾಗಿ ಸಮಸ್ಯೆಗಳಿಗೆ ಸಿಲುಕುವಂತೆ ಮಾಡಿದೆ.

ಇದರ ಜೊತೆಗೆ ಕರ್ನಾಟಕ ಸರ್ಕಾರದ ಈ ಭಾಷಾನೀತಿಯಿಂದಾಗಿ ಮಕ್ಕಳಿಗೆ ಪ್ರಥಮ ಭಾಷೆಯಾಗಿ ಭಾಷೆಯನ್ನು ಕಲಿಸುವ ಉದ್ದೇಶಕ್ಕು ಸರ್ಕಾರದ ಭಾಷಾನೀತಿಗೂ ಸಂಬಂಧವೇ ಇಲ್ಲದಾಯಿತು. ಏಕೆಂದರೆ ಮಗುವಿನ ಕಲಿಕೆಯ ಪ್ರಥಮ ಭಾಷೆಯು ಮಾತೃಭಾಷೆಯಾಗಿರಬೇಕು. ಅದು ಸಾಧ್ಯವಾಗದಿದ್ದಾಗ ಮಾತ್ರ ಪ್ರಾದೇಶಿಕ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಬೇಕು. ಆದರೆ ಕರ್ನಾಟಕ ಸರ್ಕಾರದ ಈ ಭಾಷಾನೀತಿಯಿಂದಾಗಿ ಮಗು ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಲು ಸಾಧ್ಯ ಇದ್ದಾಗಲೂ ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯದೆ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯಬೇಕಾಯಿತು. ಶಿಕ್ಷಣ ಸಂಸ್ಥೆಗಳು ಹಾಗೆ ಕಲಿಸಬೇಕಾಯಿತು. ಇದು ಕರ್ನಾಟಕದ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಹಕ್ಕನ್ನು ಕಸಿದುಕೊಂಡ ಹಾಗೆ ಆಗಿದೆ. ಇದರಿಂದ ಕರ್ನಾಟಕದ ಶಿಕ್ಷಣದಲ್ಲಿ ಸಂಸ್ಕೃತ ಪ್ರಥಮ ಭಾಷೆಯಾಗಿ ಬಳಕೆಯಾಗುವುದನ್ನು ನಿಯಂತ್ರಿಸಲು ರೂಪಿಸಲಾದ ಭಾಷಾನೀತಿಯಿಂದಾಗಿ ಭಾಷಾಅಲ್ಪಸಂಖ್ಯಾತರು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವುದರಿಂದ ವಂಚಿತರಾದರು. ಸರ್ಕಾರದ ಈ ನಡೆಯಿಂದ ಅಸಮಾಧಾನಗೊಂಡ ಶಿಕ್ಷಣ ಸಂಸ್ಥೆಗಳು ಮತ್ತು ಭಾಷಾಅಲ್ಪಸಂಖ್ಯಾತರು ಕರ್ನಾಟಕದ ಉಚ್ಚನ್ಯಾಯಾಲಯದಲ್ಲಿ ಸರ್ಕಾರದ ಭಾಷಾನೀತಿಯ ವಿರುದ್ಧವಾಗಿ ದಾವೆ ಹೂಡಿದ್ದಾರೆ.

ಆಗ ಕರ್ನಾಟಕದ ಉಚ್ಚನ್ಯಾಯಾಲಯವು ಸರ್ಕಾರ ಮತ್ತು ಶಿಕ್ಷಣ ಸಂಸ್ಥೆಗಳ ಪರ ಮತ್ತು ವಿರೋಧವಾಗಿ ನಡೆದ ಚರ್ಚೆಗಳನ್ನು ಗಮನಿಸಿ ಸಂವಿಧಾನದ ಚೌಕಟ್ಟಿಗೆ ಒಳಪಟ್ಟು ೧೯೮೯ರಲ್ಲಿ

ಕರ್ನಾಟಕ ಸರ್ಕಾರ ಹೊರಡಿಸಿದ್ದ "ಸರ್ಕಾರಿ ಆದೇಶ ಸಂಖ್ಯೆ ಇಡಿ ೧೧೩ ಎಸ್‌ಒಎಚ್ ೭೯ ದಿನಾಂಕ ೨೦ನೇ ಜುಲೈ ೧೯೮೨: ಸುತ್ತೋಲೆ ದಿನಾಂಕ ೧೧ನೇ ಆಗಸ್ಟ್ ೧೯೮೨- ಪ್ರಾಥಮಿಕ ಶಾಲೆಯ ಮೊದಲ ವರ್ಷದಿಂದ ಕನ್ನಡದ ವ್ಯಾಸಂಗವನ್ನು ಕಡ್ಡಾಯ ಮಾಡಿರುವುದು ಭಾರತ ಸಂವಿಧಾನದ ೧೪, ೨೯ ಹಾಗೂ ೩೦ನೇ ಅನುಚ್ಛೇದಗಳನ್ನು ಉಲ್ಲಂಘಿಸುತ್ತದೆ"[೧೩] ಎಂದು ಕರ್ನಾಟಕ ಸರ್ಕಾರದ ಭಾಷಾನೀತಿಯನ್ನು ಅನೂರ್ಜಿತಗೊಳಿಸಿದೆ. ಆದ್ದರಿಂದ ಸರ್ಕಾರದ ಈ ಭಾಷಾನೀತಿಯನ್ನು ಕುರಿತು ಪ್ರೊ. ಬರಗೂರು ರಾಮಚಂದ್ರಪ್ಪನವರು "ಸಂಸ್ಕೃತವೊಂದನ್ನೇ ತೆಗೆಯುವ ದಿಟ್ಟ ನಿರ್ಧಾರದ ಬದಲು ಕನ್ನಡವೊಂದನ್ನೇ ಉಳಿಸಿಕೊಳ್ಳುವ ಉಪಾಯದ ಜನಪ್ರಿಯ ಮಾರ್ಗ ಇದಾಗಿತ್ತು. ಸಂವಿಧಾನಾತ್ಮಕ ಅಗತ್ಯಗಳ ಪೂರೈಕೆಗಾಗಿ ಹೆಸರಿಗಾದರೂ ಕನ್ನಡದ ಜೊತೆಗೆ ಅಲ್ಪಸಂಖ್ಯಾತರ ಭಾಷೆಗಳಿರಬೇಕೆಂಬ ಅಂಶವನ್ನು ಇಲ್ಲಿ (ಉದ್ದೇಶಪೂರ್ವಕವಾಗಿಯೇ?) ಮರೆಯಾಲಾಗಿತ್ತು."[೧೪] ಎಂದಿದ್ದಾರೆ.

ಆದರೂ "ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ರಾಜ್ಯ ಸರ್ಕಾರವು ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ಸಲ್ಲಿಸಿತ್ತು. ಆದರೂ ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಕಾಯ್ದಿರಿಸಿ ರಾಜ್ಯ ಸರ್ಕಾರವು ದಿನಾಂಕ ೧೯ನೇ ಜೂನ್ ೧೯೮೯ರ ಆದೇಶದಲ್ಲಿ ಭಾಷಾನೀತಿಯನ್ನು ನಿರೂಪಿಸಿ ಆದೇಶ ಹೊರಡಿಸಿತ್ತು. ಆ ಆದೇಶದ ಪ್ರಕಾರ ೧ ರಿಂದ ೪ನೇ ತರಗತಿಯವರೆಗೆ ಮಕ್ಕಳು ಅಲ್ಲಿ ತಿಳಿಸಿದ ೮ ಭಾಷೆಗಳ (ಕನ್ನಡ ಮತ್ತು ಇಂಗ್ಲೀಷ್ ಸೇರಿದಂತೆ) ಪೈಕಿ ಒಂದು ಭಾಷೆಯನ್ನು ಮಾತ್ರ ಕಡ್ಡಾಯವಾಗಿ ಕಲಿಯಬೇಕು. ೫ ರಿಂದ ೭ನೇ ತರಗತಿಯವರೆಗೆ ಕನ್ನಡವನ್ನು ಪ್ರಥಮ ಭಾಷೆಯಾಗಿ ಅಭ್ಯಾಸ ಮಾಡದ ವಿದ್ಯಾರ್ಥಿಗಳಿಗೆ ಕನ್ನಡವನ್ನು ಕಲಿಸುವುದು. ಆದರೆ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದು ಕಡ್ಡಾಯವಲ್ಲ. ಮತ್ತು ೮ ರಿಂದ ೧೦ನೇ ತರಗತಿಯವರೆಗೆ ಮೂರು ಭಾಷೆಗಳ ಪೈಕಿ ಒಂದು ಭಾಷಾ ವಿಷಯವನ್ನಾಗಿ ಕನ್ನಡವನ್ನು ಕಡ್ಡಾಯವಾಗಿ ಕಲಿಯಬೇಕು."[೧೫] ಎಂದು ಆದೇಶಿಸಿದೆ.

ಇದರಿಂದಾಗಿ ಕರ್ನಾಟಕದಲ್ಲಿನ ಭಾಷಾ ಅಲ್ಪಸಂಖ್ಯಾತರು ಮತ್ತೆ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಸ್ವಾತಂತ್ರ್ಯವನ್ನು ಪಡೆದುಕೊಂಡರು. ಇದರ ನಡುವೆಯೇ ಕರ್ನಾಟಕ ರಾಜ್ಯ ಸರ್ಕಾರವು ೧೯೮೨ರ ಭಾಷಾನೀತಿಯ ಪರವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ತನ್ನ ವಾದವನ್ನು ಮಂಡಿಸುತ್ತಿತ್ತು. ಇದನ್ನು ಪರಿಶೀಲಿಸಿದ ಸರ್ವೋಚ್ಚ ನ್ಯಾಯಾಲಯವು ದಿನಾಂಕ ೮ನೇ ಡಿಸೆಂಬರ್ ೧೯೯೩ ರಂದು ತನ್ನ ತೀರ್ಪಿನಲ್ಲಿ ರಾಜ್ಯ ಉಚ್ಚನ್ಯಾಯಾಲಯದ ಆದೇಶಾನುಸಾರ ಹೊರಡಿಸಿದ ದಿನಾಂಕ ೧೯ನೇ ಜೂನ್ ೧೯೮೯ರ ಸರ್ಕಾರಿ ಆದೇಶದ ಸಿಂಧುತ್ವವನ್ನು ಎತ್ತಿ ಒಡಿದಿದೆ. ಹಾಗಾಗಿ ಕರ್ನಾಟಕ ಸರ್ಕಾರವು ಕರ್ನಾಟಕದ ಶಿಕ್ಷಣದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೆ ದಿನಾಂಕ ೨೯ನೇ ಏಪ್ರಿಲ್ ೧೯೯೪ರಂದು ಸರ್ಕಾರಿ ಆದೇಶ ಸಂಖ್ಯೆ: ಇಡಿ ೨೮ ಪಿಜಿಸಿ ೯೪ರಲ್ಲಿ ತನ್ನ ಅಂತಿಮ ಆದೇಶವನ್ನು ಹೊರಡಿಸಿದೆ. ಅದರ ಪ್ರಕಾರವಾಗಿ "ಸಾಮಾನ್ಯವಾಗಿ ಮಗುವಿನ ಮಾತೃಭಾಷೆಯೇ ಮಾಧ್ಯಮವಾಗಬೇಕೆಂದು ನಿರೀಕ್ಷೆಯಿರುವ ೧ ರಿಂದ ೪ನೇ

ತರಗತಿಯವರಗೆ ಅನುಬಂಧ-೧ ರಲ್ಲಿ ತಿಳಿಸಿರುವ ಭಾಷೆಗಳ ಪೈಕಿ ಒಂದು ಮಾತೃಭಾಷೆ ಅಥವಾ ಕನ್ನಡ ಮಾತ್ರ ಕಡ್ಡಾಯ ಭಾಷೆಯಾಗಿರುತ್ತದೆ."[೧೬] ಎಂದು ಹೇಳಿದೆ.

ಇಷ್ಟೆಲ್ಲಾ ಹೋರಾಟಗಳ ನಂತರ ಅಂತಿಮವಾಗಿ ಕರ್ನಾಟಕದಲ್ಲಿನ ಭಾಷಾಅಲ್ಪಸಂಖ್ಯಾತರ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಸ್ವಾತಂತ್ರ್ಯ ಪಡೆದಿದ್ದಾರೆ. ಇದರಿಂದ ಕರ್ನಾಟಕ ಸರ್ಕಾರದ ೧೯೯೪ರ ಭಾಷಾನೀತಿಯಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳಿಗೆ ಪ್ರಥಮ ಭಾಷೆಯಾಗಿ ಕಲಿಯುವ ಅವಕಾಶ ಮಾಡಿಕೊಟ್ಟಿದೆ. ಆದರೆ ಕರ್ನಾಟಕದಲ್ಲಿ ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಅವರ ಮಾತೃಭಾಷೆಗಳನ್ನು ಪ್ರಥಮ ಭಾಷೆಯಾಗಿ ಕಲಿಯುವ ಅಧಿಕಾರ ಕೊಟ್ಟಿಲ್ಲ. ಇದರಿಂದಾಗಿ ಭಾಷಾಅಲ್ಪಸಂಖ್ಯಾತರ ಎಲ್ಲಾ ಮಕ್ಕಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯವುದರಿಂದ ಈಗಲು ವಂಚಿತರಾಗುತ್ತಿದ್ದಾರೆ. ಇದಕ್ಕೆ ಎರಡು ಕಾರಣಗಳು ಪ್ರಧಾನವಾಗಿ ಕಾಣಿಸುತ್ತಿವೆ. ಒಂದು ಕರ್ನಾಟಕದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷಾಅಲ್ಪಸಂಖ್ಯಾತರ ಭಾಷೆಗಳು ಶಿಕ್ಷಣದಲ್ಲಿ ಬಳಕೆಯಾಗುವ ಸಾಮರ್ಥ್ಯ ಪಡೆಯದೇ ಇರುವುದು. ಎರಡು ಬೋಧನಾ ಮಾಧ್ಯಮ. ನಮ್ಮ ಶಿಕ್ಷಣ ಪದ್ಧತಿಯಲ್ಲಿ ಮಗುವಿನ ಮಾತೃಭಾಷೆಯ ಆಧಾರದಲ್ಲಿ ಪ್ರಥಮ ಭಾಷೆಯನ್ನು ಕಲಿಸುವ ವ್ಯವಸ್ಥೆ ನಿರ್ಮಾಣ ಆಗಿಲ್ಲ. ಬದಲಾಗಿ ಮಗು ಕಲಿಯಲು ಆಯ್ಕೆ ಮಾಡಿಕೊಳ್ಳುವ ಭಾಷಾಮಾಧ್ಯಮದ ಆಧಾರದಲ್ಲಿ ಮಗುವಿನ ಪ್ರಥಮ ಭಾಷೆಯ ಕಲಿಕೆ ನಿರ್ಧರಿತವಾಗುತ್ತಿದೆ. ಇದು ಆಯಾ ಭಾಷಾಸಮುದಾಯದ ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ತಮ್ಮ ಮಾತೃಭಾಷೆಯಲ್ಲಿಯೇ ಕಲಿಯುತ್ತಾರೆ ಎಂಬ ನಂಬಿಕೆಯಿಂದ ಚಾಲನೆಗೆ ಬಂದಿದೆ. ಆದರೆ ಕರ್ನಾಟಕದ ಎಲ್ಲಾ ಮಕ್ಕಳು ತಮ್ಮ ಮಾತೃಭಾಷಾಮಾಧ್ಯಮದಲ್ಲಿ ಪ್ರಾಥಮಿಕ ಶಿಕ್ಷಣ ಕಲಿತಿಲ್ಲ, ಕಲಿಯುತ್ತಿಲ್ಲ. ಇದಕ್ಕೆ ಹಲವು ಕಾರಣಗಳು ಇವೆ. ಇವುಗಳನ್ನು **"ಭಾಷಾಅಲ್ಪಸಂಖ್ಯಾತರು: ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು"** ಎಂಬ ಭಾಗದಲ್ಲಿ ಚರ್ಚಿಸಲಾಗಿದೆ.

ಇಲ್ಲಿ ಭಾಷಾಮಾಧ್ಯಮದ ಸಮಸ್ಯೆ ಏನೇಇದ್ದರೂ ಭಾಷಾಕಲಿಕೆ ವಿಚಾರದಲ್ಲಿ ಮಗು ತನ್ನ ಮಾತೃಭಾಷಾಮಾಧ್ಯಮದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಲಿತಿದ್ದರೆ ಅದರ ಪ್ರಥಮ ಭಾಷೆ ಮಾತೃಭಾಷೆಯಾಗಿದೆ. ಮಗು ತನ್ನ ಮಾತೃಭಾಷಾಮಾಧ್ಯಮದಲ್ಲಿ ಕಲಿಯದೆ ಅನ್ಯಭಾಷಾಮಾಧ್ಯಮದ ಮೂಲಕ ಪ್ರಾಥಮಿಕ ಶಿಕ್ಷಣ ಕಲಿತಿದ್ದರೆ ಆಗ ಮಗುವಿಗೆ ಬಹುತೇಕವಾಗಿ ಮಗು ಯಾವ ಭಾಷಾಮಾಧ್ಯಮದಲ್ಲಿ ಕಲಿತಿದೆಯೋ ಆ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿತಿದೆ. ಉದಾಹರಣೆಗೆ ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯುವ ಉರ್ದು ಮಗುವಿನ ಪ್ರಥಮಭಾಷೆ ಇಂಗ್ಲಿಶ್, ಕನ್ನಡ ಮಾಧ್ಯಮದಲ್ಲಿ ಕಲಿಯುವ ಮರಾಠಿ ಮಗುವಿನ ಪ್ರಥಮಭಾಷೆ ಕನ್ನಡ, ತಮಿಳು ಮಾಧ್ಯಮದಲ್ಲಿ ಕಲಿಯುವ ತಮಿಳು ಮಗುವಿನ ಪ್ರಥಮ ಭಾಷೆ ತಮಿಳು, ತೆಲುಗು ಭಾಷಾಮಾಧ್ಯಮದಲ್ಲಿ ಕಲಿಯುವ ಕನ್ನಡ ಮಗುವಿನ ಪ್ರಥಮಭಾಷೆ ತೆಲುಗು. ಹೀಗೆ ಮಗುವಿನ ಮಾತೃಭಾಷೆ ಯಾವುದೇ ಆಗಿದ್ದರೂ ಮಗುವಿನ ಕಲಿಕೆಯ ಮಾಧ್ಯಮವನ್ನು ಆಧರಿಸಿ ಪ್ರಾಥಮಿಕ ಹಂತದಲ್ಲಿ ಮಗುವಿಗೆ ಪ್ರಥಮ ಭಾಷೆಯನ್ನು ಕಲಿಸಲಾಗುತ್ತಿದೆ. ಇದರಿಂದಾಗಿ ಹೆಚ್ಚಿನ

ಭಾಷಾಅಲ್ಪಸಂಖ್ಯಾತರ ಮಕ್ಕಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವುದರಿಂದ ವಂಚಿತವಾಗುತ್ತಿವೆ. ಸರ್ಕಾರದ ಭಾಷಾನೀತಿಯ ಪ್ರಕಾರ ಮಗು ತನ್ನ ಮಾತೃಭಾಷಾಮಾಧ್ಯಮದಲ್ಲಿ ಶಿಕ್ಷಣ ಕಲಿಯಲು ಸಾಧ್ಯವಾಗದಿದ್ದರೂ ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಬಹುದು. ಆದರೆ ರಾಜ್ಯದಲ್ಲಿನ ಎಲ್ಲಾ ಶಾಲೆಗಳಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಪ್ರಥಮ ಭಾಷೆಯಾಗಿ ಕಲಿಸುತ್ತಿಲ್ಲ. ಏಕೆಂದರೆ ಹಾಗೆ ವಿದ್ಯಾರ್ಥಿಗಳ ಮಾತೃಭಾಷೆಗಳನ್ನು ಪ್ರಥಮ ಭಾಷೆಯಾಗಿ ಕಲಿಸಲು ಶಾಲೆಗಳಿಗೆ ಶಿಕ್ಷಕರ ಹುದ್ದೆಗಳ ಮಂಜೂರಾತಿ ಆಗಬೇಕಾಗುತ್ತದೆ. ಹಾಗೆಯೇ ಶಿಕ್ಷಕರ ಹುದ್ದೆಗಳು ಮಂಜೂರಾದ ಅನಂತರ ಆ ಹುದ್ದೆಗಳಿಗೆ ನೇಮಕಾತಿ ಆಗಬೇಕಾಗುತ್ತದೆ. ಆದರೆ ರಾಜ್ಯದ ಎಲ್ಲಾ ಶಾಲೆಗಳಿಗೆ ವಿದ್ಯಾರ್ಥಿಗಳ ಮಾತೃಭಾಷೆಯನ್ನು ಆಧರಿಸಿ ನೇಮಕಾತಿ ಪ್ರಕ್ರಿಯೆಗಳು ಆಗಿಲ್ಲ.

ಹೀಗಾಗಿ ಕರ್ನಾಟಕದಲ್ಲಿ ಭಾಷಾಅಲ್ಪಸಂಖ್ಯಾತ ಸಮುದಾಯಗಳ ರಕ್ಷಣೆ ಮತ್ತು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಭಾಷಾಅಲ್ಪಸಂಖ್ಯಾತರ ಮಕ್ಕಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಬಹುದು ಎಂದು ರಾಜ್ಯ ಸರ್ಕಾರ ತನ್ನ ಭಾಷಾನೀತಿಯಲ್ಲಿ ಹೇಳಿದ್ದರೂ, ಭಾಷಾಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗಿಲ್ಲ. ಏಕೆಂದರೆ ಕರ್ನಾಟಕದಲ್ಲಿ ಈಗಾಗಲೇ ಹೇಳಿರುವ ಹಾಗೆ ಭಾಷಾಅಲ್ಪಸಂಖ್ಯಾತರಿಗೆ ಅವರ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಅವಕಾಶ ಕಲ್ಪಿಸಲಾಗಿದ್ದರು, ಭಾಷಾನೀತಿಗೆ ಅನುಗುಣವಾಗಿ ಭಾಷೆಗಳನ್ನು ಕಲಿಯಲು ಪೂರಕ ವಾತಾವರಣ ಶಾಲೆಗಳಲ್ಲಿ ನಿರ್ಮಿಸಿಲ್ಲ. ಏಕೆಂದರೆ ಒಂದೊಂದು ತರಗತಿಗೆ ಬೆರಳೆಣಿಕೆಯಷ್ಟು ಭಾಷಾಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ದಾಖಲಾದರೆ ಅವರುಗಳು ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುವುದಕ್ಕೆ ಶಿಕ್ಷಣ ಸಂಸ್ಥೆಗಳಿಗೆ ಮತ್ತು ಸರ್ಕಾರಕ್ಕೆ ಆರ್ಥಿಕವಾಗಿ ಮತ್ತು ಆಡಳಿತಾತ್ಮಕವಾಗಿ ತೊಂದರೆ ಎದುರಾಗುತ್ತದೆ. ಇದರಿಂದಾಗಿ ಶಿಕ್ಷಣ ಸಂಸ್ಥೆಗಳು ಮಗುವಿನ ಕಲಿಕಾ ಮಾಧ್ಯಮವನ್ನು ಆಧರಿಸಿ ಮಗುವಿಗೆ ಪ್ರಥಮ ಭಾಷೆಯನ್ನು ಕಲಿಸುತ್ತಿವೆ. ಇನ್ನು ಪ್ರಾಥಮಿಕ ಹಂತದಲ್ಲಿ ಮಗು ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿತರೆ ಅದು ಮಾಧ್ಯಮಿಕ ಮತ್ತು ಪ್ರೌಢಶಾಲಾ ಹಂತದಲ್ಲಿ ತನ್ನ ಮಾತೃಭಾಷೆಯನ್ನೇ ಪ್ರಥಮ ಭಾಷೆಯಾಗಿ ಕಲಿಯುವಂತಹ ವ್ಯವಸ್ಥೆ ಇರುವ ಶಾಲೆಗಳನ್ನು ಆಯ್ಕೆಮಾಡಿಕೊಂಡು ದಾಖಲಾಗಬೇಕು. ಇಲ್ಲವೆ ತಾನು ದಾಖಲಾದ ಶಾಲೆಯಲ್ಲಿ ಯಾವ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುತ್ತಿರುತ್ತಾರೋ ಆ ಭಾಷೆಯನ್ನೇ ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು ಕಲಿಯಬೇಕು. ಅದೂ ಸಾಧ್ಯವಾಗದಿದ್ದಾಗ ಮಗು ಶಾಲೆಗಳಲ್ಲಿ ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು, ಅದನ್ನು ತಾನೇ ಸ್ವತಂತ್ರವಾಗಿ ಓದಿ, ಇಲ್ಲವೆ ತಿಳಿದವರಿಂದ ಕಲಿತು ಪರೀಕ್ಷೆಯಲ್ಲಿ ಉತ್ತರ ಬರೆದು ಉತ್ತೀರ್ಣವಾಗಬೇಕು. ಇಲ್ಲದಿದ್ದರೆ ಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡರೆ ಶಿಕ್ಷಣದಿಂದ ವಂಚಿತವಾಗಬೇಕು.

ಇದಕ್ಕೆ ಸಂಬಂಧಪಟ್ಟ ಹಾಗೆ ಮೌಲ್ಯಮಾಪನದಲ್ಲಿ ರಿಯಾಯಿತಿಯಾಗಲಿ ಇಲ್ಲ. ಇದರಿಂದ ಮಗು ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಪ್ರಾಥಮಿಕ ಶಾಲೆಯಲ್ಲಿ ತನ್ನ ಮಾತೃಭಾಷಾಮಾಧ್ಯಮದಲ್ಲಿ ಕಲಿಯಬೇಕು. ಹಾಗೆಯೇ ಮಾಧ್ಯಮಿಕ ಮತ್ತು ಪ್ರೌಢಶಿಕ್ಷಣವನ್ನು ಕೂಡ ತನ್ನ ಮಾತೃಭಾಷಾಮಾಧ್ಯಮದಲ್ಲಿ ಕಲಿಯಬೇಕು. ಆಗ ಮಾತ್ರ ಮಗು ಮಾಧ್ಯಮಿಕ ಹಂತದಲ್ಲಿ ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗಿದೆ. ಪ್ರಾಥಮಿಕ ಶಿಕ್ಷಣವನ್ನು ಮಗು ತನ್ನ ಮಾತೃಭಾಷಾಮಾಧ್ಯಮದಲ್ಲಿ ಕಲಿತು ಮಾಧ್ಯಮಿಕ ಮತ್ತು ಪ್ರೌಢಶಿಕ್ಷಣದಲ್ಲಿ ಕಲಿಕಾ ಮಾಧ್ಯಮವನ್ನು ಬದಲಾಯಿಸಿರುವಾಗ ಮಗುವಿನ ಪ್ರಥಮ ಭಾಷಾಕಲಿಕೆ ಹೆಚ್ಚಿನ ಸಂದರ್ಭದಲ್ಲಿ ಬದಲಾಗಿದೆ. ಹೀಗೆ ಬದಲಾವಣೆ ಮಾಡಿಕೊಳ್ಳುವುದು ಮಗುವಿಗೆ ಕಡ್ಡಾಯವೇನು ಇಲ್ಲ. ಆದರೂ ಕೆಲವು ಶಾಲೆಗಳ ಮುಖ್ಯಸ್ಥರು ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಪ್ರಥಮ ಭಾಷಾಕಲಿಕೆಯನ್ನು ಬದಲಾವಣೆ ಮಾಡಿದ್ದಾರೆ. ಇದು ಶಾಲಾಮುಖ್ಯಸ್ಥರು ಭಾಷಾಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಮಕ್ಕಳಿಗೆ ಅವರ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುವುದನ್ನು ತಪ್ಪಿಸುವ ಉದ್ದೇಶದಿಂದ ಮಾಡಿರುವ ಕೆಲಸವಲ್ಲ. ಬದಲಾಗಿ ಸರ್ಕಾರ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅನುಕೂಲವಾಗುವಂತೆ ಭಾಷಾನೀತಿಯನ್ನು ಹೊರಡಿಸಿದ್ದರೂ, ಅದಕ್ಕನುಗುಣವಾಗಿ ಭಾಷೆಗಳನ್ನು ಕಲಿಸಲು ಭಾಷಾಸಂಯೋಜನೆಯ ಅನುಮತಿ ನೀಡಬೇಕು. ಆದರೆ ಕರ್ನಾಟಕದ ಎಲ್ಲಾ ಶಾಲೆಗಳಿಗೂ ಭಾಷಾಅಲ್ಪಸಂಖ್ಯಾತರು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವುದಕ್ಕೆ ಅನುಕೂಲವಾಗುವಂತೆ ಭಾಷಾಸಂಯೋಜನೆಗೆ ಅನುಮತಿ ನೀಡಿಲ್ಲ. ಇದರ ಜೊತೆಗೆ ಶಿಕ್ಷಕ ಹುದ್ದೆಗಳ ಮಂಜೂರಾಗಿ, ಮಂಜೂರಾಗಿರುವ ಹುದ್ದೆಗಳಿಗೆ ಸಮರ್ಪಕವಾಗಿ ಭಾಷಾಶಿಕ್ಷಕರನ್ನು ನೇಮಕ ಮಾಡಿಲ್ಲ. ಇದರಿಂದಾಗಿ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಅವಕಾಶ ಮಾಡಿಕೊಟ್ಟರೆ ಅವರಿಗೆ ಅವರ ಮಾತೃಭಾಷೆಯನ್ನು ಬೋಧಿಸಲು ಶಿಕ್ಷಕರು ಇಲ್ಲದೆ, ವಿದ್ಯಾರ್ಥಿಗಳು ಸ್ವತಂತ್ರವಾಗಿ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗದೇ ಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತರಾಗುತ್ತಾರೆ. ಇದನ್ನು ತಪ್ಪಿಸಿ ಅವರ ಶೈಕ್ಷಣಿಕ ಬದುಕು ಮುಂದುವರೆಯಲಿ ಎಂಬ ಸದುದ್ದೇಶದಿಂದ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು ಶಾಲೆಗೆ ದಾಖಲಾಗುವುದಕ್ಕೆ ನಿರಾಕರಿಸಿದ್ದಾರೆ.

ಇದರಿಂದಾಗಿ ಭಾಷಾಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ತಮ್ಮ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಲು ಅನುಮತಿ ಪಡೆದು ಅದಕ್ಕೆ ಪೂರಕ ವ್ಯವಸ್ಥೆ ಮಾಡಿರುವ ಶಾಲೆಗಳಿಗೆ ದಾಖಲಾಗಬೇಕಿದೆ. ಇಲ್ಲವೆ ದೂರದ ಊರುಗಳಲ್ಲಿ ಇರುವ ತಮ್ಮ ಮಾತೃಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಆಗಬೇಕಿದೆ. ಮಕ್ಕಳು ಚಿಕ್ಕವಯಸ್ಸಿನಲ್ಲಿ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಹೀಗೆ ದೂರದ ಊರುಗಳಿಗೆ ಪ್ರತಿನಿತ್ಯ ಪ್ರಯಾಣ ಬೆಳೆಸಿ ತಮ್ಮ ಭಾಷೆಯನ್ನು ಕಲಿಯುವುದು ಕಷ್ಟದ ಕೆಲಸ.

ಇದರಿಂದಾಗಿ ಭಾಷಾಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಹೆಚ್ಚಿನ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ತಮ್ಮ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುವ ಶಾಲೆಗಳನ್ನು ಹುಡುಕಿಕೊಂಡು ಹೋಗಿ ಕಲಿಯುವ ಸಾಹಸದ ಕೆಲಸಕ್ಕೆ ಕೈಹಾಕಿಲ್ಲ. ತಾವು ವಾಸಿಸುವ ಪ್ರದೇಶದಲ್ಲಿ ಅಥವಾ ಹತ್ತಿರದ ಶಾಲೆಗಳಲ್ಲಿ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುವ ಶಾಲೆಗಳು ಇದ್ದರೆ ಅಂತಹ ಕಡೆಗಳಲ್ಲಿ ಮಾತ್ರ ಭಾಷಾಅಲ್ಪಸಂಖ್ಯಾತರ ಮಕ್ಕಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿತ್ತಿದ್ದಾರೆ. ಇಂತಹ ವ್ಯವಸ್ಥೆ ಇಲ್ಲದ ಕಡೆಗಳಲ್ಲಿ ವಿದ್ಯಾರ್ಥಿ ದಾಖಲಾದ ಶಾಲೆಯಲ್ಲಿ ಯಾವ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸಲಾಗುತ್ತಿತ್ತೋ ಅದೇ ಭಾಷೆಯನ್ನೇ ತಮ್ಮ ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು ಕಲಿತ್ತಿದ್ದಾರೆ. ರಾಜ್ಯದಲ್ಲಿ ಈಗಲೂ ಇಂತಹದೇ ಪರಿಸ್ಥಿತಿ ಇದೆ.

ಇನ್ನು ಪದವಿಪೂರ್ವ ಕಾಲೇಜುಗಳಲ್ಲಿ ಕನ್ನಡ, ಇಂಗ್ಲಿಶ್, ತಮಿಳು, ಮಲಯಾಳಂ, ಮರಾಠಿ, ಹಿಂದಿ, ತೆಲುಗು, ಉರ್ದು, ಸಂಸ್ಕೃತ, ಅರೇಬಿಕ್ ಮತ್ತು ಫ್ರೆಂಚ್ ಒಟ್ಟು ಹನ್ನೊಂದು ಭಾಷೆಗಳನ್ನು ಕಲಿಯಲು ಅವಕಾಶ ಕಲ್ಪಿಸಲಾಗಿದೆ. ಇದರಲ್ಲಿ ವಿದ್ಯಾರ್ಥಿಗಳು ಯಾವುದಾದರು ಎರಡು ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕು. ಹಾಗೆಯೇ ಅವುಗಳಲ್ಲಿ ಉತ್ತೀರ್ಣವಾಗಬೇಕು. ಇಲ್ಲಿ ಎರಡು ಭಾಷೆಗಳನ್ನು ಆಯ್ಕೆಮಾಡಿಕೊಂಡು ಕಲಿಯದೆ, ಅವುಗಳಲ್ಲಿ ಉತ್ತೀರ್ಣವಾಗದೆ ಪದವಿಪೂರ್ವ ಶಿಕ್ಷಣ ಪೂರ್ಣಗೊಳಿಸಲು ಸಾಧ್ಯವಿಲ್ಲ. ಹೀಗಾಗಿ ಪದವಿಪೂರ್ವ ಶಿಕ್ಷಣದಲ್ಲಿ ಎರಡು ಭಾಷೆಗಳ ಕಲಿಕೆ ಮತ್ತು ಪರೀಕ್ಷೆ ಕಡ್ಡಾಯವಾಗಿದೆ. ಆದರೆ ಇಲ್ಲಿ ಸರ್ಕಾರ ತನ್ನ ಭಾಷಾನೀತಿಯಲ್ಲಿ ಭಾಷಾಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಅವರ ಮಾತೃಭಾಷೆಯನ್ನು ಒಂದು ಭಾಷೆಯಾಗಿ ಕಲಿಯಲು ಅವಕಾಶ ಕಲ್ಪಿಸಲಾಗಿದ್ದರೂ ಆ ಪ್ರಕಾರ ಎಲ್ಲಾ ವಿದ್ಯಾರ್ಥಿಗಳು ಅವರ ಮಾತೃಭಾಷೆಯನ್ನು ಕಲಿಯಲು ಸಾಧ್ಯವಾಗಿಲ್ಲ. ಏಕೆಂದರೆ ಭಾಷಾಅಲ್ಪಸಂಖ್ಯಾತ ವಿದ್ಯಾರ್ಥಿಗಳು ಅವರ ಮಾತೃಭಾಷೆಯನ್ನು ಒಂದು ಭಾಷೆಯಾಗಿ ಕಲಿಯಲು ವಿದ್ಯಾರ್ಥಿ ದಾಖಲಾಗಿರುವ ಕಾಲೇಜಿನವರು ಆ ಭಾಷಾಸಂಯೋಜನೆಗೆ ಪದವಿಪೂರ್ವ ಶಿಕ್ಷಣ ಇಲಾಖೆಯಿಂದ ಅನುಮತಿ ಪಡೆದಿರಬೇಕು. ಇಲ್ಲವೇ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಕಲಿಸಲು ಸಂಯೋಜನೆಗೆ ಅನುಮತಿ ಪಡೆದಿರುವ ಕಾಲೇಜುಗಳನ್ನು ಆಯ್ಕೆಮಾಡಿಕೊಳ್ಳಬೇಕು. ಹೀಗೆ ಅನುಮತಿ ಪಡೆಯದ ಕಾಲೇಜುಗಳಿಗೆ ವಿದ್ಯಾರ್ಥಿಗಳು ದಾಖಲಾದರೆ ಅಲ್ಲಿ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಖಾಸಗಿ ವಿಷಯವಾಗಿ ಆಯ್ಕೆಮಾಡಿಕೊಂಡು ಸಾಮಾನ್ಯ ವಿದ್ಯಾರ್ಥಿಗಳಿಗಿಂತ ಹೆಚ್ಚುವರಿಯಾಗಿ ೫೦೦ರೂ ಶುಲ್ಕವನ್ನು ಕಟ್ಟಿ ತಾನೇ ಓದಿ, ಅರ್ಥೈಸಿಕೊಂಡು ಪರೀಕ್ಷೆಯಲ್ಲಿ ಉತ್ತರ ಬರೆದು ಉತೀರ್ಣವಾಗಬೇಕು.

ಏಕೆಂದರೆ ಭಾಷಾಸಂಯೋಜನೆಗೆ ಅನುಮತಿ ಪಡೆಯದ ಕಾಲೇಜುಗಳಿಗೆ ಸರ್ಕಾರ ಉಪನ್ಯಾಸಕರ ಹುದ್ದೆಗಳು ಮಂಜೂರು ಮಾಡಿಲ್ಲ. ಆದುದರಿಂದ ಇಲ್ಲಿ ಭಾಷಾಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಅವರ ಭಾಷಾಸಂಯೋಜನೆಗೆ ಅನುಮತಿ ಪಡೆಯದ ಕಾಲೇಜುಗಳಲ್ಲಿ

ಅಲ್ಪಸಂಖ್ಯಾತರ ಮಾತೃಭಾಷೆಯನ್ನು ಬೋಧಿಸಲು ಉಪನ್ಯಾಸಕರಿಲ್ಲ. ಹೀಗಾಗಿ ಪ್ರಾಥಮಿಕ ಹಂತದಿಂದ ಪ್ರೌಢಶಿಕ್ಷಣದವರೆಗೆ ಮಾತೃಭಾಷಾಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳು ಕಾಲೇಜು ಶಿಕ್ಷಣಕ್ಕೆ ಪ್ರವೇಶಿಸಿದಾಗ ತನ್ನ ಮಾತೃಭಾಷೆಯನ್ನು ಕಲಿಸುವಂತಹ ವ್ಯವಸ್ಥೆ ಇಲ್ಲದಿರುವ ಕಾಲೇಜುಗಳಿಗೆ ದಾಖಲಾದರೆ ಆಗ ವಿದ್ಯಾರ್ಥಿಗಳು ತನ್ನ ಮಾತೃಭಾಷೆಗೆ ಪರ್ಯಾಯವಾಗಿ ಮತ್ತೊಂದು ಭಾಷೆಯನ್ನು ಕಡ್ಡಾಯವಾಗಿ ಆಯ್ಕೆಮಾಡಿಕೊಳ್ಳಬೇಕು. ಸಾಮಾನ್ಯವಾಗಿ ಗಡಿಭಾಗಗಳನ್ನು ಹೊರತು ಪಡಿಸಿದರೆ ಉಳಿದಂತೆ ಗ್ರಾಮೀಣ ಭಾಗದ ಸರ್ಕಾರಿ ಪದವಿಪೂರ್ವ ಕಾಲೇಜುಗಳಲ್ಲಿ ಕನ್ನಡವನ್ನು ಮಾತ್ರ ಪ್ರಥಮ ಭಾಷೆಯಾಗಿ ಕಲಿಸಲಾಗುತ್ತಿದೆ. ಖಾಸಗಿ ಪದವಿಪೂರ್ವ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆಯನ್ನು ಆಧರಿಸಿ ಅವರುಗಳ ಮಾತೃಭಾಷೆಯನ್ನು ಕಲಿಯಲು ಅವಕಾಶ ಕಲ್ಪಿಸಿದ್ದಾರೆ. ಇನ್ನು ನಗರದ ಪದವಿಪೂರ್ವ ಕಾಲೇಜುಗಳಲ್ಲಿ ಕನ್ನಡ, ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿ ಕಲಿಸುತ್ತಿದ್ದರೆ ಮತ್ತೆ ಕೆಲವು ಕಾಲೇಜುಗಳಲ್ಲಿ ಹಿಂದಿ, ಉರ್ದುಗಳನ್ನು ಪ್ರಥಮ ಭಾಷೆಯಾಗಿ ಕಲಿಸಲಾಗುತ್ತಿದೆ. ಹೀಗಾಗಿ ಭಾಷಾಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ತಾನು ದಾಖಲಾಗುವ ಕಾಲೇಜಿನಲ್ಲಿ ಯಾವ ಭಾಷೆ ಅಥವಾ ಭಾಷೆಗಳನ್ನು ಪ್ರಥಮ ಭಾಷೆಯಾಗಿ ಕಲಿಸುತ್ತಿದ್ದಾರೋ ಅದರಲ್ಲಿ ಒಂದನ್ನು ಆಯ್ಕೆಮಾಡಿಕೊಂಡು ಕಲಿಯಬೇಕಿದೆ. ಇಲ್ಲವೇ ಖಾಸಗಿಯಾಗಿ ಕಟ್ಟಿ ಸ್ವತಃ ತಾವೇ ಓದಿ ತಮ್ಮ ಮಾತೃಭಾಷೆಯನ್ನು ಕಲಿತು ಪರೀಕ್ಷೆಯಲ್ಲಿ ಉತ್ತೀರ್ಣವಾಗಬೇಕು.

ಸಾಮಾನ್ಯವಾಗಿ ವಿದ್ಯಾರ್ಥಿಗಳು ಕಾಲೇಜು ಹಂತದಲ್ಲಿ ಅನ್ಯಭಾಷೆಯನ್ನು ಮೊದಲ ಬಾರಿಗೆ ಪ್ರಥಮ ಭಾಷೆಯಾಗಿ ಆಯ್ಕೆಮಾಡಿಕೊಂಡು ಕಲಿಯುವಾಗ ಆತಂಕಕ್ಕೆ ಒಳಗಾಗಿದ್ದಾರೆ. ಹಾಗೆಯೆ ಕಲಿಕೆಯಲ್ಲಿ ಹಿಂದೆ ಉಳಿದುಕೊಂಡಿದ್ದಾರೆ. ಏಕೆಂದರೆ ಪ್ರಾಥಮಿಕ ಹಂತದಿಂದ ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಆಯ್ಕೆ ಮಾಡಿಕೊಂಡು ಕಲಿತಿರುವ ವಿದ್ಯಾರ್ಥಿಗಳು ಕಾಲೇಜಿನಲ್ಲಿ ಮೊದಲ ಭಾರಿಗೆ ಅನ್ಯಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವಾಗ ಪ್ರಥಮ ಭಾಷೆಯನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗದೆ ಭಾಷಾಕಲಿಕೆಯ ಒತ್ತಡದ ಸುಳಿಯಲ್ಲಿ ಸಿಲುಕಿದ್ದಾರೆ. ಇದರಿಂದ ಸಾಕಷ್ಟು ಜನ ವಿದ್ಯಾರ್ಥಿಗಳು ಪ್ರತೀವರ್ಷ ಶಿಕ್ಷಣದಿಂದಲೇ ವಂಚಿತರಾಗುತ್ತಿದ್ದಾರೆ. ಇದೇ ಪರಿಸ್ಥಿತಿ ಕಾಲೇಜು ಶಿಕ್ಷಣ ಇಲಾಖೆಯ ಕಾಲೇಜುಗಳಲ್ಲಿಯೂ ಇದೆ. ಪದವಿ ತರಗತಿಯ ಎರಡು ವರ್ಷ ಎರಡು ಭಾಷೆಗಳ ಕಲಿಕೆ ಕಡ್ಡಾಯವಾಗಿದೆ. ಇಲ್ಲಿ ಭಾಷಾಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಕಲಿಯಲು ಹೆಚ್ಚುವರಿಯಾಗಿ ಶುಲ್ಕವನ್ನು ಕಟ್ಟಬೇಕಿಲ್ಲವಾದರು ಅವರುಗಳ ಭಾಷೆಯನ್ನು ಬೋಧನೆ ಮಾಡಲು ಶಿಕ್ಷಕ ಹುದ್ದೆಗಳ ಮಂಜೂರು, ಶಿಕ್ಷಕರ ನೇಮಕಾತಿ ಪ್ರಕ್ರಿಯೆಗಳು ಆಗಿಲ್ಲ. ಇದರಿಂದಾಗಿ ಭಾಷಾಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ಪದವಿ ಶಿಕ್ಷಣದಲ್ಲೂ ಪದವಿಪೂರ್ವ ಕಾಲೇಜುಗಳಲ್ಲಿ ತಮ್ಮ ಮಾತೃಭಾಷೆಯನ್ನು ಭಾಷೆಯಾಗಿ ಕಲಿಯಲು ಸಮಸ್ಯೆಗಳನ್ನು ಎದುರಿಸುತ್ತಿರುವ ಹಾಗೆ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಹೀಗಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಭಾರತ ಸಂವಿಧಾನದ ಚೌಕಟ್ಟಿಗೆ ಒಳಗಾಗಿ ತನ್ನ ಭಾಷಾನೀತಿಯಲ್ಲಿ ಭಾಷಾಅಲ್ಪಸಂಖ್ಯಾತರು ತಮ್ಮ ಮಾತೃಭಾಷೆಗಳನ್ನು ಭಾಷೆಯಾಗಿ

ಕಲಿಯಲು ಅನುಕೂಲ ಆಗುವಂತೆ ಭಾಷಾನೀತಿಯನ್ನು ರೂಪಿಸಿವೆ. ಆದರೆ ಇದುವರೆಗೆ ಚರ್ಚಿಸಿದ ಕಾರಣಗಳಿಂದಾಗಿ ಭಾಷಾಅಲ್ಪಸಂಖ್ಯಾತರ ಮಕ್ಕಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗದೆ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇವುಗಳ ನಡುವೆಯು ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಭಾಷಾನೀತಿಯ ಅನ್ವಯ ಮೂರು ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕಿರುವುದರಿಂದ ಮತ್ತು ಪರೀಕ್ಷೆಯಲ್ಲಿ ಉತ್ತೀರ್ಣವಾಗ ಬೇಕಿರುವುದರಿಂದ ತಮ್ಮ ಮಾತೃಭಾಷೆಯ ಬದಲಿಗೆ ರಾಜ್ಯದಲ್ಲಿ ಬದುಕನ್ನು ಕಟ್ಟಿಕೊಡುವ ಭಾಷೆಗಳೆಂದು ಬಿಂಬಿತವಾಗಿರುವ ಮತ್ತು ಕಡ್ಡಾಯವಾಗಿ ಕಲಿಯಬೇಕಿರುವ ಇಂಗ್ಲಿಶ್, ಹಿಂದಿ ಮತ್ತು ಕನ್ನಡದಂತಹ ಭಾಷೆಗಳನ್ನು ಕಲಿಯಲು ಆಸಕ್ತರಾಗಿದ್ದಾರೆ. ಹೀಗಾಗಿ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಆಸಕ್ತಿಯಿದ್ದರೂ ಇದುವರೆಗೆ ಚರ್ಚಿಸಿದ ಕಾರಣಗಳಿಂದಾಗಿ ಮಾತೃಭಾಷೆಯನ್ನು ಕಲಿಯುವುದರಿಂದ ವಂಚಿತರಾಗಿದ್ದಾರೆ. ಹೀಗಾಗಿ ಕರ್ನಾಟಕ ಸರ್ಕಾರ ಭಾಷಾಅಲ್ಪಸಂಖ್ಯಾತರ ಅನುಕೂಲಕ್ಕಾಗಿ ಭಾಷಾನೀತಿಯನ್ನು ಜಾರಿಗೊಳಿಸಿದ್ದರೂ ಅವು ಇದುವರೆಗೆ ಸಂಪೂರ್ಣವಾಗಿ ಅನುಷ್ಠಾನವಾಗಿಲ್ಲ. ಬದಲಾಗಿ ಏಕೀಕರಣದ ನಂತರದ ಕರ್ನಾಟಕದಲ್ಲಿ ಭಾಷಾಕಲಿಕೆ ಮತ್ತು ಕಲಿಸುವಿಕೆಯ ಸಮಸ್ಯೆ ಹೊಸ ರೂಪ ಕೊಟ್ಟಿವೆ. ಭಾಷಾಅಲ್ಪಸಂಖ್ಯಾತರ ಭಾಷಿಕ ಸಮಸ್ಯೆಗಳು ಮಾತ್ರ ಹಾಗೇ ಉಳಿದಿವೆ.

**ಅನ್ಯಭಾಷೆಯನ್ನು: ಪ್ರಥಮ ಭಾಷೆಯಾಗಿ ಕಲಿಕೆ ಮತ್ತು ಸಮಸ್ಯೆಗಳು:** ಕರ್ನಾಟಕ ಸರ್ಕಾರ ೧೯೯೪ರ ತನ್ನ ಭಾಷಾನೀತಿಯಲ್ಲಿ ಸಾಮಾನ್ಯವಾಗಿ ಮಗುವಿನ ಮಾತೃಭಾಷೆ ಪ್ರಥಮ ಭಾಷೆಯಾಗಿರುತ್ತದೆ. ಇದು ಸಾಧ್ಯವಾಗದಿದ್ದಾಗ ಮಾತ್ರ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಮಗುವಿಗೆ ಪ್ರಥಮ ಭಾಷೆಯಾಗಿ ಕಲಿಸಬೇಕು ಎಂದು ಹೇಳಿದೆ. ಇದು ಹಲವು ಸಮಸ್ಯೆಗಳಿಗೆ ಕಾರಣವಾಗಿದೆ. ಹೇಗೆಂದರೆ ಕರ್ನಾಟಕದಲ್ಲಿ ಬಹುಸಂಖ್ಯಾತರಾದ ಕನ್ನಡದ ಮಕ್ಕಳ ಜೊತೆಗೆ ಭಾಷಾಅಲ್ಪಸಂಖ್ಯಾತರ ಮಕ್ಕಳು ಇದುವರೆಗೆ ಚರ್ಚಿಸಿದ ಕಾರಣಗಳಿಂದಾಗಿ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗಿಲ್ಲ. ಹೀಗಾಗಿ ಸರ್ಕಾರದ ಭಾಷಾನೀತಿಯ ಪ್ರಕಾರ ಮಾತೃಭಾಷೆಗೆ ಪರ್ಯಾಯವಾಗಿ ಮತ್ತೊಂದು ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಬೇಕಿದೆ. ಆದರೆ ಪ್ರಥಮ ಭಾಷೆಯ ಪಠ್ಯವನ್ನು ಈಗಾಗಲೇ ಸ್ಪಷ್ಟವಾಗಿರುವಾಗ ಹಾಗೆ ಮಗುವಿಗೆ ತನ್ನ ಮಾತೃಭಾಷೆಯಲ್ಲಿ ಉತ್ತಮ ಶ್ರವಣ, ಅರ್ಥಗ್ರಹಣ ಶೀಘ್ರವಾಚನ, ಮನೋರಂಜನ, ಜ್ಞಾನಾರ್ಜನ, ಸಾಹಿತ್ಯಾಭಿರುಚಿ, ರಸಗ್ರಹಣ ಶಕ್ತಿ, ಕಲ್ಪಕತೆ, ಸ್ವಂತಿಕೆ ಸೃಜನಶೀಲತೆ ಉದ್ದೀಪ್ತವಾಗುವಂತೆ ಹವಣಿಸುವುದು. ವ್ಯಾಕರಣ, ಭಾಷೆಯಲ್ಲಿನ ಮುಖ್ಯ ಸಾಹಿತ್ಯ ಪ್ರಕಾರಗಳು ಹಾಗೂ ಮಹತ್ವದ ಕವಿ ಹಾಗೂ ಸಾಹಿತಿಗಳು: ಈ ವಿಷಯಗಳು ಹಾಗೂ ವ್ಯಕ್ತಿಗಳ ಪರಿಚಯ ಮಾಡಿಕೊಡುವ ಉದ್ದೇಶದಿಂದ ರೂಪಿಸಿದೆ. ಇಂತಹ ಪಠ್ಯವನ್ನು ತನ್ನ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗದ ಮಗು ಕಲಿಯಬೇಕಿದೆ. ಇದರಿಂದಾಗಿ ಅನ್ಯಭಾಷೆಯನ್ನು ಮಕ್ಕಳು ಪ್ರಥಮ ಭಾಷೆಯಾಗಿ ಕಲಿಯುವಾಗ

ಒತ್ತಡಕ್ಕೆ ಒಳಗಾಗಿವೆ. ಅದರಲ್ಲೂ ಮಗು ಶಾಲೆಗೆ ಸೇರುವ ಮುನ್ನ ಪ್ರಥಮ ಭಾಷೆಯಾಗಿ ಕಲಿಯುವ ಭಾಷೆಯ ಪರಿಚಯ ಇಲ್ಲದಿದ್ದಾಗ ಇದರ ಪ್ರಮಾಣ ಸ್ವಲ್ಪ ಹೆಚ್ಚಾಗಿಯೇ ಇದೆ.

ಏಕೆಂದರೆ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಮಕ್ಕಳು ಶಾಲೆಗೆ ದಾಖಲಾಗುವ ಪೂರ್ವದಲ್ಲಿಯೇ ತಮ್ಮ ಮಾತೃಭಾಷೆಯಲ್ಲಿ ಭಾಷೆಯ ಎರಡು ಕೌಶಲಗಳಾದ ಅರ್ಥೈಸುವುದು ಮತ್ತು ಮಾತನಾಡುವುದನ್ನು ಕರಗತ ಮಾಡಿಕೊಂಡಿದ್ದಾರೆ. ಇದನ್ನು ಅವರು ತಮ್ಮ ದಿನನಿತ್ಯದ ಬದುಕಿನಲ್ಲಿ ಬಳಸುತ್ತಾ ಭಾಷೆಯ ಮೇಲೆ ಸಂಪೂರ್ಣ ಹಿಡಿತ ಸಾಧಿಸಿದ್ದಾರೆ. ಹೀಗಾಗಿ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಮಕ್ಕಳಿಗೆ ಆ ಭಾಷಾಬಳಕೆಯ ಸಾಮರ್ಥ್ಯ ಒದಗಿದೆ. ಇವರು ಶಾಲೆಯಲ್ಲಿ ಓದು ಮತ್ತು ಬರವಣಿಗೆಯ ಸಾಮರ್ಥ್ಯ ಪಡೆಯಲು ದಾಖಲಾಗಿದ್ದಾರೆ. ಇಂತಹ ಪಠ್ಯವನ್ನು ಆ ಭಾಷೆಯ ಪರಿಚಯವೇ ಇಲ್ಲದ ಅಥವಾ ಇದ್ದರೂ ದಿನನಿತ್ಯದ ಬದುಕಿನಲ್ಲಿ ಬಳಸದ, ಆ ಭಾಷೆಯ ವಿಶೇಷತೆ, ಬಳಕೆಯ ಕ್ರಮ, ನುಡಿಗಟ್ಟುಗಳ ಅರ್ಥ ಪಾರಿಭಾಷಿಕ ಪದಗಳು ಇತ್ಯಾದಿಗಳ ಪರಿಚಯವಿಲ್ಲದ ಭಾಷೆಯನ್ನು ಮಗುವಿಗೆ ಪ್ರಥಮ ಭಾಷೆಯಾಗಿ ಕಲಿಸುವುದರಿಂದ ಅದನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗದೆ ಶಿಕ್ಷಣದಿಂದ ವಿಮುಖವಾಗುತ್ತದೆ. ಇಲ್ಲವೆ ಆ ಭಾಷೆ ಅಥವಾ ಶಿಕ್ಷಣದ ಬಗ್ಗೆ ಆಸಕ್ತಿ ಕಳೆದುಕೊಳ್ಳುತ್ತದೆ. ಹೀಗಾಗಿ ಮಾತೃಭಾಷೆಯ ಮಗುವಿಗೆ ರೂಪಿಸಿದ ಪಠ್ಯವನ್ನು ಅನ್ಯಭಾಷೆಯ ಮಗುವಿಗೆ ಯಥಾವತ್ತಾಗಿ ಕಲಿಸಬೇಕಾದ ಅಗತ್ಯವಿಲ್ಲ. ಇದಕ್ಕೆ ಸರಳವೂ, ಸುಲಭವೂ ಆದ ವಿಚಾರಗಳನ್ನು ಒಳಗೊಂಡ ಪಠ್ಯವನ್ನು ರೂಪಿಸಿ ಕಲಿಸಬೇಕಾದ ಅಗತ್ಯವಿದೆ. ಹೀಗೆ ರೂಪಿಸಿ ಕಲಿಸದೆ ಮಾತೃಭಾಷೆಯ ಮಗುವಿಗೆ ರೂಪಿಸಿದ ಪಠ್ಯವನ್ನು ಅನ್ಯಭಾಷೆಯ ಮಗುವಿಗೆ ಕಲಿಸಿದರೆ ಅದು ಪ್ರಥಮ ಭಾಷೆಯನ್ನು ಕಲಿಸುವ ಉದ್ದೇಶಕ್ಕೆ ಪೂರಕವಾಗಿರುವುದಿಲ್ಲ. ಬದಲಾಗಿ ಅನ್ಯಭಾಷೆಯ ಮಗುವಿನ ಮೇಲೆ ಭಾಷಿಕ ಒತ್ತಡವನ್ನು ಉಂಟುಮಾಡಿದ ಹಾಗೆ ಆಗುತ್ತದೆ.

ಹೀಗಾಗಿ ಅನ್ಯಭಾಷೆಯ ಮಗುವಿಗೆ ಪ್ರಥಮ ಭಾಷೆಯನ್ನು ಕಲಿಸುವಾಗ ಪ್ರಥಮ ಭಾಷಾಕಲಿಕೆಗೆ ಸುಲಭವೂ ಸರಳವೂ ಆದ ಪಠ್ಯವನ್ನು ರೂಪಿಸಬೇಕಾಗುತ್ತದೆ. ಇದು ಸರ್ಕಾರಗಳಿಗೆ ಆರ್ಥಿಕ ಮತ್ತು ಆಡಳಿತಾತ್ಮಕ ಹೊರೆಯಾದರೂ ಮಕ್ಕಳ ಹಿತದೃಷ್ಟಿಯಿಂದ ಮಾಡಬೇಕಾಗುತ್ತದೆ. ಇಲ್ಲವೆ ಪ್ರಥಮ ಭಾಷಾಕಲಿಕೆಯನ್ನು ಐಚ್ಛಿಕಗೊಳಿಸಬೇಕಾಗುತ್ತದೆ. ಆದರೆ ಕರ್ನಾಟಕದಲ್ಲಿ ಈ ಯಾವ ಕೆಲಸಗಳನ್ನು ಮಾಡಿಲ್ಲ. ಇದರಿಂದಾಗಿ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯದ ಮಗು ಪ್ರಾದೇಶಿಕ ಪರಿಚಯವಿಲ್ಲದೆ ಅನ್ಯಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿತಿರುವಾಗ ಮಾತೃಭಾಷೆಯ ಮಗುವಿನಷ್ಟು ಸುಲಭ ಮತ್ತು ಸರಳವಾಗಿ ಪ್ರಥಮ ಭಾಷೆಯನ್ನು ಕಲಿಯದೆ ಹಿಂದೆ ಉಳಿದುಕೊಂಡಿದೆ. ಈ ಹಿಂದುಳಿಯುವಿಕೆ ಕಲಿಕೆಗೆ ಮಾತ್ರ ಸೀಮಿತವಾಗದೆ ಸಾಮಾಜಿಕವಾದ, ಶೈಕ್ಷಣಿಕವಾದ, ಆರ್ಥಿಕವಾದ ಅಸಮಾನತೆಗಳಿಗೂ ಕಾರಣವಾಗಿದೆ. ಹೀಗಾಗಿ ಮಗುವಿಗೆ ಮಾತೃಭಾಷೆಯ ನಡುವೆ ಭಾವನಾತ್ಮಕ ಸಂಬಂಧ ಬೆಸೆಯುವ ಉದ್ದೇಶದಿಂದ ರೂಪಿಸಿರುವ ಪಠ್ಯಗಳನ್ನು ಮಾತೃಭಾಷೆಯಲ್ಲದ ಮಗುವಿಗೆ ಕಲಿಸುವ ಅಗತ್ಯವಿದೆಯೇ? ಮಾತೃಭಾಷೆಯ ಮಗುವಿಗೆ

ರೂಪಿಸಿರುವ ಪಠ್ಯವನ್ನು ಅನ್ಯಭಾಷೆಯ ಮಗುವಿಗೆ ಮಾತೃಭಾಷೆಯ ಮಗುವಿಗೆ ಸಮನಾಗಿ ಕಲಿಸುವುದು ಯಾವ ನ್ಯಾಯ? ಹೀಗೆ ಕಲಿಸುವ ಔಚಿತ್ಯವಾದರೂ ಏನು? ಎಂಬ ಪ್ರಶ್ನೆಗಳನ್ನು ಸ್ವಲ್ಪ ಸೂಕ್ಷ್ಮವಾಗಿ ಅವಲೋಕಿಸಬೇಕಿದೆ. ಏಕೆಂದರೆ ಸಾಮಾನ್ಯವಾಗಿ ಪ್ರಥಮ ಭಾಷಾಕಲಿಕೆಯ ಪಠ್ಯ ದ್ವಿತೀಯ ಮತ್ತು ತೃತೀಯ ಭಾಷಾಕಲಿಕೆಯ ಪಠ್ಯಕ್ಕಿಂತ ಸ್ವಲ್ಪ ಭಿನ್ನವಾಗಿರುತ್ತದೆ. ಜೊತೆಗೆ ಕಠಿಣವು ಆಗಿರುತ್ತದೆ. ಇದನ್ನು ಅನ್ಯಭಾಷೆಯ ಮಕ್ಕಳು ಅರ್ಥೈಸುವುದು, ಅಭಿವ್ಯಕ್ತಿಸುವುದು, ಪರೀಕ್ಷೆಯಲ್ಲಿ ಉತ್ತರಿಸುವುದು ಕಷ್ಟ.

ಇದರಿಂದಾಗಿ ಅನ್ಯಭಾಷೆಯ ಮಕ್ಕಳು ಭಾಷಾತರಗತಿಗಳಲ್ಲಿ ಹಿಂದೆ ಉಳಿದುಕೊಂಡಿದ್ದಾರೆ. ಇದು ಅವರುಗಳ ಫಲಿತಾಂಶಗಳ ಮೇಲೂ ಪರಿಣಾಮ ಬೀರಿದೆ. ಹೀಗಾಗಿ ಅನ್ಯಭಾಷಾಸಮುದಾಯಗಳ ಮಕ್ಕಳಿಗೆ ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಸಾಧ್ಯವಾಗದಿದ್ದಾಗ, ಪ್ರಾದೇಶಿಕ ಭಾಷೆಯಾಗಿದ್ದರು ಪ್ರಾದೇಶಿಕ ಭಾಷೆಯ ಮೇಲೆ ಮಕ್ಕಳು ಹಿಡಿತ ಸ್ಥಾಪಿಸದೇ ಇದ್ದಾಗ ಅಂತಹ ಮಕ್ಕಳಿಗೆ ಪ್ರಥಮ ಭಾಷಾಕಲಿಕೆಯನ್ನು ಐಚ್ಛಿಕಗೊಳಿಸಬೇಕು. ಇಲ್ಲವೆ ಅವರ ಮಾತೃಭಾಷೆಯ ಜೊತೆಗೆ ಹೊಂದಾಣಿಕೆ ಮಾಡಿ ಕಲಿಸಬೇಕು. ಇದಕ್ಕೆ ಭಾಷಾವಿಷಯವನ್ನು ಬೋಧನೆ ಮಾಡುವ ಶಿಕ್ಷಕರಿಗೆ ವಿದ್ಯಾರ್ಥಿಗಳ ಭಾಷಾ ತಿಳುವಳಿಕೆ ಅಗತ್ಯ. ಆದರೆ ರಾಜ್ಯದಲ್ಲಿರುವ ಭಾಷಾಶಿಕ್ಷಕರುಗಳಿಗೆ ಇಂತಹ ಭಾಷಾಸಾಮರ್ಥ್ಯ ಇಲ್ಲ. ಆದುದರಿಂದ ಭಾಷಾಶಿಕ್ಷಕರು ಎಲ್ಲಾ ಮಕ್ಕಳಿಗೂ ಏಕರೂಪದಲ್ಲಿಯೇ ಬೋಧನೆ ಮಾಡುತ್ತಿದ್ದಾರೆ. ಇದು ಅನ್ಯಭಾಷಾಮಾಧ್ಯಮದ ಮಕ್ಕಳು ಪ್ರಥಮ ಭಾಷಾಕಲಿಕೆಯಲ್ಲಿ ಹಿಂದೆ ಉಳಿದುಕೊಳ್ಳಲು ಕಾರಣವಾಗಿದೆ. ಅಷ್ಟೇಅಲ್ಲದೆ ವಿದ್ಯಾರ್ಥಿಗಳ ನಡುವೆ ಅಸಮಾನತೆ ಬೆಳೆಯಲು ಕಾರಣವಾಗಿದೆ.

ಹಾಗೆಯೇ ಇದು ಶಾಲೆಗಳ ಶೇಕಡಾವಾರು ಫಲಿತಾಂಶದ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿದೆ. ಆದರೆ ಇದನ್ನು ಶಿಕ್ಷಣ ಇಲಾಖೆಯ ಅಧಿಕಾರಿಗಳು ಮತ್ತು ಖಾಸಗಿ ಶಾಲಾ ಆಡಳಿತ ಮಂಡಳಿಗಳು ಶಾಲೆಗಳ ಫಲಿತಾಂಶದ ಕುಸಿತಕ್ಕೆ ಮುಖ್ಯ ಕಾರಣವೆಂದು ಪರಿಗಣಿಸದೆ ಭಾಷಾಶಿಕ್ಷಕರ ಕಾರ್ಯವೈಖರಿಯನ್ನು ಅನುಮಾನದಿಂದ ನೋಡಿದ್ದಾರೆ. ಅಷ್ಟೇಅಲ್ಲದೆ ಶಾಲೆಗಳ ಫಲಿತಾಂಶ ಕುಸಿದಾಗ ಶಿಕ್ಷಕರನ್ನು ನೇರ ಹೊಣೆಗಾರರನ್ನಾಗಿ ಮಾಡಿದ್ದಾರೆ. ಇದರಿಂದಾಗಿ ವಿದ್ಯಾರ್ಥಿಗಳು ತನ್ನದಲ್ಲದ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವಾಗ ಮತ್ತು ಶಿಕ್ಷಕರು ವಿದ್ಯಾರ್ಥಿಗಳಿಗೆ ಅವರದಲ್ಲದ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಸುವಾಗ ಸಮಸ್ಯೆಗಳನ್ನು ಎದುರಿಸಿದ್ದಾರೆ. ಹೀಗಿದ್ದೂ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವ ಅನ್ಯಭಾಷಾಮಾಧ್ಯಮದ ಕಲಿಕೆ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವುದರಿಂದ ದೂರಮಾಡಿದೆ. ಇದರಿಂದಾಗಿ ಕರ್ನಾಟಕ ಸರ್ಕಾರದ ಪ್ರಥಮ ಭಾಷೆಯ ಬಗೆಗಿನ ಭಾಷಾನೀತಿ ಮಾತೃಭಾಷೆಗಳ ರಕ್ಷಣೆಗೆ ಪೂರಕವಾಗಿದ್ದಂತೆ ಕಂಡರು ರಕ್ಷಣೆ ಮಾಡುತ್ತಿಲ್ಲ. ಬದಲಾಗಿ ಹೊಸ ಸಮಸ್ಯೆಗಳ ಹುಟ್ಟಿಗೆ ಕಾರಣವಾಗಿ ವಿದ್ಯಾರ್ಥಿಗಳು, ಶಿಕ್ಷಕರಲ್ಲಿ ಆತಂಕ ಉಂಟುಮಾಡಿದೆ. ಹೀಗಾಗಿ ಕರ್ನಾಟಕ ಸರ್ಕಾರ ಪ್ರಥಮ ಭಾಷಾಕಲಿಕೆಯ ಭಾಷಾನೀತಿಯನ್ನು ಪುನರ್ ಪರಿಶೀಲಿಸಿ ಪ್ರಥಮ ಭಾಷಾಕಲಿಕೆಯಿಂದ

ಉದ್ಭವಿಸಿರುವ ಸಮಸ್ಯೆಗಳನ್ನು ಪರಿಹರಿಸುವ ಕೆಲಸ ಮಾಡಬೇಕಿದೆ. ಈ ಕೆಲಸ ಆಗದೆ ಪ್ರಥಮ ಭಾಷಾಕಲಿಕೆಯ ನಿಜವಾದ ಆಶಯ ಈಡೇರದು. ಬದಲಾಗಿ ಜನಸಮುದಾಯಗಳ ಅಸ್ತಿತ್ವದ ಸಮಸ್ಯೆ ಮುಂದುವರಿಯುತ್ತಲೇ ಇರುತ್ತದೆ.

**೩.೪ ದ್ವಿತೀಯ ಮತ್ತು ತೃತೀಯ ಭಾಷಾಕಲಿಕೆ ಮತ್ತು ಸಮಸ್ಯೆಗಳು**

ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷೆಗಳನ್ನು ಕಲಿಸುವ ವಿಚಾರಕ್ಕೆ ಸಂಬಂಧಿಸಿದಂತೆ ಸಾಕಷ್ಟು ಬದಲಾವಣೆ ಮಾಡಲಾಗಿದೆ. ಇವುಗಳನ್ನು ಭ.ಮಲ್ಲಿಕಾರ್ಜುನ್‌ರವರು ಒಟ್ಟು ಐದು ಹಂತಗಳಾಗಿ ವಿಂಗಡಿಸಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಅವರು ನೀಡಿರುವ ವಿವರಣೆ ಈ ಅಧ್ಯಯನದ ಅನುಬಂಧ-೩ರಲ್ಲಿ ಇದೆ. ಈ ವಿಂಗಡಣೆಯಲ್ಲಿ ದ್ವಿತೀಯ ಮತ್ತು ತೃತೀಯ ಭಾಷೆಗಳನ್ನು ಕಲಿಸುವುದಕ್ಕೆ ಸಂಬಂಧಿಸಿ ಭಾಷಾನೀತಿಗಳ ಸ್ವರೂಪಗಳೂ ಇವೆ. ಇವುಗಳನ್ನು ಗಮನಿಸಿದಾಗ ಏಕೀಕರಣ ನಂತರದ ಕರ್ನಾಟಕದಲ್ಲಿ ದ್ವಿತೀಯ ಮತ್ತು ತೃತೀಯ ಭಾಷೆಗಳನ್ನು ಕಲಿಸುವ ಸ್ವರೂಪದಲ್ಲಿ ಬದಲಾವಣೆ ಆಗಿವೆ. ಆದರೆ ಉದ್ದೇಶದಲ್ಲಿ ಯಾವುದೇ ಬದಲಾವಣೆಗಳು ಆಗಿಲ್ಲ. ಈಗಾಗಲೇ ಸ್ಪಷ್ಟಪಡಿಸಿಕೊಂಡಿರುವ ಹಾಗೆ ದ್ವಿತೀಯ ಮತ್ತು ತೃತೀಯ ಭಾಷೆಗಳನ್ನು ಕಲಿಸುವ ಉದ್ದೇಶ ಎರಡೂ ವ್ಯಾವಹಾರಿಕ ಆಗಿರುವುದರಿಂದ ದ್ವಿತೀಯ ಮತ್ತು ತೃತೀಯ ಭಾಷೆಗಳ ಕಲಿಕೆ ಮತ್ತು ಸಮಸ್ಯೆಗಳ ಸ್ವರೂಪವನ್ನು ಪ್ರತ್ಯೇಕವಾಗಿಸದೆ ಒಟ್ಟಾಗಿ ಚರ್ಚಿಸುತ್ತಿದ್ದೇನೆ.

ದ್ವಿತೀಯ ಮತ್ತು ತೃತೀಯ ಭಾಷೆಗಳನ್ನು ಕಲಿಸುವ ಪ್ರಕ್ರಿಯೆ ಭಾರತ ಸ್ವತಂತ್ರಗೊಂಡ ನಂತರದಲ್ಲಿ ಆರಂಭವಾದ ಪ್ರಕ್ರಿಯೆಯಲ್ಲ. ಇದು ಆಂಗ್ಲರ ಆಡಳಿತದಲ್ಲಿಯೇ ಆರಂಭಗೊಂಡಿದೆ. ಅಂದು '೧) ಹೊಸ ಜ್ಞಾನ ಸಂಪಾದನೆಗೆ ಇಂಗ್ಲೀಷ್ ೨) ಸಂಪಾದಿತ ಜ್ಞಾನವನ್ನು ಜನತೆಗೆ ಸಂವಹಿನಿಸುವುದಕ್ಕೆ ಪ್ರಾದೇಶಿಕ ಭಾಷೆಗಳು. ೩) ಪ್ರಾದೇಶಿಕ ಭಾಷೆಗಳನ್ನು ಶ್ರೀಮಂತಗೊಳಿಸಲು ಸಂಸ್ಕೃತ ಅಧ್ಯಯನ[೧೭]' ಎಂಬಂತೆ ಭಾಷೆಗಳನ್ನು ಕಲಿಸಲಾಗುತಿತ್ತು. ಆದರೆ ಅಂದು ದ್ವಿತೀಯ ಮತ್ತು ತೃತೀಯ ಭಾಷೆಗಳ ಕಲಿಕೆ ಅಷ್ಟು ಪ್ರಧಾನವಾಗಿರಲಿಲ್ಲ. ಅವು ಪ್ರಧಾನಸ್ಥಾನ ಪಡೆದುಕೊಂಡದ್ದು ಮತ್ತು ತೀವ್ರಸ್ವರೂಪದ ಸಮಸ್ಯೆಗಳನ್ನು ಹುಟ್ಟುಹಾಕಿರುವುದು ಭಾರತ ಸ್ವತಂತ್ರ್ಯಾನಂತರದಲ್ಲಿಯೇ. ಏಕೆಂದರೆ ಈಗಾಗಲೇ ಎರಡನೇ ಅಧ್ಯಾಯದಲ್ಲಿ ಚರ್ಚಿಸಿರುವ ಹಾಗೆ ಭಾರತ ಸ್ವತಂತ್ರಗೊಂಡ ನಂತರ, ಮತ್ತು ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರ ದೇಶ ಮತ್ತು ರಾಜ್ಯದೊಳಗಿನ ಆಡಳಿತಕ್ಕೆ ಅನುಕೂಲ ಮಾಡಿಕೊಳ್ಳುವ ಉದ್ದೇಶದಿಂದ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಡ್ಡಾಯವಾಗಿ ಕಲಿಸುವ ಪ್ರಯತ್ನ ಮಾಡಲಾಗಿದೆ. ಇದಕ್ಕಾಗಿ ತ್ರಿಭಾಷಾ ಸೂತ್ರವನ್ನು ಜಾರಿಗೆ ತರಲಾಗಿದೆ.

ಭಾರತ ಸ್ವತಂತ್ರಗೊಳ್ಳುವ ಪೂರ್ವದಲ್ಲಿ ಕಲಿಸಲಾಗುತ್ತಿದ್ದ ಭಾಷಾಕ್ರಮದಲ್ಲಿ ಮಾತೃಭಾಷೆಗಳಿಗೆ ಹೆಚ್ಚಿನ ಮನ್ನಣೆ ಇರಲಿಲ್ಲ. ಭಾರತ ಸಂವಿಧಾನದಲ್ಲಿ ಮಾತೃಭಾಷೆಗಳ ಕಲಿಕೆ ಮತ್ತು ಬಳಕೆಗಳ ಪರವಾಗಿ ನಿಯಮ ರೂಪಿಸಿದ್ದರಿಂದ ಭಾರತೀಯ ಶಿಕ್ಷಣದಲ್ಲಿ ಮಾತೃಭಾಷೆಗಳ ಕಲಿಕೆಗೆ ಪ್ರಾಧಾನ್ಯತೆ ನೀಡಲಾಗಿದೆ. ಇದಕ್ಕೆ ಪೂರಕವಾಗಿ ಭಾಷಾನೀತಿಗಳನ್ನು ಜಾರಿಗೆ ತರಲಾಗಿದೆ. ಹೀಗಾಗಿ ಭಾರತ

ಸ್ವತಂತ್ರಗೊಂಡ ನಂತರ ಭಾರತೀಯ ಶಿಕ್ಷಣದಲ್ಲಿ ಮಾತೃಭಾಷೆಗಳನ್ನು ಪ್ರಥಮ ಭಾಷೆಯಾಗಿಯೂ, ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಭಾಷೆಗಳೆಂದು ಮನ್ನಣೆ ಪಡೆದಿರುವ ಭಾಷೆಗಳನ್ನು ದ್ವಿತೀಯ ಮತ್ತು ತೃತೀಯ ಭಾಷೆಯಾಗಿ ಕಲಿಸುವುದಕ್ಕೆ ಪೂರಕವಾಗಿ ಯೋಜನೆಗಳನ್ನು ರೂಪಿಸಿ ಭಾಷಾನೀತಿಗಳನ್ನು ಜಾರಿಗೆ ತರಲಾಗಿದೆ. ಒಂದು ವೇಳೆ ರಾಜ್ಯಭಾಷೆಯಾದ ಕನ್ನಡವೇ ಮಗುವಿನ ಮಾತೃಭಾಷೆಯಾಗಿದ್ದಾಗ ಕನ್ನಡಕ್ಕೆ ಪ್ರಥಮ ಭಾಷೆಯ ಸ್ಥಾನ ನೀಡಿ ರಾಷ್ಟ್ರ ಮತ್ತು ಅಂತರಾಷ್ಟ್ರದ ವ್ಯವಹಾರದ ಭಾಷೆಯಾಗಿ ಬಳಕೆಯಾಗುತ್ತಿರುವ ಇಂಗ್ಲಿಶ್‌ಗೆ ದ್ವಿತೀಯ ಸ್ಥಾನವನ್ನು ಮತ್ತು ರಾಷ್ಟ್ರಭಾಷೆಯೆಂದು ಪರಿಗಣಿಸಲ್ಪಟ್ಟಿರುವ ಹಿಂದಿಗೆ ತೃತೀಯ ಭಾಷೆಯ ಸ್ಥಾನ ನೀಡಲಾಗಿದೆ. ಇದಕ್ಕೆ ಪೂರಕವಾಗಿ ಭಾಷಾನೀತಿಯನ್ನು ಜಾರಿಗೆ ತರಲಾಗಿದೆ.

ಇದು ಭಾರತ ಸ್ವತಂತ್ರಗೊಂಡ ನಂತರ ದೇಶದಲ್ಲಿ ದ್ವಿತೀಯ ಮತ್ತು ತೃತೀಯ ಭಾಷಾಕಲಿಕೆಯ ಒತ್ತಡವನ್ನು ಹೆಚ್ಚಿಸಿದೆ. ಏಕೆಂದರೆ ಸ್ವಾತಂತ್ರ್ಯಾನಂತರದ ಭಾರತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ದೇಶಿಯ ಭಾಷೆಯನ್ನು ಭಾರತದ ಆಡಳಿತ ಭಾಷೆಯಾಗಿ ಬಳಕೆಗೆ ತರಲು ಉದ್ದೇಶಿದ್ದರ ಪರಿಣಾಮವಾಗಿ ಹಿಂದಿ ಭಾರತದ ಆಡಳಿತ ಭಾಷೆಯ ಸ್ಥಾನ ಪಡೆದಿದೆ. ಇದರ ಈಡೇರಿಕೆಗಾಗಿ ಕೇಂದ್ರ ಸರ್ಕಾರ ಭಾಷಾನೀತಿಯನ್ನು ಜಾರಿಗೆ ತಂದು ದೇಶದಲ್ಲಿ ಶಿಕ್ಷಣ ಕಲಿಯುವ ಎಲ್ಲಾ ಮಕ್ಕಳಿಗೆ ಹಿಂದಿಯನ್ನು ಕಲಿಸುವಂತೆ ರಾಜ್ಯಸರ್ಕಾರಗಳಿಗೆ ಸೂಚಿಸಿದೆ. ಆದರೆ ಕೇಂದ್ರ ಸರ್ಕಾರದ ಈ ನಿಲುವಿಗೆ ರಾಜ್ಯಗಳಲ್ಲಿ–

೧. ಇಂಗ್ಲೀಷನ್ನು ಆಡಳಿತ ಭಾಷೆಯಾಗಿ ಮುಂದುವರಿಸಬೇಕು: ಅದನ್ನು ಭಾರತದ ರಾಷ್ಟ್ರೀಯ ಭಾಷೆಗಳೊಲ್ಲೊಂದೆಂದು ಮನ್ನಣೆ ನೀಡಬೇಕು: ಮತ್ತು ಎಂಟನೇ ಶೆಡ್ಯೂಲ್ (ಛಿಜಜಣಟಬ)ನಲ್ಲಿರುವ ಎಲ್ಲಾ ಭಾಷೆಗಳನ್ನೂ ರಾಷ್ಟ್ರ ಭಾಷೆಗಳೆಂದು ಮನ್ನಣೆ ನೀಡಬೇಕು–ಇವುಗಳಿಗಾಗಿ ಭಾರತದ ಸಂವಿಧಾನವನ್ನು ತಿದ್ದುಪಡಿಮಾಡಬೇಕು.
೨. ಒಂದು ರಾಜ್ಯದ ದೇಶೀಯ ಭಾಷೆಯನ್ನು ಆಯಾ ರಾಜ್ಯದೊಳಗೆ ಆಡಳಿತ ಭಾಷೆಯಾಗಿ ಉಪಯೋಗಿಸಬೇಕು.
೩. ಭಾರತದ ಎಲ್ಲಾ ದೇಶೀಯ ಭಾಷೆಗಳ ಶೀಘ್ರ ಬೆಳವಣಿಗೆಗೆ ಅವೆಲ್ಲಕ್ಕೂ ಸಮಾನಾವಕಾಶವನ್ನೂ ಸಹಾಯವನ್ನೂ ಒದಗಿಸಬೇಕು: ಹಿಂದಿ ಅಥವಾ ಇನ್ನಾವುದೇ ಒಂದು ದೇಶಿಯ ಭಾಷೆಯ ಬೆಳವಣಿಗೆಗೆ ವಿಶೇಷ ಪ್ರಾಮುಖ್ಯತೆ ನೀಡಬಾರದು.
೪. ಶಿಕ್ಷಣದ ಅತ್ಯುನ್ನತ ಹಂತದವರೆಗೂ ಎಲ್ಲಾ ದೇಶೀಯ ಭಾಷೆಗಳನ್ನು ಸಾಧ್ಯವಾದಷ್ಟು ಅಲ್ಪಾವಧಿಯಲ್ಲೇ ಶಿಕ್ಷಣ ಮಾಧ್ಯಮವಾಗಿ ಯಶಸ್ವಿಯಾಗಿ ಬಳಸುವಂತೆ ಅವುಗಳ ಅಭಿವೃದ್ಧಿಗೆ ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳಬೇಕು.
೫. ಇಂದು ಚಾಲ್ತಿಯಲ್ಲಿರುವಂತೆ ಹಿಂದಿಯೇತರ ವಿದ್ಯಾರ್ಥಿಗಳು ಕಡ್ಡಾಯವಾಗಿ ಹಿಂದಿಯನ್ನು ಕಲಿಯುವುದನ್ನು ರದ್ದುಪಡಿಸಬೇಕು: ಮತ್ತು ಶಾಲೆಗಳಲ್ಲಿ ಭಾಷಾಕಲಿಕೆಯ ಸಂಬಂಧದಲ್ಲಿ ದ್ವಿಭಾಷಾ(ಮಾತೃಭಾಷೆ ಹಾಗೂ ಇಂಗ್ಲೀಷ್) ಸೂತ್ರವನ್ನು ಜಾರಿಗೊಳಿಸಬೇಕು.'[೧೮] ಎಂದು ಹಿಂದಿ ವಿರೋಧಿಸಿ ಮತ್ತು ಇಂಗ್ಲಿಶ್ ಪರವಾಗಿ ಹೋರಾಟಗಳು ನಡೆದಿವೆ.

ಆದರೆ ಕೇಂದ್ರ ಸರ್ಕಾರದಲ್ಲಿ ಹಿಂದಿ ಭಾಷಿಕರೇ ಹೆಚ್ಚಿನವರಾಗಿದ್ದರಿಂದ ಇವರು ಹಿಂದಿಯನ್ನು ಪ್ರಬಲಗೊಳಿಸಿಕೊಳ್ಳುವ ಉದ್ದೇಶದಿಂದ ದೇಶದ ಜನಸಮುದಾಯಗಳ ಬೇಡಿಕೆಗಳನ್ನು ತಿರಸ್ಕರಿಸಿ ಹಿಂದಿ ಪರವಾದ ಭಾಷಾನೀತಿಯನ್ನು ಜಾರಿಗೆ ತಂದು ಅದರ ಅನುಕೂಲಕ್ಕಾಗಿ ಆರ್ಥಿಕ ನೆರವನ್ನು ನೀಡಿದ್ದಾರೆ. ಇದರಿಂದಾಗಿ ಕರ್ನಾಟಕದ ಶಿಕ್ಷಣದಲ್ಲಿ ಹಿಂದಿಯನ್ನು ಹಿಂದಿ ಮಾತೃಭಾಷೆಯಲ್ಲದವರಿಗೆ

ತೃತೀಯ ಭಾಷೆಯಾಗಿ ಕಲಿಸುವ ಪದ್ಧತಿಯನ್ನು ಅಳವಡಿಸಲಾಗಿದೆ. ಅದರಲ್ಲೂ ಕನ್ನಡ ಮಾತೃಭಾಷೆಯಾಗಿದ್ದು ಕನ್ನಡ ಮಾಧ್ಯಮದಲ್ಲಿ ಕಲಿಯುತ್ತಿರುವವರಿಗೆ ಅನಧಿಕೃತ ಕಡ್ಡಾಯ ತೃತೀಯ ಭಾಷೆಯಾಗಿದೆ. ಏಕೆಂದರೆ ಈಗಾಗಲೇ ಉಲ್ಲೇಖಿಸಿರುವ ಶಿಕ್ಷಣ ಕ್ರಮದಲ್ಲಿ ಪ್ರಥಮ ಭಾಷೆಯಾಗಿ ಮಾತೃಭಾಷೆಯನ್ನು ಕಲಿತರೆ ದ್ವಿತೀಯ ಭಾಷೆಯಾಗಿ ಕನ್ನಡ ಇಲ್ಲವೆ ಇಂಗ್ಲಿಶ್‌ನ್ನು ಕಲಿಯಬೇಕಿದೆ. ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಯುವ ಮಕ್ಕಳು ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಯುವ ಮಕ್ಕಳು ದ್ವಿತೀಯ ಭಾಷೆಯಾಗಿ ಇಂಗ್ಲಿಶ್‌ನ್ನು ಆಯ್ಕೆಮಾಡಿಕೊಳ್ಳುತ್ತಾರೆ. ಇನ್ನು ತೃತೀಯ ಭಾಷೆಯಾಗಿ ಕಲಿಯಲು ಅವಕಾಶ ಕಲ್ಪಿಸಿರುವ ಎಂಟು ಭಾಷೆಗಳಲ್ಲಿ ಒಂದು ಭಾಷೆಯನ್ನು ಕಲಿಯುವುದು ಕಡ್ಡಾಯವಾಗಿದೆ. ಆದರೆ ಕನ್ನಡದ ಮಕ್ಕಳು ಆ ಎಂಟು ಭಾಷೆಗಳಲ್ಲಿ ಬಹುತೇಕರು ಹಿಂದಿಯನ್ನೇ ತೃತೀಯ ಭಾಷೆಯಾಗಿ ಆಯ್ಕೆಮಾಡಿಕೊಂಡಿದ್ದಾರೆ. ಏಕೆಂದರೆ ರಾಜ್ಯದ ಪ್ರೌಢಶಾಲೆಗಳಲ್ಲಿ ತೃತೀಯ ಭಾಷೆಯಾಗಿ ಕಲಿಸಲು ಶಿಕ್ಷಕರನ್ನು ನೇಮಕ ಮಾಡಿರುವುದೇ ಹಿಂದಿ ಭಾಷಾಶಿಕ್ಷಕರನ್ನೇ. ಈ ಭಾಷೆಯನ್ನು ಹೊರತುಪಡಿಸಿ ಉಳಿದ ಭಾಷೆಗಳನ್ನು ತೃತೀಯ ಭಾಷೆಯಾಗಿ ಕಲಿಸಲು ಪ್ರೌಢಶಾಲೆಗಳಲ್ಲಿ ಭಾಷಾಶಿಕ್ಷಕರು ಇಲ್ಲ. ಹೀಗಾಗಿ ಕರ್ನಾಟಕದ ಸರ್ಕಾರಿ ಶಾಲೆಗಳಲ್ಲಿ ಅನಧಿಕೃತವಾಗಿ ಹಿಂದಿ ಕಡ್ಡಾಯ ತೃತೀಯ ಭಾಷೆಯಾಗಿದ್ದು ಇದರ ಕಲಿಕೆ ಅನಿವಾರ್ಯವಾಗಿದೆ.

ಇದರ ಜೊತೆಗೆ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರ ರಾಜ್ಯದೊಳಗಿನ ಆಡಳಿತಕ್ಕಾಗಿ ಭಾರತ ಸಂವಿಧಾನದ ೩೪೫ನೇ ಅನುಚ್ಛೇದಗಳಿಗೆ ಒಳಪಟ್ಟು ರಾಜ್ಯಗಳು ಆಯಾ ರಾಜ್ಯಗಳ ಬಹುಸಂಖ್ಯಾತರ ಭಾಷೆಯನ್ನು ಅಧಿಕೃತ ಆಡಳಿತ ಭಾಷೆಯನ್ನಾಗಿ ಘೋಷಿಸಿಕೊಂಡಿವೆ. ಈ ಪ್ರಕಾರ ಕರ್ನಾಟಕ ಸರ್ಕಾರ ೧೯೬೩ರಲ್ಲಿ ಕನ್ನಡವನ್ನು ಕರ್ನಾಟಕದ ಅಧಿಕೃತ ಆಡಳಿತ ಭಾಷೆಯೆಂದು ಘೋಷಣೆ ಮಾಡಿದೆ. ಇದರ ಅನುಕೂಲಕ್ಕಾಗಿ ರಾಜ್ಯದಲ್ಲಿ ಶಿಕ್ಷಣ ಕಲಿಯುವ ಮಕ್ಕಳಿಗೆ ಕಡ್ಡಾಯವಾಗಿ ಕನ್ನಡ ಕಲಿಸುವ ನಿಯಮವನ್ನು ಜಾರಿಗೆ ತರಲಾಗಿದೆ. ಇದಕ್ಕಾಗಿ ರಾಜ್ಯದ ಎಲ್ಲಾ ಭಾಷಾಅಲ್ಪಸಂಖ್ಯಾತರ ಭಾಷಾಮಾಧ್ಯಮದ ಶಾಲೆಗಳಲ್ಲಿ ಮೂರನೇ ತರಗತಿಯಿಂದಲೇ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಸಲಾಗುತ್ತಿದೆ. ಇನ್ನು ಪ್ರೌಢಶಾಲಾ ಹಂತದಲ್ಲಿ ಪ್ರಥಮ ಭಾಷೆಯಾಗಿ ಕನ್ನಡವನ್ನು ಕಲಿಯದ ಮಗು ದ್ವಿತೀಯ ಇಲ್ಲವೆ ತೃತೀಯ ಭಾಷೆಗಳಲ್ಲಿ ಒಂದಾಗಿ ಕನ್ನಡವನ್ನು ಕಲಿಯುವುದು ಮತ್ತು ಪರೀಕ್ಷೆ ಬರೆಯುವುದು ಕಡ್ಡಾಯವಾಗಿದೆ. ಹಾಗೆಯೇ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಯುತ್ತಿದ್ದ ಮಕ್ಕಳಿಗೆ ಐದನೇ ತರಗತಿಯಿಂದ ಕಲಿಸಲಾಗುತ್ತಿದ್ದ ಇಂಗ್ಲಿಶ್‌ನ್ನು ಇಂದು ಒಂದನೇ ತರಗತಿಯಿಂದಲೇ ಎರಡನೇ ಭಾಷೆಯಾಗಿ ಕಲಿಸುವ ನಿಯಮವನ್ನು ಜಾರಿಗೆ ತರಲಾಗಿದೆ. ಎಂಟನೇ ತರಗತಿಯಿಂದ ಕಲಿಸಲಾಗುತ್ತಿದ್ದ ತೃತೀಯ ಭಾಷೆಯನ್ನು ಇಂದು ಆರನೇ ತರಗತಿಯಿಂದಲೇ ಕಲಿಸಲಾಗುತ್ತದೆ.

ಹೀಗೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕಾಲದಿಂದ ಕಾಲಕ್ಕೆ ದ್ವಿತೀಯ ಮತ್ತು ತೃತೀಯ ಭಾಷಾಕಲಿಕೆಯಲ್ಲಿ ಬದಲಾವಣೆಗಳನ್ನು ಮಾಡಿವೆ. ಆದರೆ ಇವುಗಳಿಂದಾಗಿ ಜನರ ಭಾಷಾಬೇಡಿಕೆಗಳನ್ನು ಅಗತ್ಯಕ್ಕೆ ಪೂರಕವಾಗಿ ಈಡೇರಿಸದೆ ಭಾಷಾಸಮಸ್ಯೆಗಳನ್ನು ತೀವ್ರಗೊಳಿಸಿವೆ.

ಹೀಗಾಗಿ ಈ ಭಾಗದಲ್ಲಿ ದ್ವಿತೀಯ ಮತ್ತು ತೃತೀಯ ಭಾಷೆಗಳ ಕಲಿಕೆಗೆ ಕಾರಣ ಮತ್ತು ಅವುಗಳಿಂದ ಉದ್ಭವಿಸಿರುವ ಸಮಸ್ಯೆಗಳನ್ನು ಮಾತ್ರ ಈ ಭಾಗದಲ್ಲಿ ಚರ್ಚಿಸಲಾಗುತ್ತಿದೆ. ಸಾಮಾನ್ಯವಾಗಿ ಕರ್ನಾಟಕದಲ್ಲಿ ದ್ವಿತೀಯ ಮತ್ತು ತೃತೀಯ ಭಾಷೆಗಳ ಕಲಿಕೆಯಲ್ಲಿ ಇಂಗ್ಲಿಶ್‌ಗೆ ಅಗ್ರಸ್ಥಾನವಿದೆ. ಏಕೆಂದರೆ ಇಂಗ್ಲಿಶ್ ಭಾರತೀಯ ಭಾಷೆಯಲ್ಲ. ಆದರೆ ತುಂಬಾ ಬೇಡಿಕೆಯಿರುವ ಭಾಷೆ. ಇದರಿಂದಾಗಿ ಕರ್ನಾಟಕದಲ್ಲಿ ಇಂಗ್ಲಿಶ್‌ನ್ನು ಪ್ರಥಮ, ದ್ವಿತೀಯ ಮತ್ತು ತೃತೀಯ ಈ ಮೂರೂ ಭಾಷೆಗಳ ಸ್ಥಾನದಲ್ಲಿಟ್ಟು ಕಲಿಸಲಾಗುತ್ತಿದೆ. ಆದರೆ ಇಂದಿನ ಬೇಡಿಕೆಗೆ ಪೂರಕವಾಗಿ ವಿದ್ಯಾರ್ಥಿಗಳು ಇಂಗ್ಲಿಶ್‌ನ್ನು ಕಲಿಯಲು ಸಾಧ್ಯವಾಗಿಲ್ಲ. ಜೊತೆಗೆ ಹೆಚ್ಚು ಸಮಸ್ಯೆಯನ್ನು ಸೃಷ್ಟಿಸಿರುವ ಭಾಷೆ ಇಂಗ್ಲಿಶ್. ಹೀಗಾಗಿ ಇಲ್ಲಿ ಇಂಗ್ಲಿಶ್ ಭಾಷೆಯ ಕಲಿಕೆ ಮತ್ತು ಸಮಸ್ಯೆಗಳನ್ನು ಪ್ರತ್ಯೇಕವಾಗಿ ಚರ್ಚಿಸಲಾಗುತ್ತಿದೆ.

**೩.೫ ಭಾರತದಲ್ಲಿ ಇಂಗ್ಲಿಶ್ ಕಲಿಕೆಯ ಆರಂಭ ಮತ್ತು ಉದ್ದೇಶ**

ಇಂಗ್ಲಿಶ್ ಭಾರತದ ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ ಮತ್ತು ಜೀವನಕ್ರಮಗಳ ಸತ್ವವನ್ನು ಒಳಗೊಂಡು ಬೆಳೆದ ಭಾಷೆಯಲ್ಲ. ವ್ಯಾಪಾರಿ ಮನೋವೃತ್ತಿಯಿಂದ ಈಸ್ಟ್ ಇಂಡಿಯಾ ಕಂಪನಿಯ ಮೂಲಕ ಭಾರತ ಪ್ರವೇಶಿಸಿ ಇಂಗ್ಲೀಶರು ಭಾರತದ ರಾಜಕೀಯ ಅಸ್ಥಿರತೆಯ ಲಾಭ ಪಡೆದು ಅಧಿಕಾರ ಆರಂಭಿಸಿದ ನಂತರ ಬಳಕೆಗೆ ಬಂದಿರುವ ಭಾಷೆ. ಅದರಲ್ಲೂ ೧೮೧೩ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಸನ್ನದನ್ನು ನವೀಕರಿಸಿದ ನಂತರ ಭದ್ರಬುನಾದಿ ಕಂಡಿರುವ ಭಾಷೆ. ಅದುವರೆಗೂ ಭಾರತದಲ್ಲಿನ ವಿದ್ಯಾಭ್ಯಾಸದ ಕ್ರಮಗಳ ಬಗೆಗೆ ಅಂತಹ ದೀರ್ಘವಾದ ಚರ್ಚೆಗಳು ನಡೆದಿರಲಿಲ್ಲ. "೧೮೧೩ನೆಯ ಇಸವಿಯಲ್ಲಿ ಕಂಪೆನಿಯ ಸನ್ನದನ್ನು('ಚಾರ್ಟರ್') ನವೀಕರಿಸಿದ ತರುವಾಯದ ವರ್ಷಗಳಲ್ಲಿ ಭಾರತದ ವಿದ್ಯಾಭ್ಯಾಸ ಕ್ರಮದ ಕಾರ್ಯನೀತಿಗೆ ಸಂಬಂಧಪಟ್ಟಂತೆ ದೊಡ್ಡ ದೊಡ್ಡ ಚರ್ಚೆಗಳು ನಡೆದವು. ಆ ಪೈಕಿ ಮೊಟ್ಟಮೊದಲ ಚರ್ಚೆಯಲ್ಲಿ, ಪೌರಸ್ತ್ಯ ವಿದ್ಯಾಭ್ಯಾಸಕ್ಕೆ ಹೆಚ್ಚು ಮನ್ನಣೆಯನ್ನು ಕೊಡಬೇಕೇ ಅಥವಾ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಹೆಚ್ಚು ಮನ್ನಣೆಯನ್ನು ಕೊಡಬೇಕೇ ಎಂಬ ಎರಡು ವಿವಾದಾಸ್ಪದ ವಿಚಾರಗಳು ಚರ್ಚಿಸಲ್ಪಟ್ಟವು. ಭಾರತದ ಪ್ರಾಚೀನ ಜ್ಞಾನ ಮತ್ತು ಸಾಹಿತ್ಯದ ಬೆಳವಣಿಗೆಗೆ ಪ್ರೋತ್ಸಾಹ ಕೊಡಬೇಕೆಂಬುದು ಪೌರಸ್ತ್ಯ ಸಾಹಿತ್ಯ ಪಂಥದವರ ಅಪೇಕ್ಷೆಯಾಗಿದ್ದಿತು. ಇಂಗ್ಲಿಷ್ ಭಾಷೆಯ ಮೂಲಕ ಆಧುನಿಕ ವಿಜ್ಞಾನವನ್ನು ಬೋಧಿಸಬೇಕೆಂಬುದು ಆಂಗ್ಲ ಸಾಹಿತ್ಯ ಪಂಥದವರ ಇಚ್ಛೆಯಾಗಿದ್ದಿತು. ಈ ಎರಡನೇ ಪಂಥದವರ ಅಭಿಪ್ರಾಯಕ್ಕೆ ರಾಜಾರಾಂ ಮೋಹನ್‌ರಾಯರು ಹೆಚ್ಚು ಬೆಂಬಲ ಕೊಟ್ಟರೂ ಈ ಅಭಿಪ್ರಾಯವು ಸಾಧುವೆಂದು ವಾದಿಸಿದ ಸರ್ಕಾರಿ ನೌಕರರ ಪೈಕಿ ಮೆಕಾಲೆ ಅಗ್ರಗಣ್ಯನಾಗಿದ್ದನು.

ಈ ಸಂಬಂಧದಲ್ಲಿ ಮೆಕಾಲೆಯು ತನ್ನ ಸುಪ್ರಸಿದ್ಧವಾದ ಸಂಕ್ಷಿಪ್ತ ವರದಿಯನ್ನು ತಯಾರಿಸಿ ಕಳುಹಿಸಿದ ತರುವಾಯ, ಗೌರ್ನರ್ ಜನರಲ್ ಆಗಿದ್ದ ಲಾರ್ಡ್‌ವಿಲಿಯಂ ಬೆಂಟಿಕನು ೧೮೩೫ನೆಯ ಇಸವಿಯಲ್ಲಿ ಒಂದು ನಿರ್ಣಯ ತಂದು ಸರ್ಕಾರದ ವಶದಲ್ಲಿರತಕ್ಕ ಎಲ್ಲ ಹಣವನ್ನೂ ಇನ್ನು ಮುಂದೆ ಭಾರತೀಯರಿಗೆ ಆಂಗ್ಲ ಸಾಹಿತ್ಯ ಮತ್ತು ವಿಜ್ಞಾನದ ಅರಿವನ್ನುಂಟು ಮಾಡಿಕೊಡಲು ವೆಚ್ಚಮಾಡಬೇಕೆಂದು ಆ ನಿರ್ಣಯದಲ್ಲಿ ಸೂಚಿಸಿದರು."[೧೯] ತನ್ನ ಅಧಿಕಾರದ ಅವಧಿಯಲ್ಲಿ ವಿಲಿಯಂ

ಬೆಂಟಿಕನು ತೆಗೆದುಕೊಂಡ ಈ ನಿರ್ಧಾರದಿಂದಾಗಿ ಇಂಗ್ಲಿಶ್ ಸಾಹಿತ್ಯದ ಜೊತೆಗೆ ಇಂಗ್ಲಿಶ್ ಭಾಷೆಯ ಬೆಳವಣಿಗೆಗೆ ಭದ್ರವಾದ ಬುನಾದಿ ಬಿದ್ದಿದೆ. "೧೮೫೪ನೆಯ ಇಸವಿಯಲ್ಲಿ ಈ ಸಂಬಂಧದಲ್ಲಿ ಚಾರ್ಲ್ಸ್‌ವುಡ್‌ರವರ ಲೇಖನದಲ್ಲಿ ನಿರೂಪಿಸಲ್ಪಟ್ಟ ವಿದ್ಯಾಭ್ಯಾಸದ ಕಾರ್ಯನೀತಿಯ ವಿಚಾರವಾಗಿ ನಿರೂಪಿಸಲ್ಪಟ್ಟ ವಿವರಣೆಯು ಮುಂದೆ ವಿದ್ಯಾಭ್ಯಾಸ ಪದ್ಧತಿಗೆ ಆಧಾರಭೂತವಾದವು."[೨೦]

ಮೆಕಾಲೆ ರೂಪಿಸಿದ ಕಾರ್ಯನೀತಿ ಮತ್ತು ಬೆಂಟಿಕನು ಭಾರತದ ವಿದ್ಯಾಭ್ಯಾಸ ಕ್ರಮದ ಕಾರ್ಯನೀತಿಯ ಬಗೆಗೆ ತೆಗೆದುಕೊಂಡ ನಿರ್ಣಯವು ಭಾರತದ ವಿದ್ಯಾರ್ಥಿಗಳಿಗೆ ಆಂಗ್ಲ ಸಾಹಿತ್ಯ ಮತ್ತು ಆಧುನಿಕ ವಿಜ್ಞಾನವನ್ನು ಬೋಧಿಸುವುದಕ್ಕಷ್ಟೇ ಸೀಮಿತವಾಗಿರಲಿಲ್ಲ. ಈ ನಿರ್ಣಯಕ್ಕೆ ಬರುವ ಹೊತ್ತಿಗಾಗಲೇ ಬ್ರಿಟೀಷರು ಭಾರತದಲ್ಲಿ ರಾಜಕೀಯ ಅಧಿಕಾರ ಸ್ಥಾಪಿಸಿದ್ದರು. ಇವರಿಗೆ ಆಡಳಿತದ ಅನುಕೂಲಕ್ಕಾಗಿ ಇಂಗ್ಲಿಶ್ ಬಲ್ಲಂತಹ ನೌಕರರ ಅಗತ್ಯತೆ ಉಂಟಾಗಿತ್ತು. ಆಗ ಭಾರತದಲ್ಲಿ ಇಂಗ್ಲಿಶ್ ತಿಳಿದಿರುವಂತಹ ಭಾರತೀಯ ನೌಕರರು ಇರಲಿಲ್ಲ. ಇದರಿಂದಾಗಿ ತಮ್ಮ ಆಡಳಿತದ ಅನುಕೂಲಕ್ಕಾಗಿ ಇಂಗ್ಲಿಶ್ ಭಾಷೆ ಬಲ್ಲಂತಹ ಅಧಿಕಾರಿಗಳನ್ನು ಇಂಗ್ಲೆಂಡ್‌ನಿಂದ ಕರೆತರಬೇಕಾಗಿತ್ತು. ಇದು ಅತ್ಯಂತ ದುಬಾರಿಯು ಮತ್ತು ಕಷ್ಟಕರವೂ ಆಗಿತ್ತು. ಅಲ್ಲದೆ ಇದು ಇಂಗ್ಲೆಂಡ್‌ನ ರಾಜಮನೆತನಕ್ಕೆ ಆರ್ಥಿಕವಾಗಿ ಹೆಚ್ಚು ಹೊರೆ ಉಂಟುಮಾಡುತ್ತಿತ್ತು. ಹೀಗಾಗಿ ಆಂಗ್ಲರು ಭಾರತೀಯರ ಹಣದಲ್ಲಿ ಭಾರತೀಯರಿಗೆ ಇಂಗ್ಲಿಶ್ ಕಲಿಸಿ ತಮ್ಮ ಆಡಳಿತಕ್ಕೆ ಅನುಕೂಲ ಮಾಡಿಕೊಳ್ಳುವ ಕಾರ್ಯಕ್ಕೆ ಕೈಹಾಕಿದ್ದರು. ಇದನ್ನು ನೇರವಾಗಿ ಸಾಧಿಸಿಕೊಳ್ಳದೆ ಭಾರತೀಯ ಶಿಕ್ಷಣವನ್ನು ಆಧುನೀಕರಣಗೊಳಿಸುವ ನೆಪದಲ್ಲಿ ಭಾರತದ ಶಿಕ್ಷಣ ಕ್ರಮವನ್ನು ಬದಲಾವಣೆ ಮಾಡಿ ಭಾರತೀಯ ಶಿಕ್ಷಣದಲ್ಲಿ ಇಂಗ್ಲಿಶ್ ಕಲಿಸಲು ಅನುವು ಮಾಡಿಕೊಡುವ ಮೂಲಕ ಪರೋಕ್ಷವಾಗಿ ತಮ್ಮ ಕಾರ್ಯ ಸಾಧಿಸಿಕೊಂಡಿದ್ದಾರೆ. ಇದರ ಹಿಂದಿರುವ ಇಂಗ್ಲೀಶರ ತಂತ್ರವನ್ನು ಸಮರ್ಥವಾಗಿ ಅರ್ಥಮಾಡಿಕೊಳ್ಳಲು ವಿಫಲರಾಗಿದ್ದ ಭಾರತೀಯರು ಇಂಗ್ಲೀಶರು ಭಾರತದ ಶಿಕ್ಷಣ ಕ್ರಮದಲ್ಲಿ ಇಂಗ್ಲಿಶ್‌ನ್ನು ಸೇರಿಸಿದಾಗ ಯಾರೂ ವಿರೋಧಿಸಿಲ್ಲ. ಬದಲಾಗಿ ಆಸಕ್ತಿಯಿಂದ ಕಲಿತಿದ್ದಾರೆ.

ಹೀಗೆ ಆರಂಭದಲ್ಲಿ ತಮ್ಮ ಆಡಳಿತದ ಅನುಕೂಲಕ್ಕಾಗಿ ಭಾರತೀಯರಿಗೆ ಇಂಗ್ಲಿಶ್ ಕಲಿಸುವ ಕಾರ್ಯಕ್ಕೇ ಕೈಹಾಕಿದ್ದ ಆಂಗ್ಲರು ಅನಂತರದಲ್ಲಿ ಇಂಗ್ಲಿಶ್ ಭಾಷೆಯ ಬೆಳವಣಿಗೆ ಭದ್ರವಾದ ಬುನಾದಿ ಹಾಕಿದ್ದಾರೆ. ಹಿಂದೆಯೇ ಹೇಳಿದ ಹಾಗೆ ಆಂಗ್ಲರು ತಮ್ಮ ಆಡಳಿತದ ಅವಧಿಯಲ್ಲಿ ಸರ್ಕಾರದಿಂದ ಖರ್ಚು ಮಾಡುತ್ತಿದ್ದ ಸಂಪೂರ್ಣ ಹಣವನ್ನು ಇಂಗ್ಲಿಶ್ ಸಾಹಿತ್ಯದ ಕಲಿಸುವಿಕೆಗೆ ಬಳಸುತ್ತಿದ್ದುದರಿಂದ ಭಾರತೀಯ ಭಾಷೆಗಳ ಶಿಕ್ಷಣಕ್ಕೆ ಹಣದ ಕೊರತೆ ಉಂಟಾಗಿದೆ. ಹೀಗಾಗಿ ಆಂಗ್ಲರ ಆಡಳಿತದಲ್ಲಿ ಭಾರತೀಯ ಭಾಷೆಗಳು ಶಿಕ್ಷಣದಲ್ಲಿ ಪ್ರಧಾನ ಸ್ಥಾನ ಪಡೆದು ಹೆಚ್ಚು ಬಳಕೆಗೊಳ್ಳುವಲ್ಲಿ ವಿಫಲವಾಗಿವೆ. ಇದನ್ನು ಸಮರ್ಥವಾಗಿ ಅರ್ಥಮಾಡಿಕೊಂಡು ಭಾರತೀಯ ಭಾಷೆಗಳ ಪರವಾಗಿ ನಿಲ್ಲಬೇಕಾಗಿದ್ದ ಭಾರತೀಯರು ಈಗಾಗಲೇ ಚರ್ಚಿಸಿರುವ ಕಾರಣಗಳಿಂದಾಗಿ ಇಂಗ್ಲಿಶ್‌ನ್ನು ವಿರೋಧಿಸದೆ ತಾವೇ ಇಂಗ್ಲಿಶ್‌ನ್ನು ಕಲಿಯಲು ಆಸಕ್ತರಾಗಿದ್ದಾರೆ. ಇದರಿಂದಾಗಿ ಇಂಗ್ಲಿಶರು ಆಧುನಿಕ ಶಿಕ್ಷಣದ ಹೆಸರಿನಲ್ಲಿ ಭಾರತದಲ್ಲಿ ಇಂಗ್ಲಿಶ್ ಭಾಷಾಕಲಿಕೆಯನ್ನು ಜಾರಿಗೆ ತಂದು, ಭಾರತದಲ್ಲಿ ಶಿಕ್ಷಣಕ್ಕೆ ಮೀಸಲಿಟ್ಟ

ಹಣವನ್ನು ಇಂಗ್ಲಿಶ್ ಸಾಹಿತ್ಯ ಮತ್ತು ಆಧುನಿಕ ವಿಜ್ಞಾನಗಳ ಕಲಿಕೆಗೆ ಮಾತ್ರ ಸೀಮಿತಗೊಳಿಸಿದ್ದರೂ ಅದನ್ನು ಪ್ರಶ್ನಿಸುವ ಅಥವಾ ವಿರೋಧಿಸುವ ಕಾರ್ಯಕ್ಕೆ ಭಾರತೀಯರು ಕೈಹಾಕಿಲ್ಲ. ಇದು ಭಾರತದಲ್ಲಿ ಇಂಗ್ಲಿಶ್ ಕಲಿಸುವುದನ್ನು ಸುಲಭಗೊಳಿಸಿದೆ. ಹೀಗೆ ಆಂಗ್ಲರು ತಮ್ಮ ಆಡಳಿತದ ಅವಧಿಯಲ್ಲಿ ಭಾರತೀಯರ ಹಣದಲ್ಲಿಯೇ ಭಾರತೀಯರಿಗೆ ಇಂಗ್ಲಿಶ್ ಕಲಿಸುವ ಮೂಲಕ ಭಾರತದಲ್ಲಿ ಇಂಗ್ಲಿಶ್ ಭಾಷೆಯ ಬೆಳವಣಿಗೆಗೆ ಪೂರಕವಾದ ಭೂಮಿಕೆಯನ್ನು ಸಿದ್ಧಪಡಿಸಿಕೊಂಡಿದ್ದರು. ಇದೇ ಸಂದರ್ಭದಲ್ಲಿ ಆಂಗ್ಲರಿಗೆ ಪೂರಕವಾಗುವಂತೆ ಭಾರತದ ಜಾತಿ ವ್ಯವಸ್ಥೆಯಿಂದ ಅಸಮಾನತೆಗೆ ಗುರಿಯಾಗಿದ್ದ ಮತ್ತು ಬ್ರಾಹ್ಮಣರ ಗುತ್ತಿಗೆಯಂತಾಗಿ ಶಿಕ್ಷಣದಿಂದ ವಂಚಿತವಾಗಿದ್ದ ಸಮುದಾಯಗಳಿಗೆ ಇಂಗ್ಲಿಶ್ ಶಿಕ್ಷಣವೆಂಬುದು ಅಸಮಾನತೆಯಿಂದ ಹೊರಬರುವ ದಾರಿಯಾಗಿ ಕಾಣಿಸಿಕೊಂಡಿದೆ.

ಏಕೆಂದರೆ ಇಂಗ್ಲಿಶ್ ಕಲಿತ ಭಾರತೀಯರಿಗೆ ಆಂಗ್ಲರ ಆಡಳಿತದಲ್ಲಿ ಜಾತಿ, ಧರ್ಮ, ವರ್ಗ, ವರ್ಣ, ಮತ, ಪಂಥ ಮತ್ತು ಭಾಷೆಗಳೆಂಬ ವ್ಯತ್ಯಾಸವಿಲ್ಲದೆ ಅರ್ಹರಿದ್ದವರಿಗೆ ಸರ್ಕಾರದ ಹುದ್ದೆಗಳು ದೊರಕುತ್ತಿದ್ದವು. ಶತಶತಮಾನಗಳಿಂದ ಭಾರತೀಯ ಸಮಾಜದಲ್ಲಿ ಜಾತಿ, ಧರ್ಮ, ಮತ, ಪಂಥಗಳ ಆಧಾರದಲ್ಲಿ ಅಸಮಾನತೆ ಮತ್ತು ಶೋಷಣೆಗೆ ಒಳಗಾಗಿದ್ದ ಜನರಿಗೆ ಸರ್ಕಾರಿ ನೌಕರಿಯಿಂದ ಉತ್ತಮ ಆದಾಯ ಮತ್ತು ಸ್ಥಾನಮಾನ ಲಭ್ಯವಾಗಲು ಆರಂಭವಾದವು. ಇದು ಭಾರತೀಯ ಸಮಾಜದಲ್ಲಿ ಸಹಸ್ರಾರು ವರ್ಷಗಳಿಂದ ಶೋಷಣೆಗೆ ಒಳಗಾಗಿದ್ದ ಜನಸಮುದಾಯಗಳಲ್ಲಿ ಮತ್ತು ವೈಚಾರಿಕ ಪ್ರಜ್ಞೆ ಮೈಗೂಡಿಸಿಕೊಂಡು ಭಾರತೀಯ ಸಮಾಜದ ಉದ್ಧಾರಕ್ಕಾಗಿ ದುಡಿಯುತ್ತಿದ್ದ ಜನರಿಗೆ ಹೊಸ ಆಶಾಭಾವನೆಯಂತೆ ಕಂಡಿದೆ. ಹೀಗಾಗಿ ಭಾರತೀಯರಲ್ಲಿಯೇ ಒಂದು ವರ್ಗ ಇಂಗ್ಲೀಶರ ಬೇಡಿಕೆಗೆ ಅನುಗುಣವಾಗಿ ಭಾಷೆಯನ್ನು ಕಲಿಯಲಾರಂಭಿಸಿದರು. ಇದನ್ನು ಸಮರ್ಥವಾಗಿ ಬಳಸಿಕೊಂಡಿರುವ ಆಂಗ್ಲರು ತಮ್ಮ ಅಧಿಕಾರದ ಅವಧಿಯಲ್ಲಿ ಭಾರತೀಯರ ಹಣದಲ್ಲಿಯೇ ಭಾರತೀಯರಿಗೆ ಇಂಗ್ಲಿಶ್ ಕಲಿಸುವ ಮೂಲಕ ಒಂದು ಕಡೆ ತಮ್ಮ ಆಡಳಿತಕ್ಕೆ ಅನುಕೂಲ ಮಾಡಿಕೊಂಡು ಮತ್ತೊಂದು ಕಡೆ ತಮ್ಮ ಭಾಷಾಸಾಮ್ರಾಜ್ಯದ ವಿಸ್ತರಣೆಗೆ ಅಡಿಪಾಯ ಹಾಕಿದ್ದಾರೆ.

ಇಂಗ್ಲೀಶರ ಈ ರೀತಿಯ ಭಾಷಾಸಾಮ್ರಾಜ್ಯದ ವಿಸ್ತರಣೆ ಮುಂದೆ ಭಾರತೀಯ ಭಾಷೆಗಳ ಮೇಲೆ ಉಂಟುಮಾಡಬಹುದಾದ ಪರಿಣಾಮವನ್ನು ಕುರಿತು ಆಗಿನ ಭಾರತೀಯ ವಿದ್ವಾಂಸರುಗಳು ಸೂಕ್ಷ್ಮವಾಗಿ ಚಿಂತಿಸಿಲ್ಲ. ಏಕೆಂದರೆ ಆಗಿನ ಕಾಲದ ವೈಚಾರಿಕ ಪ್ರಜ್ಞೆ ಮೈಗೂಡಿಸಿಕೊಂಡಿದ್ದ ಭಾರತೀಯ ವಿದ್ವಾಂಸರು ಭಾರತೀಯ ಸಮಾಜದಲ್ಲಿನ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಇತ್ಯಾದಿ ಅಸಮಾನತೆಗಳಿಗೆ ಒಳಗಾಗಿದ್ದ ಭಾರತೀಯ ಜನತೆಯನ್ನು ದಾಸ್ಯದಿಂದ ಬಿಡುಗಡೆಗೊಳಿಸಿ ಸಮಾನತೆ ತರುವುದರ ಕಡೆಗೆ ಹೆಚ್ಚಿನ ಆಸಕ್ತಿ ವಹಿಸಿದ್ದರು. ಇವರು ಭಾಷೆಗಳ ಗೋಜಿಗೆ ಹೋದ ಹಾಗೆ ಕಾಣುವುದಿಲ್ಲ. ಇದರಿಂದಾಗಿ ಇಂಗ್ಲಿಶ್ ಭಾರತದಲ್ಲಿ ಎಷ್ಟರ ಮಟ್ಟಿಗೆ ತನ್ನ ವ್ಯಾಪ್ತಿ ವಿಸ್ತರಿಸಿಕೊಂಡಿದೆ ಎಂದರೆ ಭಾರತ ಸ್ವತಂತ್ರಗೊಂಡ ನಂತರದಲ್ಲಿ ಇಲ್ಲಿನ ಭಾಷಾವಾರು ಪ್ರದೇಶಗಳಲ್ಲಿಯೂ ಉನ್ನತ ಮಟ್ಟದ ವಿದ್ಯಾವಂತ ವರ್ಗದವರ ಕೆಲಸ ಕಾರ್ಯಗಳು ಮತ್ತು ಆಲೋಚನಾ ಶಕ್ತಿಯ ಪರಂಪರೆಯಲ್ಲಿ ಇಂಗ್ಲಿಷ್ ಭಾಷೆಯು ಕ್ರಮೇಣ ಭಾರತದ ಭಾಷೆಗಳನ್ನು

ತಳ್ಳಿಹಾಕಲಾರಂಭಿಸಿತು. ಇಂಗ್ಲಿಷ್ ಭಾಷೆಯು, ಕಾಲಕ್ರಮದಲ್ಲಿ ಅಖಿಲ ಭಾರತದಲ್ಲಿ ಪರಸ್ಪರ ವ್ಯವಹಾರ ನಡೆಸುವ ಏಕಮಾತ್ರ ಸಾಧನವಾಯಿತು ಅಥವಾ ಖಾಸಗಿ ಜೀವನದಲ್ಲಿ ಗಣ್ಯರಾದ ಮತ್ತು ಸರ್ಕಾರದಲ್ಲಿ ದೊಡ್ಡ ಅಧಿಕಾರ ಸ್ಥಾನದಲ್ಲಿರತಕ್ಕ ಜನವರ್ಗದವರ ಸರ್ವಸಾಮಾನ್ಯ ಭಾಷೆಯಾಯಿತು. ಅಖಿಲ ಭಾರತದ ಎಲ್ಲ ಕ್ಷೇತ್ರಗಳಲ್ಲಿ ಪರಸ್ಪರ ಸಂಬಂಧವನ್ನು ಕಲ್ಪಿಸುವ ಮತ್ತು ವ್ಯವಹಾರದಲ್ಲಿ ಉಪಯುಕ್ತವಾದ ಏಕಮಾತ್ರ ಸಾಧನವೆಂದರೆ ಇಂಗ್ಲಿಷು. ಆಡಳಿತದ ಕಾರ್ಯಕಲಾಪಗಳಲ್ಲಿ ಉಪಯೋಗಿಸುವ ಸರ್ಕಾರಿ ಭಾಷೆಯೂ ಇಂಗ್ಲಿಷು. ಎಲ್ಲ ಪ್ರೌಢ ವಿದ್ಯಾಭ್ಯಾಸ ಕ್ರಮದಲ್ಲಿ ಶಿಕ್ಷಣ ಮಾಧ್ಯಮವು ಇಂಗ್ಲಿಷು; ಎಲ್ಲಾ ಪಾಂಡಿತ್ಯೋದ್ಯೋಗಗಳವರು ಉಪಯೋಗಿಸುವ ಭಾಷೆಯು ಇಂಗ್ಲಿಷು;[೨೧]" ಎನ್ನುವಷ್ಟರ ಮಟ್ಟಿಗೆ ಭಾರತದ ಎಲ್ಲಾ ಕ್ಷೇತ್ರಗಳಲಿಯೂ ಇಂಗ್ಲಿಶ್ ತನ್ನ ಪ್ರಖ್ಯಾತಿಯನ್ನು ಗಳಿಸಿಕೊಂಡಿದೆ.

ಹೀಗಾಗಿ ಬ್ರಿಟೀಷರು ಭಾರತದಲ್ಲಿ ರಾಜಕೀಯ ಅಧಿಕಾರ ಕಳೆದುಕೊಂಡರೂ ಅವರ ಭಾಷಾಅಧಿಪತ್ಯ ಮುಂದುವರೆಯುತ್ತಿದೆ. ಇದಕ್ಕೆ ಪರ್ಯಾಯವಾಗಿ ಭಾರತ ಸ್ವತಂತ್ರಗೊಂಡ ನಂತರದ ರಾಷ್ಟ್ರಮಟ್ಟದ ವ್ಯವಹಾರಕ್ಕೆ ಒಂದು ಭಾರತೀಯ ಭಾಷೆಯನ್ನು ಬಳಕೆಗೆ ತರಲು ಸಲಹೆ ನೀಡವುದಕ್ಕಾಗಿ ನೇಮಕವಾದ ಸಮಿತಿಯೇ "ಭಾರತದಲ್ಲಿ ಸರ್ವವ್ಯಾಪಿಯಾದ ಒಂದು ರಾಷ್ಟ್ರಭಾಷೆಯ ಮಾತು ಹಾಗಿರಲಿ; ದೇಶದ ಬೇರೆ ಬೇರೆ ಭಾಗಗಳಲ್ಲಿ ಮಾತನಾಡುವ ಭಾಷೆಗಳಾಗಿ ಬಳಕೆಯಲ್ಲಿರುವ ಹನ್ನೆರಡು ಪ್ರಾದೇಶಿಕ ಭಾಷೆಗಳೊಂದಿಗೆ ನಾವು ಹೆಣಗಬೇಕಾಗಿದ್ದುದರಿಂದ, ಆ ರೀತಿಯ ಕಾರ್ಯಕ್ರಮವನ್ನು ಕೈಕೊಳ್ಳುವುದು ಅಸಾಧ್ಯವಾಗದೆ ಇದ್ದರೂ ಇಂಥ ಸನ್ನಿವೇಶದಲ್ಲಿ ಜಪಾನ್ ದೇಶದಲ್ಲಿ ಜನರು ಪಟ್ಟ ಕಷ್ಟಕ್ಕಿಂತಲೂ ಹೆಚ್ಚು ಕಷ್ಟವಾಯಿತು. ಪ್ರಾರಂಭದಲ್ಲಿ ಬಹಳಕಾಲದವರೆಗೆ, ಪ್ರೌಢ ವಿದ್ಯಾಭ್ಯಾಸ ಮಾಡಲು ಮತ್ತು ಇಂಗ್ಲಿಷ್ ಭಾಷೆಯನ್ನು ಕಲಿತುಕೊಳ್ಳಲು ಹೆಚ್ಚು ಹೆಚ್ಚಾಗಿ ಅವಕಾಶಗಳನ್ನು ಒದಗಿಸಬೇಕೆಂಬುದಾಗಿ ರಾಜಕೀಯ ವಿಚಾರಗಳಲ್ಲಿ ಜಾಗೃತರಾದ ಭಾರತೀಯರು ಒತ್ತಾಯ ಮಾಡತೊಡಗಿದರು. ಇಂಗ್ಲಿಷರ ವಿಚಾರ ಕ್ರಮವನ್ನು ತಿಳಿದುಕೊಳ್ಳಲು ಇಂಗ್ಲಿಷ್ ಭಾಷೆಯು ಸಾಧನವಾಗಿರುತ್ತದೆ. ಇಂಗ್ಲಿಷ್ ಭಾಷಾಜ್ಞಾನವು ದೇಶದಲ್ಲಿ ರಾಜಕೀಯ ಪ್ರಗತಿ ಸಾಧನೆಗೆ ಸಹಾಯಕವಾದ ಕೀಲಿಕೈಯಾಗಿದೆಯೆಂದು ಮತ್ತು ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಉದಾರಾಭಿಪ್ರಾಯಗಳು ಮೂಡುವಂತೆ ನೋಡುವ ಸಾಧನವಾಗಿದೆಯೆಂದು"[೨೨] ಪರಿಗಣಿಸಲ್ಪಟ್ಟಿದೆ.

ಹೀಗಾಗಿ ಭಾರತದಲ್ಲಿ ಇಂಗ್ಲಿಶ್‌ನ್ನು ಹೊರತುಪಡಿಸಿ ಭಾರತದ ಭಾಷಾಪರಿಸ್ಥಿಯನ್ನು ಊಹೆ ಕೂಡ ಮಾಡುವ ಹಾಗಿಲ್ಲ. ಅಷ್ಟರ ಮಟ್ಟಿಗೆ ಭಾರತದಲ್ಲಿ ತನ್ನ ಅಧಿಪತ್ಯ ಸ್ಥಾಪಿಸಿದೆ. ಸದ್ಯದ ಭಾರತದ ಭಾಷಾಪರಿಸ್ಥಿತಿಯನ್ನು ಗಮನಿಸಿದಾಗ ಇಂಗ್ಲಿಶ್ ಭಾರತದಲ್ಲಿ ಮುಂದಿನ ಶತಮಾನಗಳಲ್ಲಿಯೂ ಪ್ರಬಲವಾಗಿ ಬಳಕೆಯಾಗುವುದರಲ್ಲಿ ಅನುಮಾನಗಳಿಲ್ಲ. ಹೀಗಾಗಿ ಬ್ರಿಟೀಷರು ಭಾರತದಲ್ಲಿ ಇಂಗ್ಲಿಶ್ ಭಾಷೆಗೆ ಹಾಕಿರುವ ಅಡಿಪಾಯ ಗಮನಿಸಿದಾಗ ತಾವು ಭಾರತದಲ್ಲಿ ಮುಂದೊಂದು ದಿನ ರಾಜಕೀಯ ಅಧಿಪತ್ಯ ಕಳೆದುಕೊಂಡರು ಭಾಷಾಅಧಿಪತ್ಯ ಮುಂದುವರೆಯಬೇಕು. ಅದು ನಾವು ಭಾರತದಲ್ಲಿ ಆಡಳಿತ ನಡೆಸಿದ ಕುರುಹಾಗಿ ಉಳಿಯಬೇಕು ಎನ್ನುವಷ್ಟರ ಮಟ್ಟಿಗೆ ಬೆಳೆಸಿರುವುದು ಸ್ಪಷ್ಟವಾಗುತ್ತದೆ.

ಇದರಿಂದಾಗಿ ಬ್ರಿಟೀಷರ ರಾಜಕೀಯ ಅಧಿಪತ್ಯ ಭಾರತದಲ್ಲಿ ಅಂತ್ಯಗೊಂಡು ಆರು ದಶಕಗಳು ಕಳೆದಿದ್ದರೂ ಅವರ ಭಾಷಾಅಧಿಪತ್ಯ ಮುಂದುವರಿದಿದೆ. ಹೀಗಾಗಿ ಇಂಗ್ಲಿಶ್‌ನ್ನು ಹೊರತುಪಡಿಸಿ ಭಾರತದ ಭಾಷಾಪರಿಸ್ಥಿತಿಯನ್ನು, ಭಾಷಿಕ ಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸುವ ಹಾಗಿಲ್ಲ. ಹಾಗೇನಾದರೂ ಮಾಡಿದ್ದೇ ಆದರೆ ಅದು ಅಪೂರ್ಣ ಆಗುತ್ತದೆ. ಹೀಗಾಗಿ ಈ ಅಧ್ಯಯನದಲ್ಲಿ ಇಂಗ್ಲಿಶ್ ಭಾಷೆಯ ಕಲಿಕೆ ಮತ್ತು ಸಮಸ್ಯೆಗಳನ್ನು ಚರ್ಚಿಸಲಾಗಿದೆ.

**೩.೬ ಏಕೀಕರಣ ನಂತರದ ಕರ್ನಾಟಕ: ಇಂಗ್ಲಿಶ್ ಕಲಿಕೆ ಮತ್ತು ಸಮಸ್ಯೆಗಳು**

ಇದುವರೆಗೆ ಇಂಗ್ಲಿಶ್ ಭಾಷೆಯ ಆರಂಭದ ಬಗೆಗೆ ಚರ್ಚಿಸಿದ ಉದ್ದೇಶ ಇಂಗ್ಲಿಶ್‌ಗೆ ವಿಶೇಷ ಪ್ರಾತಿನಿಧ್ಯ ಕಲ್ಪಿಸುವುದು ಅಥವಾ ವಿರೋಧಿಸುವುದಲ್ಲ. ಬದಲಾಗಿ ಈ ಹಿಂದೆಯೇ ಹೇಳಿದ ಹಾಗೆ ಅದು ಭಾರತೀಯ ಮೂಲದ ಭಾಷೆಯಲ್ಲ. ಆದರೆ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತಾತ್ಮಕ, ಸಾಮಾಜಿಕ, ಆರ್ಥಿಕ ಕ್ಷೇತ್ರಗಳು ಸೇರಿದಂತೆ ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚು ಸಮಸ್ಯೆಗಳ ಹುಟ್ಟಿಗೆ ಕಾರಣ ಆಗಿರುವ ಭಾಷೆ. ಹೀಗಾಗಿ ಇದು ಭಾರತೀಯ ಮಣ್ಣಿನಲ್ಲಿ ಬೇರುಬಿಡಲು ಒಂದು ಭೂಮಿಕೆ ಸಿದ್ದಪಡಿಸಿಕೊಂಡಿರುವ ಬಗೆಯನ್ನು ಕಂಡುಕೊಳ್ಳದೆ ಅದರ ಬಗೆಗೆ ಅಧ್ಯಯನಕ್ಕೆ ತೊಡಗುವುದು ಅಧ್ಯಯನದ ದೃಷ್ಟಿಯಿಂದ ಅಪೂರ್ಣವಾಗುತ್ತದೆ ಎಂಬ ಭಾವನೆ ನನ್ನದು. ಹೀಗಾಗಿ ಇಂಗ್ಲಿಶ್ ಕರ್ನಾಟಕದಲ್ಲಿ ಬೇರು ಬಿಡಲು ಕಾರಣವಾದ ಅಂಶಗಳನ್ನು ಕಂಡುಕೊಳ್ಳಲು **'ಭಾರತದಲ್ಲಿ ಇಂಗ್ಲಿಶ್ ಕಲಿಕೆಯ ಆರಂಭ ಮತ್ತು ಉದ್ದೇಶ'**ವೆಂಬ ಒಂದು ಭಾಗವನ್ನು ಈ ಅಧ್ಯಯನದಲ್ಲಿ ರೂಪಿಸಿಕೊಳ್ಳಲಾಗಿದೆ.

ಭಾರತದಲ್ಲಿ ಇಂಗ್ಲಿಶ್ ಭಾಷೆಯ ಕಲಿಕೆಯ ಆರಂಭ ಮತ್ತು ಉದ್ದೇಶ ಏನೇ ಇದ್ದರೂ ಇಂಗ್ಲಿಶ್ ಭಾಷೆ ಕಲಿಕೆ ಮತ್ತು ಬಳಕೆ ಆರಂಭವಾದ ನಂತರ ಉದ್ಭವವಾಗಿರುವ ಸಮಸ್ಯೆಗಳು ಬಹುಮುಖ್ಯವಾದವು. ಏಕೆಂದರೆ ಭಾರತದಲ್ಲಿ ಆಂಗ್ಲರು ಆಧುನಿಕ ಶಿಕ್ಷಣ ಪದ್ಧತಿ ಜಾರಿಗೆ ತರುವವರೆಗೂ ಭಾರತದಲ್ಲಿ ಇಂತಹ ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕು. ಇಂತಹ ಭಾಷೆಗಳನ್ನು ಕಲಿಯಬಾರದು. ಇಷ್ಟೇ ಭಾಷೆಗಳನ್ನು ಕಲಿಯಬೇಕು. ಇಷ್ಟು ಭಾಷೆಗಳನ್ನು ಕಲಿಯಬಾರದು ಎಂಬ ನಿಯಮಗಳು ಇರಲಿಲ್ಲ. ಆಂಗ್ಲರು ಆಧುನಿಕ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದ ನಂತರ ಶಿಕ್ಷಣದಲ್ಲಿ ಇಷ್ಟು ಭಾಷೆಗಳನ್ನು ಕಲಿಯಬೇಕು, ಅದೂ ಹೀಗೆ ಕಲಿಯಬೇಕು. ಇವುಗಳಿಗೆ ಪೂರಕವಾಗಿ ಸರ್ಕಾರದ ಹಣ ವಿನಿಯೋಗವಾಗಬೇಕು ಎಂಬ ನಿಯಮಗಳು ಜಾರಿಗೆ ಬಂದದ್ದು. ಇದರಿಂದಾಗಿ ಆಧುನಿಕ ಶಿಕ್ಷಣ ಪದ್ಧತಿಯ ಪ್ರಕಾರ ಭಾರತೀಯರು ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುವುದು ಅನಿವಾರ್ಯವಾಗಿದೆ. ಇದಕ್ಕೆ ಪೂರಕವೆಂಬಂತೆ ಬ್ರಿಟೀಷರ ಆಡಳಿತದ ಅವಧಿಯಲ್ಲಿ ಇಂಗ್ಲಿಶ್ ಕಲಿತವರಿಗೆ ಸರ್ಕಾರಿ ಉದ್ಯೋಗದ ಅವಕಾಶಗಳು ಹೆಚ್ಚಾಗಿದ್ದವು. ಇದರ ಜೊತೆಗೆ ಇಂಗ್ಲಿಶ್‌ನ ಕಲಿಕೆಯಿಂದ ಸಾಮಾಜಿಕವಾಗಿ ಕೆಳಜಾತಿ ಮತ್ತು ಅಸ್ಪೃಶ್ಯರಿಗೆ ಸಮಾನತೆ ಸಾಧ್ಯವಾಗದಿದ್ದರೂ ಸರ್ಕಾರದ ಮಟ್ಟದಲ್ಲಿ ಜಾತಿಯ ಆಧಾರದಲ್ಲಿ ಅಸಮಾನತೆ ಇರಲಿಲ್ಲ. ಮತ್ತು ಇದರಿಂದ ಭಾರತೀಯ ಕೆಳಜಾತಿಯ ಜನರು ಆಂಗ್ಲರಿಗೆ ಸಮನಾದ ವೇತನ ಪಡೆಯಲು ಸಾಧ್ಯ

ಆಗದಿದ್ದರೂ ಭಾರತೀಯ ಮೇಲ್ಜಾತಿಯವರಿಗೆ ಸಮನಾದ ವೇತನ ಪಡೆಯಲು ಸಾಧ್ಯವಾಗಿದೆ. ಇದು ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಶತಶತಮಾನಗಳಿಂದ ಶೋಷಣೆಗೆ ಒಳಗಾಗಿದ್ದ ಕೆಳಜಾತಿಯ ಜನರಲ್ಲಿ ಸಮಾನತೆಯ ಭಾವನೆ ಮೂಡಿಸಿದೆ.

ಇದರ ಜೊತೆಗೆ ಭಾರತದ ಮೇಲ್ವರ್ಗದವರು ಇದುವರೆಗೂ ಅನುಭವಿಸಿದ್ದ ಅಧಿಕಾರವನ್ನು ಮುಂದುವರೆಸಲು ಆಂಗ್ಲರ ಆಡಳಿತದಲ್ಲಿ ಇಂಗ್ಲಿಶ್ ಭಾಷಾಕಲಿಕೆ ಅನಿವಾರ್ಯವಾಗಿತ್ತು. ಇದರ ಜೊತೆಗೆ ಆಂಗ್ಲರ ಆಡಳಿತದಲ್ಲಿ ಖರ್ಚುಮಾಡುತ್ತಿದ್ದ ಸಂಪೂರ್ಣ ಹಣ ಈ ಹಿಂದೆಯೇ ಚರ್ಚಿಸಿದ ಹಾಗೆ ಇಂಗ್ಲಿಶ್‌ನ ಕಲಿಸುವಿಕೆಗೆ ಮಾತ್ರ ವಿನಿಯೋಗವಾಗುತ್ತಿದ್ದುದರಿಂದ ಭಾರತೀಯ ಶಿಕ್ಷಣದಲ್ಲಿ ಇಂಗ್ಲಿಶ್ ಪ್ರಧಾನ ಸ್ಥಾನ ಲಭ್ಯವಾಗಿ ಭಾರತದ ಎಲ್ಲಾ ಕ್ಷೇತ್ರಗಳಲ್ಲಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಹೀಗಾಗಿ "ಕಳೆದ ೧೫೦ ವರ್ಷಗಳಿಗೆ ಮೇಲಾಗಿ ಇಂಗ್ಲೀಷ ಭಾಷೆಯು, ಸಾರ್ವಜನಿಕ ಆಡಳಿತೆಯ, ಉನ್ನತ ಶಿಕ್ಷಣದ ಉದ್ಯೋಗಗಳ ಮತ್ತು ಸಾರ್ವಜನಿಕ ಜೀವನದ ಎಲ್ಲಾ ಮಹತ್ವದ ಕ್ಷೇತ್ರಗಳಲ್ಲಿ ಪ್ರವೇಶಿಸಿ, ಕೊನೆಗೆ, ಭಾರತೀಯ ಭಾಷೆಗಳ ಸ್ಥಾನದಲ್ಲಿ ತಾನೇತಾನಾಗಿ ಪೂರ್ಣ ವಿಜೃಂಭಿಸಿತು. ಅಂಥ ಆಕ್ರಮಣದ ಫಲವಾಗಿ ಈ ಭಾಷೆಗಳು ಅಭಿವೃದ್ಧಿ ಹೊಂದದೆ ಮುಂದುವರಿದವು; ಅವುಗಳು ಈ ಕೊರತೆಗಳನ್ನು ತುಂಬಿಕೊಳ್ಳುವವರೆಗೆ, ಅವು, ಈಗ ಇಂಗ್ಲೀಷಿಗೆ ಬದಲಾಗಿ ತಮ್ಮ ತಮ್ಮ ಕ್ಷೇತ್ರಗಳಲ್ಲಿ ತಮ್ಮ ತಮ್ಮ ಪಾತ್ರವಹಿಸುವ ಸ್ಥಿತಿಯಲ್ಲಿಲ್ಲ."[೨೩] ಎನ್ನುವಷ್ಟರ ಮಟ್ಟಿಗೆ ಭಾರತೀಯ ಭಾಷೆಗಳು ಭಾರತದ ಶಿಕ್ಷಣ, ಆಡಳಿತ, ಔದ್ಯೋಗಿಕ ಕ್ಷೇತ್ರಗಳಲ್ಲಿ ತನ್ನ ಬಳಕೆಯನ್ನು ಕಳೆದುಕೊಂಡಿವೆ.

ಇದನ್ನು ಸರಿಪಡಿಸಿ ಭಾರತೀಯ ಭಾಷೆಗಳನ್ನು ಅಭಿವೃದ್ಧಿಪಡಿಸುವಂತೆ ಸರ್ಕಾರಗಳ ಮೇಲೆ ಜನಸಮುದಾಯಗಳು ಒತ್ತಡ ಉಂಟುಮಾಡಿವೆ. ಇದನ್ನು ಸರಿಪಡಿಸುವ ಉದ್ದೇಶದಿಂದ ಭಾರತ ಸರ್ಕಾರ ರಾಜಭಾಷಾ ಆಯೋಗವನ್ನು ನೇಮಕ ಮಾಡಿದೆ. ಈ ಆಯೋಗ 'ಇಂಗ್ಲೀಷ ಭಾಷೆಯು ನಮಗಿಂದು ಜ್ಞಾನಾರ್ಜನೆಯ ಅಮೂಲ್ಯ ಸಾಧನವಾಗಿದೆ. ರೈಲ್ವೆ, ಮೋಟಾರ್‌ಕಾರು, ಟೆಲಿಗ್ರಾಫ್ ಮತ್ತು ಇತರ ನವನಾಗರೀಕ ಸೌಕರ್ಯಗಳಂತೆಯೇ ಇದೂ ನಮಗೆ ಯುರೋಪಿನಿಂದ ನಮಗೆ ಪ್ರಾಪ್ತವಾಗಿರುವ ಆಸ್ತಿ. ಇಂಗ್ಲೀಷಿಗೊಂದು ಬಲಯುತವಾದ ಪ್ರಸಾರಶಕ್ತಿಯಿದೆ. ಇದು ಭಾರತದಲ್ಲಿ ಒಗ್ಗಟ್ಟನ್ನು ಕುದುರಿಸುವುದಕ್ಕೆ ಸಹಾಯ ಮಾಡಿದುದೇ ಅಲ್ಲದೆ, ವಿಜ್ಞಾನದಲ್ಲಿ ಇತ್ತೀಚಿನ ಪ್ರಖ್ಯಾತಿಯನ್ನು ಪಡೆಯುವುದಕ್ಕು ಸಹಕಾರಿಯಾಯಿತು. ಇಂಗ್ಲೀಷಿನ ಜ್ಞಾನವು ರಾಜಾರಾಮ ಮೋಹನರಾಯ್‌ರವರಂಥ ನಮ್ಮ ಸಮಾಜ ಸುಧಾರಕರಿಗೂ ಮತಸುಧಾರಕರಿಗೂ ಮತ್ತು ರಾಜಕಾರಣಿಗಳಿಗೂ ದೇಶಾಭಿಮಾನ ಹಾಗೂ ರಾಜಕೀಯ ಸ್ವಾತಂತ್ರ್ಯ ಸಮರದ ಅವಿರತವಾದ ಅಭಿವರ್ಧನೆಗೂ ಪ್ರಚೋದನೆ ಕೊಟ್ಟಿತು ಎಂಬುದನ್ನು ಒಪ್ಪಲೇಬೇಕು. ಭಾರತದ ಸಂಸ್ಕೃತಿ ಮತ್ತು ವಿಚಾರಶಕ್ತಿಯನ್ನು ಹಾಗೂ ವಿಶ್ವಪ್ರಪಂಚದೊಂದಿಗೆ ಭಾರತದ ವರ್ತನೆ ಹೇಗಿರುವುದೆಂಬುದನ್ನು ವಿಶದಪಡಿಸಿದ ರಾಜಾ ರಾಮ ಮೋಹನರಾಯ್, ಸ್ವಾಮಿ ವಿವೇಕಾನಂದ, ರವೀಂದ್ರನಾಥ ಠಾಕೂರ್, ಮಹಾತ್ಮಗಾಂಧಿ, ಶ್ರೀನಿವಾಸಶಾಸ್ತ್ರಿ, ಸಿ.ವಿ.ರಾಮನ್, ಡಾ.ರಾಧಾಕೃಷ್ಣನ್ ಮತ್ತು ಜವಹಾರ್‌ಲಾಲ್

ನೆಹರೂ ಮೊದಲಾದ ಲೋಕೋತ್ತರ ವ್ಯಕ್ತಿಗಳನ್ನು ಪ್ರಪಂಚಕ್ಕೆ ಕಾಣಿಕೆಯಾಗಿ ಕೊಡಲು ಇಂಗ್ಲೀಷ ಭಾಷೆಯು ನಮಗೆ ಸಹಾಯ ಮಾಡಿದೆ.

ಪ್ರಸಕ್ತ ಭಾರತೀಯ ವಿದ್ಯಾಭ್ಯಾಸಕ್ರಮದಲ್ಲಿ ಹಿಂದೀ ಅಥವಾ ಪ್ರದೇಶ ಭಾಷೆಯ ಅನುಕೂಲಕ್ಕೋಸ್ಕರ ಇಂಗ್ಲೀಷ ಭಾಷಾವ್ಯಾಸಂಗವನ್ನು ಪರಿಮಿತಗೊಳಿಸಿರುವುದು ಅಥವಾ ತೆಗೆದುಹಾಕಿರುವುದು ವಿದ್ಯಾಭ್ಯಾಸದ ಮಟ್ಟಗಳಲ್ಲಿ ತೀವ್ರವಾದ ಅವನತಿಗೆ ಕಾರಣವಾಗಿದೆಯೆಂಬುದನ್ನು ಸಾಮಾನ್ಯವಾಗಿ ಒಪ್ಪಲಾಗಿದೆ. ಈ ಪರಿಸ್ಥಿತಿಯು ಅನಿವಾರ್ಯವಾಗಿದೆ: ಏಕೆಂದರೆ ಉಚ್ಚ ವಿದ್ಯಾಭ್ಯಾಸ ಕಾಲದಲ್ಲಿ ಅಥವಾ ಸಾಮಾನ್ಯಾಡಳಿತ ವ್ಯವಹಾರಗಳಲ್ಲೇ ಆದರೂ, ಹಿಂದಿಯಾಗಲಿ ಇಲ್ಲವೆ ಯಾವುದೇ ಪ್ರಾದೇಶಿಕ ಭಾಷೆಯಾಗಲಿ, ವೈಜ್ಞಾನಿಕ, ತಾಂತ್ರಿಕ ಮತ್ತು ಔದ್ಯೋಗಿಕ ವಿಜ್ಞಾನದ ಪದಗಳನ್ನು ವಿಶದಪಡಿಸಲು ತಕ್ಕುದಾದ ಭಾಷಾಮಾಧ್ಯಮಕ್ಕೆ ಸಾಕಷ್ಟು ಅಭಿವೃದ್ಧಿಯಾಗಿಲ್ಲವೆಂಬುದನ್ನು ಒಪ್ಪಲೇಬೇಕು. ಆದ್ದರಿಂದ ಇಷ್ಟರ ಮಟ್ಟಿಗೆ ಇಂಗ್ಲೀಷನ್ನು ಸರಿಯಾಗಿ ಬೋಧಿಸಿದರೆ ನಾವು ಚಿತ್ತ ಸಾವಧಾನವನ್ನೂ ಅಂತಹ ವಿಚಾರಗಳನ್ನು ಸೂಕ್ಷ್ಮವಾದ ಆಸಕ್ತಿಯನ್ನು ಕುದುರಿಸಬಲ್ಲ ಅಭಿವ್ಯಕ್ತಿ ಮಾಧ್ಯಮವನ್ನು ಪಡೆಯುವಂತಾಗುವುದು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಮಾತೃಭಾಷೆ ಹಾಗೂ ಇಂಗ್ಲೀಷಿನ ವಿವೇಕಯುತವಾದ ಹೊಂದಾಣಿಕೆಯಿಂದ ಅತ್ಯುತ್ತಮ ಫಲವು ಪ್ರಾಪ್ತವಾಗುವುದೆಂಬುದು ಅನುಭವವೇದ್ಯವಾದ ವಿಷಯ. ಸ್ವತಂತ್ರ ಭಾರತದಲ್ಲಿ, ಜ್ಞಾನಾರ್ಜನಾಭಿವೃದ್ಧಿ–ಅದು ಯಾವ ಭಾಷೆಯ ಮೂಲಕವೇ ಆಗಲಿ–ನಿರಾತಂಕವಾಗಿ ನಡೆಯುವ ಸಂಗತಿಯನ್ನು ಭಾರತೀಯ ಭಾಷಾಂಧತೆಗೆ ಅಧೀನವಾಗಿರತಕ್ಕದ್ದಲ್ಲ. ಜ್ಞಾನಸಂಪಾದನೆಗೆ ಈಗಲೂ ಪರಮೋತ್ಕೃಷ್ಟ ಸಾಧನವಾದ ಇಂಗ್ಲೀಷಿನ ಬಳಕೆಯನ್ನು ಭಾವಾವೇಶದಿಂದಾಗಲಿ ಮನೋವಿಕಾರದಿಂದಾಗಲಿ ನಾವು ಬಿಟ್ಟುಬಿಡುವುದಾದರೆ ಇಲ್ಲವೆ ಮಿತಗೊಳಿಸುವುದಾದರೆ ಅಪಾಯವು ನಮಗೆ ಕಟ್ಟಿಟ್ಟ ಗಂಟಾಗುವುದು'[೨೮] ಎಂದು ಅಭಿಪ್ರಾಯಪಟ್ಟಿದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕದ ಶಿಕ್ಷಣ ಪದ್ಧತಿಯಲ್ಲಿ ಭಾರತ ಸ್ವತಂತ್ರಗೊಂಡು ಭಾಷಾವಾರು ರಾಜ್ಯ ರಚನೆಯಾದ ನಂತರದಲ್ಲಿ ಇಲ್ಲಿ ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಕಲಿಸಲಾಗುತ್ತಿದೆ. ಇದು ಕರ್ನಾಟಕದಲ್ಲಿ ಎಷ್ಟರ ಮಟ್ಟಿಗೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದೆಯೆಂದರೆ ಇಲ್ಲಿನ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಹೊರತುಪಡಿಸಿ ಉಳಿದ ಯಾವ ಸ್ಥಳೀಯ ಭಾಷೆಗಳು ಪಡೆದುಕೊಳ್ಳದ ಸ್ಥಾನವನ್ನು ಪಡೆದುಕೊಂಡಿದೆ. ಅಂದರೆ ತ್ರಿಭಾಷಾಸೂತ್ರದ ಅನ್ವಯ ಪ್ರೌಢಶಾಲಾ ಹಂತದಲ್ಲಿ ಮೂರು ಭಾಷೆಗಳನ್ನು ಕಲಿಸಬೇಕು. ಅದು ಕ್ರಮವಾಗಿ ಪ್ರಥಮ, ದ್ವಿತೀಯ ಮತ್ತು ತೃತೀಯ ಭಾಷೆಗಳೆಂದು. ಕರ್ನಾಟಕದಲ್ಲಿ ಈ ಮೂರೂ ಸ್ಥಾನವನ್ನು ಪ್ರಾದೇಶಿಕ ಭಾಷೆಯಾದ ಕನ್ನಡದ ಜೊತೆಗೆ ಇಂಗ್ಲಿಶ್‌ಗೆ ಮಾತ್ರ ಕಲ್ಪಿಸಿಕೊಡಲಾಗಿದೆ. ಉಳಿದ ಯಾವ ಸ್ಥಳೀಯ ಭಾಷೆಗಳಿಗೂ ಈ ಸ್ಥಾನ ಕಲ್ಪಿಸಿಲ್ಲ. ಅಂದರೆ ಕರ್ನಾಟಕದಲ್ಲಿ ರಾಜ್ಯಭಾಷೆಯಾದ ಕನ್ನಡಕ್ಕೆ ಸಮನಾದ ಸ್ಥಾನವನ್ನು ಇಂಗ್ಲಿಶ್‌ಗೆ ಕಲ್ಪಿಸಿಕೊಡಲಾಗಿದೆ. ಇದಕ್ಕೆ ಮುಖ್ಯ ಕಾರಣ ಕರ್ನಾಟಕದಲ್ಲಿನ ಸರ್ಕಾರಿ ಮತ್ತು ಖಾಸಗಿ ವಲಯದಲ್ಲಿ ಇಂಗ್ಲಿಶ್‌ಗೆ ಇರುವ ಬೇಡಿಕೆ. ಕರ್ನಾಟಕ ಸರ್ಕಾರದ ಭಾಷಾಯೋಜನೆಯ ಪ್ರಕಾರವಾಗಿಯೇ ಒಂದು ಭಾಷೆ ಪ್ರಥಮ

ಭಾಷೆಯ ಸ್ಥಾನವನ್ನು ಪಡೆದುಕೊಳ್ಳಬೇಕಾದರೆ ಅದು ಮಗುವಿನ ಮಾತೃಭಾಷೆಯಾಗಿರಬೇಕು. ಮಗುವಿನ ಮಾತೃಭಾಷೆಯಲ್ಲದ ಭಾಷೆ ಪ್ರಥಮ ಭಾಷೆಯ ಕಲಿಕೆಯ ಪಟ್ಟಿಯಲ್ಲಿ ಇರಬಾರದು. ಆದರೆ ಆಂಗ್ಲರ ಆಡಳಿತದ ಅವಧಿಯಲ್ಲಿ ನಿರ್ಮಾಣವಾದ ಆಂಗ್ಲೋ-ಇಂಡಿಯನ್ನರ ಕಾರಣದಿಂದ ಇಂಗ್ಲಿಶ್‌ನ್ನು ಪ್ರಥಮ ಭಾಷಾಕಲಿಕೆಯ ಪಟ್ಟಿಯಲ್ಲಿ ಸೇರಿಸಲಾಗಿದೆ. ಹಾಗೆಯೇ ಅವರಿಗಾಗಿ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯಲು ಅವಕಾಶ ಕಲ್ಪಿಸಲಾಗಿದೆ.

ಆದರೆ ಸರ್ಕಾರದ ಈ ನಿಯಮದ ಪ್ರಕಾರ ಕರ್ನಾಟಕದಲ್ಲಿ ಇಂಗ್ಲಿಶನ್ನು ಮಾತೃಭಾಷೆಯಾಗುಳ್ಳ ಮಕ್ಕಳು ಮಾತ್ರ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿಯೂ ಮತ್ತು ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿಯು ಕಲಿಯುತ್ತಿಲ್ಲ. ಬದಲಾಗಿ ಕನ್ನಡ, ಹಿಂದಿ, ತಮಿಳು, ತೆಲಗು, ಮರಾಠಿ, ಉರ್ದು, ಲಂಬಾಣಿ, ತುಳು, ಕೊಡವ ಮೊದಲಾದವನ್ನು ಮಾತೃಭಾಷೆಯಾಗುಳ್ಳ ಮಕ್ಕಳು ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಿವೆ. ಇದಕ್ಕೆ ಬೇರೆಬೇರೆ ಕಾರಣಗಳು ಇವೆ. ಇವುಗಳನ್ನು ಈಗಾಗಲೇ ಮಾತೃಭಾಷೆಯ ಕಲಿಕೆ ಮತ್ತು ಸಮಸ್ಯೆಗಳು ಎಂಬ ಭಾಗದಲ್ಲಿ ಚರ್ಚಿಸಲಾಗಿದೆ. ಹೀಗಾಗಿ ಇಲ್ಲಿ ಇಂಗ್ಲೀಶನ್ನು ಪ್ರಥಮ ಮತ್ತು ದ್ವಿತೀಯ ಅಥವಾ ತೃತೀಯ ಭಾಷೆಯಾಗಿ ಕಲಿಸುತ್ತಿರುವುದರಿಂದ ಮತ್ತು ಕಲಿಯುತ್ತಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳನ್ನಷ್ಟೇ ಚರ್ಚಿಸುತ್ತಿದ್ದೇನೆ. ಈ ಹಿಂದೆಯೇ ಚರ್ಚಿಸಿದ ಹಾಗೆ ಪ್ರಥಮ ಭಾಷೆಯ ಕಲಿಸುವಿಕೆ ಉದ್ದೇಶ ಮತ್ತು ದ್ವಿತೀಯ ಹಾಗೂ ತೃತೀಯ ಭಾಷೆಗಳನ್ನು ಕಲಿಸುವ ಉದ್ದೇಶಕ್ಕೆ ವ್ಯತ್ಯಾಸವಿದೆ. ಹೀಗಾಗಿ ಕರ್ನಾಟಕ ಸರ್ಕಾರದ ಭಾಷಾನೀತಿಯ ಪ್ರಕಾರ ಆಂಗ್ಲೋ-ಇಂಡಿಯನ್ನರ ಮಕ್ಕಳು ಮಾತ್ರ ಇಂಗ್ಲಿಶನ್ನು ಪ್ರಥಮ ಭಾಷೆಯಾಗಿ ಕಲಿಯಬೇಕು. ಉಳಿದೆಲ್ಲಾ ವಿದ್ಯಾರ್ಥಿಗಳು ದ್ವಿತೀಯ ಅಥವಾ ತೃತೀಯ ಭಾಷೆಯಾಗಿ ಕಲಿಯಬೇಕು. ಏಕೆಂದರೆ ಉಳಿದೆಲ್ಲಾ ವಿದ್ಯಾರ್ಥಿಗಳಿಗೆ ಇಂಗ್ಲಿಶ್‌ನ್ನು ಕಲಿಸುತ್ತಿರುವುದು ವ್ಯಾವಹಾರಿಕ ಉದ್ದೇಶದಿಂದ. ಆದರೆ ಕರ್ನಾಟಕದಲ್ಲಿ ವಿದ್ಯಾರ್ಥಿಗಳು ಪ್ರಥಮ ಭಾಷಾಕಲಿಕೆ ಮತ್ತು ಸಮಸ್ಯೆಗಳು ಭಾಗದಲ್ಲಿ ಚರ್ಚಿಸಿದ ಕಾರಣಗಳಿಂದಾಗಿ ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಿದ್ದಾರೆ. ಇದನ್ನು ಸ್ಥಳೀಯ ಭಾಷಾಸಮುದಾಯಗಳ ಮಕ್ಕಳು ಉದ್ದೇಶ ಪೂರ್ವಕವಾಗಿ ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿ ಕಲಿಯಬೇಕು ಎಂದು ಕಲಿಯುತ್ತಿರುವುದಲ್ಲ. ಅದರ ಉದ್ದೇಶವು ಅವರಿಗೆ ತಿಳಿದಿಲ್ಲ. ತಾವು ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಲ್ಲಿ ಕಲಿಯುತ್ತಿರುವುದರಿಂದ ಇಂಗ್ಲಿಶನ್ನು ಪ್ರಥಮ ಭಾಷೆಯಾಗಿ ಕಲಿಯುತ್ತಿರುವುದಾಗಿದೆ. ಇದರಿಂದ ಸ್ಥಳೀಯ ಭಾಷಾಸಮುದಾಯದ ವಿದ್ಯಾರ್ಥಿಗಳು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಏಕೆಂದರೆ ಸ್ಥಳೀಯ ವಿದ್ಯಾರ್ಥಿಗಳು ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿ ಕಲಿಯುವಾಗ ಭಾಷೆಯ ನಾಲ್ಕು ಕೌಶಲಗಳಾದ ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದನ್ನು ಶಾಲೆಯಲ್ಲಿಯೇ ಕಲಿಯಬೇಕಾಗಿದೆ.

ಆದರೆ ನಮ್ಮ ಶಾಲೆಗಳಲ್ಲಿ ಮೊದಲು ಭಾಷೆಯನ್ನು ಆಲಿಸುವುದು, ಅನಂತರ ಮಾತನಾಡುವುದನ್ನು ಪ್ರಾಯೋಗಿಕವಾಗಿ ಕಲಿಸುವುದಿಲ್ಲ. ಬದಲಾಗಿ ಓದುವ ಮತ್ತು ಬರೆಯುವ ಕೌಶಲಗಳನ್ನು ಮಾತ್ರ ಕಲಿಸಲಾಗುತ್ತಿದೆ. ಇದರಿಂದಾಗಿ ವಿದ್ಯಾರ್ಥಿಗಳು ಶಾಲೆಗಳಲ್ಲಿ ಒಂದು

ಭಾಷೆಯಾಗಿ ಇಂಗ್ಲಿಶ್‌ನ್ನು ಹತ್ತು, ಹನ್ನೆರಡು ವರ್ಷ ಕಲಿತಿದ್ದರೂ ಇಂಗ್ಲಿಶ್‌ನಲ್ಲಿ ಸಂವಹನದ ಸಾಮರ್ಥ್ಯ ಪಡೆದುಕೊಳ್ಳಲು ಸಾಧ್ಯವಾಗದೆ ಜಾಗತಿಕ ಪ್ರಪಂಚದಲ್ಲಿ ಹಿಂದೆ ಉಳಿದುಕೊಂಡಿದೆ. ಇಂದಿನ ಜಾಗತಿಕ ಪ್ರಪಂಚಕ್ಕೆ ಇಂಗ್ಲಿಶ್‌ನ ಓದು ಮತ್ತು ಬರಹದ ಜೊತೆಗೆ ಸ್ವತಂತ್ರವಾಗಿ ವ್ಯವಹರಿಸುವ ಸಂವಹನ ರೂಪದ ಇಂಗ್ಲಿಶ್‌ನ ಅಗತ್ಯವಿದೆ. ಆದರೆ ಕರ್ನಾಟಕದ ಶಿಕ್ಷಣ ಕ್ರಮದಲ್ಲಿ ಭಾಷೆಗಳನ್ನು ಪರೀಕ್ಷೆಗೆ ಮಾತ್ರ ಸಜ್ಜುಗೊಳಿಸಲಾಗುತ್ತಿದೆ. ಇದರಿಂದ ವಿದ್ಯಾರ್ಥಿಗಳು ಬೇಡಿಕೆಗೆ ಅನುಗುಣವಾಗಿ ಇಂಗ್ಲಿಶ್ ಕಲಿಯಲು ಸಾಧ್ಯವಾಗದೆ ಔದ್ಯೋಗಿಕ, ಶೈಕ್ಷಣಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಎದುರಿಸುತ್ತಿದ್ದಾರೆ. ಇಂತಹ ಅವೈಜ್ಞಾನಿಕ ಕ್ರಮದಲ್ಲಿ ಇಂಗ್ಲಿಶ್ ಕಲಿಸುವ ಪದ್ಧತಿಯನ್ನು ಬದಲಾಯಿಸಿ ವೈಜ್ಞಾನಿಕ ಕ್ರಮದಲ್ಲಿ ವಿದ್ಯಾರ್ಥಿಗಳಿಗೆ ಒಂದು ಭಾಷೆಯಾಗಿ ಕಲಿಸಿ ವಿದ್ಯಾರ್ಥಿಗಳ ಔದ್ಯೋಗಿಕ, ಶೈಕ್ಷಣಿಕ, ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವ ಅಗತ್ಯ ಇದೆ. ಇದು ಮಾತೃಭಾಷಾಮಾಧ್ಯಮದ ಅಭಿವೃದ್ಧಿಗೂ ಸಹಕಾರಿಯಾಗುತ್ತದೆ. ಎಲ್ಲಿಯವರೆಗೂ ಒಂದು ಭಾಷೆಯಾಗಿ ಜಾಗತಿಕ ಪ್ರಪಂಚದ ಅಗತ್ಯಕ್ಕೆ ಅನುಗುಣವಾಗಿ ಇಂಗ್ಲಿಶ್‌ನ್ನು ಕಲಿಸುವುದಿಲ್ಲವೋ ಅಲ್ಲಿಯವರೆಗೆ ಮಾತೃಭಾಷಾಮಾಧ್ಯಮದ ಶಾಲೆಗಳನ್ನು ನಿಯಂತ್ರಿಸುವುದು ಸಾಧ್ಯವಾಗದ ಕೆಲಸ. ಇದು ಈಗಾಗಲೇ ಮನದಟ್ಟಾಗಿರುವ ಸತ್ಯ ಕೂಡ ಹೌದು.

ಹೀಗೆ ಇಂಗ್ಲಿಶ್ ಭಾಷೆಯನ್ನು ಕಲಿಸುವುದರ ಹಿಂದಿರುವ ಉದ್ದೇಶ, ಕಲಿಸುತ್ತಿರುವ ಕ್ರಮಗಳು, ಮತ್ತು ಇಂಗ್ಲಿಶ್ ಭಾಷೆಯನ್ನು ಕಲಿಸುತ್ತಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ಸರಿಯಾಗಿ ಗಮನಿಸದ ಶಿಕ್ಷಣತಜ್ಞರು, ಸಮಾನತೆಯ ಶಿಕ್ಷಣ, ಸಾಮಾಜಿಕ ನ್ಯಾಯದ ಪರವಾಗಿ ಮಾತನಾಡುವ ಹೋರಾಟಗಾರರು ಸರ್ಕಾರಿ ಶಾಲೆಗಳಲ್ಲಿ ಕಲಿಯುವ ಮಕ್ಕಳಿಗೆ ಐದನೇ ತರಗತಿಯಿಂದ ಇಂಗ್ಲಿಶ್ ಕಲಿಸಲಾಗುತ್ತಿದೆ. ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುವ ಮಕ್ಕಳು ಒಂದನೇ ತರಗತಿಯಿಂದಲೇ ಇಂಗ್ಲಿಶ್ ಕಲಿಯುತ್ತಿದ್ದಾರೆ. ಇದರಿಂದಾಗಿ ಖಾಸಗಿ ಇಂಗ್ಲಿಶ್ ಮಾಧ್ಯಮದ ಶಾಲೆಗಳಲ್ಲಿ ಕಲಿಯುವ ಮಕ್ಕಳು ಇಂಗ್ಲಿಶ್‌ನಲ್ಲಿ ಪ್ರಾವಿಣ್ಯತೆ ಪಡೆಯಲು ಸಾಧ್ಯವಾಗಿದೆ. ಸರ್ಕಾರಿ ಶಾಲೆಗಳಲ್ಲಿ ಕಲಿಯುವ ಮಕ್ಕಳಿಗೂ ಒಂದನೇ ತರಗತಿಯಿಂದಲೇ ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಕಲಿಸಿದರೆ ಮಾತೃಭಾಷಾ ಮಾಧ್ಯಮದ ಶಾಲೆಗಳಲ್ಲಿ ಕಲಿಯುವ ಮಕ್ಕಳು ಇಂಗ್ಲಿಶ್ ಕಲಿತು ಉದ್ಯೋಗ, ಉನ್ನತ ಶಿಕ್ಷಣದ ಸಂದರ್ಭಗಳಲ್ಲಿ ಎದುರಿಸುತ್ತಿರುವ ಭಾಷಾಸಮಸ್ಯೆಗಳಿಂದ ಹೊರಬರಲು ಸಾಧ್ಯವಾಗುತ್ತದೆ ಎಂದು ಸರ್ಕಾರಗಳ ಮೇಲೆ ಒತ್ತಡ ಉಂಟುಮಾಡಿದ್ದಾರೆ. ಇದಕ್ಕೆ ಪೂರಕವಾಗಿ ನೇಮಕವಾದ ನಾಡಿನ ಪ್ರಸಿದ್ಧ ಚಿಂತಕರಾದ ಬರಗೂರು ರಾಮಚಂದ್ರಪ್ಪನವರು ತಮ್ಮ ವರದಿಯ ನೀತಿನಿರೂಪಣೆ ಮತ್ತು ಶಿಫಾರಸುಗಳಲ್ಲಿ "ಜಾಗತೀಕರಣದ ಗಾಳಿಗಿಂತ ಮುಂಚಿನಿಂದಲೂ ಇಂಗ್ಲಿಷ್ ಮಾಧ್ಯಮದ ವ್ಯಾಮೋಹವು ನಮ್ಮ ಸಮಾಜದಲ್ಲಿದೆ. ಇತ್ತೀಚೆಗೆ ಅದರ ಪ್ರಮಾಣ ಹೆಚ್ಚಾಗಿದೆ. ಮಾಹಿತಿ ತಂತ್ರಜ್ಞಾನದ ನೆಲೆಗಳು ವಿಸ್ತರಿಸುತ್ತಿರುವ ಇಂದಿನ ಸಂದರ್ಭದಲ್ಲಿ ಅದಕ್ಕೆ (ಪೂರ್ಣ ನಿಜವಲ್ಲದಿದ್ದರೂ) ಇಂಗ್ಲಿಷ್ ಜ್ಞಾನ ಬೇಕೆಂಬ ಭಾವನೆ ಬಲವಾಗಿದೆ. ಹೀಗಾಗಿ ಇಂಗ್ಲಿಷನ್ನು ಒಂದು ಭಾಷೆಯಾಗಿ ಪ್ರಾಥಮಿಕ ಶಿಕ್ಷಣದ ಮೂರನೇ ತರಗತಿಯಿಂದ ಕಲಿಸಬೇಕೆಂಬ ಸಲಹೆ ಸೂಕ್ತವಾಗಿದೆ."[೨] ಎಂದಿದ್ದಾರೆ.

ಹಾಗೆಯೆ ಇವರು ಕರ್ನಾಟಕದಲ್ಲಿ ಇಂಗ್ಲಿಶ್ ಭಾಷೆಯನ್ನು ಕಲಿಸುತ್ತಿರುವುದರಲ್ಲಿ ಇರುವ ಲೋಪದೋಷಗಳನ್ನು ಗುರುತಿಸಿ ಅವುಗಳನ್ನು ಸರಿಪಡಿಸುವ ಸಲಹೆ ನೀಡುವುದರಲ್ಲಿ ಹಿಂದೆ ಸರಿದಿಲ್ಲ. ಇವರು "ಇಂಗ್ಲಿಷ್ ಕಲಿಕೆ ಮೂರನೇ ತರಗತಿಯಿಂದ ಪ್ರಾರಂಭವಾದ ಕೂಡಲೇ ಇಂಗ್ಲಿಷ್ ಮಾಧ್ಯಮದ ವ್ಯಾಮೋಹ ಪೂರ್ಣವಾಗಿ ಹಿಂಗುತ್ತದೆ ಎಂದು ಭಾವಿಸಬೇಕಿಲ್ಲ. ಆದ್ದರಿಂದ ಇಂಗ್ಲಿಷ್‌ನ ಕಲಿಕೆಯ ವಿಧಾನವನ್ನೇ ಬದಲಾಯಿಸಬೇಕಾದ ಅಗತ್ಯವಿದೆ. ಮಾತೃಭಾಷೆ ಬೋಧನೆಯ ಮಾದರಿಯಲ್ಲೇ ಇಂಗ್ಲಿಷ್ ಭಾಷಾ ಬೋಧನೆಯನ್ನು ನಡೆಸುವುದು ಸೂಕ್ತ ವಿಧಾನವಲ್ಲ. ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುವ, ಪರಸ್ಪರ ಸಂವಾದಿಸುವ ಸಂವಹನಶೀಲ ಶಕ್ತಿಯನ್ನು ಇಂಗ್ಲಿಷ್ ಕಲಿಕೆಯ ಮುಖ್ಯಭಾಗವಾಗಿಸಬೇಕು. ಮೂರು ಮತ್ತು ನಾಲ್ಕನೇ ತರಗತಿಯಲ್ಲಿ ಇಂಗ್ಲಿಷ್ ಮಾತುಗಾರಿಕೆಯೇ ಪಠ್ಯದ ಪ್ರಮುಖ ಅಂಶವಾಗಬೇಕು" ಅಂದರೆ "ಪ್ರಾಥಮಿಕ ಹಂತದ ಮೂರನೇ ತರಗತಿಯಿಂದ ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸಲು ಪ್ರಾರಂಭಿಸಬೇಕು. ಕನ್ನಡ ಕಲಿಕೆಯ ವಿಧಾನವನ್ನೇ ಇಂಗ್ಲಿಷ್ ಕಲಿಕೆಗೂ ಅಳವಡಿಸದೆ, ಮಾತುಗಾರಿಕೆ, ಸಂವಾದ, ಸಂವಹನಾಶೀಲತೆಗಳನ್ನು ಬೆಳೆಸುವ ದಿಕ್ಕಿನಲ್ಲಿ ಪರಿಣತಿ ಕೊಡುವಂತೆ ಇಂಗ್ಲಿಷ್ ಕಲಿಕಾ ವಿಧಾನವನ್ನು ಬದಲಾಯಿಸಬೇಕು"[೨೨] ಎಂಬಂತಹ ಸಲಹೆಗಳನ್ನು ನೀಡಿದ್ದಾರೆ.

ಇದರಿಂದಾಗಿ ಕರ್ನಾಟಕ ಸರ್ಕಾರ ಸರ್ಕಾರಿ ಶಾಲೆಗಳಲ್ಲಿ ಐದನೇ ತರಗತಿಯಿಂದ ಕಲಿಸಲಾಗುತ್ತಿದ್ದ ಇಂಗ್ಲಿಶ್‌ನ್ನು ಮೂರನೇ ತರಗತಿಯಿಂದಲೇ ಕಲಿಸಲು ತನ್ನ ಭಾಷಾನೀತಿಯನ್ನು ಬದಲಾವಣೆ ಮಾಡಿದೆ. ಅದು ಇಂದು ಮತ್ತೂ ಮುಂದುವರೆದು ಒಂದನೇ ತರಗತಿಯಿಂದಲೇ ಕಲಿಸುವ ಭಾಷಾನೀತಿಯನ್ನು ಜಾರಿಗೊಳಿಸಿದೆ. ಆದರೆ ಹೀಗೆ ಇಂಗ್ಲಿಶ್ ಭಾಷಾಕಲಿಕೆಯ ಹಂತವನ್ನು ಬದಲಾವಣೆ ಮಾಡುವಂತೆ ಸಲಹೆ ನೀಡುವ ಮತ್ತು ಒತ್ತಡ ಹೇರುವ ಮೊದಲು ಮಾತೃಭಾಷಾಮಾಧ್ಯಮದಲ್ಲಿ ಕಲಿಯುವ ಮಕ್ಕಳು ಯಾವ ಕಾರಣಗಳಿಂದಾಗಿ ಇಂಗ್ಲಿಶ್ ಭಾಷೆಯ ಮೇಲೆ ಹಿಡಿತ ಹೊಂದಲು ಸಾಧ್ಯವಾಗುತ್ತಿಲ್ಲ? ಜಾಗತಿಕ ಪ್ರಪಂಚದಲ್ಲಿ ಹಿನ್ನೆಡೆಯನ್ನು ಅನುಭವಿಸುತ್ತಿವೆ? ಇದಕ್ಕೆ ವಿದ್ಯಾರ್ಥಿಗಳು ಕಾರಣನಾ? ಶಿಕ್ಷಕರು ಕಾರಣನಾ? ಅಥವಾ ಶಿಕ್ಷಣ ವ್ಯವಸ್ಥೆಯಲ್ಲಿ ಇಂಗ್ಲಿಶ್‌ನ್ನು ಕಲಿಸುತ್ತಿರುವಲ್ಲಿ ಲೋಪದೋಷವಿದೆಯಾ? ಎಂಬ ಪ್ರಶ್ನೆಗಳನ್ನು ಕೇಳಿಕೊಂಡು ಇವುಗಳಿಗೆ ನಿಜವಾದ ಉತ್ತರಗಳನ್ನು ಕಂಡುಕೊಳ್ಳಬೇಕಾದ ಅಗತ್ಯವಿದೆ. ಆದರೆ ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದಲೇ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಕಲಿಸಿ ಎಂದು ಒತ್ತಡ ಉಂಟುಮಾಡಿರುವವರು ಇಂತಹ ಪ್ರಶ್ನೆಗಳನ್ನು ಕೇಳಿಕೊಳ್ಳದೆ ಒಂದನೇ ತರಗತಿಯಿಂದಲೇ ಒಂದು ಭಾಷೆಯಾಗಿ ಇಂಗ್ಲಿಶ್ ಕಲಿಸಿ ಕನ್ನಡ ಉಳಿಸಿ ಎಂಬ ಒತ್ತಡ ಉಂಟುಮಾಡಿದ್ದಾರೆ. ಆದರೆ ರಾಜ್ಯದ ಸರ್ಕಾರಿ ಶಾಲೆಗಳ ಪರಿಸ್ಥಿತಿ ಇದುವರೆಗೆ ಚರ್ಚಿಸಿದ ಹಾಗೆ ಮೂಲಭೂತ ಸೌಕರ್ಯಗಳ ಸಮಸ್ಯೆಗಳನ್ನು ಎದುರಿಸುತ್ತಿದ್ದು, ಇಂಗ್ಲಿಶ್ ಕಲಿಸುವ ಕ್ರಮದಲ್ಲಿಯೇ ತಪ್ಪುಗಳು ಇರುವುದರಿಂದ ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದಲೇ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಕಲಿಸುವುದರಿಂದ ಸರ್ಕಾರಿ ಶಾಲೆಗಳ ಮಕ್ಕಳು ಇಂಗ್ಲಿಶ್ ಭಾಷೆಯ ಮೇಲೆ ಹಿಡಿತ ಸ್ಥಾಪಿಸಲು

ಸಾಧ್ಯವಾಗುತ್ತದೆಯೇ? ಸರ್ಕಾರಿ ಮತ್ತು ಖಾಸಗಿ ಶಾಲೆಗಳ ಮಕ್ಕಳ ನಡುವೆ ಸಮಾನತೆ ಸಾಧ್ಯವಾಗುತ್ತದೆಯೇ? ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದ ಇಂಗ್ಲಿಶ್‌ನ್ನು ಕಲಿಸುವವರು ಯಾರು? ಇದಕ್ಕೆ ಹೊಸದಾಗಿ ಸರ್ಕಾರ ಹೊಸದಾಗಿ ಇಂಗ್ಲಿಶ್ ಭಾಷಾಶಿಕ್ಷಕರನ್ನು ನೇಮಕ ಮಾಡುತ್ತದೆಯೇ? ಇಲ್ಲ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರಿಗೆ ಹೆಚ್ಚಿನ ಜವಾಬ್ದಾರಿ ವಹಿಸುತ್ತದೆಯೇ? ಈಗಾಗಲೇ ಸರ್ಕಾರಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರಿಗೆ ಇಂಗ್ಲಿಶ್ ಬೋಧಿಸುವ ಸಾಮರ್ಥ್ಯ ಇದೆಯೇ? ಇತ್ಯಾದಿ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ.

ಇಂತಹ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳದೆ ಇಂಗ್ಲಿಶ್ ಭಾಷಾಕಲಿಕೆಯ ಹಂತವನ್ನು ಬದಲಾವಣೆ ಮಾಡುವುದರಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಅದು ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಗೆ ತೊಂದರೆಯಾಗಿ ಸಮಸ್ಯೆಗಳ ಹುಟ್ಟಿಗೆ ಕಾರಣವಾಗುತ್ತದೆ. ಇದನ್ನು ಅರ್ಥ ಮಾಡಿಕೊಳ್ಳದೆ ಕರ್ನಾಟಕ ಸರ್ಕಾರ ಐದನೇ ತರಗತಿಯಿಂದ ಕಲಿಸಲಾಗುತ್ತಿದ್ದ ಇಂಗ್ಲಿಶ್‌ನ್ನು ಮೂರನೇ ತರಗತಿಗೆ ಬದಲಾಯಿಸಿ ಈಗ ಮತ್ತೆ ಒಂದನೇ ತರಗತಿಯಿಂದಲೇ ಕಲಿಸುವಂತೆ ಸರ್ಕಾರಿ ಶಾಲೆಗಳಿಗೆ ಸೂಚಿಸಿದೆ. ಆದರೆ ಸರ್ಕಾರದ ಈ ನಿಯಮದಿಂದಲೂ ಸರ್ಕಾರದ ಮಾತೃಭಾಷಾಮಾಧ್ಯಮದ ಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳಿಗೆ ಜಾಗತಿಕ ಪ್ರಪಂಚದ ಅಗತ್ಯಕ್ಕೆ ಪೂರಕವಾಗಿ ಇಂಗ್ಲಿಶ್‌ನಲ್ಲಿ ಭಾಷಾಸಾಮರ್ಥ್ಯ ಪಡದುಕೊಳ್ಳಲು ಸಾಧ್ಯವಾಗಿಲ್ಲ. ಏಕೆಂದರೆ ಕರ್ನಾಟಕ ಸರ್ಕಾರ ವಿದ್ಯಾರ್ಥಿಗಳ ಇಂಗ್ಲಿಶ್ ಭಾಷಾಕಲಿಕೆಯ ಹಂತಗಳನ್ನು ಮಾತ್ರ ಬದಲಾವಣೆ ಮಾಡಿದೆಯೇ ಹೊರತು ಇಂಗ್ಲಿಶ್‌ನ್ನು ಕಲಿಸುವ ಕ್ರಮಗಳಲ್ಲಿ ಬದಲಾಯಿಸುವ ಕೆಲಸ ಮಾಡಿಲ್ಲ. ಮತ್ತು ಇಂಗ್ಲಿಶ್‌ನ್ನು ವಿದ್ಯಾರ್ಥಿಗಳಿಗೆ ಸಮರ್ಥವಾಗಿ, ಪ್ರಾಯೋಗಿಕವಾಗಿ ಕಲಿಸುವ ಶಿಕ್ಷಕರನ್ನು ನೇಮಕ ಮಾಡಿಲ್ಲ. ಬದಲಾಗಿ ಈಗಾಗಲೇ ಸರ್ಕಾರಿ ಶಾಲೆಗಳಿಗೆ ನೇಮಕವಾಗಿದ್ದ ಶಿಕ್ಷಕರಿಗೆ ಒಂದನೇ ತರಗತಿಯಿಂದ ಇಂಗ್ಲಿಶ್ ಕಲಿಸುವಂತೆ ಹೆಚ್ಚಿನ ಜವಾಬ್ದಾರಿ ವಹಿಸಿದೆ. ಆದರೆ ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಸಮರ್ಪಕವಾಗಿ ಶಿಕ್ಷಕರು ಇಲ್ಲ. ಸಮರ್ಪಕವಾಗಿ ಶಿಕ್ಷಕರುಗಳು ಇರುವ ಕಡೆಗಳಲ್ಲಿಯು ಶಿಕ್ಷಕರಿಗೆ ಬೋಧನೆಗಿಂತ ಬಿಸಿಯೂಟ, ತರಬೇತಿ, ಇತರ ಅಂಕಿಅಂಶಗಳ ಸಂಗ್ರಹಣೆ, ಮೇಲಧಿಕಾರಿಗಳ ಸೇವೆ, ಜಾತಿ, ಧರ್ಮರಾಜಕಾರಣ, ತನ್ನ ವೈಯಕ್ತಿಕ ವ್ಯವಹಾರಗಳ ಕಡೆಗೆ ಗಮನ ಹರಿಸುವುದೇ ಮುಖ್ಯವಾಗಿದೆ.

ಇದರಿಂದಾಗಿ ರಾಜ್ಯದ ಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದ ಶಿಕ್ಷಕರು ಒಂದನೇ ತರಗತಿಯಿಂದ ಇಂಗ್ಲೀಶ್ ಕಲಿಸುವಂತೆ ನಿಯಮ ಜಾರಿಗೆ ಬರುವ ಪೂರ್ವದಲ್ಲಿ ಕಲಿಸಲು ಸೂಚಿಸಲಾಗಿದ್ದ ಕನ್ನಡ, ವಿಜ್ಞಾನ, ಗಣಿತ, ಸಮಾಜದ ವಿಷಯಗಳನ್ನೇ ಸರಿಯಾಗಿ ಕಲಿಸುತ್ತಿರಲಿಲ್ಲ. ಇದರಿಂದಾಗಿ ಸರ್ಕಾರಿ ಶಾಲೆಗಳಲ್ಲಿ ಕಲಿಯುವ ವಿದ್ಯಾರ್ಥಿಗಳ ಕಲಿಕೆಯ ಗುಣಮಟ್ಟ ಕಳಪೆಯಾಗಿಯೇ ಇತ್ತು. ಇಂತಹ ಸಂದರ್ಭದಲ್ಲಿ ಸರ್ಕಾರ ಶಿಕ್ಷಕರಿಗೆ ಹೆಚ್ಚುವರಿಯಾಗಿ ಇಂಗ್ಲಿಶ್‌ನ್ನು ಕಲಿಸಿ ಎಂದು ಹೇಳಿದರೆ ಅವರು ಉದ್ದೇಶಕ್ಕೆ ಅನುಗುಣವಾಗಿ ಕಲಿಸುತ್ತಾರೆಯೇ? ಇದರಿಂದ ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳ ಇಂಗ್ಲಿಶ್ ಭಾಷಾಬೇಡಿಕೆ ಸಮಸ್ಯೆ ಈಡೇರುತ್ತದೆಯೇ? ಇದರಿಂದ ಸರ್ಕಾರಿ

ಮತ್ತು ಖಾಸಗಿ ಶಾಲೆಗಳ ಮಧ್ಯೆ ಇರುವ ಅಂತರ ತಪ್ಪುತ್ತದೆಯೇ? ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗುತ್ತದೆ. ಈ ಪ್ರಶ್ನೆಗಳನ್ನು ಕೇಳಿಕೊಂಡು ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದ ಇಂಗ್ಲಿಶ್ ಭಾಷಾಕಲಿಸುವಿಕೆಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ಕಲೆಹಾಕಿದಾಗ ಕೆಲವು ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಶ್ ಭಾಷೆಯ ವರ್ಣಮಾಲೆ, ಒಂದಷ್ಟು ತರಕಾರಿ, ಹಣ್ಣುಗಳ ಹೆಸರು ಮತ್ತು ಸಾಧ್ಯವಾದಷ್ಟು ಅಂಕಿಗಳನ್ನು ಕಲಿಸಿ ತಮ್ಮ ಕೆಲಸ ಪೂರ್ಣಗೊಳಿಸಿದ್ದಾರೆ.

ಮತ್ತೆ ಕೆಲವು ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಇಂಗ್ಲಿಶ್ ಭಾಷೆಯ ವರ್ಣಮಾಲೆಯನ್ನು ಪರಿಚಯ ಮಾಡಿಕೊಟ್ಟಿಲ್ಲ. ಆದರೆ ವಿದ್ಯಾರ್ಥಿಗಳಿಗೆ ಇಂಗ್ಲಿಶ್ ಕಲಿಸಿರುವುದಕ್ಕೆ ದಾಖಲೆಗಳನ್ನು ಸಿದ್ಧಮಾಡಿ ಮೇಲಧಿಕಾರಿಗಳ ಸಹಿ ಪಡೆದಿದ್ದಾರೆ. ಕುತೂಹಲಕ್ಕಾಗಿ ಈ ಬಗೆಗೆ ವಿದ್ಯಾರ್ಥಿಗಳನ್ನು ವಿಚಾರಿಸಿದಾಗ ವಿದ್ಯಾರ್ಥಿಗಳಿಗೆ ಇಂಗ್ಲಿಶ್ ವರ್ಣಮಾಲೆ ತಿಳಿಯದೆ ಇರುವುದು ತಿಳಿಯಿತು. ಈ ಬಗೆಗೆ ಶಿಕ್ಷಕರನ್ನು ಕೇಳಿದಾಗ ಈ ಮಕ್ಕಳು ಶಾಲೆಗೆ ಬರೋದೆ ಕಷ್ಟ ಸರ್, ಬಂದರೂ ಕನ್ನಡವನ್ನೇ ಸರಿಯಾಗಿ ಕಲಿಯಲ್ಲ. ಇನ್ನು ಇಂಗ್ಲಿಶ್ ಎಲ್ಲಿ ಕಲಿಯುತ್ತಾರೆ? ನಾವೂ ಯಾವಾಗಲೂ ಬಿಸಿಯೂಟ, ತರಬೇತಿ, ಮೀಟಿಂಗು, ಎಲೆಕ್ಷನ್, ಸೆನ್ಸಸ್ ಅಂತನೇ ಇರುತ್ತೇವೆ. ಇನ್ನು ಮಕ್ಕಳಿಗೆ ಇಂಗ್ಲಿಶ್ ಕಲಿಸುವುದು ಯಾವಾಗ? ಸರ್ಕಾರಕ್ಕೆ ಇವುಗಳು ಎಲ್ಲಿ ಅರ್ಥ ಆಗುತ್ತವೆ. ಯಾರೋ ನಾಲ್ಕು ಜನ ಬಂದು ಪ್ರತಿಭಟನೆ ಮಾಡಿದ ಮಾತ್ರಕ್ಕೆ ನಿಯಮಗಳನ್ನು ಮಾಡುತ್ತವೆ. ನಾವು ಅದನ್ನು ಪಾಲಿಸಬೇಕು. ಅದಕ್ಕೆ ದಾಖಲೆಗಳು ಕೊಡಬೇಕು. ಹೀಗಾಗಿ ನಾವು ದಾಖಲೆಗಳನ್ನು ಸಿದ್ಧಮಾಡಿ ಇಟ್ಟುಕೊಂಡಿದ್ದೇವೆ ಎಂದು ತಮ್ಮ ಇಂಗ್ಲಿಶ್ ಕಲಿಸುವ ಕಾರ್ಯವೈಖರಿಯನ್ನು ಕುರಿತು ಮಾತನಾಡುತ್ತಾರೆ. ಹೀಗಾಗಿ ರಾಜ್ಯ ಸರ್ಕಾರ ಒಂದನೇ ತರಗತಿಯಿಂದಲೇ ಸರ್ಕಾರಿ ಶಾಲೆಗಳಲ್ಲಿ ಒಂದು ಭಾಷೆಯಾಗಿ ಇಂಗ್ಲಿಶ್ ಕಲಿಸುವ ಭಾಷಾನೀತಿ ಜಾರಿಗೆ ತಂದಿದ್ದರು ಅದು ರಾಜ್ಯ ಸರ್ಕಾರಿ ಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳಿಗೆ ಯಾವುದೇ ಪ್ರಯೋಜನ ಆಗಿಲ್ಲ. ಹೀಗಾಗಿ ಕರ್ನಾಟಕ ಸರ್ಕಾರದ ಈ ಭಾಷಾಯೋಜನೆ ಬಡವರನ್ನು, ಮಾತೃಭಾಷಾ ಮಾಧ್ಯಮದಲ್ಲಿ ಕಲಿಸುತ್ತಿರುವವರನ್ನು ಸಮಾಧಾನಗೊಳಿಸಲು ಸರ್ಕಾರ ಮಾಡಿರುವ ತಂತ್ರವಾಗಿ ಕಾಣುತ್ತಿದೆ.

ಇನ್ನು ಪ್ರೌಢಶಾಲೆಯಲ್ಲಿ ಕೆಲಸ ನಿರ್ವಹಿಸುವ ಶಿಕ್ಷಕರಿಗೆ ಭಾಷೆಗಳನ್ನು ಕಲಿಸುವಾಗ ಪರೀಕ್ಷಾ ದೃಷ್ಟಿಕೋನ ಮುಖ್ಯವಾಗಿದೆ. ಇದರಿಂದಾಗಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಭಾಷೆಗಳನ್ನು ಕಲಿಸುವಾಗ ಭಾಷೆಯ ಕೌಶಲಗಳನ್ನು ಕಲಿಸದೆ ಪರೀಕ್ಷೆಗೆ ಸಿದ್ಧಗೊಳಿಸುವ ಕಡೆಗೆ ಆಸಕ್ತರಾಗಿದ್ದಾರೆ. ಆದರೆ ವಿದ್ಯಾರ್ಥಿಗಳಿಗೆ ಸಂವಹನದ ಕೌಶಲಗಳನ್ನು ಕಲಿಸುವುದರಿಂದ ಪರೀಕ್ಷಾ ಫಲಿತಾಂಶದ ಮೇಲೆ ಸಕಾರಾತ್ಮಕ ಪರಿಣಾಮದ ಬೀರುತ್ತದೆ. ಹಾಗೆಯೇ ವಿದ್ಯಾರ್ಥಿಗಳಿಗೆ ಭಾಷಾಕಲಿಕೆ ಸುಲಭವಾಗುತ್ತದೆ. ಇಂದಿನ ಬದುಕಿಗೆ ಅಗತ್ಯವಾಗಿರುವುದು ಇದೇ ಆಗಿದೆ. ಆದರೆ ಈ ವಿಚಾರಗಳ ಬಗೆಗೆ ಬಗೆಗೆ ಶಿಕ್ಷಕರಾಗಲಿ, ಪಠ್ಯಪುಸ್ತಕ ರಚಿಸುವವರಾಗಲಿ ಗಮನ ಹರಿಸಿಲ್ಲ. ಹೀಗಾಗಿ ವಿದ್ಯಾರ್ಥಿಗಳಿಗೆ ಪ್ರಥಮ ಭಾಷೆಯನ್ನು ಕಲಿಸುವ ಕ್ರಮದಲ್ಲಿಯೇ ದ್ವಿತೀಯ ಮತ್ತು ತೃತೀಯ ಭಾಷೆಗಳನ್ನು ಕಲಿಸಲಾಗುತ್ತದೆ. ಅಂದರೆ ಮೊದಲು ಓದುವುದು, ಅನಂತರ ಬರೆಯುವುದನ್ನು ಕಲಿಸಲಾಗುತ್ತಿದೆ. ಇಲ್ಲಿ ಭಾಷೆಯನ್ನು

ಅರ್ಥೈಸುವ, ಮಾತನಾಡುವ ಕೌಶಲಗಳನ್ನು ಪ್ರಾಯೋಗಿಕವಾಗಿ ಕಲಿಸುತ್ತಿಲ್ಲ. ಹೀಗಾಗಿ ವಿದ್ಯಾರ್ಥಿಗಳು ತನಗೆ ಪರಿಚಿತ ಭಾಷೆ ಸೇರಿದಂತೆ ಉಳಿದೆಲ್ಲಾ ವಿಷಯಗಳಲ್ಲಿ ಹೆಚ್ಚಿನ ಅಂಕಗಳನ್ನು ಪಡೆದಿದ್ದರೂ ಪರಿಚಿತ ಭಾಷಾವಿಷಯದಲ್ಲಿ ಕಡಿಮೆ ಅಂಕಗಳನ್ನು ಪಡೆದು ಉತ್ತೀರ್ಣವಾಗಿದ್ದಾರೆ. ಇದರಿಂದಾಗಿ ವಿದ್ಯಾರ್ಥಿಗಳಿಗೆ ಅನ್ಯಭಾಷೆಯನ್ನು ಕಲಿಸುವಾಗ ಆ ಭಾಷೆಯ ಪರಿಚಯವಿಲ್ಲದಿದ್ದರೆ ಭಾಷೆಯ ನಾಲ್ಕು ಕೌಶಲಗಳನ್ನು ಕಲಿಸಬೇಕಾಗುತ್ತದೆ. ಇಲ್ಲದಿದ್ದರೆ ವಿದ್ಯಾರ್ಥಿಗಳು ಪರಿಚಿತವಲ್ಲದ ಭಾಷಾವಿಷಯದಲ್ಲಿ ಉತ್ತೀರ್ಣವಾಗಲು ಸಾಧ್ಯವಾಗದೆ ಶಿಕ್ಷಣದಿಂದಲೇ ವಂಚಿತರಾಗುತ್ತಾರೆ. ಈ ಪ್ರಕ್ರಿಯೆ ರಾಜ್ಯದ ಪದವಿಪೂರ್ವ ಮತ್ತು ಪದವಿ ಹಂತದ ಶಿಕ್ಷಣದಲ್ಲಿ ಹೆಚ್ಚಾಗಿದೆ. ಏಕೆಂದರೆ ಈ ಎರಡೂ ಹಂತದ ಶಿಕ್ಷಣದಲ್ಲಿ ಭಾಷಾವಿಷಯ ಕಡ್ಡಾಯ ಪರೀಕ್ಷಾ ವಿಷಯವಾಗಿದೆ. ಆದರೆ ಅದಕ್ಕೆ ಪೂರಕವಾಗಿ ವಿದ್ಯಾರ್ಥಿಗಳಿಗೆ ಭಾಷೆಗಳನ್ನು ಕಲಿಸುವ ವ್ಯವಸ್ಥೆ ರಾಜ್ಯದಲ್ಲಿ ಇಲ್ಲ.

ಇದನ್ನು ಅರ್ಥಮಾಡಿಕೊಂಡು ಭಾಷೆಗಳ ಕಲಿಕೆಗೆ ಪೂರಕ ವ್ಯವಸ್ಥೆ ಕಲ್ಪಿಸುವಂತೆ ಸರ್ಕಾರಗಳ ಮೇಲೆ ಒತ್ತಡ ಹೇರಬೇಕು. ಇಲ್ಲವೆ ಪೂರಕ ವ್ಯವಸ್ಥೆ ಕಲ್ಪಿಸುವವರೆಗೂ ಭಾಷಾಪರೀಕ್ಷೆಯನ್ನು ಅನ್ಯಭಾಷೆಯ ವಿದ್ಯಾರ್ಥಿಗಳಿಗೆ ಐಚ್ಛಿಕಗೊಳಿಸಬೇಕು. ಆದರೆ 'ಯಾವುದೇ ಭಾಷೆ ಹಾಗೂ ವಿಷಯಗಳನ್ನು ಹೀಗೆ ಐಚ್ಛಿಕಗೊಳಿಸಿ ಕಲಿಕೆ ಮತ್ತು ಪರೀಕ್ಷೆಯಿಂದ ವಿನಾಯಿತಿ ನೀಡುವುದು ಶಿಕ್ಷಣದ ಮೂಲ ಆಶಯಕ್ಕೇ ಎರವಾಗುವ ಸಂಗತಿಯಾಗಿದೆ. ಕಲಿಕೆಯನ್ನು ಕಡ್ಡಾಯಮಾಡಿ ಪರೀಕ್ಷೆಯನ್ನು ಐಚ್ಛಿಕಗೊಳಿಸುವುದಾಗಲಿ, ಕಲಿಕೆ ಮತ್ತು ಪರೀಕ್ಷೆಗಳೆರಡನ್ನೂ ಐಚ್ಛಿಕಗೊಳಿಸುವುದಾಗಲಿ, ಕಲಿಕೆ ಸ್ವಪ್ರೇರಣೆ ಎನ್ನುವುದಾಗಲಿ, ವಿದ್ಯಾರ್ಥಿಗಳ ಹಾಗೂ ಅಧ್ಯಾಪಕರ ಆಸಕ್ತಿಯನ್ನು ನಾಶಮಾಡುವ ಕ್ರಮಬದ್ಧ ಪ್ರಯತ್ನವಾಗುತ್ತದೆ. ಇನ್ನೊಂದು ಅಂಶವನ್ನು ಇಲ್ಲಿ ಗಮನಿಸಬೇಕು. ಹೆಚ್ಚು ಭಾಷೆಗಳನ್ನು ಕಲಿಯುವ ಆಸಕ್ತಿ ಮತ್ತು ಶಕ್ತಿ ಚಿಕ್ಕ ವಯಸ್ಸಿನಲ್ಲಿ ಅಗಾಧವಾಗಿರುತ್ತದೆ. ವೈಜ್ಞಾನಿಕ ವಿಶ್ಲೇಷಣೆಗಳಿಂದ ಇದುದೃಢಪಟ್ಟಿದೆ. ಮಕ್ಕಳ ಹನ್ನೆರಡನೇ ವಯಸ್ಸಿನವರೆಗೆ ಹೆಚ್ಚು ಭಾಷೆಗಳನ್ನು ಶಕ್ತಿಯಿರುತ್ತದೆಯೆಂದು ಇಂಥ ವಿಶ್ಲೇಷಣೆಗಳು ಖಾತರಪಡಿಸಿವೆ. ವಸ್ತುಸ್ಥಿತಿ ಹೀಗಿರುವಾಗ ಕಲಿಕೆ ಮತ್ತು ಪರೀಕ್ಷೆಗಳನ್ನು ಐಚ್ಛಿಕಗೊಳಿಸುವುದು ಸರಿಯೆನಿಸುವುದಿಲ್ಲ'[೨೨] ಎಂದು ಅಭಿಪ್ರಾಯಪಟ್ಟಿದ್ದಾರೆ ಬರಗೂರು ರಾಮಚಂದ್ರಪ್ಪನವರು.

ಆದರೆ ಭಾಷಾಕಲಿಕೆಯನ್ನು ಐಚ್ಛಿಕಗೊಳಿಸಿದರೆ ವಿದ್ಯಾರ್ಥಿಗಳು ಭಾಷೆಗಳನ್ನು ಕಲಿಯುವುದಿಲ್ಲ ಎಂಬ ಕಾರಣಕ್ಕಾಗಿ ಕಡ್ಡಾಯ ಮಾಡುವುದು ಸರಿಯೇ? ಭಾಷಾಕಲಿಕೆಯನ್ನು ಕಡ್ಡಾಯ ಮಾಡಿರುವುದಕ್ಕೆ ಅನುಗುಣವಾಗಿ ಭಾಷೆಗಳನ್ನು ಕಲಿಸಲು ಪೂರಕವಾತಾವಣರ ನಿರ್ಮಾಣ ಮಾಡಲಾಗಿದೆಯೇ? ಭಾಷಾಕಲಿಕೆಗೆ ಪೂರಕ ವಾತಾವರಣ ನಿರ್ಮಾಣ ಮಾಡದೆ ಭಾಷಾಕಲಿಕೆಯನ್ನು ಕಡ್ಡಾಯ ಮಾಡಿ ಪರೀಕ್ಷಾ ವಿಷಯವನ್ನಾಗಿಸಿದರೆ ಅದು ವಿದ್ಯಾರ್ಥಿಗಳ ಭವಿಷ್ಯದ ಶಿಕ್ಷಣದ ಮೇಲೆ ಬೀರಬಹುದಾದ ವ್ಯತಿರಿಕ್ತ ಪರಿಣಾಮಗಳೇನು? ಎಂಬಂತಹ ಪ್ರಶ್ನೆಗಳಿಗೆ ತುಂಬಾ ಗಂಭೀರವಾಗಿ ಆಲೋಚನೆ ಮಾಡಿ ಉತ್ತರವನ್ನು ಕಂಡುಕೊಳ್ಳಬೇಕಿದೆ. ಹೀಗೆ ಕಂಡುಕೊಳ್ಳದೆ ಜಾಗತಿಕ ಪ್ರಪಂಚಕ್ಕೆ ಇಂಗ್ಲಿಶ್ ಭಾಷಾಕಲಿಕೆ ಅನಿವಾರ್ಯ, ಭಾಷಾಕಲಿಕೆಯನ್ನು ಕಡ್ಡಾಯ ಮಾಡದಿದ್ದರೆ ವಿದ್ಯಾರ್ಥಿಗಳು

ಕಲಿಯುವುದಿಲ್ಲ. ನಿರ್ಲಕ್ಷ್ಯ ಮಾಡುತ್ತಾರೆ. ಇದರಿಂದ ಶಿಕ್ಷಣದ ನಿಜವಾದ ಆಶಯ ಈಡೇರುವುದಿಲ್ಲ ಎಂಬ ಕಾರಣಕ್ಕಾಗಿ ಭಾಷಾಕಲಿಕೆಯನ್ನು ಕಡ್ಡಾಯ ಮಾಡಿದರೆ ವಿದ್ಯಾರ್ಥಿಗಳನ್ನು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿದಂತೆ ಆಗುವುದಿಲ್ಲವೇ? ಇವರೆಲ್ಲರೂ ಅಮೇರಿಕಾ, ಇಂಗ್ಲೆಂಡ್, ಆಸ್ಟ್ರೇಲಿಯಾದಂತಹ ದೇಶಗಳಿಗೆ ಹೋಗಿ ಬದುಕಬೇಕಿತ್ತೇ? ಉಳಿದೆಲ್ಲಾ ವಿಷಯಗಳಲ್ಲಿ ಉತ್ತೀರ್ಣವಾಗಿಯೂ ಇಂಗ್ಲಿಷ್ ಭಾಷೆಯಲ್ಲಿ ಉತ್ತೀರ್ಣ ಆಗಿಲ್ಲ ಎಂಬ ಕಾರಣಕ್ಕೆ ವಿದ್ಯಾರ್ಥಿಗಳನ್ನು ಶಿಕ್ಷಣದಿಂದ ಹೊರಹಾಕುವುದು ಎಷ್ಟು ಸರಿ? ಇದು ನ್ಯಾಯಯುತವೇ? ಇಂಗ್ಲಿಷ್ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾಗಿರುವ ಎಲ್ಲಾ ವಿದ್ಯಾರ್ಥಿಗಳಿಗೂ ಇಂಗ್ಲಿಷ್ ಭಾಷೆ ಬರುತ್ತದೆಯೇ? ಎಂಬ ಪ್ರಶ್ನೆಗಳನ್ನು ಕೇಳಿಕೊಂಡಾಗಷ್ಟೇ ಇಂಗ್ಲಿಷ್ ಭಾಷಾಕಲಿಕೆಯಿಂದ ಆಗಿರುವ ಲಾಭ ಮತ್ತು ನಷ್ಟಗಳಿಗೆ ನಾವು ಸಮರ್ಪಕವಾದ ಉತ್ತರ ಕಂಡುಕೊಳ್ಳಲು ಸಾಧ್ಯ.

ಇಂತಹ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳದೆ ನಾವು ಎಷ್ಟೇ ವರ್ಷ ಒಂದು ಭಾಷೆಯಾಗಿ ಇಂಗ್ಲಿಷ್‌ನ್ನು ಕಲಿಸುತ್ತಾ ಹೋದರೂ ಅದರಿಂದ ಯಾವ ಲಾಭವೂ ಆಗುವುದಿಲ್ಲ. ಬದಲಾಗಿ ಸಮಸ್ಯೆಗಳನ್ನು ಎದುರಿಸುತ್ತಲೇ ಇರಬೇಕಾಗುತ್ತದೆ. ಕರ್ನಾಟಕದಲ್ಲಿ ಭಾಷಾಕಲಿಕೆಗೆ ಸಂಬಂಧಿಸಿದಂತೆ ಭಾಷಾನೀತಿಗಳನ್ನು ಜಾರಿಗೆ ತಂದ ನಂತರ ಆಗಿರುವ ಸಮಸ್ಯೆ ಇದೆ ಆಗಿದೆ. ಇಲ್ಲಿ ಸರ್ಕಾರ ಭಾಷಾಕಲಿಕೆಗೆ ಸಂಬಂಧಿಸಿದಂತೆ ಭಾಷಾನೀತಿಯನ್ನು ಜಾರಿಗೆ ತಂದ ನಂತರ ಇದು ರಾಜ್ಯದ ಎಲ್ಲಾ ಶಾಲೆ ಮತ್ತು ಕಾಲೇಜುಗಳಿಗೆ ಸಮನಾಗಿ ಅನ್ವಯವಾಗಿದೆ. ಆದರೆ ರಾಜ್ಯದ ಎಲ್ಲಾ ಶಾಲೆ ಮತ್ತು ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಭಾಷೆಗಳನ್ನು ಕಲಿಸುವ ಪೂರಕ ಭಾಷಾಪರಿಸ್ಥಿತಿ ಇಲ್ಲ. ಕೆಲವು ಶಾಲೆ ಮತ್ತು ಕಾಲೇಜುಗಳಲ್ಲಿ ಸರ್ಕಾರದ ಭಾಷಾನೀತಿಯ ಪ್ರಕಾರ ವಿದ್ಯಾರ್ಥಿಗಳಿಗೆ ಭಾಷೆಗಳನ್ನು ಕಲಿಸಲು ಶಿಕ್ಷಕರು ಇದ್ದರೆ, ಮತ್ತೆ ಕೆಲವು ಶಾಲೆ ಮತ್ತು ಕಾಲೇಜುಗಳಲ್ಲಿ ಭಾಷಾಶಿಕ್ಷಕರು ಇಲ್ಲ. ಇನ್ನು ಇಂಗ್ಲಿಷ್ ಭಾಷಾಶಿಕ್ಷಕರು ಇರುವ ಕಡೆಗಳಲ್ಲು ವಿದ್ಯಾರ್ಥಿಗಳಿಗೆ ಸಮರ್ಪಕವಾಗಿ ಇಂಗ್ಲಿಷ್ ಕಲಿಸುವ ಭಾಷಾಸಾಮರ್ಥ್ಯ ಶಿಕ್ಷಕರಿಗೆ ಇಲ್ಲ. ಇವರು ನಾಮಾಕಾವಸ್ಥೆಗೆ ಎಂಬಂತೆ ತರಗತಿಗಳಿಗೆ ಹೋಗಿ ಇಂಗ್ಲಿಷ್‌ನಲ್ಲಿ ಇರುವುದನ್ನು ಕನ್ನಡದಲ್ಲಿ ಅರ್ಥಹೇಳಿ ಪರೀಕ್ಷೆಗೆ ಬರುವ ಒಂದಷ್ಟು ಪ್ರಶ್ನೆಗಳನ್ನು ಹೇಳಿ ಊರಾ ಹೊಡೆಸುತ್ತಿದ್ದಾರೆ. ಇದರಿಂದ ವಿದ್ಯಾರ್ಥಿಗಳಲ್ಲಿ ಸ್ವತಂತ್ರ ಓದು, ಬರಹ, ಮಾತನಾಡುವ ಸಾಮರ್ಥ್ಯ ಸಾಧ್ಯವಾಗಿಲ್ಲ. ಇದರಿಂದಾಗಿ ವಿದ್ಯಾರ್ಥಿಗಳು ರಾಜ್ಯಪಠ್ಯಕ್ರಮದಲ್ಲಿ ಒಂದು ಭಾಷೆಯಾಗಿ ಇಂಗ್ಲಿಷ್ ಕಲಿಯುತ್ತಿರುವುದರಿಂದ ಇಂಗ್ಲಿಷ್ ಭಾಷಾಬೇಡಿಕೆಯನ್ನು ಈಡೇರಿಸಿಕೊಳ್ಳಲು ಸಾಧ್ಯವಾಗಿಲ್ಲ.

ಇದಕ್ಕೆ ರಾಜ್ಯದ ಶಾಲಾ-ಕಾಲೇಜುಗಳಲ್ಲಿ ಇಂಗ್ಲಿಷ್ ಭಾಷಾಶಿಕ್ಷಕರಾಗಿ ಕೆಲಸ ಮಾಡುತ್ತಿರುವ ಶಿಕ್ಷಕರು ಮತ್ತು ಉಪನ್ಯಾಸಕರುಗಳ ಪಾತ್ರವೂ ಬಹುದೊಡ್ಡದಿದೆ, ಏಕೆಂದರೆ ರಾಜ್ಯದಲ್ಲಿ ಇಂಗ್ಲಿಷ್ ಭಾಷಾಶಿಕ್ಷಕರಾಗಿ ಕೆಲಸ ಮಾಡುತ್ತಿರುವ ಹೆಚ್ಚಿನವರು ಕಲಿತು ಬಂದಿರುವುದು ಇದೇ ಕ್ರಮದಲ್ಲಿಯೇ. ಓೀಗಾಗಿ ರಾಜ್ಯದಲ್ಲಿ ಇಂಗ್ಲಿಷ್ ಭಾಷಾಶಿಕ್ಷಕರು, ಉಪನ್ಯಾಸಕರು ಮತ್ತು ಪ್ರಾಧ್ಯಾಪಕರಿಗೆ ಕೆಲಸ ಮಾಡುತ್ತಿರುವವರಿಗೆ ಇಂಗ್ಲಿಷ್ ಭಾಷಾಬಳಕೆಯ ನಿಜವಾದ ಸಾಮರ್ಥ್ಯ ಇಲ್ಲದಾಗಿದೆ. ಇವರು ಉದ್ಯೋಗದ ಆಸೆಗೆ ಪರೀಕ್ಷಾ ದೃಷ್ಟಿಕೋನದಿಂದ ಅರೆಬರೆ ಇಂಗ್ಲಿಷ್‌ನಲ್ಲಿ ಉತ್ತೀರ್ಣಗೊಂಡು

ಶಿಕ್ಷಕರಾಗಿ ಕೆಲಸಕ್ಕೆ ಸೇರಿದ್ದಾರೆ. ಇದರಲ್ಲಿ ಮತ್ತೆ ಕೆಲವರು ಈಗಾಗಲೇ ಸರ್ಕಾರಿ ಸೇವೆಗೆ ಸೇರಿ ಉನ್ನತ ವ್ಯಾಸಂಗ ಪಡೆದರೆ ಮುಂಬಡ್ತಿ ಸಿಗುತ್ತದೆ ಎಂಬ ಕಾರಣಕ್ಕಾಗಿ ದೂರಶಿಕ್ಷಣದ ಮೂಲಕ ಉನ್ನತ ವ್ಯಾಸಂಗ ಪಡೆದು ಮುಂಬಡ್ತಿಯ ಮೂಲಕ ಉಪನ್ಯಾಸಕರಾಗಿ ಕೆಲಸ ಮಾಡುತ್ತಿರುವವರು ಆಗಿದ್ದಾರೆ. ಇವರಲ್ಲಿ ಕೆಲವರಿಗೆ ಸಹಾಯಕ ಕ್ರಿಯಾಪದಗಳು, ನಾಮಪದಗಳು, ವಿಶೇಷಣಗಳು, ವಾಕ್ಯಗಳು, ಅವುಗಳ ವಿಂಗಡಣೆ, ಕಾಲಗಳು ಇತ್ಯಾದಿಗಳನ್ನು ಬಳಸುವ ಕ್ರಮಗಳ ನಿಜವಾದ ಅರಿವೇ ಇಲ್ಲ. ಅಲ್ಲದೆ ನೂರು ಜನರಿರುವ ಒಂದು ವೇದಿಕೆಯಲ್ಲಿ ನಿಂತು ನಿರ್ಭಯವಾಗಿ ಮಾತನಾಡುವ ಧೈರ್ಯ, ಸ್ವತಂತ್ರವಾಗಿ ಪತ್ರ ಬರೆದು ವ್ಯವಹರಿಸುವ ಭಾಷಾಸಾಮರ್ಥ್ಯ ಇಲ್ಲ. ಇಂತಹವರು ರಾಜ್ಯದ ಪ್ರಾಥಮಿಕ, ಪ್ರೌಢಶಾಲೆಗಳಲ್ಲಿ ಮಾತ್ರವಲ್ಲ ಕಾಲೇಜುಗಳಲ್ಲೂ ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದಾರೆ. ಹೀಗಾಗಿ ರಾಜ್ಯದಲ್ಲಿ ಶಿಕ್ಷಣ ಕಲಿಯುತ್ತಿರುವ ವಿದ್ಯಾರ್ಥಿಗಳು ಇಂಗ್ಲಿಶ್ ಭಾಷೆಯ ಮೇಲೆ ಹಿಡಿತ ಸ್ಥಾಪಿಸಲು ಸಾಧ್ಯವಾಗದೆ ಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಮತ್ತೊಂದು ಕಡೆಗೆ ಮಾತೃಭಾಷಾಮಾಧ್ಯಮದಲ್ಲಿ ಕಲಿಯುತ್ತಿರುವ ಮಕ್ಕಳಿಗೆ ಇಂಗ್ಲಿಶ್ ಭಾಷೆಯ ಭಯ ಕಾಡುತ್ತಿದೆ.

ಹೀಗಾಗಿ ಶಾಲೆ ಮತ್ತು ಕಾಲೇಜುಗಳಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಇಂಗ್ಲಿಶ್‌ನ್ನು ಸಮರ್ಥವಾಗಿ ಭಾಷಾಪ್ರೌಢಿಮೆ ಬೆಳೆಸುತ್ತಿದ್ದಾರೆಯೇ? ಇದು ಶಿಕ್ಷಕರಿಂದ ಸಾಧ್ಯವಾಗುತ್ತಿದೆಯೇ? ಎಂಬುವು ಬಹಳ ಮುಖ್ಯವಾದ ಪ್ರಶ್ನೆಗಳು. ಏಕೆಂದರೆ ಒಮ್ಮೆ ಮೇಲೆ ತಿಳಿಸಿದಂತಹ ಭಾಷಾಶಿಕ್ಷಕರು ಸರ್ಕಾರಿ ನೌಕರಿಗೆ ಸೇರಿ ಕನಿಷ್ಟ ಮುವತ್ತು ವರ್ಷ ಕಾಲ ಸೇವೆ ಸಲ್ಲಿಸಿದ್ದಾರೆ. ಇಷ್ಟು ವರ್ಷಗಳ ಅವಧಿಯಲ್ಲಿ ಇವರ ವಿದ್ಯಾರ್ಥಿಗಳಾಗಿ ಕಲಿತಿರುವ ಮಕ್ಕಳ ಭವಿಷ್ಯ ಅತಂತ್ರವಾಗಿದೆ. ಇಂಗ್ಲಿಶ್ ಭಾಷೆಯಲ್ಲಿ ಸಮರ್ಥರಿರುವವರು ಶಿಕ್ಷಕ ವೃತ್ತಿಯಲ್ಲಿ ಕಡಿಮೆ ವೇತನ ಎಂಬ ಕಾರಣಕ್ಕಾಗಿ ಶಿಕ್ಷಕ ವೃತ್ತಿಯನ್ನು ತ್ಯಜಿಸಿ ಹೆಚ್ಚಿನ ವೇತನ ಮತ್ತು ಅಧಿಕಾರಯುಕ್ತ ಹುದ್ದೆಗಳಿಗಾಗಿ ಸರ್ಕಾರ ಆಡಳಿತಾತ್ಮಕ ಹುದ್ದೆ ಮತ್ತೆ ಜಾಗತೀಕರಣದ ಪರಿಣಾಮವಾಗಿ ಸ್ಥಾಪನೆಯಾಗಿರುವ ಬಹುರಾಷ್ಟ್ರೀಯ ಕಂಪನಿ, ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದಾರೆ. ಇದರಿಂದ ರಾಜ್ಯದಲ್ಲಿ ಸಮರ್ಥ ಇಂಗ್ಲಿಶ್ ಭಾಷಾಶಿಕ್ಷಕರ ಕೊರತೆಯಿದ್ದು, ಅಸಮರ್ಥರು ಇಂಗ್ಲಿಶ್ ಭಾಷಾಶಿಕ್ಷಕರಾಗಿ ಕೆಲಸ ಮಾಡುತ್ತಿದ್ದಾರೆ. ಇದರ ಪರಿಣಾಮವಾಗಿ ರಾಜ್ಯದ ಪದವಿಪೂರ್ವ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಕಲಿಯುತ್ತಿರುವ ಕೆಲವು ವಿದ್ಯಾರ್ಥಿಗಳಿಗೆ ಇಂಗ್ಲಿಶ್‌ನ ವರ್ಣಮಾಲೆಯೇ ಗೊತ್ತಿಲ್ಲ. ಮತ್ತಷ್ಟು ವಿದ್ಯಾರ್ಥಿಗಳಿಗೆ ಇಂಗ್ಲಿಶ್ ಭಾಷೆಯಲ್ಲಿರುವ ಚಿಕ್ಕ ಮತ್ತು ದೊಡ್ಡ ಅಕ್ಷರಗಳನ್ನು ಸ್ಪಷ್ಟವಾಗಿ ಓದುವ, ಬರೆಯುವ ಮತ್ತು ಅವುಗಳ ನಡುವೆ ಇರುವ ವ್ಯತ್ಯಾಸಗಳು ಗೊತ್ತಿಲ್ಲ. ಇಂತಹ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಇಂಗ್ಲಿಶ್ ಭಾಷೆಯನ್ನು ಕಡ್ಡಾಯವಾಗಿ ಕಲಿಯುವಂತೆ ಮಾಡುವುದು ಸರಿಯೇ? ಇಂಗ್ಲಿಶ್ ಭಾಷೆಯಲ್ಲಿ ಉತ್ತೀರ್ಣವಾಗಲಿಲ್ಲ ಎಂಬ ಕಾರಣಕ್ಕೆ ಶಿಕ್ಷಣದಿಂದ ಹೊರಹಾಕುವುದು ನ್ಯಾಯಯುತವೇ? ರಾಜ್ಯದ ವಿದ್ಯಾರ್ಥಿಗಳಿಗೆ ಸರಿಯಾದ ಕ್ರಮದಲ್ಲಿ ಇಂಗ್ಲಿಶ್‌ನ್ನು ಕಲಿಸಲಾಗುತ್ತಿದೆಯೇ? ಕಲಿಸುವುದಕ್ಕೆ ಸಾಧ್ಯವಾಗುತ್ತಿಲ್ಲವೆಂದ ಮೇಲೆ ಇಂಗ್ಲಿಶ್ ಭಾಷಾ ಪರೀಕ್ಷೆಯನ್ನು ಕಡ್ಡಾಯಗೊಳಿಸುವ ಔಚಿತ್ಯವಿದೆಯೇ? ಎಂಬುವು ತುಂಬಾ ಗಂಭೀರವಾದ ಪ್ರಶ್ನೆಗಳು.

ಈ ಪ್ರಶ್ನೆಗಳು ಮತ್ತು ಇಂಗ್ಲಿಶ್ ಭಾಷೆಯನ್ನು ಕಲಿಸುವಾಗ ಅನುಸರಿಸುತ್ತಿರುವ ಅವೈಜ್ಞಾನಿಕ ಕ್ರಮಗಳ ಬಗೆಗೆ ಆಲೋಚಿಸದೆ ಆದರೂ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಕಡ್ಡಾಯವಾಗಿ ಕಲಿಸಬೇಕು ಎಂಬ ನಿಯಮವನ್ನು ಅಳವಡಿಸಲಾಗಿದೆ. ಹಾಗೆಯೇ ಪ್ರೌಢಶಿಕ್ಷಣದಲ್ಲಿ ಇಂಗ್ಲಿಶ್ ಭಾಷಾಕಲಿಕೆ ಅಧಿಕೃತವಾಗಿ ಕಡ್ಡಾಯವಲ್ಲದಿದ್ದರೂ ಅನಿವಾರ್ಯ ಎಂಬ ಕಾರಣಕ್ಕಾಗಿ ಮತ್ತು ತ್ರಿಭಾಷಾಸೂತ್ರದ ಅನ್ವಯ ಮೂರು ಭಾಷೆಗಳನ್ನು ಕಲಿಯಬೇಕಿರುವುದರಿಂದ ರಾಜ್ಯದಲ್ಲಿ ಬೇರೆ ಭಾಷೆಗಳ ಕಲಿಕೆಗೆ ಪೂರಕ ವ್ಯವಸ್ಥೆ ಇಲ್ಲದಿರುವುದರಿಂದ ರಾಜ್ಯದಲ್ಲಿ ಶಿಕ್ಷಣ ಕಲಿತಿರುವ ಎಲ್ಲಾ ಮಕ್ಕಳು ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಆಯ್ಕೆ ಮಾಡಿಕೊಂಡು ಕಲಿತಿದ್ದಾರೆ. ಪದವಿಪೂರ್ವ ಮತ್ತು ಪದವಿ ಹಂತದ ಶಿಕ್ಷಣದಲ್ಲಿ ಇಂಗ್ಲಿಶ್ ಭಾಷಾಕಲಿಕೆ ಅಧಿಕೃತವಾಗಿ ಕಡ್ಡಾಯ ಭಾಷೆ ಮತ್ತು ಪರೀಕ್ಷಾ ವಿಷಯವಲ್ಲ. ಆದರೆ ಅನಧಿಕೃತವಾಗಿ ಕಡ್ಡಾಯ ಭಾಷೆ ಮತ್ತು ಪರೀಕ್ಷಾ ವಿಷಯವಾಗಿದೆ. ಏಕೆಂದರೆ ಪದವಿಪೂರ್ವ ಶಿಕ್ಷಣದಲ್ಲಿ ಇಂಗ್ಲಿಶ್ ಕಲಿಯುವುದು ಕಡ್ಡಾಯವಲ್ಲದಿದ್ದರೂ ಎರಡು ಭಾಷೆಗಳನ್ನು ಕಲಿಯುವುದು ಕಡ್ಡಾಯವಾಗಿದೆ. ಇಂಗ್ಲಿಶ್ ಭಾಷೆಯ ಅನಿವಾರ್ಯತೆ ಮತ್ತು ಬೇರೆ ಭಾಷೆಗಳ ಕಲಿಕೆಗೆ ಕಾಲೇಜುಗಳಲ್ಲಿ ಪೂರಕ ವಾತಾವರಣ ಇಲ್ಲದೆ ಇರುವ ಕಾರಣದಿಂದಾಗಿ ರಾಜ್ಯದಲ್ಲಿರುವ ಹೆಚ್ಚಿನ ವಿದ್ಯಾರ್ಥಿಗಳು ಇಂಗ್ಲಿಶ್‌ನ್ನು ಪ್ರಥಮ ಭಾಷೆಯಾಗಿ ಇಲ್ಲವೇ ದ್ವಿತೀಯ ಭಾಷೆಯಾಗಿ ಆಯ್ಕೆಮಾಡಿಕೊಂಡಿದ್ದಾರೆ. ಇದರಿಂದ ಇಂಗ್ಲಿಶ್ ಕಡ್ಡಾಯ ಪರೀಕ್ಷಾ ವಿಷಯವಾಗಿದೆ. ಆದರೆ ರಾಜ್ಯದ ಶಿಕ್ಷಣದಲ್ಲಿ ಮೇಲಿನ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳದೆ ಇಂಗ್ಲಿಶ್ ಕಲಿಸುತ್ತಿರುವುದರಿಂದ ಮತ್ತು ಈಗಾಗಲೇ ಇಂಗ್ಲಿಶ್ ಭಾಷೆಯನ್ನು ಕಲಿಸುವಲ್ಲಿ ಸಮಸ್ಯೆಗಳು ಇರುವುದರಿಂದ ವಿದ್ಯಾರ್ಥಿಗಳು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇಂತಹ ಸಂದರ್ಭದಲ್ಲಿ ಭಾಷೆಯ ಕಾರಣದಿಂದಾಗಿ ವಿದ್ಯಾರ್ಥಿಗಳ ಭವಿಷ್ಯ ನಾಶವಾಗುವುದನ್ನು ಗಮನಿಸಿರುವ ವಿಜ್ಞಾನ ಮತ್ತು ವಾಣಿಜ್ಯ ವಿಭಾಗದ ಶಿಕ್ಷಕರು ವಿದ್ಯಾರ್ಥಿಗಳಿಗೆ ಇಂಗ್ಲಿಶ್ ಹೇಳಿಕೊಡುವ ಮೂಲಕ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವಂತೆ ಮಾಡಿದ್ದಾರೆ. ಕಾರಣ ವಿದ್ಯಾರ್ಥಿಗಳನ್ನು ಫೇಲ್ ಎಂಬ ಹಣೆಪಟ್ಟಿಯಿಂದ ಹೊರತಂದು ಶಿಕ್ಷಣದಿಂದ ವಂಚಿತರಾಗದಂತೆ ಮಾಡುವುದೇ ಹೊರತು ಇಂಗ್ಲಿಶ್ ಕಲಿಸಿ ಅಮೇರಿಕಾಕ್ಕೆ ಕಳಿಸುವುದು ಅಥವಾ ಕನ್ನಡಿಗರನ್ನು ಇಂಗ್ಲೀಶಿಗರನ್ನಾಗಿ ಮಾಡುವುದಲ್ಲ.

ಏಕೆಂದರೆ ವಿದ್ಯಾರ್ಥಿಗಳು ಉಳಿದೆಲ್ಲಾ ವಿಷಯಗಳಲ್ಲಿ ಉತ್ತೀರ್ಣವಾಗಿ ಇಂಗ್ಲಿಶ್ ಭಾಷೆಯೊಂದರಲ್ಲಿ ಅನುತ್ತೀರ್ಣಗೊಂಡರೆ ಶಿಕ್ಷಣದಿಂದ ವಂಚಿತರಾಗುತ್ತಾರೆ. ಇದು ಕಾಲೇಜಿನ ಶೇಕಡಾವಾರು ಫಲಿತಾಂಶದ ಮೇಲೂ ವ್ಯತಿರಿಕ್ತ ಪರಿಣಾಮ ಬೀರುತ್ತದೆ. ಹೀಗಾಗಿ ರಾಜ್ಯದ ಶಿಕ್ಷಣದಲ್ಲಿ ಇಂಗ್ಲಿಶ್ ಭಾಷಾಕಲಿಕೆಯನ್ನು, ಕಡ್ಡಾಯ ಪರೀಕ್ಷಾ ವಿಷಯವನ್ನು ಪುನರ್ ಪರಿಶೀಲಿಸಬೇಕಾದ ಅಗತ್ಯ ಇದೆ. ಅಂದರೆ ಇದರರ್ಥ ಇಂಗ್ಲಿಶ್ ಭಾಷೆ ಕಲಿಸುವುದನ್ನು ನಿಷೇಧಿಸಬೇಕು ಎಂದು ಅರ್ಥವಲ್ಲ. ಬದಲಾಗಿ ಇಂಗ್ಲಿಶ್‌ನ್ನು ಕಲಿಸುವಲ್ಲಿ ಎದುರಿಸುತ್ತಿರುವ ಮತ್ತು ಕಲಿಸುತ್ತಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ಪರಿಹರಿಸಬೇಕು, ಬೇಡಿಕೆಗೆ ಪೂರಕವಾದ ಕ್ರಮದಲ್ಲಿ ಕಲಿಸಬೇಕು ಎಂದು ಅರ್ಥ. ಏಕೆಂದರೆ ಯಾವ ಭಾಷೆ ಕಲಿಯದಿದ್ದರೆ ತಮ್ಮ ಮಕ್ಕಳ

ಭವಿಷ್ಯ ನಾಶವಾಗುತ್ತದೆ ಎಂದು ಪೋಷಕರು ನಂಬಿದ್ದರೋ ಅದೇ ಭಾಷೆ ಸಾಕಷ್ಟು ವಿದ್ಯಾರ್ಥಿಗಳ ಬದುಕನ್ನು ನಾಶಗೊಳಿಸಿದೆ. ಹೀಗಾಗಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿ ತುಂಬಾ ಪ್ರತಿಭಾವಂತನಾಗಿದ್ದು ಹೆಚ್ಚಿನ ವಿಷಯಗಳಲ್ಲಿ ಉತ್ತೀರ್ಣಗೊಂಡು ಒಂದು ಅಥವಾ ಎರಡು ವಿಷಯಗಳಲ್ಲಿ ಉತ್ತೀರ್ಣಗೊಳ್ಳುವ ಹಂತಕ್ಕೆ ಬಂದು ಅನುತ್ತೀರ್ಣಗೊಂಡರೆ ಅಂತಹ ವಿದ್ಯಾರ್ಥಿಗಳಿಗೆ ಅನುತ್ತೀರ್ಣಗೊಂಡ ವಿಷಯಕ್ಕೆ ಉತ್ತೀರ್ಣಗೊಳ್ಳಲು ಎಷ್ಟು ಅಂಕಗಳ ಅಗತ್ಯವಿರುತ್ತದೆಯೋ ಅಷ್ಟು ಅಂಕಗಳನ್ನು ಉತ್ತೀರ್ಣಗೊಂಡ ವಿಷಯಗಳ ಜೊತೆ ಹೊಂದಾಣಿಕೆ ಮಾಡಿ ವಿದ್ಯಾರ್ಥಿಗಳನ್ನು ಫೇಲು ಎಂಬ ಹಣೆಪಟ್ಟಿಯಿಂದ ಹೊರತರುವ ಯೋಜನೆಯ ಬಗೆಗೆ ತಿಳಿಯಾದ ಚರ್ಚೆಗಳಾಗಿವೆ. ಆದರೆ ಈ ಯೋಜನೆ ಇನ್ನೂ ಕಾರ್ಯರೂಪಕ್ಕೆ ಬಂದಿಲ್ಲ. ಇಂತಹ ವಿಧಾನ ಭಾಷಾಪರೀಕ್ಷೆಯ ವಿಷಯಗಳಿಗೆ ಬಂದರೆ ರಾಜ್ಯದಲ್ಲಿ ಭಾಷೆಯ ಕಾರಣಕ್ಕೆ ಶೈಕ್ಷಣಿಕ ಬದುಕನ್ನು ಕಳೆದುಕೊಳ್ಳುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳು ತಮ್ಮ ಮುಂದಿನ ಶಿಕ್ಷಣ ಮುಂದುವರೆಸಲು ಸಾಧ್ಯವಾಗುತ್ತದೆ.

ಹೀಗಾಗಿಯೇ "ಭಾಷೆಯ ಕಲಿಕೆಗೆ ಸಂಬಂಧಿಸಿದಂತೆ ನಮ್ಮ ಯೋಜಕರು, ತಜ್ಞರು ನಿರಂತರವಾಗಿ ಕುರುಡು ನಂಬಿಕೆಗಳನ್ನು ಆಧರಿಸಿಯೇ ಚಿಂತಿಸುತ್ತಿದ್ದಾರೆ. ಏಕೆಂದರೆ ಮಕ್ಕಳು ಭಾಷೆಯನ್ನು ಏಕೆ ಮತ್ತು ಹೇಗೆ ಕಲಿಯಬೇಕು ಎಂಬುದನ್ನು ಅರಿಯಲು ಪ್ರಯತ್ನ ನಡೆಸಿರುವ ಪುರಾವೆಗಳು ನಮಗೆ ದೊರಕುವುದಿಲ್ಲ. ಪ್ರಥಮ, ದ್ವಿತೀಯ ಮತ್ತು ತೃತೀಯ ಎಂಬ ಹಣೆಪಟ್ಟಿಗಾಗಲಿ, ಅವುಗಳನ್ನು ಶಿಕ್ಷಣದ ವಿವಿಧ ಹಂತಗಳಲ್ಲಿ ಕಲಿಸಲು ಪ್ರಾರಂಭಿಸುವುದಕ್ಕೆ ಇರುವ ಕಾರಣಗಳಿಗಾಗಲಿ, ಆಯಾ ಭಾಷೆಗಳಿಗೆ ವಿವಿಧ ತರಗತಿಗಳಲ್ಲಿ ಬೋಧಿಸಲು ಅನುಸರಿಸುತ್ತಿರುವ ವಿಧಾನಗಳಿಗಾಗಲಿ ಮತ್ತು ವಿದ್ಯಾರ್ಥಿಗಳು ಭಾಷೆಯ ಕಲಿಕೆಯಲ್ಲಿ ಪಡೆದಿರುವ ಸಾಮರ್ಥ್ಯಗಳನ್ನು ತಿಳಿಯುವುದಕ್ಕಾಗಲಿ ಯಾವುದೇ ಆಧಾರಗಳು ಇರುವಂತಿಲ್ಲ."[೨೩] ಎಂದಿದ್ದಾರೆ ನಾಡಿನ ಪ್ರಸಿದ್ಧ ಭಾಷಾಚಿಂತಕರಾದ ಕೆ.ವಿ.ನಾರಾಯಣರವರು. ಇದನ್ನು ಅರ್ಥಮಾಡಿಕೊಳ್ಳದೆ ಇಂಗ್ಲಿಶ್ ಭಾಷಾಜ್ಞಾನವಿಲ್ಲದೆ ಬದುಕು ಇಲ್ಲ ಎಂಬಂತಹ ಭ್ರಮೆಗಳನ್ನು ಸೃಷ್ಟಿಸಿ ಎಲ್ಲರಿಗೂ ಇಂಗ್ಲಿಶ್ ಭಾಷೆಯನ್ನು ಕಲಿಯುವಂತೆ ಮಾಡಲಾಗಿದೆ. ಆದರೆ ಕರ್ನಾಟಕದಲ್ಲಿ ಶಿಕ್ಷಣ ಕಲಿಯುತ್ತಿರುವವರೆಲ್ಲಾ ಅಮೇರಿಕಾ, ಇಂಗ್ಲೆಂಡ್, ಆಸ್ಟ್ರೇಲಿಯಾದಂತಹ ದೇಶಗಳಿಗೆ ಹೋಗಿ ಬದುಕಬೇಕಾದವರು ಅಲ್ಲ. ಇವರೆಲ್ಲ ಕರ್ನಾಟಕದಲ್ಲಿಯೇ ಬದುಕನ್ನು ಕಟ್ಟಿಕೊಳ್ಳುವವರು. ಇವರಿಗೆ ಇಂಗ್ಲಿಶ್ ಅನಿವಾರ್ಯ ಎಂಬ ಕಾರಣಕ್ಕಾಗಿ ಕಲಿಯುವಂತೆ ಒತ್ತಡ ಹೇರಿ ಅದರಲ್ಲಿ ಉತ್ತೀರ್ಣವಾಗಲಿಲ್ಲ ಎಂದು ಶಿಕ್ಷಣದಿಂದ ವಂಚಿತಗೊಳಿಸುವುದು ಯಾವ ನ್ಯಾಯ? ಯಾವ ಭಾಷೆಯಿಂದ ಬದುಕು ಎಂದು ನಂಬಲಾಗಿದೆಯೋ ಆ ಭಾಷೆಯೇ ಕರ್ನಾಟಕದಲ್ಲಿನ ಬಹುತೇಕ ಮಕ್ಕಳ ಶೈಕ್ಷಣಿಕ ಬದುಕನ್ನು ಕಲಿಕೆಯ ದಾರಿಗಳನ್ನು ಕಸಿದುಕೊಂಡಿಲ್ಲವೇ? ಎಂಬಂತಹ ಪ್ರಶ್ನೆಗಳನ್ನು ನಾವು ಕೇಳಿಕೊಳ್ಳಬೇಕಿದೆ.

ಇಂತಹ ಪ್ರಶ್ನೆಗಳನ್ನು ಕೇಳಿಕೊಳ್ಳದೆ ಇಂಗ್ಲಿಶ್ ಭಾಷೆಯ ಭ್ರಮೆಯೊಳಗೆ ಮಕ್ಕಳ ಕಲಿಕೆಯ ಹಕ್ಕನ್ನು ಕಸಿದುಕೊಳ್ಳುವುದು ಮಹಾನ್ ದ್ರೋಹವಾಗುತ್ತದೆ. ಹಾಗೆಯೇ ಇಂಗ್ಲಿಶ್ ಭಾಷೆಯ ಕಲಿಸುವಿಕೆ, ಅದರ ಕ್ರಮಗಳು, ಅನುಸರಿಸುತ್ತಿರುವ ವಿಧಾನ ಇತ್ಯಾದಿಗಳ ಬಗೆಗೆ ಮರುಪರಿಶೀಲನೆಗೆ

ಒಳಪಡಿಸುವ ಅಗತ್ಯವಿದೆ. ಹಾಗಂತ ಇಲ್ಲಿ ಇಂಗ್ಲಿಶ್ ಭಾಷೆಯನ್ನು ಕಲಿಸಬಾರದು ಎಂದು ಅರ್ಥವಲ್ಲ. ಆದರೆ ಹೇಗೆ? ಕಲಿಸಬೇಕು? ಯಾರಿಗೆ ಕಲಿಸಬೇಕು? ಯಾವಾಗ ಕಲಿಸಬೇಕು? ಇಂಗ್ಲಿಶ್ ಭಾಷೆ ಕಲಿಯದಿದ್ದರೆ, ಇಂಗ್ಲಿಶ್ ಭಾಷಾಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡರೆ ಅವರ ಶೈಕ್ಷಣಿಕ ಬದುಕು ಮುಂದುವರೆಯುವುದಕ್ಕೆ ಅನುಸರಿಸುವ ವಿಧಾನಗಳು ಹೇಗಿರಬೇಕು ಎಂಬುದರ ಬಗೆಗೆ ಆಲೋಚಿಸಬೇಕಾದ ಅಗತ್ಯವಿದೆ ಎಂದು ಅರ್ಥ. ಏಕೆಂದರೆ ಇಂಗ್ಲಿಶ್‌ನ ಅಗತ್ಯವಿದೆ ಎಂದು ಶಿಕ್ಷಣದಲ್ಲಿ ಕಡ್ಡಾಯ ಕಲಿಕಾ ಮತ್ತು ಪರೀಕ್ಷಾ ವಿಷಯವನ್ನಾಗಿಸಿ ಅದರಲ್ಲಿ ಅನುತ್ತೀರ್ಣಗೊಂಡವರನ್ನು ಶಿಕ್ಷಣದಿಂದ ದೂರವಿಡುವುದು ಮಕ್ಕಳ ಕಲಿಕೆಯ ಹಕ್ಕನ್ನು ಕಸಿದುಕೊಂಡ ಹಾಗೆ ಆಗುತ್ತದೆ. ಹೀಗಾಗಿ ಕುವೆಂಪುರವರು ಕೂಡ ಈ ರೀತಿಯ ಒತ್ತಾಯದ ಕಲಿಸುವಿಕೆಯನ್ನು ವಿರೋಧಿಸಿದ್ದರು. ಅವರು "ಯಾವ ಭಾಷೆಗೂ ನನ್ನ ವಿರೋಧವಿಲ್ಲ. ಆದರೆ ಬಲಾತ್ಕಾರದ ಕಲಿಕೆಯನ್ನು ಮಾತ್ರ ನಾನು ವಿರೋಧಿಸುತ್ತೇನೆ. ಎಲ್ಲರೂ ಇಂಗ್ಲಿಷ್ ಅಥವಾ ಹಿಂದಿ ಕಲಿಯಬೇಕೆಂಬುದು ಸಾಮ್ರಾಜ್ಯಶಾಹಿಯ ಮನೋಭಾವವಷ್ಟೇ. ಹಿಂದಿ ಸಂಪರ್ಕ ಭಾಷೆಯಾಗಿ ಮಾತ್ರ ಇರತಕ್ಕದ್ದು; ಅಖಿಲಭಾರತ ಮಟ್ಟದಲ್ಲಿ ವ್ಯವಹರಿಸುವವರು ಅದನ್ನು ಕಲಿಯಲಿ. ಅಂತೆಯೇ ಅಂತರಾಷ್ಟ್ರೀಯ ಮಟ್ಟದಲ್ಲಿ ವ್ಯವಹರಿಸುವವರು ಅದನ್ನು ಕಲಿಯಲಿ. ಹಿಂದಿ ಇಂಗ್ಲಿಷ್ ಎರಡೂ ಐಚ್ಛಿಕವಾಗಿರಲಿ, ಎಲ್ಲರೂ ಕಲಿಯಬೇಕೆನ್ನುವುದು ನಿರರ್ಥಕ (waste)."[೨೪] ಎಂದಿದ್ದಾರೆ.

ಇದು ಸತ್ಯವೂ ಹೌದು. ಹೇಗೆಂದರೆ ಒಂದು ಪ್ರದೇಶದಲ್ಲಿ ವಾಸಿಸುವ ಜನತೆಗೆ ಮತ್ತೊಂದು ಭಾಷೆಯ ಕಲಿಕೆಯ ಅನಿವಾರ್ಯತೆ ಉಂಟಾದರೆ ಅದನ್ನು ಅವರು ಯಾವುದೇ ಒತ್ತಡಕ್ಕೆ ಒಳಗಾಗದೆ ಆ ಪರಿಸರದ ಮೂಲಕ ಸಹಜವಾಗಿ ಕಲಿಯುತ್ತಾರೆ. ಈ ರೀತಿ ಈಗಾಗಲೇ ಕರ್ನಾಟಕದಲ್ಲಿ ಸಾಕಷ್ಟು ಜನ ಅನಕ್ಷರಸ್ಥರು ಕನ್ನಡ-ತೆಲುಗು, ಕನ್ನಡ-ಉರ್ದು, ಕನ್ನಡ-ತುಳು, ಕನ್ನಡ-ಕೊಂಕಣಿ, ಕನ್ನಡ-ಮರಾಠಿ, ಉರ್ದು-ತೆಲುಗು-ಕನ್ನಡ, ಮರಾಠಿ-ಕನ್ನಡ-ತೆಲುಗು, ಕನ್ನಡ-ಹಿಂದಿ-ಉರ್ದು, ಇಂಗ್ಲೀಶ್-ಹಿಂದಿ-ಉರ್ದು-ಕನ್ನಡ ಹೀಗೆ ಎರಡು, ಮೂರು, ನಾಲ್ಕು ಭಾಷೆಗಳನ್ನು ಕಲಿತಿದ್ದಾರೆ. ಅವರ್‍ಯಾರಿಗೂ ತನ್ನದಲ್ಲದ ಮತ್ತೊಂದು ಭಾಷೆಯನ್ನು ಕಲಿಯಬೇಕು, ಬಳಸಬೇಕು ಎಂದು ಒತ್ತಡ ಉಂಟುಮಾಡಿರಲಿಲ್ಲ. ಎಲ್ಲೂ ಕಡ್ಡಾಯ ಪರೀಕ್ಷಾ ವಿಷಯವನ್ನಾಗಿ ಮಾಡಿರಲಿಲ್ಲ. ಆದರೂ ಭಾಷಾಪರಿಸರದ ಮೂಲಕ ಸಹಜವಾಗಿ ಕಲಿತಿದ್ದಾರೆ. ಇವುಗಳನ್ನು ಅಗತ್ಯ ಸಂದರ್ಭಗಳಲ್ಲಿ ಬಳಸಿದ್ದಾರೆ. ಹೀಗಾಗಿ ಶಾಲೆಗಳಲ್ಲಿ ಭಾಷೆಗಳನ್ನು ಕಡ್ಡಾಯವಾಗಿ ಕಲಿಸಿದರೂ, ಕಡ್ಡಾಯ ಪರೀಕ್ಷಾ ವಿಷಯವನ್ನಾಗಿಸಿ ಪರೀಕ್ಷೆಗಳಲ್ಲಿ ಅನುತ್ತೀರ್ಣಗೊಂಡ ಮಾತ್ರಕ್ಕೆ ಶಿಕ್ಷಣದಿಂದ ವಂಚಿತರನ್ನಾಗಿ ಮಾಡುವುದು ತಪ್ಪು. ಹಾಗೆಯೇ ಇಲ್ಲಿ ಇನ್ನೊಂದು ಅಂಶದ ಬಗೆಗೂ ಸ್ವಲ್ಪ ಸೂಕ್ಷ್ಮವಾಗಿ ಆಲೋಚಿಸಬೇಕಿದೆ. ಅದೆಂದರೆ ಇಂಗ್ಲಿಶ್‌ನಲ್ಲಿ ಅನುತ್ತೀರ್ಣಗೊಂಡು ಬದುಕನ್ನು ಕಟ್ಟಿಕೊಂಡವರದ್ದು. ಯಾವ ಭಾಷೆಯಲ್ಲಿ ಉತ್ತೀರ್ಣಗೊಳ್ಳಲು ಸಾಧ್ಯವಾಗದೆ ಶಿಕ್ಷಣದಿಂದ ವಂಚಿತರಾಗಿದ್ದರೋ ಅಂತಹವರು ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿ ವೃತ್ತಿತರಬೇತಿ ಪಡೆದು ಸ್ವಂತ ಉದ್ಯೋಗ ಮಾಡುತ್ತಾ ಇಂಗ್ಲಿಶ್ ಕಲಿತು, ಪರೀಕ್ಷೆಯಲ್ಲಿ ಉತ್ತೀರ್ಣವಾಗಿ ಸರ್ಕಾರಿ ಅಥವಾ ಖಾಸಗಿ

ಕ್ಷೇತ್ರದಲ್ಲಿ ದುಡಿಯುತ್ತಿರುವವರಿಗಿಂತ ಉತ್ತಮ ಜೀವನ ಸಾಗಿಸುತ್ತಿದ್ದಾರೆ. ಇದನ್ನು ಗಮನಿಸಿದಾಗ ಕರ್ನಾಟಕದಲ್ಲಿ ಇಂಗ್ಲಿಶ್ ಕಲಿಯದೆ, ಪರೀಕ್ಷೆಯಲ್ಲಿ ಉತ್ತೀರ್ಣವಾಗದೆ ಬದುಕು ಕಟ್ಟಿಕೊಳ್ಳಲು ಸಾಧ್ಯವಿದೆ ಎಂಬುದು ಅರ್ಥವಾಗುತ್ತದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಇಂಗ್ಲಿಶ್ ನಮ್ಮ ಪಾಲಿಗೆ ಜ್ಞಾನದ ಕಿಂಡಿಯಾಗಿಲ್ಲ. ಸುತ್ತುವರಿದ ಗೋಡೆಯಾಗಿದೆ. ಈ ಗೋಡೆಯ ಎತ್ತರದಲ್ಲಿ ಒಂದು ಸಣ್ಣ ಕಿಂಡಿ ಇಡಲಾಗಿದೆ. ಜಗತ್ತನ್ನು ಅರಿಯಲು ಇರುವುದು ಅದೊಂದೇ ಕಿಂಡಿ ಎಂಬ ಮಿಥ್ಯೆಯನ್ನು ಹರಡಲಾಗಿದೆ. ಅದನ್ನು ತಲುಪಲಾರದೆ ಕುಸಿದು ಕೋಟ್ಯಾಂತರ ಜನರ ಬದುಕು ನಾಶವಾಗುತ್ತಿದೆ. ಹಣ ಹಿನ್ನೆಲೆಯಿರುವ ಬೆರಳೆಣಿಕೆಯಷ್ಟು ವ್ಯಕ್ತಿಗಳು ಮಾತ್ರ ಅದನ್ನು ತಲುಪಲು ಸಾಧ್ಯವಾಗುತ್ತಿದೆ. ಹಾಗಾಗಿ ನಾವು ಮಾಡಬೇಕಿರುವುದು ಆ ಕಷ್ಟಕರ ಗೋಡೆಯನ್ನೇರಿ ಅದರ ಕಿಂಡಿಯ ಮೂಲಕ ಜಗತ್ತನ್ನು ನೋಡುವುದಲ್ಲ. ಬದಲಿಗೆ ಆ ಗೋಡೆಯನ್ನು ಕೆಡವಿ ಜ್ಞಾನದ ಹಾದಿಗಳನ್ನು ತೆರೆಯುವುದು ಅಗತ್ಯವಿದೆ. ಏಕೆಂದರೆ "ಪ್ರತಿಯೊಂದು ಭಾಷೆಯೂ ಅರಿವಿನ ಹಾದಿಯಾಗಿದೆ. ಇಂಗ್ಲಿಷ್ ಮಾತ್ರವಲ್ಲ ನಮ್ಮ ಕನ್ನಡ, ನೆರೆಯ ತೆಲುಗು-ಮಲೆಯಾಳಂ-ಮರಾಠಿ-ವಿದೇಶಿ ಭಾಷೆಗಳಾದ ಜಪಾನಿ, ರಷ್ಯನ್, ಫ್ರೆಂಚ್ ಆಫ್ರಿಕಾದ ಸ್ವಾಹಿಲಿ ಎಲ್ಲವೂ ಜ್ಞಾನಕ್ಕಿರುವ ಹಾದಿಗಳೇ."[೩೦] ಇವುಗಳು ಸ್ಥಳೀಯ ಪ್ರದೇಶದ ವಿಶೇಷತೆಯನ್ನು, ಜನರನ್ನು, ಅವರ ನೋವು-ನಲಿವುಗಳನ್ನು, ಸಾಹಿತ್ಯ ಸಂಸ್ಕೃತಿಗಳನ್ನು ಒಳಗೊಂಡಿರುತ್ತವೆ. ಆದರೆ ಇಂಗ್ಲಿಶ್ ಇಂತಹ ಜ್ಞಾನವನ್ನು ಒಳಗೊಂಡಿಲ್ಲ. ಬದಲಾಗಿ ತಾನು ಆಳಿದ-ಆಳುತ್ತಿರುವ ಭಾಷೆಯಾದ್ದರಿಂದ ಜಗತ್ತಿನ ಅಪಾರ ಜ್ಞಾನಸಂಪತ್ತನ್ನು ಸಂಗ್ರಹಿಸಿಟ್ಟಿದೆ ನಿಜ. ಆದರೆ ಅದು ಜಗತ್ತಿನ ಎಲ್ಲಾ ದೇಶಗಳ ಆಳವಾದ ಜ್ಞಾನಗಳನ್ನು ಒಳಗೊಳ್ಳುವಲ್ಲಿ ವಿಫಲವಾಗಿದೆ. ಅದು ಇಂಗ್ಲಿಶರು ಆಳಿದ ದೇಶಗಳಲ್ಲಿನ ಶ್ರೀಮಂತ ವರ್ಗದ ಸಾಹಿತ್ಯ, ಸಂಸ್ಕೃತಿ ಮತ್ತು ಆ ಭಾಷೆಯನ್ನು ಬಲ್ಲವರ ಅಗತ್ಯಗಳಿಗೆ ಪೂರಕವಾದ ಜ್ಞಾನ ಅದರಲ್ಲಿ ಅಡಗಿದೆಯೇ ಹೊರತು ಜಗತ್ತಿನ ಎಲ್ಲಾ ದೇಶಗಳ ಸ್ಥಳೀಯ ಜನತೆಯ ಸೃಜನಶೀಲ ಅಭಿವ್ಯಕ್ತಿಯ ಜ್ಞಾನ ಅದರಲ್ಲಿ ಇಲ್ಲ.

ಆದರೂ "ತ್ರಿಭಾಷಾ ಸೂತ್ರವೆಂಬ ತ್ರಿಶೂಲದಿಂದ ಬಡಪಾಯಿ ಮಕ್ಕಳನ್ನು ಇರಿಯಲಾಗುತ್ತದೆ. ಈ ಸೂತ್ರದ ಪ್ರಕಾರ ಪ್ರತಿಯೊಬ್ಬ ವಿದ್ಯಾರ್ಥಿ ಮೂರು ಭಾಷೆಗಳನ್ನು ಕಲಿಯಲೇಬೇಕು. ಕಲಿತರೆ ಮಾತ್ರ ಸಾಲದು; ಪರೀಕ್ಷೆಯಲ್ಲಿ ಕಡ್ಡಾಯವಾಗಿ ತೇರ್ಗಡೆಯಾಗಲೇಬೇಕು. ತಮ್ಮದಲ್ಲದ ಈ ಪರಭಾಷೆಯಲ್ಲಿ ವಿದ್ಯಾರ್ಥಿ ನಿಗದಿತ ಅಂಕಗಳನ್ನು ಗಳಿಸದೆ ಹೋದರೆ ಬೇರೆಲ್ಲಾ ವಿಷಯಗಳಲ್ಲಿ ಎಷ್ಟೇ ನಿಪುಣನಾಗಿದ್ದರೂ ಆ ವಿದ್ಯಾರ್ಥಿಯನ್ನು ಫೇಲು ಮಾಡಲಾಗುತ್ತದೆ. ಸಾರಾಂಶದಲ್ಲಿ, ಈ ಪರಭಾಷೆಯ ಕಾರಣದಿಂದ ಜ್ಞಾನವು ನಮ್ಮ ಲಕ್ಷಾಂತರ ವಿದ್ಯಾರ್ಥಿಗಳು 'ಫೇಲು' ಎಂಬ ಹಣೆಪಟ್ಟಿಯೊಂದಿಗೆ ಶಿಕ್ಷಣದಿಂದ ಹೊರದೂಡಲ್ಪಡುತ್ತಿದ್ದಾರೆ. ಇನ್ನೊಂದೆಡೆ ಇಂಗ್ಲಿಷ್ ಬಾರದ ವಿದ್ಯಾರ್ಥಿಗಳಲ್ಲಿ ಕೀಳರಿಮೆಯನ್ನು ಉಂಟುಮಾಡಿ, ಅವರ ಗ್ರಹಿಕೆಯ ಶಕ್ತಿಯು ಕುಂಠಿತಗೊಂಡು ಅವರನ್ನು ಶಾಶ್ವತವಾಗಿ ದಡ್ಡರನ್ನಾಗಿಸುತ್ತದೆ."[೩೧] ಇದು ಪ್ರಜಾಪ್ರಭುತ್ವ ವಿರೋಧಿ ನೀತಿ ಮತ್ತು ವರ್ತನೆಯಾಗಿದೆ.

ಒಟ್ಟಾರೆಯಾಗಿ ಭಾರತ ಸ್ವತಂತ್ರಗೊಂಡ ನಂತರ ವಿವಿಧ ಉದ್ದೇಶಗಳಿಗಾಗಿ ಮಾತೃಭಾಷೆ, ರಾಜ್ಯಭಾಷೆ, ರಾಷ್ಟ್ರಭಾಷೆ, ಅಂತರಾಷ್ಟ್ರೀಯ ಭಾಷೆಯ ಹೆಸರಿನಲ್ಲಿ ಮೂರು ಭಾಷೆಗಳನ್ನು ಕಡ್ಡಾಯವಾಗಿ ಕಲಿಸುವ ಭಾಷಾನೀತಿಯನ್ನು ಜಾರಿಗೆ ತರಲಾಗಿದೆ. ಇದಕ್ಕಾಗಿ ಶಿಕ್ಷಣದಲ್ಲಿ ತ್ರಿಭಾಷಸೂತ್ರವನ್ನು ಅಳವಡಿಸಿ ವಿದ್ಯಾರ್ಥಿಗಳು ಪ್ರಥಮ, ದ್ವಿತೀಯ ಮತ್ತು ತೃತೀಯ ಎಂದು ಮೂರು ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕು ಎಂದು ಷರತ್ತನ್ನು ವಿಧಿಸಲಾಗಿದೆ. ಆದರೆ ಸರ್ಕಾರಗಳು ಈ ಭಾಷೆಗಳನ್ನು ಕಲಿಸಲು ಉದ್ದೇಶಿಸಿರುವ ನಿಯಮಗಳಿಗೆ ಅನುಗುಣವಾಗಿ ವೈಜ್ಞಾನಿಕ ಕ್ರಮದ ಅಡಿಯಲ್ಲಿ ಕಲಿಸಲು ಪೂರಕ ವ್ಯವಸ್ಥೆ ಮಾಡಿಲ್ಲ. ಇದು ವಿದ್ಯಾರ್ಥಿಗಳ ಭಾಷಾಕಲಿಕೆ ಮತ್ತು ಬೋಧಕರ ಭಾಷಾಭೋಧನೆಗೆ ಸಮಸ್ಯೆಯಾಗಿದೆ. ಸರ್ಕಾರಗಳು ಇವುಗಳ ಬಗೆಗೆ ಗಂಭೀರವಾಗಿ ಆಲೋಚಿಸಿ ಪರಿಹರಿಸುವ ಕೆಲಸ ಮಾಡಬೇಕಿತ್ತು. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಭಾಷಾಕಲಿಕೆಗೆ ಸಂಬಂಧಿಸಿದಂತೆ ಭಾಷಾನೀತಿಗಳನ್ನು ಜಾರಿಗೆ ತಂದ ನಂತರ ಭಾಷಾಕಲಿಕೆ ಮತ್ತು ಬೋಧನೆಯಿಂದ ಉದ್ಭವಿಸಿರುವ ಸಮಸ್ಯೆಗಳನ್ನು ಅರಿತು ಪರಿಹರಿಸುವ ಕೆಲಸ ಮಾಡಿಲ್ಲ. ಆದ್ದರಿಂದ ಏಕೀಕರಣ ನಂತರದ ಕರ್ನಾಟಕದಲ್ಲಿ ಕರ್ನಾಟಕ ಸರ್ಕಾರ ಭಾಷೆಗಳನ್ನು ಕಲಿಸುವ ವಿಚಾರಕ್ಕೆ ಸಂಬಂಧಿಸಿದಂತೆ ಜಾರಿಗೆ ತಂದಿರುವ ಭಾಷಾನೀತಿಗಳು ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಗೆ ಸಮಸ್ಯೆಗಳಾಗಿ ವಿದ್ಯಾರ್ಥಿಗಳ ಶೈಕ್ಷಣಿಕ ಬದುಕನ್ನು ಕಸಿದುಕೊಂಡಿರುವುದು ಇದುವರೆಗಿನ ಚರ್ಚೆಯಿಂದ ತಿಳಿಯುತ್ತದೆ. ಹೀಗಾಗಿ ಭಾಷೆಗಳನ್ನು ಕಲಿಸುವಾಗ ಅವುಗಳ ನಿಜವಾದ ಉದ್ದೇಶ ಮತ್ತು ಅವುಗಳು ವಿದ್ಯಾರ್ಥಿಗಳ ಬದುಕಿನ ಮೇಲೆ ಬೀರಿರುವ ವ್ಯತಿರಿಕ್ತ ಪರಿಣಾಮಗಳನ್ನು ಪರಿಶೀಲಿಸಿ ವಿದ್ಯಾರ್ಥಿಗಳ ಶೈಕ್ಷಣಿಕ ಬದುಕಿಗೆ ಮಾರಕ ಆಗಿರುವ ಕಡೆಗಳಲ್ಲಿ ಭಾಷಾಪರೀಕ್ಷೆಯನ್ನು ಐಚ್ಛಿಕಗೊಳಿಸಿ, ವೈಜ್ಞಾನಿಕ ಕ್ರಮದಲ್ಲಿ ಭಾಷೆಗಳನ್ನು ಕಲಿಸಲು ಕ್ರಮ ಕೈಗೊಳ್ಳಬೇಕಾದ ಅನಿವಾರ್ಯತೆ ಇರುವುದು ಈ ಅಧ್ಯಯನದಿಂದ ತಿಳಿಯುತ್ತದೆ.

**ಟಿಪ್ಪಣಿಗಳು**

೧. ರಾಜಭಾಷಾ ಆಯೋಗದ ವರದಿ, ಭಾರತ ಸರ್ಕಾರ, ೧೯೫೬ ಪುಟ ೧೦೭
೨. ನಾಯಕ ಹಾ.ಮಾ., ಜಯತೀರ್ಥ ರಾಜಪುರೋಹಿತ, ಕನ್ನಡದ ತೀರ್ಪುಗಳು (ಮುನ್ನುಡಿಯಲ್ಲಿ)
೩. ಬಡ್ಡಿ ಎಂ.ಎಂ., ಭಾರತ ಸಂವಿಧಾನ, ಪುಟ ೯೧
೪. ಅದೇ, ಪುಟ ೧೦೨
೫. ಸುದರ್ಶನ್ ಸ.ರ., ಶಿಕ್ಷಣದಲ್ಲಿ ಕನ್ನಡ, ಕನ್ನಡ ನುಡಿ ಕನ್ನಡ ಗಡಿ ಜಾಗೃತ ಜಾಥ ಸಮಿತಿ, ಪುಟ ೧೨
೬. ಸುದರ್ಶನ್ ಸ.ರ., ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೮೮
೭. ಕರ್ನಾಟಕ ರಾಜ್ಯಪತ್ರ, ಏಪ್ರಿಲ್ ೩೦ ೧೯೯೪ ಬೆಂಗಳೂರು
೮. ಗೋವಿಂದರಾಜು ಸಿ.ಆರ್., ಗೋಕಾಕ್ ವರದಿ, ಪುಟ ೬೦
೯. ಸುದರ್ಶನ್ ಸ.ರ., ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೧
೧೦. ರಂಗನಾಥ ಕಂಟನಕುಂಟೆ, ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ, ಪುಟ ೧೬೪
೧೧. ಗೋವಿಂದರಾಜು ಸಿ.ಆರ್., ಗೋಕಾಕ್ ವರದಿ, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೫
೧೨. ಸುದರ್ಶನ್ ಸ.ರ., ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೫೮
೧೩. ಅದೇ, ಪುಟ ೬೦
೧೪. ಬರಗೂರು ರಾಮಚಂದ್ರಪ್ಪ, ಕನ್ನಡ ಪ್ರಜ್ಞೆ, ಪುಟ ೧೭೧
೧೫. ಕರ್ನಾಟಕ ರಾಜ್ಯಪತ್ರ, ಏಪ್ರಿಲ್ ೩೦, ೧೯೯೪

೧೬. ಕರ್ನಾಟಕ ರಾಜ್ಯಪತ್ರ, ಏಪ್ರಿಲ್ ೩೦, ೧೯೯೪
೧೭. ನಾಯಕ್ ಜೆ.ಪಿ., ಕನ್ನಡಕ್ಕೆ-ಮಹಾಬಲೇಶ್ವರ ರಾವ್, ಶಿಕ್ಷಣ ಆಯೋಗ: ಪೂರ್ವೋತ್ತರ ಪುಟ ೬೫
೧೮. ರಾಧಾಕೃಷ್ಣ ಕೆ., ಭಾಷಾ ಸಮಸ್ಯೆಯ ಕುರಿತು, ಪುಟ ೧೪
೧೯. ರಾಜಭಾಷಾ ಆಯೋಗದ ೧೯೫೬, ಭಾರತ ಸರ್ಕಾರ, ಪುಟ ೩೫
೨೦. ಅದೇ, ಪುಟ ೩೬
೨೧. ಅದೇ, ಪುಟ ೪೪
೨೨. ಅದೇ, ಪುಟ ೩೮
೨೩. ಅದೇ, ಪುಟ ೧೩೩
೨೪. ಅದೇ, ಪುಟ ೪೪೩
೨೫ ಅದೇ, ಪುಟ ೫೪೦
೨೬. ಸುದರ್ಶನ ಸ.ರ., ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೧೩೨
೨೭. ಅದೇ, ಪುಟ ೧೩೬
೨೮. ನಾರಾಯಣ ಕೆ.ವಿ. ಭಾಷೆಯ ಸುತ್ತಮುತ್ತ, ಪುಟ ೧೧೬
೨೯. ಕುವೆಂಪು, (ಸಂ) ಎಲ್.ಎಸ್. ಶೇಷಗಿರಿರಾವ್, ಕನ್ನಡದ ಅಳಿವು-ಉಳಿವು, ಪುಟ ೪೪೬
೩೦. ಇಂಗ್ಲಿಷ್ ಕಲಿಕೆ: ಪರ-ವಿರೋಧದಾಚೆಗಿನ ಪ್ರಶ್ನೆಗಳು, ಕರ್ನಾಟಕ ವಿಮೋಚನಾ ರಂಗ ಪುಟ ೨೪
೩೧. ಅದೇ, ಪುಟ ೧೨

## ಅಧ್ಯಾಯ-೪

## ಶಿಕ್ಷಣ ಮತ್ತು ಭಾಷಾಮಾಧ್ಯಮ

೪.೧ ಭಾಷಾಮಾಧ್ಯಮ: ಪರ ಮತ್ತು ವಿರೋಧದ ಚರ್ಚೆ

೪.೨ ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು

೪.೩ ಕನ್ನಡ ಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು

೪.೪ ಭಾಷಾಅಲ್ಪಸಂಖ್ಯಾತರು: ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು

೪.೫ ಇಂಗ್ಲಿಶ್ ಭಾಷಾಮಾಧ್ಯಮ: ಕಲಿಕೆ ಮತ್ತು ಸಮಸ್ಯೆಗಳು

# ಅಧ್ಯಾಯ-೪

# ಶಿಕ್ಷಣ ಮತ್ತು ಭಾಷಾಮಾಧ್ಯಮ

## ೪.೧ ಭಾಷಾಮಾಧ್ಯಮ: ಪರ ಮತ್ತು ವಿರೋಧದ ಚರ್ಚೆ

ಏಕೀಕರಣ ನಂತರದ ಕರ್ನಾಟಕದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಚರ್ಚೆಯಾಗಿರುವ ವಿಷಯಗಳನ್ನು ಗಮನಿಸಿದಾಗ ಅತಿಹೆಚ್ಚು ಚರ್ಚೆಯಾಗಿರುವುದು ಭಾಷಾಮಾಧ್ಯಮದ ವಿಚಾರವಾಗಿ. ಅದರಲ್ಲೂ ಮಕ್ಕಳಿಗೆ ಯಾವ ಭಾಷಾಮಾಧ್ಯಮದ ಮೂಲಕ ಶಿಕ್ಷಣ ಕಲಿಸಬೇಕು? ಮಕ್ಕಳು ಯಾವ ಭಾಷಾಮಾಧ್ಯಮದಲ್ಲಿ ಕಲಿಯಬೇಕು? ಎಂಬುದು. ಇದಕ್ಕೆ ಸಂಬಂಧಿಸಿದಂತೆ ಇದುವರೆಗೆ ಪ್ರಾದೇಶಿಕ ಹಂತದಿಂದ ಅಂತರಾಷ್ಟ್ರೀಯ ಮಟ್ಟದವರೆಗೆ ಅನೇಕ ಭಾಷಾವಿದ್ವಾಂಸರು, ಶಿಕ್ಷಣತಜ್ಞರು ಅಧ್ಯಯನ ಮಾಡಿದ್ದಾರೆ. ತಮ್ಮ ಅಧ್ಯಯನದಲ್ಲಿ ಹೊರಹುಮ್ಮಿದ ಅಂಶಗಳ ಆಧಾರದಲ್ಲಿ ಮಕ್ಕಳ ಕಲಿಕಾಮಾಧ್ಯಮ ಯಾವುದಿರಬೇಕು ಎಂಬುದಕ್ಕೆ ಸಂಬಂಧಿಸಿದಂತೆ ತಮ್ಮದೇ ಆದ ಚಿಂತನಾಕ್ರಮದಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಬಗೆಗೆ ಕರ್ನಾಟಕದಲ್ಲಿಯೂ ಇಲ್ಲಿನ ಭಾಷಾಪರಿಸರ, ಸಾಮಾಜಿಕ ವ್ಯವಸ್ಥೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಕಲೆ, ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯ, ಜನರ ಬದುಕು, ಭಾಷಿಕಸಮುದಾಯಗಳ ಹಿತ ಇತ್ಯಾದಿಗಳನ್ನು ಆಧರಿಸಿ ಅಧ್ಯಯನಗಳು ಆಗಿವೆ. ಆ ಮೂಲಕ ರಾಜ್ಯದಲ್ಲಿ ಮಕ್ಕಳಿಗೆ ಯಾವ ಭಾಷೆಯ ಮೂಲಕ ಶಿಕ್ಷಣ ಕಲಿಸಲಾಗುತ್ತಿದೆ? ಇದರ ಪರಿಣಾಮಗಳೇನು? ಎಂಬುದಕ್ಕೆ ಸಂಬಂಧಿಸಿದ ಹಾಗೆ ಕೆಲವು ಭಾಷೆಯ ಪರ ಮತ್ತು ವಿರೋಧವಾಗಿ ತಮ್ಮದೇ ಆದ ಚಿಂತನಾಕ್ರಮದಲ್ಲಿ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇವುಗಳು ತೀವ್ರಸ್ವರೂಪ ಪಡೆದಾಗ ಸರ್ಕಾರಗಳು ಮಧ್ಯಪ್ರವೇಶಿಸಿ ಬೋಧನಾ ಮಾಧ್ಯಮದ ಸಮಸ್ಯೆ ಬಗೆಹರಿಸಲು ಪ್ರಯತ್ನಿಸಿವೆ. ಇದಕ್ಕಾಗಿ ಸೂಕ್ತಸಲಹೆ ನೀಡಲು ಸಮಿತಿ ಇಲ್ಲವೆ ಆಯೋಗಗಳನ್ನು ನೇಮಕ ಮಾಡಿವೆ. ಇವುಗಳಲ್ಲಿ ಕೆಂಗಲ್ ಹನುಮಂತಯ್ಯನವರ ಅಧ್ಯಕ್ಷತೆ ಮತ್ತು ಜೆ.ಬಿ.ಮಲ್ಲಾರಾಧ್ಯ ಕಾರ್ಯದರ್ಶಿಗಳಾಗಿದ್ದ ಸಮಿತಿ, ಗೋಕಾಕ್ ನೇತೃತ್ವದ ಸಮಿತಿ, ಎಚ್. ನರಸಿಂಹಯ್ಯ ಸಮಿತಿ, ಚಂಪಾ ಸಮಿತಿ ಮತ್ತು ಬರಗೂರು ರಾಮಚಂದ್ರಪ್ಪ ನೇತೃತ್ವದ ಸಮಿತಿಗಳು ಪ್ರಮುಖವಾಗಿವೆ. ಈ ಸಮಿತಿಗಳು ಆಯಾಕಾಲದ ಭಾಷಾಪರಿಸ್ಥಿತಿ, ಜನತೆಯ ಒತ್ತಡ, ಭಾಷಿಕ ಅಗತ್ಯ ಇತ್ಯಾದಿಗಳನ್ನು ಮುಖ್ಯವಾಗಿಸಿಕೊಂಡು ಈ ಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರು ತಮ್ಮದೇ ಆದ ಚಿಂತನಾಕ್ರಮದಲ್ಲಿ ಅವಲೋಕಿಸಿ ಕರ್ನಾಟಕದ ಭಾಷೆ ಮತ್ತು ಭಾಷಾಮಾಧ್ಯಮದ ಸಮಸ್ಯೆಗಳಿಗೆ ಪರಿಹಾರ ಸೂಚಿಸಿ ವರದಿ ಸಲ್ಲಿಸಿವೆ.

ಈ ಎಲ್ಲಾ ಸಮಿತಿಗಳು ತಮ್ಮ ವರದಿಯಲ್ಲಿ ಸೂಚಿಸಿರುವ ಶಿಫಾರಸುಗಳನ್ನು ಗಮನಿಸಿದಾಗ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವನ್ನು ಅವರ ಮಾತೃಭಾಷೆ ಇಲ್ಲವೇ ಕನ್ನಡ ಮಾಧ್ಯಮದಲ್ಲಿ ಕಲಿಸಬೇಕು ಎಂಬ ಅಂಶ ಇರುವುದು ಸ್ಪಷ್ಟವಾಗುತ್ತದೆ. ಇವುಗಳನ್ನು ಆಧರಿಸಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಇವು ಕೆಲವೊಮ್ಮೆ ಆಯಾಕಾಲದ ಭಾಷಾಪರಿಸ್ಥಿತಿ, ಜನತೆಯ ಒತ್ತಡ, ಸಂವಿಧಾನದ ಚೌಕಟ್ಟು, ನ್ಯಾಯಾಲಯದ ತೀರ್ಪುಗಳಿಗೆ

ಪೂರಕವಾಗಿದ್ದರೆ ಮತ್ತೆ ಕೆಲವೊಮ್ಮೆ ವಿರುದ್ಧವಾಗಿವೆ. ಏಕೆಂದರೆ ಜನಸಮುದಾಯಗಳು ಸರ್ಕಾರದ ಮುಂದಿಟ್ಟಿರುವ ಭಾಷಾಬೇಡಿಕೆಗಳು ಕೆಲವು ಬದುಕಿನ ಭಾಗವಾಗಿದ್ದರೆ, ಮತ್ತೆ ಕೆಲವು ಅಭಿಮಾನದ ನೆಲೆಯಲ್ಲಿ ಇವೆ. ಈ ಎರಡೂ ಬೇಡಿಕೆಗಳು ಪರಸ್ಪರ ಪೂರಕವಾಗಿರದೆ ವಿರುದ್ಧ ದಿಕ್ಕಿನಲ್ಲಿವೆ. ಇದರಿಂದಾಗಿ ಸರ್ಕಾರಗಳಿಗೆ ಈ ಎರಡೂ ಜನವರ್ಗಗಳ ಬೇಡಿಕೆಗಳನ್ನು ಈಡೇರಿಸುವುದು ಬಹುದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ. ಇಂತಹ ಸಂದರ್ಭಗಳಲ್ಲಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕೆಲವೊಮ್ಮೆ ಭಾಷೆಯನ್ನು ಬದುಕಿನ ಭಾಗವಾಗಿ ನೋಡಿ ಭಾಷಾನೀತಿಯನ್ನು ಜಾರಿಗೆ ತಂದಿದ್ದರೆ ಮತ್ತೆ ಕೆಲವೊಮ್ಮೆ ಅಭಿಮಾನದ ನೆಲೆಯಲ್ಲಿ ನೋಡಿ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಈ ಅಭಿಮಾನದ ನೆಲೆಯಲ್ಲಿ ಭಾಷಾನೀತಿಯನ್ನು ಜಾರಿಗೆ ತರುವಾಗ ಈವರೆಗೆ ಹೇಳಿದ ಸಂವಿಧಾನದ ನಿಯಮಗಳನ್ನು ಉಲ್ಲಂಘಿಸಿ ಭಾಷಾನೀತಿಗಳನ್ನು ಜಾರಿಗೆ ತರಲಾಗಿದೆ. ಇದರಿಂದಾಗಿ ಭಾಷಾಸಮುದಾಯಗಳ ನಡುವೆ ತರತಮಗಳು ಸೃಷ್ಟಿಯಾಗಿ ಯಾವ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಮಿತಿಯನ್ನು ಹೇರಲಾಗಿದೆಯೋ ಅಥವಾ ಕಲಿಕೆ ಮತ್ತು ಬಳಕೆಗೆ ನಿಯಂತ್ರಣ ಹೇರಲಾಗಿದೆಯೋ ಆ ಭಾಷಾಸಮುದಾಯಗಳ ಜನರು ಕರ್ನಾಟಕ ಸರ್ಕಾರದ ಭಾಷಾನೀತಿಯ ವಿರುದ್ಧವಾಗಿ ನ್ಯಾಯಾಲಯದಲ್ಲಿ ದಾವೆ ಹೂಡಿದ್ದಾರೆ.

ಹೀಗೆ ಏಕೀಕರಣ ನಂತರದ ಕರ್ನಾಟಕದಲ್ಲಿ ಜಾರಿಗೆ ತರಲಾಗಿರುವ ಭಾಷಾನೀತಿಗಳು ಹಲವು ಸಮಸ್ಯೆಗಳನ್ನು ಹುಟ್ಟುಹಾಕಿವೆ. ಇದಕ್ಕೆ ಕಾರಣ ಒಂದಲ್ಲ, ಹಲವು ಇವೆ. ಇವುಗಳಲ್ಲಿ ಭಾರತ ಸಂವಿಧಾನ ಭಾರತೀಯ ಪ್ರಜೆಗೆ ನೀಡಿರುವ ಭಾಷಾಸ್ವಾತಂತ್ರ್ಯ, ಸಮಾನತೆಯ ಹಕ್ಕು; ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಭಾಷಾನೀತಿಯನ್ನು ರೂಪಿಸಲು ನೀಡಿರುವ ಸ್ವಾತಂತ್ರ್ಯಗಳ ನಡುವೆ ಹೊಂದಾಣಿಕೆ ಕೊರತೆ ಪ್ರಧಾನವಾಗಿದೆ. ಇವುಗಳ ಜೊತಗೆ ಏಕೀಕರಣ ನಂತರದಲ್ಲಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ರೂಪಿಸಿಕೊಂಡಿರುವ ಶಿಕ್ಷಣ ಸಂಹಿತೆಯ ಕಾನೂನು, ರಾಜ್ಯದ ನ್ಯಾಯಾಲಯಗಳು ಮತ್ತು ಸುಪ್ರೀಂಕೋರ್ಟ್ ನೀಡಿರುವ ತೀರ್ಪುಗಳು, ಇಲ್ಲಿನ ಭಾಷಿಕ ಪರಿಸರ, ವಿವಿಧ ಜನಸಮುದಾಯಗಳು ಸರ್ಕಾರಗಳ ಮುಂದಿಟ್ಟಿರುವ ಭಾಷಾಬೇಡಿಕೆಗಳು ಸೇರಿವೆ. ಹಾಗೆಯೇ ಕರ್ನಾಟಕದ ಶಿಕ್ಷಣದಲ್ಲಿ ವಿವಿಧ ಹಂತ, ಅಧ್ಯಯನ ವಿಷಯಗಳನ್ನು ಕಲಿಸಲು ಬೋಧನೆಗೆ ಬಳಕೆ ಮಾಡುತ್ತಿರುವ ಭಾಷೆ ಅಥವಾ ಭಾಷೆಗಳು ಕಾರಣವಾಗಿವೆ. ಈ ಎಲ್ಲಾ ವಿಚಾರಗಳಿಗೆ ಸಂಬಂಧಿಸಿದಂತೆ ಈ ಹಿಂದೆ ಕರ್ನಾಟಕದಲ್ಲಿ ಆಡಳಿತ ನಡೆಸಿದ್ದ ಸರ್ಕಾರಗಳು ತಳೆದಿದ್ದ ನಿಲುವು ಮತ್ತು ಇಂದು ಆಡಳಿತ ನಡೆಸುತ್ತಿರುವ ಸರ್ಕಾರಗಳು ತಳೆಯುತ್ತಿರುವ ನಿಲುವುಗಳ ನಡುವೆ ಭಿನ್ನತೆಗಳು ಇವೆ. ಈ ಭಿನ್ನತೆಗಳು ಆಯಾ ವರ್ಗಗಳ ಹಿನ್ನೆಲೆಯಲ್ಲಿ ನೋಡಿದರೆ ನ್ಯಾಯಯುತವಾಗಿಯೇ ಕಾಣುತ್ತವೆ. ಆದರೆ "ಪ್ರಜಾಪ್ರಭುತ್ವ ಸರ್ಕಾರಗಳಲ್ಲಿ ಭಾಷೆಯದು ಪ್ರಮುಖ ಪಾತ್ರ, ಜನತೆಗೆ ಅರ್ಥವಾಗದ ಭಾಷೆಯಿಂದ ತಿಳುವಳಿಕೆ ನೀಡಲು ಅಸಾಧ್ಯ. ಎಲ್ಲರಿಗು ಸಮಪಾಲು, ಸಮಾನ ಹಕ್ಕು ದೊರಕಬೇಕಾದರೆ ಜನರ ಭಾಷೆಯಲ್ಲಿಯೇ ಆಡಳಿತ ನಡೆಯಬೇಕು. ಹಾಗಿಲ್ಲದಿದ್ದರೆ ಪ್ರಜಾಪ್ರಭುತ್ವ ಎಂಬುದು ಅರ್ಥಹೀನ. ಒಂದು ರಾಷ್ಟ್ರದ ಯುವಜನತೆ ಜನಜೀವನದೊಡನೆ ಸಂಪರ್ಕ

ಪಡೆಯಲು ಹಾಗು ಮಾನಸಿಕ ಬೆಳವಣಿಗೆಯನ್ನು ಹೊಂದಲು ಜನತೆಗೆ ಅರ್ಥವಾಗುವ ಭಾಷೆಯಲ್ಲಿ ಶಿಕ್ಷಣವನ್ನು ನೀಡಬೇಕು[೧]" ಎನ್ನುತ್ತಾರೆ ಮಹದೇವ ಬಣಕಾರರು.

ಇದನ್ನು ಗಮನಿಸಿದಾಗ ಕರ್ನಾಟಕದಲ್ಲಿ ಸಾಮಾನ್ಯವಾಗಿ ಮಗುವಿನ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡ ಮಗುವಿನ ಕಲಿಕಾಮಾಧ್ಯಮದ ಭಾಷೆಯಾಗಬೇಕು. ಏಕೆಂದರೆ ಮಗು ಶಾಲೆಗೆ ದಾಖಲಾಗುವ ಮುನ್ನ ತನ್ನ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿ ಭಾಷೆಯ ನಾಲ್ಕು ಕೌಶಲಗಳಾದ ಗ್ರಹಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದರಲ್ಲಿ ಗ್ರಹಿಸುವುದು ಮತ್ತು ಮಾತನಾಡುವುದನ್ನು ಮಾತ್ರ ಕಲಿತಿರುತ್ತದೆ. ಶಾಲೆಯಲ್ಲಿ ಓದುವುದು ಮತ್ತು ಬರೆಯುವುದನ್ನು ಅಭ್ಯಾಸ ಮಾಡುತ್ತದೆ. ಮಗು ತನ್ನ ವಿದ್ಯಾಭ್ಯಾಸ ಮುಂದುವರೆಸಿದಂತೆಲ್ಲಾ ಇವುಗಳಲ್ಲಿ ಪ್ರಾವೀಣ್ಯತೆ ಪಡೆಯುವುದರ ಜೊತೆಗೆ ಹೊಸ ಚಿಂತನಾಕ್ರಮಗಳನ್ನು ಕಲಿತು ಬೌದ್ಧಿಕವಾಗಿ ವಿಕಾಸವಾಗುತ್ತದೆ. ಮತ್ತು ತನ್ನ ಭಾವನೆಗಳನ್ನು ಸ್ವತಂತ್ರವಾಗಿ ಅಭಿವ್ಯಕ್ತಿಸುತ್ತದೆ. ಈ ಹಿನ್ನೆಲೆಯಲ್ಲಿ ಮಕ್ಕಳಿಗೆ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಕಲಿಸುವುದು ಉತ್ತಮ ಎಂದು ಈಗಾಗಲೆ ಕೇಂದ್ರಸರ್ಕಾರಕ್ಕೆ ವರದಿ ಸಲ್ಲಿಸಿರುವ ೧೯೪೮ರ ಡಾ. ರಾಧಕೃಷ್ಣ ಕಮಿಟಿ, ೧೯೫೩ ರಲ್ಲಿ ರಚನೆಯಾದ ಶ್ರೀ ಮೂದಲಿಯಾರ್ ಕಮಿಟಿ, ೧೯೬೪-೬೬ರ ರಾಷ್ಟ್ರೀಯ ಶಿಕ್ಷಣ ಆಯೋಗ, ೧೯೬೮ರ ಕೊಠಾರಿ ಕಮಿಟಗಳು ಹೇಳಿವೆ. ಇದಕ್ಕೂ ಪೂರ್ವದಲ್ಲಿಯೇ ಅಂದರೆ ೧೯೫೦ರಲ್ಲಿ ಅಂಗೀಕೃತವಾದ ಭಾರತ ಸಂವಿಧಾನದಲ್ಲಿ ರಾಜ್ಯಸರ್ಕಾರಗಳು ಭಾಷಾಅಲ್ಪಸಂಖ್ಯಾತರ ಮಕ್ಕಳ ಅನುಕೂಲಕ್ಕಾಗಿ ಸಾಧ್ಯವಾದಷ್ಟು ಅವರ ಮಾತೃಭಾಷಾ ಮಾಧ್ಯಮದಲ್ಲಿ ಶಿಕ್ಷಣ ಕಲಿಸುವ ವ್ಯವಸ್ಥೆ ನಿರ್ಮಾಣ ಮಾಡಬೇಕು ಎಂಬ ನಿಯಮವನ್ನು ಅಳವಡಿಸಲಾಗಿದೆ. ಇದರಿಂದ ರಾಜ್ಯಸರ್ಕಾರಗಳು ಮಕ್ಕಳಿಗೆ ಮಾತೃಭಾಷಾ ಮಾಧ್ಯಮದಲ್ಲಿ ಶಿಕ್ಷಣ ಕಲಿಸುವ ನಿಯಮಗಳನ್ನು ರೂಪಿಸುವುದು ಅನಿವಾರ್ಯವಾಗಿದೆ. ಹಾಗೆಯೇ ಅದಕ್ಕೆ ಪೂರಕ ವ್ಯವಸ್ಥೆ ಕಲ್ಪಿಸುವುದು ರಾಜ್ಯ ಸರ್ಕಾರಗಳ ಜವಾಬ್ದಾರಿಯಾಗಿದೆ. ಹೀಗಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಮಾತೃಭಾಷಾಮಾಧ್ಯಮದ ಪರವಾದ ಭಾಷಾನೀತಿಯನ್ನು ಜಾರಿಗೆ ತಂದಿವೆ.

ಆದರೆ ಕರ್ನಾಟಕದಲ್ಲಿ ಪೋಷಕರು ವ್ಯಾವಹಾರಿಕ ಉದ್ದೇಶದಿಂದ ತಮ್ಮ ಮಕ್ಕಳಿಗೆ ಇಂಗ್ಲಿಶ್ ಭಾಷಾಮಾಧ್ಯಮದ ಮೂಲಕ ಶಿಕ್ಷಣ ಕಲಿಸಲು ಆಸಕ್ತರಾಗಿದ್ದಾರೆ. ಇದಕ್ಕೆ ಪೋಷಕರು ವ್ಯಾವಹಾರಿಕ ಉದ್ದೇಶದಿಂದ ತಮ್ಮ ಮಕ್ಕಳಿಗೆ ಅನ್ಯಭಾಷಾಮಾಧ್ಯಮದ ಮೂಲಕ ಶಿಕ್ಷಣ ಕಲಿಸಿದರೆ ಇದು ಯಾಂತ್ರಿಕವಾಗಿರುತ್ತದೆ. ಇದು ಮಗುವಿನ ಪ್ರತಿಭೆ ಹಾಗೂ ಸೃಜನಶೀಲ ಅಭಿವ್ಯಕ್ತಿಗೆ ಮಾರಕ. ಅಲ್ಲದೆ ಇದರಿಂದ ಮಕ್ಕಳು ಶಾಲೆ, ಕಾಲೇಜುಗಳಲ್ಲಿ ಶಿಕ್ಷಕರು ಬೋಧಿಸುವ ಇತರ ವಿಷಯಗಳನ್ನು ಸುಲಭವಾಗಿ ಗ್ರಹಿಸಿಕೊಳ್ಳಲು, ಗ್ರಹಿಸಿದ್ದನ್ನು ಅಭಿವ್ಯಕ್ತಿಗೊಳಿಸಲು ಸಾಧ್ಯವಾಗುವುದಿಲ್ಲ. ಇದರಿಂದ ಮಗುವಿನ ಪ್ರತಿಭೆ ಮತ್ತು ಸೃಜನಶೀಲತೆ ಮರೆಯಾಗಿಹೋಗುತ್ತದೆ. ಮಗು ತನ್ನಲ್ಲಿರುವ ಪ್ರತಿಭೆ ಮತ್ತು ಸೃಜನಶೀಲ ಭಾವನೆಗಳನ್ನು, ಗ್ರಹಿಸಿದ ವಿಷಯಗಳನ್ನು ಸುಲಭವಾಗಿ ಅಭಿವ್ಯಕ್ತಿಸಲು ಸಾಧ್ಯವಾಗುವುದು ಮಾತೃಭಾಷಾ ಮಾಧ್ಯಮದ ಅಥವಾ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಕಲಿತಾಗ ಎಂಬ

ಅಭಿಪ್ರಾಯಗಳು ವ್ಯಕ್ತವಾಗಿವೆ. ಏಕೆಂದರೆ ಮಗು ತಾನು ವಾಸಿಸುವ ಪ್ರದೇಶದಲ್ಲಿ ಅಲ್ಲಿನ ಸ್ಥಳೀಯ ಜನತೆಯ ಜೊತೆ ಬೆರೆತು ಶಾಲೆಗೆ ದಾಖಲಾಗುವ ಮುನ್ನ ಪ್ರದೇಶ ಭಾಷೆಯಲ್ಲಿ ಗ್ರಹಿಸುವ ಮತ್ತು ಮಾತನಾಡುವ ಸಾಮರ್ಥ್ಯ ಪಡೆದಿರುತ್ತದೆ. ಇದರಿಂದಾಗಿ ಪ್ರಾದೇಶಿಕ ಭಾಷೆಯನ್ನು ಮಗುವಿನ ಎರಡನೇ ಮಾತೃಭಾಷೆ ಎಂದು ಕರೆಯಲಾಗಿದೆ. ಮಗುವಿನ ಮಾತೃಭಾಷೆಯಲ್ಲಿ ಶಿಕ್ಷಣ ಕಲಿಸಲು ಸಾಧ್ಯವಾಗದಿದ್ದಾಗ ಅದರ ಎರಡನೆ ಮಾತೃಭಾಷೆ ಎಂದು ಕರೆಯಲ್ಪಡುವ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಕಲಿಸಬೇಕು. ಇದರಿಂದ ಮಗುವಿಗೆ ಕಲಿಕೆ ಸರಳವಾಗುತ್ತದೆ ಹಾಗೂ ಭಾವನೆಗಳನ್ನು ಸುಲಭವಾಗಿ ಅಭಿವ್ಯಕ್ತಿಸುತ್ತದೆ. ಹೀಗಾಗಿ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡವೇ ಮಗುವಿನ ಶಿಕ್ಷಣಕ್ಕೆ ಉತ್ತಮವಾದ ಬೋಧನಾ ಮಾಧ್ಯಮ ಎಂಬುದು ಎಲ್ಲಾ ಶಿಕ್ಷಣ ತಜ್ಞರು ಮತ್ತು ಭಾಷಾವಿದ್ವಾಂಸರ ಅಭಿಪ್ರಾಯ. ಈ ಎರಡನ್ನು ಬಿಟ್ಟು ಬೇರೊಂದು ಭಾಷಾಮಾಧ್ಯಮ ಮೂಲಕ ಶಿಕ್ಷಣ ಕಲಿಸುವುದು ಮಗುವಿನ ಕಲಿಕೆ ಮತ್ತು ಬೌದ್ಧಿಕ ಬೆಳವಣಿಗೆಗೆ ಮಾರಕ ಎನ್ನಲಾಗಿದೆ.

ವ್ಯಾವಹಾರಿಕ ಉದ್ದೇಶದಿಂದ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ಸೇರಿಸುವುದರಿಂದ ಮುಂದೆ ಭಾರತದಲ್ಲಿ ಉದ್ಭವವಾಗಬಹುದಾದ ಭಾಷಾಸಮಸ್ಯೆ ಹಾಗೂ ಭಾರತದ ಜನಸಮುದಾಯಗಳ ಭಾಷೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಜೀವನ ವಿಧಾನಗಳ ಮೇಲೆ ಉಂಟುಮಾಡಬಹುದಾಗಿದ್ದ ವ್ಯತಿರಿಕ್ತ ಪರಿಣಾಮಗಳ ಬಗೆಗೆ ಅರಿವಿದ್ದ ಕೊಠಾರಿ ಆಯೋಗವು ೧೯೬೮ರಲ್ಲಿಯೇ ಈ ಭಾಷಾಮಾಧ್ಯಮದ ಸಮಸ್ಯೆಯನ್ನು ಬಗೆಹರಿಸಲು ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೆ ಎಲ್ಲಾ ಮಾದರಿಯ ಶಿಕ್ಷಣ ಮತ್ತು ಪರೀಕ್ಷೆಗಾಗಿ ಪ್ರಾದೇಶಿಕ ಅಥವಾ ಮಾತೃಭಾಷೆಯನ್ನು ಬಳಸಬೇಕೆಂದು ಸಲಹೆಯನ್ನು ನೀಡಿದೆ. ಅಲ್ಲದೆ ಇದಕ್ಕಿಂತಲೂ ಹಿಂದೆಯೇ ಇದ್ದ ಶಿಕ್ಷಣತಜ್ಞ ಆರ್.ಎ.ಜಹಗೀರ್‌ದಾರ್‌ರವರು ೧೯೨೯ರಲ್ಲಿಯೇ ದೇಶಭಾಷೆಗೆ ನೀಡಬೇಕಾದ ಸ್ಥಾನಮಾನವನ್ನು ಕುರಿತು "ದೇಶಭಾಷೆಗಳ ತಳಹದಿಯ ಮೇಲೆಯೇ ರಾಷ್ಟ್ರೀಯ ಶಿಕ್ಷಣದ ಕಟ್ಟಡವನ್ನು ಕಟ್ಟಿಸುವುದು ಶಕ್ಯವಿದೆ. ದೇಶಭಾಷೆಗಳಿಗೆ ಉತ್ತೇಜನ ಸಿಕ್ಕದಿದ್ದರೆ, ಮತ್ತು ಅವುಗಳ ಉಪಯೋಗ ಸಾರ್ವತ್ರಿಕ ವಾಗದಿದ್ದರೆ, ಸುಶಿಕ್ಷಿತರಲ್ಲಿಯೂ ಅಶಿಕ್ಷಿತರಲ್ಲಿಯೂ ಬಳಕೆ ಉಳಿಯುವುದಿಲ್ಲ. ತಮ್ಮ ವಿಚಾರಗಳನ್ನು ದೇಶಭಾಷೆಯಲ್ಲಿ ವ್ಯಕ್ತಪಡಿಸುವಷ್ಟು ದೇಶಭಾಷೆಯ ವ್ಯಾಸಂಗವು ಸುಶಿಕ್ಷಿತರಲ್ಲಿ ಇರದೇ ಇರುವುದರಿಂದ ಅವರ ಬುದ್ಧಿವಿಕಾಸದ ಉಪಯೋಗವು ಅಶಿಕ್ಷಿತರಿಗೆ ಎಷ್ಟರಮಟ್ಟಿಗೂ ಆಗುವುದಿಲ್ಲ. ಇಡೀ ಜನಾಂಗವು ಒಂದೇ ಭಾವನೆಯಿಂದ ಪ್ರೇರಿತವಾಗಬೇಕಾದರೂ, ಸಾಮಾಜಿಕ, ನೈತಿಕ, ಔದ್ಯೋಗಿಕ ಮತ್ತು ರಾಜಕೀಯ ದೃಷ್ಟಿಯಿಂದ ಮುಂದೆ ಹೆಜ್ಜೆ ಇಡಬೇಕಾದರು, ನವಜೀವನದಿಂದ ಸ್ಫುರಿತವಾಗಬೇಕಾದರೂ, ನಾವು ದೇಶಭಾಷೆಗೆ ನಮ್ಮ ವಿಶ್ವವಿದ್ಯಾಲಯದ ಅಭ್ಯಾಸಕ್ರಮದಲ್ಲಿ ಮುಖ್ಯಸ್ಥಾನವನ್ನು ಕೊಡಬೇಕು[೨]" ಎಂದಿದ್ದರು.

ಈ ಅಭಿಪ್ರಾಯಗಳನ್ನು ಗಮನಿಸಿದಾಗ ಭಾರತದಲ್ಲಿನ ಭಾಷಾಮಾಧ್ಯಮದ ಸಮಸ್ಯೆಯನ್ನು ಪರಿಹರಿಸಲು ಮತ್ತು ಮಗುವಿನಲ್ಲಿ ಸ್ವತಂತ್ರ ಆಲೋಚನಾಶಕ್ತಿ ಬೆಳೆಯುವಂತೆ ಮಾಡಲು ಮಗುವಿಗೆ ಮಗುವಿನ ಮಾತೃಭಾಷೆಯಲ್ಲಿ ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೆ ತಾಂತ್ರಿಕ ಶಿಕ್ಷಣ

ಒಳಗೊಂಡಂತೆ ಎಲ್ಲಾ ವಿವಿಧ ಶಿಕ್ಷಣವನ್ನು ಕಲಿಸುವಂತಹ ವ್ಯವಸ್ಥೆ ನಿರ್ಮಾಣ ಮಾಡುವ ಅಗತ್ಯ ಇದ್ದುದನ್ನು ಸ್ಪಷ್ಟಪಡಿಸುತ್ತವೆ. ಹಾಗೆಯೇ ಅಂತಹ ವ್ಯವಸ್ಥೆಯನ್ನು ನಿರ್ಮಾಣ ಮಾಡದಿದ್ದರೆ ಮುಂದೆ ಭಾರತದಲ್ಲಿ ಉದ್ಭವವಾಗುವ ಭಾಷಾಸಮಸ್ಯೆ ಮತ್ತು ಅವುಗಳ ಪರಿಣಾಮಗಳು ವಿವಿಧ ಕ್ಷೇತ್ರಗಳ ಮೇಲೆ ಬೀರಬಹುದಾದ ದುಷ್ಪರಿಣಾಮಗಳನ್ನು ಕುರಿತು ಸೂಕ್ಷ್ಮವಾಗಿ ಆಲೋಚನೆ ಮಾಡಿರುವುದು ಕಂಡುಬರುತ್ತದೆ. ಆದರೆ ಆ ಸಮಿತಿಗಳು ನೀಡಿರುವ ವರದಿ ಅಥವಾ ಮಾಡಿರುವ ಶಿಫಾರಸ್ಸಿನ ಪ್ರಕಾರ "ವಿದ್ಯಾರ್ಥಿಯ ಮಾತೃಭಾಷೆಯಲ್ಲಿ ಅತ್ಯುನ್ನತ ಹಂತದವರೆಗೂ ಶಿಕ್ಷಣವನ್ನು ಒದಗಿಸಲು ಮೂರು ನಿಬಂಧನೆಗಳು ಈಡೇರಬೇಕು. ಮೊದಲನೆಯದಾಗಿ, ನಮ್ಮ ವಿದ್ಯಾರ್ಥಿಗಳ ಮಾತೃಭಾಷೆಗಳಾಗಿರುವ ಭಾರತದ ವಿವಿಧ ದೇಶೀಯ ಭಾಷೆಗಳು, ಕಲೆ ಸಾಹಿತ್ಯ ಕ್ಷೇತ್ರಗಳಲ್ಲಿ ಮಾತ್ರವಲ್ಲದೆ ತತ್ವಶಾಸ್ತ್ರ, ವಿಜ್ಞಾನ, ತಾಂತ್ರಿಕಜ್ಞಾನ, ನ್ಯಾಯಶಾಸ್ತ್ರ ಮತ್ತಿತರ ಜ್ಞಾನದ ವಿವಿಧ ವಿಭಾಗಗಳ ಅತ್ಯಾಧುನಿಕ ಹಾಗೂ ಅತ್ಯಂತ ಜಟಿಲ ಚಿಂತನೆಗಳನ್ನೂ ವ್ಯಕ್ತಪಡಿಸುವಷ್ಟು ಸಂಪದ್ಭರಿತವಾಗಿರಬೇಕು. ಎರಡನೆಯದಾಗಿ, ವಿದ್ಯಾರ್ಥಿಯ ಮಾತೃಭಾಷೆಯಲ್ಲಿಯೇ ಅತ್ಯುನ್ನತ ಹಂತದವರೆಗೂ ಬೋಧಿಸಲು ಸಮರ್ಥರಾಧ ಸಾಕಷ್ಟು ಸಂಖ್ಯೆಯ ಅರ್ಹ ಶಿಕ್ಷಕರಿರಬೇಕು. ಮೂರನೆಯದಾಗಿ, ಅತ್ಯುನ್ನತ ಹಂತದವರೆಗೂ ಎಲ್ಲಾ ಜ್ಞಾನದ ವಿಭಾಗಗಳಲ್ಲೂ ಉತ್ಕೃಷ್ಟ ದರ್ಜೆಯ ಪುಸ್ತಕಗಳಿರಬೇಕು ಹಾಗೂ (ಸಂಸ್ಕೃತವನ್ನುಳಿದು) ಎಲ್ಲಾ ಹದಿಮೂರು ದೇಶೀಯ ಭಾಷೆಗಳಲ್ಲೂ ದೇಶದ ಉಚ್ಚ-ಸರ್ವೋಚ್ಚ ನ್ಯಾಯಾಲಯಗಳ ತೀರ್ಪುಗಳೆಲ್ಲದರ ಉತ್ಕೃಷ್ಟ ದರ್ಜೆಯ ಅನುವಾದಗಳಿರಬೇಕು ಒಣಹೆಮ್ಮೆಯಿಂದ ಇವೆಲ್ಲಾ ನಿಬಂಧನೆಗಳು ನಮ್ಮಿಂದ ನೆರವೇರಲ್ಪಟ್ಟಿವೆ ಎಂದು ನಾವು ಪ್ರತಿಪಾದಿಸಬಾರದು. ನಮ್ಮೆಲ್ಲಾ ಶುಭಾಕಾಂಕ್ಷೆಗಳಿದ್ದಾಗ್ಯೂ ಈ ಧ್ಯೇಯಗಳನ್ನು ನಾವು ಇನ್ನೂ ಸಾಧಿಸಲಾಗಿಲ್ಲ. ತತ್ಫಲವಾಗಿ ನಮ್ಮ ವಿಶ್ವವಿದ್ಯಾಲಯಗಳಲ್ಲಿ ಇಂಗ್ಲೀಷನ್ನು ಶಿಕ್ಷಣ ಮಾಧ್ಯಮವನ್ನಾಗಿ ನಾವು ಮುಂದುವರೆಸುತ್ತಿದ್ದೇವೆ.[೩]" ಎಂದು ಭಾರತ ಸ್ವಾತಂತ್ರ್ಯಾನಂತರ ಇಂಗ್ಲಿಶ್ ಭಾಷೆಯನ್ನು ಮುಂದುವರೆಸುತ್ತಿರುವುದಕ್ಕೆ ಕಾರಣಗಳನ್ನು ಕೊಡಲಾಗಿದೆ.

ಇದು ಕೇಂದ್ರ ಸರ್ಕಾರ ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿ ಭಾಷೆಯನ್ನು ದೇಶದ ಸಂಪರ್ಕಭಾಷೆನ್ನಾಗಿಸಲು ಹೊರಟಾಗ ಹುಟ್ಟಿಕೊಂಡ ಚಿಂತನೆಗಳಿವು. ಇಲ್ಲಿ ಹಿಂದಿ ಭಾಷೆಯನ್ನು ವಿರೋಧಿಸುವ ನೆಪದಲ್ಲಿ ಭಾರತೀಯ ಭಾಷೆಗಳು ಅಭಿವೃದ್ಧಿಯನ್ನು ಹೊಂದಿಲ್ಲ ಎಂಬ ಕಾರಣಕ್ಕಾಗಿ ಶಿಕ್ಷಣದಲ್ಲಿ ಇಂಗ್ಲಿಶ್ ಭಾಷಾಮಾಧ್ಯಮದ ಮುಂದುವರಿಕೆಯ ಮಾತುಗಳನ್ನಾಡಲಾಗಿದೆ. ಹೀಗೆ ಭಾರತೀಯ ಭಾಷೆಗಳು ತಾಂತ್ರಿಕ, ನ್ಯಾಯಿಕ, ವಿಜ್ಞಾನ, ತತ್ವಜ್ಞಾನ, ಅತ್ಯಾಧುನಿಕ ಇತ್ಯಾದಿ ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದಿಲ್ಲ ಎಂಬ ಕಾರಣವನ್ನೇ ಮುಂದಿಟ್ಟು ಇಂಗ್ಲಿಶ್ ಭಾಷಾಮಾಧ್ಯಮದ ಪರವಾಗಿ ಮಾತನಾಡುವುದು ಎಷ್ಟು ಸರಿ? ಶಿಕ್ಷಣದಲ್ಲಿ ಮಾತೃಭಾಷೆಗಳನ್ನು ಶಿಕ್ಷಣ ಮಾಧ್ಯಮವಾಗಿ ಬಳಸದೆ ಭಾರತೀಯ ಭಾಷೆಗಳನ್ನು ಅಭಿವೃದ್ಧಿ ಪಡಿಸಲು ಸಾಧ್ಯವೇ? ಮಾತೃಭಾಷಾ ಮಾಧ್ಯಮದಲ್ಲಿ ಶಿಕ್ಷಣ ಕಲಿಸದೆ ಮಾತೃಭಾಷಾಮಾಧ್ಯಮದಲ್ಲಿ ಬೋಧನೆ ಮಾಡುವ ಉತ್ಕೃಷ್ಟ ಶಿಕ್ಷಕರನ್ನು ತರಬೇತುಗೊಳಿಸಲು ಸಾಧ್ಯವೇ? ಉತ್ಕೃಷ್ಟ ಕೃತಿಗಳನ್ನು ರಚಿಸಲು ಸಾಧ್ಯವೇ? ಭಾರತೀಯರ ಮಾತೃಭಾಷೆಗಳನ್ನು

ಅಭಿವೃದ್ಧಿಪಡಿಸಲು ಸಾಧ್ಯವೇ? ಇಂಗ್ಲಿಶ್ ಶಿಕ್ಷಣವನ್ನು ಭಾರತದ ಎಲ್ಲಾ ಮಕ್ಕಳಿಗೂ ಕಲಿಸಲು ಸಾಧ್ಯವೇ? ಭಾರತದ ಎಲ್ಲಾ ಮಕ್ಕಳಿಗೂ ಇಂಗ್ಲಿಶ್‌ನಲ್ಲಿ ಕಲಿಸಲು ಪ್ರಾರಂಭಿಸಿದರೆ ಭಾಷಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ಆಡಳಿತಾತ್ಮಕವಾಗಿ, ವ್ಯಾವಹಾರಿಕವಾಗಿ, ಔದ್ಯೋಗಿಕವಾಗಿ ಉದ್ಭವಿಸುವ ಸಮಸ್ಯೆಗಳೇನು? ಇಂಗ್ಲಿಶ್ ಮಾಧ್ಯಮವನ್ನು ಮುಂದುವರೆಸುವುದರಿಂದ ಭಾರತೀಯ ಶಿಕ್ಷಣದಲ್ಲಿ ಅಸಮಾನತೆ ಉಂಟಾಗುವುದಿಲ್ಲವೇ? ಸಮಾನ ಶಿಕ್ಷಣ ಸಾಧ್ಯವಾಗುತ್ತದೆಯೇ? ಇಂಗ್ಲಿಶ್ ಭಾಷೆಯ ಪರಿಚಯವಿಲ್ಲದ ಭಾರತೀಯ ಮಕ್ಕಳು ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಸಮರ್ಥವಾಗಿ ಕಲಿಯಲು ಸಾಧ್ಯವೇ? ಮಕ್ಕಳಿಗೆ ಕಲಿಕೆಯ ಸಮಸ್ಯೆಗಳು ಎದುರಾಗುವುದಿಲ್ಲವೇ? ಉನ್ನತ ಹಂತದ ಶಿಕ್ಷಣದಲ್ಲಿ ಇಂಗ್ಲಿಶ್‌ನ್ನು ಬೋಧನಾ ಮಾಧ್ಯಮವಾಗಿ ಮುಂದುವರಿಸುತ್ತಿರುವುದರಿಂದ ಇದು ಪ್ರಾಥಮಿಕ ಶಿಕ್ಷಣದ ಮೇಲೆ ಉಂಟುಮಾಡಿರುವ ಪರಿಣಾಮಗಳೇನು? ಎಂಬಂತಹ ಪ್ರಶ್ನೆಗಳಿಗೆ ಉತ್ತರಗಳು ಇಲ್ಲ.

ಇವುಗಳಿಗೆ ಉತ್ತರಗಳನ್ನು ಕಂಡುಕೊಂಡು ಭಾರತೀಯ ಭಾಷೆಗಳನ್ನು ರಕ್ಷಿಸುವ ಮತ್ತು ಮಾತೃಭಾಷಾಮಾಧ್ಯಮದ ಶಿಕ್ಷಣವನ್ನು ಅಭಿವೃದ್ಧಿಪಡಿಸಬೇಕಾದ ಕೆಲಸಗಳನ್ನು ಸರ್ಕಾರಗಳು ಮಾಡಬೇಕಿತ್ತು. ಆದರೆ ಸರ್ಕಾರಗಳು ಇದುವರೆಗೆ ಹೇಳಿದ ಹಾಗೆ ಭಾರತದ ಎಲ್ಲಾ ಹಂತದ ಶಿಕ್ಷಣದಲ್ಲಿ ಭಾರತೀಯ ಭಾಷೆಗಳನ್ನು ಬಳಸಲು ಭಾರತೀಯ ಭಾಷೆಗಳು ಇಂಗ್ಲಿಶ್‌ನಷ್ಟು ಅಭಿವೃದ್ಧಿ ಹೊಂದಿ ಸಂಪದ್ಭರಿತವಾಗಿಲ್ಲ. ಹೀಗಾಗಿ ದೇಶದ ಉನ್ನತ, ತಾಂತ್ರಿಕ ಮತ್ತು ವೃತ್ತಿ ಶಿಕ್ಷಣದಲ್ಲಿ ಇಂಗ್ಲಿಶ್‌ನ್ನು ಮುಂದುವರಿಸುವುದು ಉತ್ತಮ ಎಂಬ ಅಭಿಪ್ರಾಯ ತಾಳಿವೆ. ಹಾಗೆಯೇ ಇಂಗ್ಲಿಶ್‌ನ್ನು ನಿಯಂತ್ರಿಸುವಷ್ಟು ಅಧಿಕಾರವನ್ನು ರಾಜ್ಯಸರ್ಕಾರಗಳಿಗೆ ನೀಡಿಲ್ಲ. ಹೀಗಾಗಿ ರಾಜ್ಯಸರ್ಕಾರಗಳಿಗೆ ದೇಶದ ಉನ್ನತ, ವೃತ್ತಿಶಿಕ್ಷಣದಲ್ಲಿ ಬೋಧನಾಮಾಧ್ಯಮವಾಗಿ ಬಳಸಬೇಕಾದ ಭಾಷೆಗೆ ಸಂಬಂಧಿಸಿದಂತೆ ಒಂದು ಸ್ಪಷ್ಟ ಆದೇಶ ಹೊರಡಿಸಲು ಸಾಧ್ಯವಾಗಿಲ್ಲ. ಇದರಿಂದಾಗಿ ದೇಶದ ಉನ್ನತ, ತಾಂತ್ರಿಕ ಮತ್ತು ವೃತ್ತಿಶಿಕ್ಷಣದಲ್ಲಿ ಇಂಗ್ಲಿಶ್‌ನ್ನು ಬೋಧನಾ ಮಾಧ್ಯಮವಾಗಿ ಬಳಸಲಾಗುತ್ತಿದೆ. ಹೀಗೆ ದೇಶದ ಶಿಕ್ಷಣದಲ್ಲಿ ಇಂಗ್ಲಿಶ್‌ನ್ನು ಮುಂದುವರಿಸುವುದರಿಂದ ಭಾರತದ ಭಾಷಿಕ ಸಮುದಾಯಗಳಿಗೆ ಮುಂದೆ ಎದುರಾಗುವ ಭಾಷಾಸಮಸ್ಯೆಗಳ ಅರಿವಿದ್ದ "ಕೊಠಾರಿ ಆಯೋಗವು ಕೆಳಕಂಡ ಶಿಫಾರಸುಗಳನ್ನು ಮಾಡಿದೆ.

೧. "ಪ್ರಾದೇಶಿಕ ಭಾಷೆಗಳ ಮೂಲಕ ಶಿಕ್ಷಣದ ಅನುಕೂಲದ ಬಗ್ಗೆ ನಮಗೆ ಮನವರಿಕೆಯ ಆಗಿದೆ. ಪ್ರಾದೇಶಿಕ ಭಾಷೆಗಳ ಬೆಳವಣಿಗೆ ದೇಶದ ಸಾಮಾನ್ಯ ಬೆಳವಣಿಗೆಗೆ ಬಲು ಮುಖ್ಯ ಹಾಗೂ ಶಿಕ್ಷಣದಲ್ಲಿ ಗುಣಮಟ್ಟ ಕಾಪಾಡಿಕೊಳ್ಳಲು ಮುಖ್ಯವಾದ ಹೆಜ್ಜೆ. ಇಂಗ್ಲಿಷನ್ನು ಪೂರ್ತಿಯಾಗಿ ತೆಗೆದುಬಿಡಿ ಎಂಬುದು ಇದರ ಅರ್ಥವಲ್ಲ....."

೨. "ಸಮಸ್ಯೆಯ ಪರಿಹಾರದ ದೃಷ್ಟಿಯಿಂದ ವಿಶ್ವವಿದ್ಯಾಲಯ ಧನಸಹಾಯ ಆಯೋಗ ಮತ್ತು ವಿಶ್ವವಿದ್ಯಾನಿಲಯಗಳು ಸೂಕ್ತವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಬದಲಾವಣೆ ಸಾಧ್ಯವಾದಷ್ಟು ಬೇಗನೆ, ಅಂದರೆ ಹತ್ತು ವರ್ಷಗಳ ಒಳಗೆ ಆಗಬೇಕು. ಇಲ್ಲವಾದರೆ ದಿನಗಳೆದಂತೆ ಸಮಸ್ಯೆ ಮತ್ತಷ್ಟು ಜಟಿಲವಾಗುತ್ತದೆ. ಭಾರತೀಯ ಭಾಷೆಗಳಲ್ಲಿ ಅಗತ್ಯವಾದ ಸಾಹಿತ್ಯವನ್ನು ಸಿದ್ಧಪಡಿಸಲು ಬಲು ದೊಡ್ಡಕಾರ್ಯಕ್ರಮವನ್ನು ರೂಪಿಸಬೇಕು. ಶಿಕ್ಷಕರ ತರಬೇತಿಗೂ ಸೂಕ್ತ ಕ್ರಮ ಕೈಗೊಳ್ಳಬೇಕು."[೯]"

ಎಂಬ ಉಪಯುಕ್ತ ಸಲಹೆಗಳನ್ನು ನೀಡಿದೆ. ಆದರೆ ಭಾರತ ಸ್ವತಂತ್ರಗೊಂಡು ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರ ಇಲ್ಲಿ ಆಡಳಿತ ನಡೆಸಿರುವ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಅಧಿಕಾರ ಮುಖ್ಯವಾಗಿದೆಯೇ ಹೊರತು ಇಲ್ಲಿನ ಭಾಷಿಕ ಸಮುದಾಯಗಳ ಹಿತ, ಭಾಷೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ನಾಡು, ಜನರ ಜೀವನಕ್ರಮಗಳಲ್ಲ. ಹೀಗಾಗಿ ಭಾರತದಲ್ಲಿನ ಭಾಷೆ ಮತ್ತು ಭಾಷಾಮಾಧ್ಯಮದ ಸಮಸ್ಯೆಯ ಪರಿಹಾರಕ್ಕಾಗಿ ಸಮಿತಿಗಳು ಮೇಲೆ ಹೇಳಿದ ಹಾಗೆ ಉತ್ತಮ ಸಲಹೆಗಳನ್ನು ನೀಡಿದ್ದರೂ ಸರ್ಕಾರಗಳು ನಿರ್ಲಕ್ಷ್ಯಮಾಡಿವೆ. ಇದರಿಂದಾಗಿ ಭಾರತದಲ್ಲಿ ಸ್ವತಂತ್ರಗೊಂಡ ಮತ್ತು ಭಾಷಾವಾರು ರಾಜ್ಯಗಳು ರಚನೆಯಾದ ನಂತರ ದೇಶದಲ್ಲಿ ಭಾಷಾಸಮಸ್ಯೆಗಳು ಜಟಿಲ ಸ್ವರೂಪ ಪಡೆದುಕೊಂಡಿವೆ. ಇದಕ್ಕೆ ಜಾಗತೀಕರಣದ, ಖಾಸಗೀಕರಣದ ಮತ್ತು ಉದಾರೀಕರಣ ಎಂಬ ತ್ರಿಕರಣಗಳು ಮತ್ತಷ್ಟು ಬೆಂಬಲ ನೀಡಿವೆ.

ಹೇಗೆಂದರೆ ರಾಜ್ಯದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಭಾಷಾಮಾಧ್ಯಮದ ವಿಚಾರವಾಗಿ ಜಾರಿಗೆ ತಂದಿರುವ ಭಾಷಾನೀತಿಗಳು ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ಕಲಿಸಲು ಬಳಸಬೇಕಾದ ಭಾಷೆಯ ಬಗೆಗೆ ನಿಯಮಗಳನ್ನು ರೂಪಿಸಿವೆ. ಆದರೆ ಪ್ರಾಥಮಿಕ ಶಿಕ್ಷಣದ ನಂತರದ ವಿದ್ಯಾಭ್ಯಾಸದಲ್ಲಿ ವಿದ್ಯಾರ್ಥಿಗಳಿಗೆ ಕಲಿಸಲು ಬಳಸಬೇಕಾದ ಭಾಷಾಮಾಧ್ಯಮ ವಿಚಾರವಾಗಿ ಸ್ಪಷ್ಟ ನಿಯಮಗಳನ್ನು ರೂಪಿಸಿಲ್ಲ. ಹೀಗಾಗಿ ಕರ್ನಾಟಕದಲ್ಲಿ ಪ್ರೌಢಶಿಕ್ಷಣದ ನಂತರದ ವಿದ್ಯಾಭ್ಯಾಸ ಅಂದರೆ ಪದವಿಪೂರ್ವ, ಪದವಿ ಕಾಲೇಜುಗಳಲ್ಲಿ ಕಲಾವಿಭಾಗದ ವಿಷಯಗಳನ್ನು ಹೊರತುಪಡಿಸಿದರೆ ಉಳಿದೆಲ್ಲಾ ವಿಭಾಗಗಳ ವಿಷಯಗಳನ್ನು ಇಂಗ್ಲಿಶ್‌ನಲ್ಲಿಯೇ ಬೋಧನೆ ಮಾಡುವುದನ್ನು ಮುಂದುವರಿಸಲಾಗಿದೆ. ಇದರಿಂದಾಗಿ ಪೋಷಕರು ತಮ್ಮ ಮಕ್ಕಳಿಗೆ ಸರ್ಕಾರದ ಭಾಷಾನೀತಿಯ ಪ್ರಕಾರ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆಯಲ್ಲಿ ಕಲಿಸಿದರೆ ಉನ್ನತ ಮತ್ತು ವೃತ್ತಿಶಿಕ್ಷಣದಲ್ಲಿ ಭಾಷಾಸಮಸ್ಯೆ ಎದುರಿಸುತ್ತಾರೆ. ಇದೇ ಕಾರಣಕ್ಕೆ ಕಲಿಕೆಯಲ್ಲಿ ಹಿಂದೆ ಉಳಿದುಕೊಂಡು ಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತರಾಗುತ್ತಾರೆ. ಇದರಿಂದ ನಮ್ಮ ಮಕ್ಕಳ ಬದುಕು ಅತಂತ್ರವಾಗುತ್ತದೆ. ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ನಮ್ಮ ಮಕ್ಕಳ ಭವಿಷ್ಯ ಉಜ್ವಲವಾಗಿರಬೇಕಾದರೆ ಅವರಿಗೆ ಉನ್ನತ ಮತ್ತು ವೃತ್ತಿಶಿಕ್ಷಣ ಬೇಕು. ಇದಕ್ಕೆ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷಾ ಮಾಧ್ಯಮದಲ್ಲಿ ಕಲಿಸಿದರೆ ಸಮಸ್ಯೆಯಾಗುತ್ತದೆ. ನಮ್ಮ ಮಕ್ಕಳಿಗೆ ಪ್ರಾಥಮಿಕ ಹಂತದಿಂದಲೇ ಇಂಗ್ಲಿಶ್‌ನ ಮೂಲಕ ಶಿಕ್ಷಣ ಕಲಿಸಿದರೆ ಮುಂದೆ ಭಾಷಾಸಮಸ್ಯೆ ಎದುರಿಸುವುದಿಲ್ಲ. ಇದು ಅವರ ಭವಿಷ್ಯದ ಕಲಿಕೆ ಮತ್ತು ವಿಪುಲ ಉದ್ಯೋಗದ ಅವಕಾಶಗಳಿಗೆ ಅನುಕೂಲ ಎಂಬ ಕಾರಣಕ್ಕಾಗಿ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲಿಸಲು ಆಸಕ್ತರಾಗಿದ್ದಾರೆ.

ಇದಕ್ಕೆ ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಪ್ರಾಥಮಿಕ ಶಿಕ್ಷಣದಲ್ಲಿ ಮಗುವಿನ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡ ಮಾತ್ರ ಕಡ್ಡಾಯ ಕಲಿಕಾಮಾಧ್ಯಮದ ಭಾಷೆಯಾಗಿರುತ್ತದೆ ಎಂಬ ಭಾಷಾನೀತಿ ಅಡ್ಡಿಯಾಗಿದೆ. ಏಕೆಂದರೆ ಸರ್ಕಾರದ ಈ ಭಾಷಾನೀತಿಯಿಂದ ಪೋಷಕರು ತಮ್ಮ ಮಕ್ಕಳಿಗೆ ತಮ್ಮ ಇಚ್ಚೆಗೆ ಬಂದ ಭಾಷಾಮಾಧ್ಯಮದ ಮೂಲಕ ಶಿಕ್ಷಣ ಕೊಡಿಸುವ ಸ್ವಾತಂತ್ರ್ಯ

ಕಳೆದುಕೊಂಡಿದ್ದಾರೆ. ಇದರಿಂದಾಗಿ ಪೋಷಕರು ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು ಸರ್ಕಾರದ ಭಾಷಾನೀತಿಯ ವಿರುದ್ಧವಾಗಿ ನಡೆಸಿರುವ ಹೋರಾಟ, ಇದರ ಹಿಂದಿನ ಉದ್ದೇಶ ಮತ್ತು ಪರಿಣಾಮಗಳನ್ನು ಕುರಿತು 'ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು' ಎಂಬ ಈ ಅಧ್ಯಾಯದ ಮುಂದಿನ ಭಾಗದಲ್ಲಿ ವಿವರವಾಗಿ ಚರ್ಚಿಸಲಾಗುತ್ತದೆ. ಹೀಗಾಗಿ ಇಲ್ಲಿ ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳ ಕುರಿತಾದ ವಿಸ್ತೃತವಾದ .ಚರ್ಚೆ ಇಲ್ಲ. ಈ ಭಾಗ ಭಾಷಾಮಾಧ್ಯಮದ ಪರ ಮತ್ತು ವಿರೋಧದ ಚರ್ಚೆಯಾದರೂ ಇಲ್ಲಿ ಮಾತೃಭಾಷಾ ಮಾಧ್ಯಮದ ಕಲಿಕೆ, ಅದರ ಹಿಂದಿರುವ ಉದ್ದೇಶ ಮತ್ತು ಮಾತೃಭಾಷಾಕಲಿಕೆಗೆ ಹಾಗೂ ಮಾತೃಭಾಷಾಮಾಧ್ಯಮದಲ್ಲಿ ಕಲಿಯುತ್ತಿರುವುದರಿಂದ ಉದ್ಭವಿಸಿರುವ ಸಮಸ್ಯೆಗಳನ್ನು ಮಾತ್ರ ಪ್ರಧಾನವಾಗಿಸಿಕೊಳ್ಳಲಾಗಿದೆ.

ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಕರ್ನಾಟಕ ಸರ್ಕಾರ ಭಾಷಾಮಾಧ್ಯಮದ ಕಲಿಕೆ ವಿಚಾರವಾಗಿ ಜಾರಿಗೆ ತಂದಿರುವ ಭಾಷಾನೀತಿಯಲ್ಲಿ ಮಗುವಿನ ಪ್ರಾಥಮಿಕ ಹಂತದ ಕಲಿಕೆ ಮಗುವಿನ ಮಾತೃಭಾಷೆ ಇಲ್ಲವೆ ಕನ್ನಡ ಮಾತ್ರ ಕಡ್ಡಾಯ ಎಂದು ಹೇಳಿದೆ. ಇಲ್ಲಿ ಈ ಇಲ್ಲವೆ ಎನ್ನುವುದು ಮಾತೃಭಾಷೆಯಲ್ಲಿ ಶಿಕ್ಷಣ ಕಲಿಸಲು ಸಾಧ್ಯವಾಗದಿದ್ದಾಗ ಎಂದು ಅರ್ಥ. ಸಾಧ್ಯವಾಗದಿದ್ದಾಗ ಎಂದರೆ ಮಗುವಿನ ಮಾತೃಭಾಷೆ ಸ್ವತಂತ್ರ ಲಿಪಿ ಒಳಗೊಳ್ಳದೇ ಇರುವುದು, ಬೋಧನಾ ಮಾಧ್ಯಮವಾಗಿ ಬಳಕೆಗೊಳ್ಳುವ ಸಾಮರ್ಥ್ಯ ಪಡೆಯದಿರುವುದು, ತರಗತಿಗಳಲ್ಲಿ ಒಂದು ನಿರ್ದಿಷ್ಟ ಸಂಖ್ಯೆಯ ವಿದ್ಯಾರ್ಥಿಗಳು ಇಲ್ಲದೆ ಇರುವುದು ಸೇರಿರುತ್ತದೆ. ಅಂದರೆ ತರಗತಿಗಳಲ್ಲಿ ಒಂದು ನಿರ್ದಿಷ್ಟ ಸಂಖ್ಯೆಯ ವಿದ್ಯಾರ್ಥಿಗಳು ಇಲ್ಲದಿದ್ದಾಗ ವಿದ್ಯಾರ್ಥಿಗಳ ಮಾತೃಭಾಷೆಯಲ್ಲಿ ಶಿಕ್ಷಣ ಕಲಿಸುವುದು ಸರ್ಕಾರಗಳಿಗೆ, ಶಿಕ್ಷಣ ಸಂಸ್ಥೆಗಳಿಗೆ ಆರ್ಥಿಕವಾಗಿ, ಆಡಳಿತಾತ್ಮಕವಾಗಿ ತುಂಬಾ ಹೊರೆಯಾಗುತ್ತದೆ. ಜೊತೆಗೆ ಒಂದೇ ತರಗತಿಯಲ್ಲಿ ವಿವಿಧ ಭಾಷೆಗಳಿಗೆ ಸೇರಿದ ಮಕ್ಕಳು ಕಲಿಯುತ್ತಿದ್ದಾಗ ಪ್ರತಿಯೊಬ್ಬರಿಗೂ ಅವರ ಮಾತೃಭಾಷಾಮಾಧ್ಯಮದಲ್ಲಿ ಕಲಿಸುವುದು ಅಥವಾ ಭಾಷಾಮಾಧ್ಯಮದಲ್ಲಿ ಕಲಿಯುವ ವಿದ್ಯಾರ್ಥಿಗಳನ್ನು ಆಧರಿಸಿ ತರಗತಿಗಳನ್ನು ವಿಂಗಡಿಸುವುದು ಶಾಲೆ/ಕಾಲೇಜುಗಳಿಗೆ ಕಷ್ಟದ ಕೆಲಸ. ಇದು ಭಾರತದ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳನ್ನು ಗಮನಿಸಿದಾಗ ಅಸಾಧ್ಯವೂ ಹೌದು. ಹೀಗಾಗಿ ಕರ್ನಾಟಕ ಸರ್ಕಾರದ ತನ್ನ ಭಾಷಾನೀತಿಯಲ್ಲಿ ಈ 'ಇಲ್ಲವೆ' ಎಂಬ ಪದ ಸೇರಿಸಲಾಗಿದೆ.

ಇದರ ಉದ್ದೇಶ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಶಿಕ್ಷಣ ಕಲಿಸಬಾರದು ಎಂದಲ್ಲ. ಬದಲಾಗಿ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಷೆಯಲ್ಲಿ ಶಿಕ್ಷಣ ಕಲಿಸಲು ಪ್ರಯತ್ನಿಸಿದರೆ ಅದರಿಂದ ಉದ್ಭವವಾಗಬಹುದಾದ ಆಡಳಿತಾತ್ಮಕ, ಶೈಕ್ಷಣಿಕ ಸಮಸ್ಯೆಗಳು ಮತ್ತು ಆರ್ಥಿಕ ಹೊರೆಯನ್ನು ತಗ್ಗಿಸುವುದಾಗಿದೆ. ಇಲ್ಲಿ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷೆಯ ಬದಲಿಗೆ ಕನ್ನಡವನ್ನು ಕಡ್ಡಾಯಗೊಳಿಸಿರುವುದು ಭಾಷಾಅಲ್ಪಸಂಖ್ಯಾತರ ಮಕ್ಕಳು ಶಾಲೆಗೆ ಸೇರುವ ಪೂರ್ವದಲ್ಲಿಯೇ ತಾನು ವಾಸಿಸುವ ಪ್ರದೇಶ ಜನರ ಜೊತೆ ಬೆರೆತು ಕನ್ನಡವನ್ನು ಮಾತೃಭಾಷೆಯಾಗುಳ್ಳ ಮಕ್ಕಳ ಹಾಗೆ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಭಾಷೆಯ ಎರಡು

ಕೌಶಲಗಳಾದ ಗ್ರಹಿಸುವುದು ಮತ್ತು ಮಾತನಾಡುವುದನ್ನು ಕಲಿತಿರುತ್ತಾರೆ. ಇದರಿಂದ ಮಕ್ಕಳು ಶಾಲೆಗೆ ಸೇರಿದಾಗ ಭಾಷಾಸಮಸ್ಯೆಗೆ ಒಳಗಾಗುವುದಿಲ್ಲ. ಹಾಗೆಯೇ ತನ್ನ ಭಾವನೆ, ಅಭಿಪ್ರಾಯ, ಅನಿಸಿಕೆಗಳನ್ನು ಯಾವ ಭಯ, ಆತಂಕ, ಅಳುಕುಗಳು ಇಲ್ಲದೆ ಸ್ವತಂತ್ರವಾಗಿ ಅಭಿವ್ಯಕ್ತಿಸುತ್ತವೆ. ಮಗುವಿಗೆ ಪರಿಚಯವಿಲ್ಲದ ಭಾಷೆಯಲ್ಲಿ ಶಿಕ್ಷಣ ಕಲಿಸಲು ಪ್ರಯತ್ನಿಸಿದರೆ ಶಾಲೆಗಳಲ್ಲಿ ಏನಾಗುತ್ತಿದೆ ಎಂಬುದರ ಅರಿವೇ ಇಲ್ಲದೆ ಕಲಿಕೆಯಿಂದ ವಿಮುಖವಾಗುತ್ತದೆ. ಇಂತಹ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಕಲಿಸಿದರೆ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಶಿಕ್ಷಣ ಹೊರೆಯೆನಿಸುವುದಿಲ್ಲ. ಜೊತೆಗೆ ಇದು ಪ್ರಾದೇಶಿಕ ಭಾಷೆಯ ಹಿತ ಕಾಪಾಡುತ್ತದೆ ಎಂಬ ಕಾರಣಕ್ಕಾಗಿ ಕರ್ನಾಟಕ ಸರ್ಕಾರ ಮಗುವಿನ ಪ್ರಾಥಮಿಕ ಶಿಕ್ಷಣ ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಮಾತ್ರ ಇರುತ್ತದೆ ಎಂದು ಭಾಷಾನೀತಿಯನ್ನು ಜಾರಿಗೆ ತಂದಿದೆ. ಇದು ವಾಸ್ತವತೆ ಮತ್ತು ವೈಜ್ಞಾನಿಕತೆಯಿಂದ ಕೂಡಿದೆ. ಸಾಂವಿಧಾನಿಕವೂ ಆಗಿದೆ. ಇದನ್ನು ವಿರೋಧಿಸುವುದರಲ್ಲಿ ಯಾವ ಅರ್ಥವೂ ಇಲ್ಲ.

ಆದರೆ ಮಗುವಿಗೆ ಮಗುವಿನ ಮಾತೃಭಾಷೆಯಲ್ಲಿ ಶಿಕ್ಷಣ ಕಲಿಸಲು ಸಾಧ್ಯವಿದ್ದಾಗಲೂ ಪ್ರಾದೇಶಿಕ ಭಾಷೆಯನ್ನು ಅಭಿಮಾನದ ನೆಲೆಯಲ್ಲಿ ನೋಡಿ, "ಅವರ ತಾಯಿ ನುಡಿ ಮನೆಯೊಳಗೆ ಮೂರ್‍ನಾಲ್ಕು ಮಂದಿಗೆ ಮಾತ್ರವೇ ಸೀಮಿತವಾಗಿರುತ್ತದೆ. ಮನೆಯ ಹೊಸ್ತಿಲಿಂದಾಚೆಗೆ ಅವರು ಕಾಲಿಡುತ್ತಿದ್ದಂತೆ ತಾಯಿ ನುಡಿ ಮರೆಸುವಷ್ಟರ ಮಟ್ಟಿಗೆ ದೇಶ ಭಾಷೆ ವಿಜೃಂಭಿಸುತ್ತದೆ. ಮನೆಯಲ್ಲಿಯೂ ಅವರ ದೇಶಭಾಷೆಯನ್ನು ಬಳಸುವ ಸಂಭವ ಉಂಟು[೫]" ಹೀಗಾಗಿ "ತಾನು ಹೊಲಸೆ ಹೋದ, ನೆಲೆ ನಿಂತ ದೇಶವೇ ತನ್ನದಾಗಬೇಕಾದದ್ದು, ತಾಯಿನಾಡಾಗಬೇಕಾದದ್ದು, ಅಲ್ಲಿಯ ಭಾಷೆ ಅಥವಾ ಸ್ವಭಾಷೆ ಮಾತೃಭಾಷೆಯಾಗಬೇಕಾದದ್ದು ಸಹಜ ನ್ಯಾಯ, ಅದೇ ವಿಶ್ವ ಸತ್ಯ. ಜೀವನಾರ್ಥಿಯಾಗಿ ಬಂದವರಿಗೆ ನೆಲೆ, ನೀರು, ಗಾಳಿಗಳನ್ನು ನೀಡಿದ, ಹಸಿವು ನೀಗಿದ, ಬಾಯಾರಿಕೆಯನ್ನು ಹರಿಸಿದ ದೇಶವನ್ನು ಕಾಮನೆಗಳನ್ನು ಪೂರೈಸಿದ ಭಾಷೆಯನ್ನು ಮರೆಯುವುದು ಸಾಧುವಲ್ಲ. ತಾನು ನಿಂತ ನೆಲವೇ ಮಾತೃಭೂಮಿಯಾಗುವ ಪಕ್ಷಕ್ಕೆ, ಅಲ್ಲಿಯ ಭಾಷೆಯೇ ಮಾತೃಭಾಷೆಯಾಗಬೇಕು[೬]". "ಅಲ್ಪಸಂಖ್ಯಾತರ ಭಾಷೆಗಳ ಬೆಳವಣಿಗೆಗೆ ಯುಕ್ತಾವಕಾಶ ಕಲ್ಪಿಸಬಹುದಾದರೂ, ಬಹುಜನರ ಭಾಷೆ ಎಂದೇ ಆಯಾಯಾ ಪ್ರದೇಶಗಳ ಜನ ಒಪ್ಪಲೇಬೇಕು. ಬಹುಜನರ ಭಾಷೆಯಲ್ಲಿ ಆಡಳಿತ ನಡೆಸಬೇಕಾದ್ದು ಪ್ರಜಾಪ್ರಭುತ್ವದ ತತ್ವಗಳಲ್ಲೊಂದು. ಆಡಳಿತ ಪಾರದರ್ಶಕವಾಗಬೇಕಾದರೆ, ಗುರಿ ತಲುಪಬೇಕಾದರೆ, ಪರಿಣಾಮಕಾರಿಯಾಗಬೇಕಾದರೆ, ಎಲ್ಲರಿಗೂ ತಿಳಿಯುವ ಬಹುಜನರ ಭಾಷೆಯಲ್ಲಿ ಸರ್ಕಾರ ಆಡಳಿತ ನಡೆಸಬೇಕು. ಅದಾಗಲಿಲ್ಲ ಪ್ರಜೆಗಳಿಗೆ ಪ್ರಜಾಪ್ರಭುತ್ವಕ್ಕೆ ದ್ರೋಹವೆಸಗುತ್ತಿದೆ ಎಂದೇ ಹೇಳಬೇಕು. ಅಂದ ಮೇಲೆ ದೇಶಬಾಷೆಯೇ ಆಡಳಿತ ಮಾಧ್ಯಮವಾಗಬೇಕೆಂಬ ವಿಷಯದಲ್ಲಿ ಲವಲೇಶವೂ ಸಂದೇಹವಿಲ್ಲ. ಯಾವುದು ಆಡಳಿತ ಮಾಧ್ಯಮವೋ ಅದೇ ಶಿಕ್ಷಣ ಮಾಧ್ಯಮವಾಗಬೇಕೆಂಬುದು ಸಹಜವಾಗಿ, ತಾರ್ಕಿಕವಾಗಿ, ವೈಜ್ಞಾನಿಕವಾಗಿ ಸಂಲಬ್ಧವಾಗುವ ನಿರ್ಣಯ[೭]" ಎಂದು ದೇ.ಜವರೇಗೌಡರಂತಹ ಹಿರಿಯ ಚಿಂತಕರು ರಾಜ್ಯಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು ಎಂದು ಹೇಳುತ್ತಾರೆ.

ಇವರ ಚಿಂತನೆಗಳ ಹಿಂದಿರುವ ಆಶಯಗಳನ್ನು ಗಮನಿಸಿದಾಗ ಕನ್ನಡದ ಮಕ್ಕಳು ತಮ್ಮ ಮಾತೃಭಾಷೆಯನ್ನು ಭಾಷಾಮಾಧ್ಯಮವಾಗಿಯು, ಕರ್ನಾಟಕದಲ್ಲಿರುವ ಭಾಷಾಅಲ್ಪಸಂಖ್ಯಾತ ಸಮುದಾಯಗಳ ಮಕ್ಕಳು ತಮ್ಮ ಮಾತೃಭಾಷೆಗೆ ಬದಲಾಗಿ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿಯೂ ಕಲಿಯಬೇಕು ಎಂಬ ತಿರುಳು ಇರುವುದು ವ್ಯಕ್ತವಾಗುತ್ತದೆ. ಇದಕ್ಕೆ ಈಗಾಗಲೇ ಚರ್ಚಿಸಿರುವ ಹಾಗೆ ಕರ್ನಾಟಕದ ಬಹುಭಾಷಿಕ ಪರಿಸರದಲ್ಲಿ ಇಲ್ಲಿನ ಎಲ್ಲಾ ಮಕ್ಕಳಿಗೆ ಅವರ ಮಾತೃಭಾಷಾ ಮಾಧ್ಯಮದಲ್ಲಿ ಶಿಕ್ಷಣ ಕಲಿಸಲು ಸಾಧ್ಯವಿಲ್ಲ. ಹೀಗೆ ಕಲಿಸಬೇಕು ಎನ್ನುವುದೇ ಅತಾರ್ಕಿಕವಾದು. ಅದು ಸಾಧ್ಯವಾಗುವ ಕೆಲಸವೂ ಅಲ್ಲ. ಹೀಗಾಗಿ ಆಯಾ ಪ್ರದೇಶಗಳ ಪ್ರಾದೇಶಿಕ ಭಾಷೆಯೇ ಮಗುವಿನ ಶಿಕ್ಷಣ ಮಾಧ್ಯಮವಾಗಬೇಕು ಎನ್ನುವ ಸಮರ್ಥನೆಗಳು ಇವೆ. ಆದರೆ ಹೀಗೆ ಪ್ರಾದೇಶಿಕ ಭಾಷೆಗಳನ್ನು ಅಂದರೆ ರಾಜ್ಯಭಾಷೆಗಳನ್ನು ಮಾತ್ರ ಶಿಕ್ಷಣ ಮಾಧ್ಯಮವಾಗಿ ಬಳಸಿದರೆ ದೇಶದಲ್ಲಿನ ರಾಜ್ಯಗಳಲ್ಲಿ ಅಧಿಕೃತ ಆಡಳಿತ ಭಾಷೆಯೆಂದು ಘೋಷಣೆಯಾಗಿರುವ ಬೆರಳೆಣಿಕೆಯಷ್ಟು ಭಾಷೆಗಳು ಮಾತ್ರ ಶಿಕ್ಷಣಮಾಧ್ಯಮವಾಗಿ ಬಳಕೆಯಾಗುತ್ತವೆ. ಉಳಿದ ಭಾಷೆಗಳು ಶಿಕ್ಷಣಮಾಧ್ಯಮದ ಭಾಷೆಯಾಗುವುದಿಲ್ಲ. ಹೀಗಾದರೆ ರಾಜ್ಯಗಳಲ್ಲಿ ಬಳಕೆಯಲ್ಲಿರುವ ಇತರ ಭಾಷೆಗಳ, ಭಾಷಿಕರ ಸ್ಥಿತಿ, ಬದುಕು ಏನು? ಎಂಬುದರ ಬಗೆಗೆ ಆಳವಾದ ಚಿಂತನೆಗಳು ನಡೆಯಬೇಕಾಗುತ್ತದೆ.

ಏಕೆಂದರೆ ಭಾರತ ಸ್ವತಂತ್ರಗೊಂಡ ನಂತರ ದೇಶದಲ್ಲಿ ಭಾಷಾವಾರು ರಾಜ್ಯಗಳ ವಿಂಗಡಣೆ ಆಗಿದ್ದರೂ ಅವುಗಳು ಸಮರ್ಪಕವಾಗಿ ವಿಂಗಡಣೆ ಆಗಿಲ್ಲ. ಅದರಲ್ಲೂ ಕನ್ನಡದ ಹೆಚ್ಚಿನ ಪ್ರದೇಶಗಳು ಕರ್ನಾಟಕದ ನೆರೆ ರಾಜ್ಯಗಳಾದ ತಮಿಳುನಾಡು, ಆಂಧ್ರಪ್ರದೇಶ, ಕೇರಳ, ಮಹಾರಾಷ್ಟ್ರ, ಗೋವಾ ರಾಜ್ಯಗಳ ಜೊತೆಯಲ್ಲಿ ವಿಲೀನವಾಗಿರುವುದು ಎಲ್ಲರಿಗೂ ಗೊತ್ತಿರುವ ವಿಚಾರವೇ. ಅವುಗಳು ಕರ್ನಾಟಕಕ್ಕೆ ಸೇರಬೇಕು ಎಂದು ಕನ್ನಡ ಭಾಷಿಕರು ಮತ್ತು ಕರ್ನಾಟಕದ ಕೆಲಭಾಗಗಳು ಮಹಾರಾಷ್ಟ್ರ, ಆಂಧ್ರಪ್ರದೇಶ ತಮಿಳುನಾಡು, ಕೇರಳ ರಾಜ್ಯಗಳಿಗೆ ಸೇರಬೇಕು ಎಂದು ಆಯಾ ರಾಜ್ಯಗಳ ಜನತೆ ಮತ್ತೆ ಮತ್ತೆ ವಿವಾದಗಳನ್ನು ಹುಟ್ಟುಹಾಕುತ್ತಿರುವುದು ಈಗಲೂ ಮುಂದುವರೆದಿದೆ. ಹೀಗೆ ದೇಶದಲ್ಲಿ ಭಾಷಾವಾರು ರಾಜ್ಯಗಳ ವಿಂಗಡಣೆಯೇ ಸಮರ್ಪಕವಾಗಿ ಆಗದೇ ಇರುವಾಗ ಆಯಾ ರಾಜ್ಯಗಳ ಅಧಿಕೃತ ಭಾಷೆಗಳನ್ನು ಮಾತ್ರ ಶಿಕ್ಷಣ ಮಾಧ್ಯಮವಾಗಿ ಬಳಸಿದರೆ ಅಸಮರ್ಪಕವಾಗಿ ವಿಂಗಡಣೆಯಾಗಿರುವ ಪ್ರದೇಶದಲ್ಲಿರುವ ಮಾತೃಭಾಷಾಮಾಧ್ಯಮದ ಮಕ್ಕಳ ಸ್ಥಿತಿ ಏನು? ಎಂಬುದನ್ನು ನಾವು ಬಹಳ ಸೂಕ್ಷ್ಮವಾಗಿ ಪರಿಶೀಲನೆಗೆ ಒಳಪಡಿಸಬೇಕಾಗುತ್ತದೆ. ಇವುಗಳ ಬಗೆಗೆ ಚರ್ಚೆ ಮಾಡದೇ ಒಂದು ರಾಜ್ಯದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷೆಗಳನ್ನು ಶಿಕ್ಷಣ ಮಾಧ್ಯಮದ ಭಾಷೆಯಾಗಿ ಬಳಸಲು ಸಾಧ್ಯವಿಲ್ಲ. ಹಾಗೆ ಬಳಸಬೇಕು ಎನ್ನುವುದೇ ಅತಾರ್ಕಿಕವಾದುದು. ಅದು ಸಾಧ್ಯವೂ ಇಲ್ಲ. ಅಂತಹ ಬೇಡಿಕೆಯನ್ನಿಡುವುದೇ ಮೂಲಭೂತವಾಗಿ ತಪ್ಪು ಎಂದು ಪ್ರಾದೇಶಿಕ ಭಾಷೆಯನ್ನು ಮಾತೃಭಾಷೆಯಾಗುಳ್ಳವರು ಹೇಳುತ್ತಾರೆ. ಇದಕ್ಕೆ ಮೇಲೆ ಹೇಳಿದ ಹಾಗೆ ಕಾರಣಗಳನ್ನು ಕೊಟ್ಟು ಸಮರ್ಥಿಸಿಕೊಳ್ಳುತ್ತಾರೆ.

ಆದರೆ ಹೀಗೆ ಕಾರಣಗಳನ್ನು ಕೊಟ್ಟು ತಮ್ಮ ಮಾತೃಭಾಷೆಗಳನ್ನು ಸಮರ್ಥಿಸಿಕೊಳ್ಳುವಾಗ ಎಲ್ಲಾ ಮಾತೃಭಾಷೆಗಳನ್ನು ಶಿಕ್ಷಣದಲ್ಲಿ ಮಾಧ್ಯಮವಾಗಿ ಬಳಸಲು ಸಾಧ್ಯವಿಲ್ಲವೆನ್ನುವುದಾದರೆ ಅವುಗಳ ಅಭಿವೃದ್ಧಿಗೆ ಅನುಸರಿಸಬೇಕಾದ ಕ್ರಮಗಳು ಯಾವುವು? ಎಂಬುದನ್ನು ಇವರು ತಿಳಿಸಿಲ್ಲ. ಹೀಗಾಗಿ ಇಂತಹ ಚಿಂತನೆಗಳನ್ನು ಪಾಲಿಸುವುದರಿಂದ ಆಯಾರಾಜ್ಯಗಳಲ್ಲಿರುವ ಪ್ರಬಲ ಭಾಷೆಗಳು ಮಾತ್ರ ಆಡಳಿತದಲ್ಲಿ ಶಿಕ್ಷಣದಲ್ಲಿ ಬಳಕೆಯಾಗಿ ನೂರಾರು ವರ್ಷಗಳಿಂದ ಅದೇ ಸ್ಥಳದಲ್ಲಿ ನೆಲೆ ಕಂಡುಕೊಂಡಿರುವ ಪ್ರಬಲವಲ್ಲದ ಭಾಷೆಗಳು ನಶಿಸುತ್ತವೆ. ಹೀಗೆ ಭಾಷೆಗಳು ನಶಿಸುವುದು ಪ್ರಸ್ತಾವನೆಯಲ್ಲಿ ಚರ್ಚಿಸಿರುವ ಹಾಗೆ ಅದು ಆ ಭಾಷಿಕ ಸಮುದಾಯಕ್ಕೆ ಆದ ನಷ್ಟವಲ್ಲ. ಅದು ಇಡೀ ಮಾನವ ಜನಾಂಗಕ್ಕೆ ಆದ ನಷ್ಟ. ಹೀಗಾಗಿ ಭಾಷೆಗಳು ಉಳಿಯಲು ಜನರು ತಮ್ಮ ದಿನನಿತ್ಯದ ಬದುಕಿನಲ್ಲಿ, ವ್ಯವಹಾರಗಳಲ್ಲಿ ಬಳಸುತ್ತಿರಬೇಕು. ಇದಕ್ಕೆ ಸರ್ಕಾರಗಳು ವ್ಯವಸ್ಥೆ ಮಾಡಿರಬೇಕು. ಬೇರೆಬೇರೆ ಕಾರಣಗಳನ್ನು ಕೊಟ್ಟು ಭಾಷೆಗಳ ಬಳಕೆಯನ್ನು ಜನರ ಬದುಕಿನಿಂದ ದೂರ ಮಾಡಿದರೆ ಭಾಷೆಗಳು ಉಳಿಯುವುದು ಕಷ್ಟ. ಭಾಷೆಗಳು ಉಳಿಯದಿದ್ದರೆ ಆ ಭಾಷೆಯನ್ನಾಡುವ ಜನರು ಪರಕೀಯತೆಗೆ ಒಳಗಾಗಿ ತಮ್ಮ ಸಾಂಸ್ಕೃತಿಕ, ಸಾಹಿತ್ಯಕ ಸಂಪತ್ತನ್ನು ಕಳೆದುಕೊಳ್ಳುತ್ತಾರೆ. ಇಲ್ಲವೆ ಈ ಸಮುದಾಯಗಳ ಭಾಷೆಗಳನ್ನು, ಸಾಂಸ್ಕೃತಿಕ, ಸಾಹಿತ್ಯಕ ಸಂಪತ್ತನ್ನು ರಕ್ಷಿಸಲು ಮೇಲೆ ಹೇಳಿದ ಹಾಗೆ ಆಡಳಿತ, ಶಿಕ್ಷಣ, ಉದ್ಯೋಗ ನ್ಯಾಯಾಲಯ ಸೇರಿದಂತೆ ಇತರ ಕ್ಷೇತ್ರಗಳಲ್ಲಿ ಬಳಕೆಯಾಗುವಂತೆ ಮಾಡಲು ಅತಿಸಣ್ಣ ಪ್ರದೇಶಗಳನ್ನು ಪ್ರತ್ಯೇಕ ರಾಜ್ಯಗಳಾಗಿ ನಿರ್ಮಾಣ ಮಾಡಬೇಕು.

ಇದಕ್ಕಾಗಿ ಸಣ್ಣಪುಟ್ಟ ಭಾಷಾಸಮುದಾಯಗಳು ವಾಸಿಸುವ ಪ್ರದೇಶಗಳನ್ನು ಪ್ರತ್ಯೇಕ ರಾಜ್ಯವಾಗಿ ಮಾಡಲು ಸಾಧ್ಯವೇ? ಹೀಗೆ ರಾಜ್ಯಗಳನ್ನು ವಿಂಗಡಿಸಿ, ಸ್ಥಳೀಯ ಪ್ರದೇಶದ ಆಡಳಿತ, ಶಿಕ್ಷಣಮಾಧ್ಯಮದ, ಉದ್ಯೋಗಗಳಲ್ಲಿ ಸ್ಥಳೀಯ ಭಾಷೆಗಳನ್ನು ಬಳಸಲು ಹೊರಟರೆ ದೇಶದ ಮುಂದಿನ ಸ್ಥಿತಿ ಏನು? ಇತ್ಯಾದಿ ಪ್ರಶ್ನೆಗಳು ಉದ್ಭವಿಸುತ್ತವೆ. ಆದರೆ ಈ ಪ್ರಶ್ನೆಗಳನ್ನೇ ಪ್ರಧಾನವಾಗಿಸಿಕೊಂಡು ಮೇಲೆ ಹೇಳಿದ ಹಾಗೆ ಭಾಷೆಯ ಆಧಾರದಲ್ಲಿ ಹೊಸ ರಾಜ್ಯಗಳ ರಚನೆ ಮಾಡದೆ ಹೀಗಿರುವ ನಿಯಮಾವಳಿಗಳ ಪ್ರಕಾರ ರಾಜ್ಯಗಳ ಅಧಿಕೃತ ಭಾಷೆಗಳನ್ನು ಮಾತ್ರ ಶಿಕ್ಷಣ ಮಾಧ್ಯಮದ ಭಾಷೆಯಾಗಿ ಬಳಕೆ ಮಾಡಿದರೆ ದೇಶದ ಇತರ ಭಾಷೆಗಳ ಸ್ಥಿತಿ ಏನು? ಎಂಬುವು ಬಹಳ ಸೂಕ್ಷ್ಮವಾದ ಪ್ರಶ್ನೆಗಳು. ಈ ಪ್ರಶ್ನೆಗಳಿಗೆ ಮೊದಲು ಉತ್ತರ ಕಂಡುಕೊಳ್ಳಬೇಕಾದ ಅಗತ್ಯ ಇದೆ ಎನಿಸುತ್ತದೆ.

ಏಕೆಂದರೆ ಕರ್ನಾಟಕದಲ್ಲಿ ಕರ್ನಾಟಕದ ಮಣ್ಣಿನಲ್ಲಿಯೇ ಹುಟ್ಟಿ ಬೆಳೆದು ಅಸ್ತಿತ್ವ ಕಂಡುಕೊಂಡಿರುವ ಭಾಷಿಕ ಸಮುದಾಯಗಳು ಇವೆ. ಇವುಗಳಿಗೆ ಆ ಮಣ್ಣನ್ನು ಹೊರತು ಪಡಿಸಿದರೆ ಉಳಿದ ಪ್ರದೇಶಗಳಲ್ಲಿ ಅಸ್ತಿತ್ವವಿಲ್ಲ. ಇವುಗಳ ಕಲಿಕೆಗೆ ತನ್ನ ನೆಲದಲ್ಲಿಯೇ ಅವಕಾಶ ಇಲ್ಲವೆಂದರೆ ನಾಶ ಹೊಂದುತ್ತವೆ. ಅದರಲ್ಲೂ ಇನ್ನೊಂದು ಭಾಷೆಯಲ್ಲಿ ಕಡ್ಡಾಯವಾಗಿ ಕಲಿಯಬೇಕು, ಬಳಸಬೇಕು ಎಂಬ ಒತ್ತಡಕ್ಕೆ ಒಳಗಾದಾಗಲಂತೂ ಇದು ಮತ್ತಷ್ಟು ವೇಗ ಪಡೆದುಕೊಳ್ಳುತ್ತದೆ. ಹೀಗಿರುವಾಗ ಒಂದು ರಾಜ್ಯದ ಅಧಿಕೃತಭಾಷೆಯ ಸ್ಥಾನಪಡೆದಿರುವ ಭಾಷಿಕ ಸಮುದಾಯಗಳು ಮೇಲೆ ಹೇಳಿದ

ಹಾಗೆ ಕಾರಣಗಳನ್ನು ನೀಡಿ ಅಲ್ಪಸಂಖ್ಯಾತರ ಭಾಷೆಯಲ್ಲಿ ಕಲಿಯುವುದನ್ನು ನಿಯಂತ್ರಿಸುವುದು ಹಿಂದಿ, ಇಂಗ್ಲಿಶ್‌ಗಳು ಕನ್ನಡಿಗರಿಗೆ ಹೇಗೆ ಭಯ ಹುಟ್ಟಿಸಿವೆಯೋ ಹಾಗೆ ಭಾಷಾಅಲ್ಪಸಂಖ್ಯಾತರಗೂ ಭಯ ಹುಟ್ಟಿಸುತ್ತದೆ. ಇಂತಹ ಸಂದರ್ಭಗಳಲ್ಲಿ ಇವರು ಏಕಪ್ರದೇಶದಲ್ಲಿ ಕೇಂದ್ರೀಕೃತಗೊಂಡು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಸ್ವಲ್ಪ ಅಭಿವೃದ್ಧಿ ಕಂಡಿದ್ದರೆ ಪ್ರತ್ಯೇಕ ರಾಜ್ಯಕ್ಕಾಗಿ ಹೋರಾಟ ಆರಂಭಿಸುತ್ತಾರೆ. ಹೀಗಾಗಿಯೇ ಕರ್ನಾಟಕದಲ್ಲಿ ಕೊಡವರು ಏಕೀಕರಣ ಪೂರ್ವದಿಂದಲೂ ಪ್ರತ್ಯೇಕ ರಾಜ್ಯಕ್ಕಾಗಿ ಬೇಡಿಕೆಯಿಟ್ಟು ಹೋರಾಟ ಮಾಡುತ್ತಿರುವುದು. ಹೀಗಾಗಿ ಒಂದು ರಾಜ್ಯದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷೆಗಳನ್ನು ಆಡಳಿತದಲ್ಲಿ, ಶಿಕ್ಷಣದಲ್ಲಿ ಶಿಕ್ಷಣಮಾಧ್ಯಮವಾಗಿ ಬಳಸಲು ಸಾಧ್ಯವಿಲ್ಲವೆನ್ನುವಾಗ ಅವುಗಳ ಅಸ್ತಿತ್ವದ ಉಳಿವಿಗಾಗಿ ಪರ್ಯಾಯ ಮಾರ್ಗಗಳ ತೋರಿಸಬೇಕಾಗುತ್ತದೆ.

ಇದನ್ನು ಅರ್ಥಮಾಡಿಕೊಳ್ಳದೆ ಬಹುಭಾಷೆಗಳು ಬಳಕೆಯಲ್ಲಿರುವ ಪ್ರದೇಶಗಳಲ್ಲಿ ಆ ಪ್ರದೇಶದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷೆಗಳನ್ನು ಆಡಳಿತ, ಶಿಕ್ಷಣದಲ್ಲಿ ಬಳಸಲು ಸಾಧ್ಯವಿಲ್ಲವೆಂದು ಪ್ರಬಲ ಭಾಷೆಗಳ ಪರವಾಗಿ ಮಾತ್ರ ಮಾತನಾಡುವುದು ಅರ್ಥವಿಲ್ಲದ್ದು. ಇದನ್ನು ಆಯಾ ರಾಜ್ಯಗಳ ಜನತೆ ಅರ್ಥಮಾಡಿಕೊಳ್ಳಬೇಕು. ಏಕೆಂದರೆ ಒಂದು ರಾಜ್ಯದ ಪ್ರಬಲ ಭಾಷಿಕರಿಗೆ ತಮ್ಮ ಭಾಷೆಯ ಉಳಿಯುವಿಕೆ, ಬೆಳೆಯುವಿಕೆ, ಅದರ ಅಭಿವೃದ್ಧಿ, ಬಳಕೆಯ ವ್ಯಾಪ್ತಿಯ ವಿಸ್ತಾರ ಎಷ್ಟು ಮುಖ್ಯವೋ ಅಲ್ಪಸಂಖ್ಯಾತರಿಗೂ ಅವರ ಭಾಷೆಯ ಬೆಳವಣಿಗೆ, ಅಭಿವೃದ್ಧಿ, ಬಳಕೆಯ ವ್ಯಾಪ್ತಿಯ ವಿಸ್ತಾರ ಅಷ್ಟೇ ಮುಖ್ಯವಾಗಿರುತ್ತದೆ. ತಾರ್ಕಿಕವಾಗಿ ಯೋಚಿಸಿದರೆ ಬಹುಭಾಷಿಕ ಪ್ರದೇಶಗಳಲ್ಲಿ ಆ ಪ್ರದೇಶದ ಬಹುಸಂಖ್ಯಾತರ ಭಾಷೆಯನ್ನು ಬಳಸಲು ಸಾಧ್ಯವಾಗುವಷ್ಟರ ಮಟ್ಟಿಗೆ ಅಲ್ಪಸಂಖ್ಯಾತರ ಭಾಷೆಗಳನ್ನು ಬಳಸಲು ಸಾಧ್ಯವಾಗದೆ ಇರಬಹುದು. ಆದರೆ ಅವುಗಳ ಉಳಿವಿಗಾಗಿಯಷ್ಟಾದರೂ ಬಳಸಬಹುದು. ಇದು ಸಾಧ್ಯವೇ ಆಗದಿದ್ದಾಗ ಪ್ರಯತ್ನಪಟ್ಟರೆ ಪರ್ಯಾಯ ಮಾರ್ಗಗಳನ್ನು ಹುಡುಕಬಹುದು. ಇದು ಕಷ್ಟದ ವಿಷಯವೇನು ಅಲ್ಲ. ಆದರೆ ಪ್ರಬಲ ಭಾಷಿಕ ಸಮುದಾಯಗಳಿಗೆ ಇದು ಬೇಕಿಲ್ಲ. ಪ್ರಬಲವಲ್ಲದ ಸಮುದಾಯಗಳಿಗೆ ಇದನ್ನು ಮಾಡುವಷ್ಟು ಸಾಮಾಜಿಕ, ಆರ್ಥಿಕ, ರಾಜಕೀಯ, ಸಂಘಟನಾತ್ಮಕ ಶಕ್ತಿ ಇಲ್ಲ. ಹೀಗಾಗಿ ಭಾಷಿಕವಾಗಿ ಹಿಂದುಳಿದಿರುವ ಸಮುದಾಯಗಳ ಭಾಷೆಗಳ ರಕ್ಷಣೆಗೆ ಪರ್ಯಾಯ ದಾರಿಗಳ ಹುಡುಕಾಟ ಕರ್ನಾಟಕದ ಸಂದರ್ಭದಲ್ಲಿ ಇದುವರೆಗೆ ಆಗಿಲ್ಲ. ಹೀಗಿದ್ದೂ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಇಲ್ಲಿ ಕನ್ನಡವೇ ಆಡಳಿತದ ಭಾಷೆಯಾಗಬೇಕು. ಶಿಕ್ಷಣದ ಭಾಷೆಯಾಗಬೇಕು ಎಂದು ಕರ್ನಾಟಕದಲ್ಲಿ ಬಹುಸಂಖ್ಯಾತ ರಾಗಿರುವ ಕನ್ನಡಿಗರಲ್ಲಿನ ಒಂದು ವರ್ಗ ಮಾತೃಭಾಷೆ ಮತ್ತು ಪ್ರಾದೇಶಿಕ ಭಾಷೆಯ ಹೆಸರಿನಲ್ಲಿ ಕಾನೂನಾತ್ಮಕವಾಗಿ ಮತ್ತು ಕಾನೂನಿನ ಹೊರತಾಗಿ ಹೋರಾಟಗಳನ್ನು ಮಾಡುತ್ತಾ ಬಂದಿದೆ. ಈಗಲೂ ಈ ಹೋರಾಟಗಳನ್ನು ಮುಂದುವರಿಸಿದೆ.

ಇಂತಹ ಸಂದರ್ಭದಲ್ಲಿ ದೇಶ–ವಿದೇಶಗಳಲ್ಲಿ ಅಲ್ಲ, ಕರ್ನಾಟಕದಲ್ಲಿಯೇ ಮಾತೃಭಾಷೆ ಅಥವಾ ಕನ್ನಡ ಬಲ್ಲವರಿಗೆ ಉದ್ಯೋಗ, ಉನ್ನತ ಮತ್ತು ವೃತ್ತಿಪರ ಶಿಕ್ಷಣ ಇಲ್ಲದಂತಹ ಸ್ಥಿತಿ ನಿರ್ಮಾಣವಾಗಿದೆ.

ಹೀಗಿರುವಾಗ ಕರ್ನಾಟಕ ಸರ್ಕಾರ ಮಾತೃಭಾಷೆ ಅಥವಾ ಕನ್ನಡ ಭಾಷಾಮಾಧ್ಯಮದ ಪರವಾಗಿ ಭಾಷಾನೀತಿಯನ್ನು ಜಾರಿಗೆ ತಂದು ರಾಜ್ಯದಲ್ಲಿರುವ ಮಕ್ಕಳು ಅದೇ ಪ್ರಕಾರ ಕಲಿಯಬೇಕು ಎಂದರೆ ನಮ್ಮ ಮಕ್ಕಳಿಗೆ ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಕಲಿತು ಏನು ಮಾಡುವುದು? ಮಾತೃಭಾಷೆ ಅಥವಾ ಕನ್ನಡದಲ್ಲಿ ಕಲಿತರೆ ಹೊರರಾಜ್ಯ ಅಥವಾ ದೇಶಗಳಲ್ಲಿ ಬೇಡ ನಮ್ಮ ರಾಜ್ಯದಲ್ಲಿಯೇ ಉನ್ನತ, ವೃತ್ತಿಪರ ಶಿಕ್ಷಣ, ಉದ್ಯೋಗ ಪಡೆದುಕೊಳ್ಳಲು ಸಾಧ್ಯವಿದೆಯೇ? ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಸದಿದ್ದರೆ ಇಂಗ್ಲಿಶ್ ಬರುತ್ತದೆಯೇ? ಇಂಗ್ಲಿಶ್ ಕಲಿಯದಿದ್ದರೆ ನಮ್ಮ ಮಕ್ಕಳ ಭವಿಷ್ಯ ಏನು? ಎಂಬಂತಹ ಪ್ರಶ್ನೆಗಳನ್ನಿಟ್ಟು ಕರ್ನಾಟಕ ಸರ್ಕಾರದ ಮಾತೃಭಾಷೆ ಇಲ್ಲವೆ ಕನ್ನಡ ಭಾಷಾಮಾಧ್ಯಮದ ಪರವಾದ ಭಾಷಾನೀತಿಗೆ ಕನ್ನಡಿಗರಲ್ಲಿನ ಮತ್ತೊಂದು ವರ್ಗ ವಿರೋಧ ವ್ಯಕ್ತಪಡಿಸಿದೆ. ಇದಕ್ಕೆ ಮಾತೃಭಾಷೆ ಅಥವಾ ಕನ್ನಡಮಾಧ್ಯಮದ ಪರವಾಗಿ ಒತ್ತಡ ಉಂಟುಮಾಡಿರುವ ವರ್ಗ ರಾಜ್ಯದಲ್ಲಿನ ಎಲ್ಲಾ ಮಕ್ಕಳು ಹೀಗೆ ಉದ್ಯೋಗ, ಶಿಕ್ಷಣ ಮತ್ತು ಇತರ ಕಾರಣಗಳಿಂದಾಗಿ ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯುತ್ತಾ, ಬಳಸುತ್ತಾ ಹೋದರೆ ಕರ್ನಾಟಕದಲ್ಲಿ ಕನ್ನಡವೇ ಇಲ್ಲದಾಗುತ್ತದೆ. ಕರ್ನಾಟಕವೂ ಇಲ್ಲದಾಗುತ್ತದೆ. ಕನ್ನಡ ಮತ್ತು ಕರ್ನಾಟಕ ಎರಡೂ ಇಲ್ಲದಿದ್ದರೆ ಕರ್ನಾಟಕವನ್ನು ಕಟ್ಟಿದ್ದಾದರೂ ಏಕೆ? ಕನ್ನಡ ಮತ್ತು ಕರ್ನಾಟಕ ಉಳಿಯಬೇಕಾದರೆ ಕರ್ನಾಟಕದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಕನ್ನಡವನ್ನು ಆಡಳಿತ, ಶಿಕ್ಷಣ, ಉದ್ಯೋಗ ಸೇರಿದಂತೆ ಇತರ ಎಲ್ಲಾ ಕ್ಷೇತ್ರಗಳಲ್ಲಿ ಬಳಕೆಗೆ ತರಬೇಕು, ಇದಕ್ಕಾಗಿ ಸರ್ಕಾರ ಭಾಷಾನೀತಿಯನ್ನು ಹೊರಡಿಸಿ, ಇದು ಯಥಾವತ್ತಾಗಿ ಅನುಷ್ಠಾನಕ್ಕೆ ಬರುವಂತೆ ಎಚ್ಚರಿಕೆ ವಹಿಸಬೇಕು ಎಂದು ಒತ್ತಾಯಿಸಿದೆ.

ಹೀಗಾಗಿ ಕರ್ನಾಟಕ ಶಿಕ್ಷಣದಲ್ಲಿ ಬೋಧನೆಗೆ ಬಳಸಬೇಕಾದ ಭಾಷೆಯ ಬಗೆಗೆ ಕನ್ನಡಿಗರಲ್ಲಿಯೇ ಭಿನ್ನಾಭಿಪ್ರಾಯಗಳಿವೆ. ಈ ಭಿನ್ನಾಭಿಪ್ರಾಯಗಳು ಭಾಷೆಯ ಕಾರಣದಿಂದ ಹುಟ್ಟಿರುವಂತಹವಲ್ಲ. ಇವುಗಳ ಹಿಂದೆ, ಜಾತಿ, ಧರ್ಮ, ಆರ್ಥಿಕತೆ, ಉದ್ಯೋಗ, ಶಿಕ್ಷಣದ ಅಸಮಾನತೆಗಳು ಇವೆ. ಇವುಗಳನ್ನು ಸರಿಪಡಿಸಿ ಮಾತೃಭಾಷೆ ಇಲ್ಲವೆ ಕನ್ನಡ ಭಾಷಾಮಾಧ್ಯಮದ ಶಿಕ್ಷಣವನ್ನು ಅಭಿವೃದ್ಧಿಪಡಿಸಬೇಕಾದ ಸರ್ಕಾರಗಳು ಅವುಗಳ ಬಗೆಗೆ ಗಮನವನ್ನೇ ಹರಿಸದೆ ತಮ್ಮ ರಾಜಕೀಯದ ಹಿತಾಸಕ್ತಿಗಾಗಿ ಕನ್ನಡಿಗರ ಮತವನ್ನು ತಮ್ಮತ್ತ ಸೆಳೆಯಲು ಕನ್ನಡಿಗರ ಪರವಾಗಿ ಯೋಜನೆಗಳನ್ನು ರೂಪಿಸುವಂತೆ ಹೇಳಿ ಭಾಷಾಸಮಿತಿಗಳನ್ನು ನೇಮಕ ಮಾಡಿವೆ. ಇವುಗಳು ನೀಡಿದ ವರದಿ ಆಧರಿಸಿ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಈ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರು ಕನ್ನಡಿಗರಾಗಿದ್ದುದರಿಂದ ಮತ್ತು ಅಧ್ಯಾಯ ಎರಡರಲ್ಲಿ ಚರ್ಚಿಸಿರುವ ಹಾಗೆ ಭಾಷಾಸಮಿತಿಗಳ ಮೇಲೆ ಒತ್ತಡಗಳು ಇದ್ದುದರಿಂದ ಕನ್ನಡದ ಪರವಾಗಿ ವರದಿ ಸಲ್ಲಿಸಿದ್ದಾರೆ.

ಆದುದರಿಂದ ಕರ್ನಾಟಕದಲ್ಲಿ ರೂಪಿತವಾಗಿರುವ ಭಾಷಾಯೋಜನೆ ಮತ್ತು ಜಾರಿಯಾಗಿರುವ ಭಾಷಾನೀತಿಗಳು ಹೆಚ್ಚಿನ ಪ್ರಮಾಣದಲ್ಲಿ ಕನ್ನಡಿಗರ ಪರವಾಗಿ ಇವೆ. ಆದರೆ ಇವುಗಳು ಸಂಪೂರ್ಣವಾಗಿ ಅನುಷ್ಠಾನವಾಗಿಲ್ಲ ಎನ್ನುವುದು ಇಲ್ಲಿ ಬೇರೆಯದೇ ಆದ ಮಾತು. ಇದಕ್ಕೆ ಬೇರೆಬೇರೆ ಕಾರಣಗಳು ಇವೆ. ಇವುಗಳನ್ನು ಕನ್ನಡ ಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು

ಭಾಗದಲ್ಲಿ ಚರ್ಚಿಸಲಾಗಿದೆ. ಆದರೆ ಇಲ್ಲಿ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರ ಕನ್ನಡ ಮತ್ತು ಇಂಗ್ಲಿಶ್ ಮಾಧ್ಯಮದ ಪರವಾದ ಹೋರಾಟ ಮತ್ತು ಒತ್ತಡಗಳು ಅಲ್ಪಸಂಖ್ಯಾತರ ಭಾಷಾಮಾಧ್ಯಮದ ಶಿಕ್ಷಣವನ್ನು ಗೌಣ ಮಾಡಿರುವುದಂತು ಸತ್ಯ. ಹೀಗಾಗಿ ಕರ್ನಾಟಕದ ಭಾಷಾಅಲ್ಪಸಂಖ್ಯಾತರಲ್ಲಿನ ಒಂದು ವರ್ಗ ತಮ್ಮ ಮಕ್ಕಳಿಗೆ ಮಾತೃಭಾಷೆಯಲ್ಲಿ ಕಲಿಸುವ ವ್ಯವಸ್ಥೆ ನಿರ್ಮಾಣ ಮಾಡುವಂತೆ ಸರ್ಕಾರಗಳನ್ನು ಒತ್ತಾಯ ಮಾಡಿದೆ. ಈ ಹೋರಾಟಗಳು ಕರ್ನಾಟಕದ ಗಡಿಭಾಗಗಳಲ್ಲಿ ಸ್ವಲ್ಪ ಹೆಚ್ಚಾಗಿಯೆ ಇವೆ.

ಇವುಗಳ ಜೊತೆಗೆ ಈಗಾಗಲೇ ಚರ್ಚಿಸಿರುವ ಕಾರಣಗಳಿಂದಾಗಿ ಇಂಗ್ಲಿಶ್ ಭಾಷೆಯ ಬಗೆಗೆ ಹುಟ್ಟಿಕೊಂಡಿರುವ ಬೇಡಿಕೆಯ ಕಾರಣದಿಂದ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಲು ಆಸಕ್ತರಾಗಿದ್ದಾರೆ. ಹೀಗೆ ವಿಭಿನ್ನ ಜನವರ್ಗಗಳು, ಅವರ ಆಲೋಚನೆ, ಬೇಡಿಕೆ, ಒತ್ತಡಗಳ ಕಾರಣದಿಂದಾಗಿ ಕರ್ನಾಟಕದಲ್ಲಿ ಭಾಷಾಮಾಧ್ಯಮದ ಸಮಸ್ಯೆ ಬಗೆಹರಿಯದ ಬಿಕ್ಕಟ್ಟಾಗಿ ಪರಿಣಮಿಸಿದೆ. ಮತ್ತು ಈ ಸಮಸ್ಯೆ ಭಿನ್ನ ಆಯಾಮಗಳನ್ನು ಪಡೆದುಕೊಂಡಿದೆ. ಹೀಗಾಗಿ ಈ ಅಧ್ಯಾಯದಲ್ಲಿ ಮೊದಲಿಗೆ **'ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳನ್ನು'** ಚರ್ಚಿಸಲಾಗಿದೆ. ಈ ಭಾಗದಲ್ಲಿ ಮಾತೃಭಾಷಾಮಾಧ್ಯಮದ ಕಲಿಕೆಯನ್ನು 'ಕನ್ನಡ ಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು' ಹಾಗೂ 'ಭಾಷಾಅಲ್ಪಸಂಖ್ಯಾತರು ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು ಎಂದು ಎರಡು ಒಳಭಾಗ ಮಾಡಿಕೊಳ್ಳಲಾಗಿದೆ. ಅನಂತರದಲ್ಲಿ ಕರ್ನಾಟಕದಲ್ಲಿ ಭಾಷಾಮಾಧ್ಯಮದ ವಿಚಾರವಾಗಿ ದೊಡ್ಡಸಮಸ್ಯೆ ಸೃಷ್ಟಿಸಿರುವುದು ಇಂಗ್ಲಿಶ್ ಮಾಧ್ಯಮದ ಶಿಕ್ಷಣ. ಇದನ್ನು **'ಇಂಗ್ಲಿಶ್ ಭಾಷಾಮಾಧ್ಯಮ: ಕಲಿಕೆ ಮತ್ತು ಸಮಸ್ಯೆಗಳು'** ಎಂಬ ಪ್ರತ್ಯೇಕ ಉಪಶೀರ್ಷಿಕೆಯ ಅಡಿಯಲ್ಲಿ ಚರ್ಚಿಸಲಾಗಿದೆ.

### ೪.೨ ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು

ವಿದ್ಯಾರ್ಥಿಗಳ ಸುಲಭ ಕಲಿಕೆ ಮತ್ತು "ರಸವತ್ತಿಗೆ ಆಧಾರವಾದ ಭಾಷೆಯೆಂದರೆ ಅವನ ಮಾತೃಭಾಷೆಯೊಂದೇ. ಸಹಜವಾಗಿ, ಸರಾಗವಾಗಿ ಮತ್ತು ಭಾವಪೂರ್ವಕವಾಗಿ ಅಂತರಂಗದ ಭಾವನೆಗಳನ್ನು ಪರಿಣಾಮಕಾರಿಯಾಗಿ ಪ್ರಕಟಿಸಲು ಸಹಕಾರಿಯಾದುದು ಮಾತೃಭಾಷೆಯೊಂದೇ. ಅದೊಂದೇ ಶಿಕ್ಷಣ ಮಾಧ್ಯಮಕ್ಕೆ ಯೋಗ್ಯವಾದ ಭಾಷೆ. ಅದನ್ನು ಬಿಟ್ಟು ಬೇರೆ ಭಾಷೆಯನ್ನು ಆಶ್ರಯಿಸಿದರೆ ವಿದ್ಯಾರ್ಥಿಯ ಕಲಿಕೆಯ ಶ್ರಮವನ್ನು ಹೆಚ್ಚಿಸಿದಂತೆ. ಆ ಶ್ರಮದಿಂದ ಕಲಿಕೆಯ ವೇಗ ಕಡಿಮೆಯಾಗುತ್ತದೆ.[೮]" ವಿದ್ಯಾರ್ಥಿಗಳು ಶಿಕ್ಷಣದಿಂದ "ನಿಷ್ಕೃಷ್ಟವಾಗಿಯೂ ವೀರ್ಯವತ್ತಾಗಿಯೂ ಆಲೋಚನೆ ಮಾಡಲು ಸಾಧ್ಯವಾಗಬೇಕು." ಈ ಮೂರು ಉದ್ದೇಶಗಳು ಈಡೇರದೆ ಮಗುವಿಗೆ ಶಿಕ್ಷಣ ನೀಡಿದಾಗ "ಆ ಮಗುವನ್ನು ತನ್ನ ತಂದೆತಾಯಿಯರಿಂದ ವಿಮುಖಗೊಳಿಸಿದಂತಾಗುತ್ತದೆ.[೯]" ಹೀಗಾಗಿ ಮಗುವಿನ ಮಾತೃಭಾಷೆಯಾಷೆಯೇ ಶಿಕ್ಷಣ ಮಾಧ್ಮಮವಾಗಬೇಕು ಎಂಬುದು ಶಿಕ್ಷಣ ತಜ್ಞರು, ಭಾಷಾವಿಜ್ಞಾನಿಗಳ ಅಭಿಪ್ರಾಯವಾಗಿದೆ. ಇದಕ್ಕೆ ಪೂರಕವಾಗಿ ಕರ್ನಾಟಕ ಸರ್ಕಾರ **ಸರ್ಕಾರಿ ಆದೇಶ ಸಂಖ್ಯೆ: ಇಡಿ ೨೮ ಪಿಜಿಸಿ ೯೪, ಬೆಂಗಳೂರು, ದಿನಾಂಕ: ೨೯ನೇ ಏಪ್ರಿಲ್ ೧೯೯೪ರಲ್ಲಿ**

ಅ) "ಸಾಮಾನ್ಯವಾಗಿ ಮಗುವಿನ ಮಾತೃಭಾಷೆಯೇ ಮಾಧ್ಯಮವಾಗಬೇಕೆಂದು ನಿರೀಕ್ಷೆಯಿರುವ ೧ ರಿಂದ ೪ನೇ ತರಗತಿಯವರಗೆ ಅನುಬಂಧ-೧ ರಲ್ಲಿ ತಿಳಿಸಿರುವ ಭಾಷೆಗಳ ಪೈಕಿ ಒಂದು ಮಾತೃಭಾಷೆ ಅಥವಾ ಕನ್ನಡ ಮಾತ್ರ ಕಡ್ಡಾಯ ಭಾಷೆಯಾಗಿರುತ್ತದೆ." ಎಂದು ಹೇಳಿ ಭಾಷಾಮಾಧ್ಯಮದ ವಿಚಾರಕ್ಕೆ ಸಂಬಂಧಿಸಿದಂತೆ

"೨) ೧೯೯೪-೯೫ನೇ ಶೈಕ್ಷಣಿಕ ವರ್ಷದಿಂದ ರಾಜ್ಯ ಸರ್ಕಾರದಿಂದ ಅಂಗೀಕೃತವಾದ ಎಲ್ಲಾ ಶಾಲೆಗಳಲ್ಲಿ ೧ ರಿಂದ ೪ನೇ ತರಗತಿಯವರೆಗಿನ ಶಿಕ್ಷಣ ಮಾಧ್ಯಮವು ಮಾತೃಭಾಷೆ ಅಥವಾ ಕನ್ನಡ ಭಾಷೆಯೇ ಆಗತಕ್ಕದ್ದೆಂದು ಆದೇಶಿಸಲಾಗಿದೆ.

೩) ೧೯೯೪-೯೫ನೇ ಶೈಕ್ಷಣಿಕ ವರ್ಷದಲ್ಲಿ ೧ನೇ ತರಗತಿಗೆ ದಾಖಲಾಗುವ ವಿದ್ಯಾರ್ಥಿಗಳಿಗೆ ಮಾತೃಭಾಷೆ ಅಥವಾ ಕನ್ನಡ ಭಾಷಾಮಾಧ್ಯಮದಲ್ಲಿಯೇ ಬೋಧಿಸತಕ್ಕದ್ದು" ಎಂದು ಆದೇಶಿಸಿದೆ. .

ಇದು ಮಕ್ಕಳ ಕಲಿಕೆಯ ಗುಣಮಟ್ಟ ಮತ್ತು ವೇಗ ಹೆಚ್ಚಿಸಲು ಹಾಗೂ ಕಲಿಕೆಯನ್ನು ಸುಲಭಗೊಳಿಸಲು ಉತ್ತಮವಾದ ಮಾರ್ಗ. ಆದರೆ ಇದಕ್ಕೆ ಕೆಲವು ಅಡಚಣೆಗಳಿವೆ. ಇವುಗಳನ್ನು ಎಸ್.ಆರ್.ರೋಹಿಡೇಕರರವರು ಹೀಗೆ ಗುರುತಿಸುತ್ತಾರೆ. ತತ್ವಶಃ 'ಮಾತೃಭಾಷೆಯೇ ಅತಿ ಪರಿಣಾಮಕಾರಿಯಾದ ಶಿಕ್ಷಣ ಮಾಧ್ಯಮ' ಎಂದು ಎಲ್ಲರೂ ಒಪ್ಪತಕ್ಕ ಮಾತೇ ಸರಿ. ಇದು ಅನೇಕ ಅಧ್ಯಯನಗಳಿಂದಲೂ ಕಂಡು ಬಂದ ಮಾತು. ಆದರೆ ಈ ತತ್ವಕ್ಕೆ ಒಂದು ಪರಂತುಕವಿದೆ. ಅದೇನೆಂದರೆ 'ಶಿಕ್ಷಣಕ್ಕೆ ಸಂಬಂಧಿಸಿದ ಇತರ ಎಲ್ಲ ಅಂಶಗಳು ಶಿಕ್ಷಕರ ಅರ್ಹತೆ, ಅನುಭವ, ಸ್ಥಳಾವಕಾಶ, ಪಠ್ಯಪುಸ್ತಕಗಳು, ಕಲಿಸುವ ವಿಧಾನ, ಶಾಲಾಡಳಿತ, ಮೇಲ್ವಿಚಾರಣೆ, ಮಾರ್ಗದರ್ಶನ ಇತ್ಯಾದಿ ಒಂದೆ ಆಗಿದ್ದರೆ ಅಥವಾ ಸಮಾನವಾಗಿದ್ದರೆ ಮಾತ್ರ, ಮಾತೃಭಾಷೆ ಶ್ರೇಷ್ಟ ಶಿಕ್ಷಣ ಮಾಧ್ಯಮ'. ಮಾತೃಭಾಷಾ ಮಾಧ್ಯಮದ ಶಾಲೆಗಳಲ್ಲಿ ಎಲ್ಲ ಅಂಶಗಳನ್ನು ಕೆಟ್ಟ ಸ್ಥಿತಿಗಿಳಿಸಿ, ಆಂಗ್ಲಮಾಧ್ಯಮದ ಶಾಲೆಗಳಿಗೆ ಯಾವ ಬಂಧನಗಳಿಲ್ಲದ ಸ್ವಾತಂತ್ರ್ಯ ಕೊಟ್ಟರೆ, ಮಾತೃಭಾಷಾಮಾಧ್ಯಮವು ಶ್ರೇಷ್ಟ ಶಿಕ್ಷಣ ಮಾಧ್ಯಮವಾಗಲಾರದು. ಇದು ಮೂಲ ತತ್ವದಷ್ಟೇ ಸತ್ಯವಾದುದು[೧೦]" ಎನ್ನುತ್ತಾರೆ ಎಸ್.ಆರ್.ರೋಹಿಡೇಕರ.

ಎಸ್.ಆರ್.ರೋಹಿಡೇಕರರವರ ಮೇಲಿನ ಮಾತು ಸತ್ಯದಿಂದ ಕೂಡಿದೆ. ಏಕೆಂದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಸ್ಥಳೀಯ ಜನರಲ್ಲಿನ ಒಂದು ವರ್ಗದ ಒತ್ತಡ, ಭಾಷಾಚಿಂತಕರು, ಶಿಕ್ಷಣ ತಜ್ಞರ ಅಭಿಪ್ರಾಯಗಳನ್ನು ಆಧಾರವಾಗಿಸಿಕೊಂಡು ವೈಜ್ಞಾನಿಕ ನೆಲೆಯಲ್ಲಿ ಮಾತೃಭಾಷೆ ಇಲ್ಲವೆ ಕನ್ನಡ ಮಾಧ್ಯಮದ ಪರವಾಗಿ ಭಾಷಾನೀತಿಯನ್ನು ಜಾರಿಗೆ ತಂದಿವೆ. ಆದರೆ ವಿದ್ಯಾರ್ಥಿಗಳಿಗೆ ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಕಲಿಸುವುದಕ್ಕೆ ಮತ್ತು ಕಲಿಯುವುದಕ್ಕೆ ಇರುವ ಸಮಸ್ಯೆಗಳೇನು? ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಏಕೆ ಕಲಿಯುತ್ತಿಲ್ಲ? ಮಾತೃಭಾಷೆಯಲ್ಲಿ ಕಲಿಯುತ್ತಿರುವುದರಿಂದ ಉದ್ಭವಿಸಿರುವ ಸಮಸ್ಯೆಗಳೇನು? ಇವುಗಳ ಪರಿಹಾರಕ್ಕೆ ಯಾವ ಕ್ರಮಗಳನ್ನು ಕೈಗೊಳ್ಳಬೇಕು? ಪೋಷಕರು ತಮ್ಮ ಮಕ್ಕಳನ್ನು ಯಾವ ಕಾರಣಕ್ಕಾಗಿ ಮಾತೃಭಾಷೆ ಇಲ್ಲವೆ ಕನ್ನಡ ಭಾಷಾಮಾಧ್ಯಮದ ಶಾಲೆಗಳಿಗೆ ಸೇರಿಸುತ್ತಿಲ್ಲ? ಇಂಗ್ಲಿಷ್ ಭಾಷಾಮಾಧ್ಯಮದ ಶಾಲೆಗಳಿಗೆ ಸೇರಿಸುತ್ತಿದ್ದಾರೆ ಎಂಬುದನ್ನು ಅರಿತು ಇವುಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಬೇಕಿತ್ತು. ಮಾತೃಭಾಷೆ

ಅಥವಾ ಕನ್ನಡ ಮಾಧ್ಯಮದ ಕಲಿಕೆ ವಿದ್ಯಾರ್ಥಿಗಳ ಭವಿಷ್ಯದ ಶಿಕ್ಷಣ ಮತ್ತು ಉದ್ಯೋಗದ ಮೇಲೆ ಉಂಟು ಮಾಡಬಹುದಾದ ದುಷ್ಪರಿಣಾಮಗಳನ್ನು ಸರಿಪಡಿಸಿ ಮಾತೃಭಾಷಾಮಾಧ್ಯಮದ ಕಲಿಕೆಯನ್ನು ಕಡ್ಡಾಯಗೊಳಿಸಬೇಕಿತ್ತು. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಮಾತೃಭಾಷೆ ಅಥವಾ ಕನ್ನಡ ಮಾಧ್ಯಮದ ಕಲಿಕೆಯನ್ನು ಕಡ್ಡಾಯಗೊಳಿಸುವ ಪೂರ್ವದಲ್ಲಿ ಇವುಗಳನ್ನು ಗಮನಕ್ಕೆ ತೆಗೆದುಕೊಂಡಿಲ್ಲ. ಬದಲಾಗಿ ಮಾತೃಭಾಷೆ ಮತ್ತು ಕನ್ನಡವನ್ನು ಅಭಿಮಾನದ ನೆಲೆ ನೋಡಿ, ಇದಕ್ಕೆ ವೈಜ್ಞಾನಿಕ ಕಾರಣಗಳನ್ನು ಕೊಟ್ಟು ಮಗು ತನ್ನ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಕಲಿಯಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತಂದಿವೆ.

ಇದರಿಂದಾಗಿ "ಕರ್ನಾಟಕದಲ್ಲಿನ ವಸ್ತುಸ್ಥಿತಿಯೇ 'ಮಾತೃಭಾಷಾ ಮಾಧ್ಯಮಕ್ಕೆ' ಅನುಕೂಲವಿಲ್ಲ. ಕೆಳಮಟ್ಟದ ಶಿಕ್ಷಕರ ಆಯ್ಕೆ, ಸಾಮಾನ್ಯವಾಗಿ ಅವರು ಸರಕಾರಿ ಅಥವಾ ಕಾರ್ಪೋರೇಷನ್ ಶಾಲೆಗಳಲ್ಲಿ ಕೆಲಸ ಮಾಡುವರಾದ್ದರಿಂದ, ವರ್ಗಾವಣೆಗೆ ಒಳಪಟ್ಟಿದ್ದು 'ಈ ಶಾಲೆ ನನ್ನದು' ಎಂಬ ಅಭಿಮಾನ ಆತ್ಮೀಯತೆ ಇಲ್ಲದವರು. ಸರಕಾರದಲ್ಲಿ ಹಣದ ಕೊರತೆಯಿಂದಾಗಿ ಮಾತೃಭಾಷಾ ಮಾಧ್ಯಮದ ಶಾಲೆಗಳ ಕಟ್ಟಡಗಳು ದುರಸ್ಥಿಯಾಗಿದ್ದು, ಹೆಚ್ಚಿನ ಸ್ಥಳಾವಕಾಶಕ್ಕಾಗಿ, ಕಟ್ಟಡಗಳನ್ನು ವಿಸ್ತರಿಸದೆ ಇದ್ದುದಕ್ಕೆ ವರ್ಗಗಳು 'ಕುರಿ ದೊಡ್ಡಿಗಳಂತೆ' ಕಾಣುವುದು, ವರ್ಗಾವಣೆಯಲ್ಲಿ ರಾಜಕೀಯದ ಹಸ್ತಕ್ಷೇಪದಿಂದಾಗಿ 'ಮಾತೃಭಾಷಾ ಮಾಧ್ಯಮದ ಶಾಲೆಗಳ' ಬಹುತೇಕ ಶಿಕ್ಷಕರು ರಾಜಕೀಯದಲ್ಲಿ ತೊಡಗಿರುವುದು, ಆಡಳಿತ ಶಿಥಿಲತೆ, ಅನಾಸಕ್ತಿ ಮತ್ತು ಕಡಿಮೆ ಸಂಖ್ಯೆ ಇವುಗಳಿಂದಾಗಿ, ಆ ಶಾಲೆಗಳೂ ಶೈಕ್ಷಣಿಕ ಮೇಲ್ವಿಚಾರಣೆ, ನಿಯಂತ್ರಣ ಮಾರ್ಗದರ್ಶನ ಇವುಗಳಲ್ಲಿ ನಿಷ್ಕ್ರಿಯವಾಗಿರುವುದು, ಅಲ್ಲದೆ 'ಮಾತೃಭಾಷಾ ಮಾಧ್ಯಮದ' ಕಲಿಕೆಯ ಸಾಮಗ್ರಿಗಳ ತೀರಾ ಅನಾಕರ್ಷಕವಾಗಿದ್ದು, ಸಮಯಕ್ಕೆ ಸರಿಯಾಗಿ ದೊರಕದೆ ಇರುವುದು-ಇವೆಲ್ಲಕ್ಕೂ ಕಳಸವಿಟ್ಟಂತೆ. ಈ ನಿಕೃಷ್ಟ ಪರಿಸ್ಥಿತಿಯನ್ನು ತಿಳಿದೂ, ತಿದ್ದಲು ಪ್ರಯತ್ನಿಸದೆ, ನಿದ್ರೆಯಲ್ಲಿದ್ದಂತೆ ಸರಕಾರವಿದೆ[೧೧]"

ಇವುಗಳನ್ನು ಸರಿಪಡಿಸಿ ಮಾತೃಭಾಷಾಮಾಧ್ಯಮದ ಕಲಿಕೆಗೆ ಪೂರಕ ವಾತಾವರಣ ನಿರ್ಮಾಣ ಮಾಡಬೇಕಾದ ಸರ್ಕಾರಗಳು ತನ್ನ ಆರ್ಥಿಕತೆಯ ನೆಪ ನೀಡಿ ತಟಸ್ಥ ನಿಲುವು ತಳೆದಿವೆ. ಇಲ್ಲಿ ಆರ್ಥಿಕತೆ ಎನ್ನುವುದು ಮಾತೃಭಾಷಾಮಾಧ್ಯಮ ಶಾಲೆಗಳನ್ನು ಅಭಿವೃದ್ಧಿಪಡಿಸದೇ ಇರುವುದಕ್ಕೆ ಕೇವಲ ಒಂದು ನೆಪ ಮಾತ್ರ, ಇದರ ಹಿಂದೆ ಖಾಸಗಿ ಶಾಲೆ, ಕಾಲೇಜುಗಳ ಲಾಭಿ ಮುಖ್ಯವಾಗಿ ಕೆಲಸ ಮಾಡಿದೆ. ರಾಜ್ಯದ ಹೆಚ್ಚಿನ ಖಾಸಗಿ ಶಿಕ್ಷಣ ಸಂಸ್ಥೆಗಳ ಒಡೆಯರು ಅಧಿಕೃತ ಮತ್ತು ಅನಧಿಕೃತವಾಗಿ ರಾಜಕಾರಣಿಗಳು, ಸರ್ಕಾರಿ ಅಧಿಕಾರಿಗಳು, ಮಠಗಳು ಮತ್ತು ಸಮಾಜದ ಪ್ರಭಾವಿ ವ್ಯಕ್ತಿಗಳು. ಇವರು ತಮ್ಮ ಶಾಲೆ-ಕಾಲೇಜುಗಳನ್ನು ಉಳಿಸಿಕೊಳ್ಳಲು, ಹಣಗಳಿಸಲು ತಮ್ಮ ಪ್ರಭಾವ ಬಳಸಿ ಸರ್ಕಾರಿ ಶಿಕ್ಷಣಸಂಸ್ಥೆಗಳು ಅಭಿವೃದ್ಧಿ ಹೊಂದದ ಹಾಗೆ ಎಷ್ಟು ನಿಯಂತ್ರಿಸಬಹುದೋ ಅಷ್ಟು ನಿಯಂತ್ರಿಸಿದ್ದಾರೆ. ರಾಜ್ಯದಲ್ಲಿರುವ ಬಹುತೇಕ ಮಾತೃಭಾಷಾಮಾಧ್ಯಮದ ಶಾಲೆಗಳು ಸರ್ಕಾರಿ ಶಾಲೆಗಳೇ ಆಗಿರುವುದರಿಂದ ಅವುಗಳ ಅಭಿವೃದ್ಧಿ ಕಾಣದೆ ಹಿಂದೆ ಉಳಿದುಕೊಂಡಿವೆ. ಇವುಗಳನ್ನು ಅಭಿವೃದ್ಧಿಪಡಿಸಬೇಕಾದ ಸರ್ಕಾರಗಳು ಮೇಲೆ ತಿಳಿಸಿದ ವರ್ಗಗಳ ಜನರ ಪ್ರಭಾವಕ್ಕೆ ಒಳಗಾಗಿ

ಸರ್ಕಾರಿ ಶಿಕ್ಷಣ ಸಂಸ್ಥೆಗಳನ್ನು ನಿರ್ಲಕ್ಷ್ಯ ಮಾಡಿವೆ. ಮತ್ತು ಸರ್ಕಾರಿ ಶಿಕ್ಷಣ ಸಂಸ್ಥೆಗಳಿಗೆ ಶಿಕ್ಷಕರ ಹುದ್ದೆಗಳ ನೇಮಕಾತಿಯನ್ನು ನಿಯಮಾವಳಿಗಳ ಪ್ರಕಾರ ಆರ್ಥಿಕ ಇಲಾಖೆಯಿಂದ ಅನುಮತಿ ಪಡೆದು ಭರ್ತಿಮಾಡಬೇಕು. ಇದಕ್ಕೆ ಸರ್ಕಾರದ ಇಚ್ಚಾಶಕ್ತಿಬೇಕು. ಸರ್ಕಾರದ ಇಚ್ಛಾಶಕ್ತಿಯಿಲ್ಲದೆ ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಕ ಹುದ್ದೆಗಳು ಭರ್ತಿಯಾಗುವುದಿಲ್ಲ. ಆದರೆ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಸರ್ಕಾರಕ್ಕೆ ಅಧಿಕೃತವಾಗಿ ಮತ್ತು ರಾಜಕಾರಣಗಳಿಗೆ ಅನಧಿಕೃತವಾಗಿ ಹಣ ತಂದುಕೊಡುವ ಸಂಸ್ಥೆಗಳಲ್ಲ. ಹೀಗಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಸರ್ಕಾರಿ ಶಿಕ್ಷಣ ಸಂಸ್ಥೆಗಳಿಗೆ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಮೂಲಭೂತ ಸೌಕರ್ಯಗಳನ್ನು ಒದಗಿಸುವ, ಭಾಷಾಶಿಕ್ಷಕರ ಹುದ್ದೆಗಳನ್ನು ಭರ್ತಿಮಾಡಿಲ್ಲ. ಇದರಿಂದಾಗಿ ರಾಜ್ಯದಲ್ಲಿರುವ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಮೂಲಭೂತ ಸೌಕರ್ಯಗಳಿಲ್ಲದೆ, ಸಮರ್ಪಕವಾಗಿ ಶಿಕ್ಷಕರಿಲ್ಲದೆ ಅಭಿವೃದ್ಧಿಯಲ್ಲಿ ಹಿಂದೆ ಉಳಿದುಕೊಂಡು ಮಕ್ಕಳ ಗುಣಾತ್ಮಕ ಶಿಕ್ಷಣಕ್ಕೆ ಅಡ್ಡಿಯಾಗಿವೆ.

ಇವುಗಳ ಜೊತೆಗೆ ಸರ್ಕಾರಿ ಶಿಕ್ಷಣ ಸಂಸ್ಥೆಗಳಿಗೆ ಶಿಕ್ಷಕರನ್ನು ಸರ್ಕಾರದ ಮೀಸಲಾತಿ ನಿಯಮಗಳ ಅಡಿಯಲ್ಲಿ ಭರ್ತಿಮಾಡುವುದರಿಂದ ಸಾಕಷ್ಟು ಪ್ರತಿಭಾನ್ವಿತ ಶಿಕ್ಷಕರು ಮಾತೃಭಾಷಾಮಾಧ್ಯಮದ ಶಾಲೆಗಳಿಂದ ಹೊರಗುಳಿದು ಅಸಮರ್ಥರು ಸರ್ಕಾರಿ ಶಿಕ್ಷಣ ಸಂಸ್ಥೆಗಳಿಗೆ ನೇಮಕವಾಗಿ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದಾರೆ. ಇವರಿಗೆ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ಕಲಿಸುವುದಕ್ಕಿಂತ ಬೇರೆಯ ವ್ಯವಹಾರಗಳೇ ಮುಖ್ಯವಾಗಿವೆ. ಇನ್ನು ಪ್ರತಿಭಾನ್ವಿತ ಶಿಕ್ಷಕರು ಸರ್ಕಾರಿ ಹುದ್ದೆಗೆ ನೇಮಕವಾದ ನಂತರ ಶಿಕ್ಷಣ ಸಂಸ್ಥೆಗಳಲ್ಲಿ ಬೋಧನೆ ಮಾಡುವುದಕ್ಕಿಂತ ಹೆಚ್ಚಾಗಿ ಇತರ ದಾಖಲೆಗಳನ್ನು ಸಿದ್ಧಪಡಿಸುವುದು, ಸರ್ಕಾರದ ಬೇರೆಬೇರೆ ಕೆಲಸಗಳನ್ನು ಮಾಡಬೇಕಿರುವುದು, ಒಳರಾಜಕಾರಣ, ಹಿರಿಯ ಅಧಿಕಾರಿಗಳ ಭ್ರಷ್ಟತೆ, ಒತ್ತಡ, ಸಭ್ಯ, ಪ್ರಾಮಾಣಿಕ ಶಿಕ್ಷಕರ ತೇಜೋವಧೆಯಿಂದ ಮಾನಸಿಕವಾಗಿ ನೊಂದು ನಿಜವಾದ ಬೋಧನೆಯ ಆಸಕ್ತಿ ಕಳೆದುಕೊಂಡಿದ್ದಾರೆ. ಹೀಗಾಗಿ ಸರ್ಕಾರಿ ಶಾಲೆ-ಕಾಲೇಜುಗಳಲ್ಲಿ ಕೆಲಸ ಮಾಡುತ್ತಿರುವ ಬೆರಳೆಣಿಕೆಯಷ್ಟು ಶಿಕ್ಷಕರನ್ನು ಹೊರತು ಪಡಿಸಿದರೆ ಉಳಿದವರು ಗುಣಮಟ್ಟದ ಬೋಧನೆಯ ಕಡೆಗೆ ತಮ್ಮ ಗಮನ ಕೇಂದ್ರೀಕರಿಸಿಕೊಳ್ಳದೆ ಯಾಂತ್ರಿಕಗೊಂಡು ತಮ್ಮ ವೈಯಕ್ತಿಕ ವ್ಯವಹಾರ, ಆರ್ಥಿಕ ವೃದ್ಧಿಯ ಕಡೆಗೆ ಆಸಕ್ತರಾಗಿದ್ದಾರೆ. ಇದು ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಕಲಿಯುವ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ದೊರಕದಂತೆ ಮಾಡಿದೆ. ಇವುಗಳನ್ನು ಸರಿಪಡಿಸಲು ಕ್ರಮಕೈಗೊಂಡು ಸರ್ಕಾರಿ ಅಥವಾ ಮಾತೃಭಾಷಾಮಾಧ್ಯಮದ ಶಾಲೆಗಳನ್ನು ಅಭಿವೃದ್ಧಿಪಡಿಸಬೇಕಾದ ಸರ್ಕಾರಿ ಅಧಿಕಾರಿಗಳು, ರಾಜಕಾರಣಿಗಳು ಸ್ವಜಾತಿ ಪ್ರೇಮ, ಭ್ರಷ್ಟಾಚಾರ, ರಾಜಕಾರಣಗಳಲ್ಲಿ ಮುಳುಗಿ ಸರ್ಕಾರಿ ಅಥವಾ ಮಾತೃಭಾಷಾಮಾಧ್ಯಮದ ಶಾಲೆಗಳನ್ನು ಕಡೆಗಣಿಸಿದ್ದಾರೆ.

ಇಂತಹ ಅಧಿಕಾರಿಗಳ ಮೇಲೆ ಶಿಸ್ತಿನ ಕ್ರಮಕೈಗೊಂಡು ಸರ್ಕಾರಿ ಅಥವಾ ಮಾತೃಭಾಷಾಮಾಧ್ಯಮದ ಶಾಲೆಗಳನ್ನು ಅಭಿವೃದ್ಧಿಪಡಿಸಬೇಕಾದ ಸರ್ಕಾರಗಳು, ಏಕಕಾಲದಲ್ಲಿ ಇಂಗ್ಲಿಶ್‌ನ ಬಳಕೆಯ ಸ್ಥಾನದಲ್ಲಿ ಮಾತೃಭಾಷೆ ಇಲ್ಲವೆ ಕನ್ನಡವನ್ನು ಬಳಕೆಗೆ ತರಲು ಸಾಧ್ಯವಿಲ್ಲ

ಎಂದು ಕೇಂದ್ರ ಸರ್ಕಾರದ ಭಾಷಾನೀತಿ ಹಾಗೂ ಸಂವಿಧಾನದ ನಿಯಮಗಳಿಗೆ ಒಳಗಾಗಿ ಕರ್ನಾಟಕದ ಆಡಳಿತ, ಶಿಕ್ಷಣ, ಉದ್ಯೋಗ ಸೇರಿದಂತೆ ಎಲ್ಲಾ ಕ್ಷೇತ್ರಗಳಲ್ಲಿ ಇಂಗ್ಲಿಶ್‌ನ ಬಳಕೆಯ ಮುಂದುವರಿಕೆಗೆ ಅವಕಾಶ ಕಲ್ಪಿಸಿಕೊಟ್ಟಿವೆ. ಹೀಗಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿನ ಎಲ್ಲಾ ಕ್ಷೇತ್ರಗಳಲ್ಲಿ ಇಂಗ್ಲಿಶ್ ಬಳಕೆಯಲ್ಲಿದೆ. ಅದರಲ್ಲೂ ರಾಜ್ಯ ಸರ್ಕಾರದ ಆಡಳಿತದ ಉನ್ನತ ಹಂತ ಮತ್ತು ಕೇಂದ್ರ ಮತ್ತು ಬೇರೆ ರಾಜ್ಯಗಳೊಂದಿಗಿನ ವ್ಯವಹಾರ ಹಾಗೂ ಖಾಸಗಿ ವಲಯದ ಬಹುತೇಕ ವ್ಯವಹಾರಗಳು ಇಂಗ್ಲಿಶ್‌ನಲ್ಲಿಯೇ ಮುಂದುವರೆದಿವೆ. ಹೀಗಾಗಿ ರಾಜ್ಯದ ಜನರು ಈ ವಲಯಗಳಲ್ಲಿ ಉದ್ಯೋಗ ಮಾಡಲು ಮತ್ತು ವ್ಯವಹರಿಸಲು ಇಂಗ್ಲಿಶ್‌ನ ಅನಿವಾರ್ಯತೆ ಉಂಟಾಗಿದೆ. ಇಂಗ್ಲಿಶ್ ಭಾಷಾಜ್ಞಾನವಿಲ್ಲದೆ ಈ ವಲಯಗಳಲ್ಲಿ ಉದ್ಯೋಗ ಮಾಡುವುದು, ವ್ಯವಹರಿಸುವುದು ಅಸಾಧ್ಯ ಎಂಬಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಇದರಿಂದ ಮಾತೃಭಾಷೆ ಇಲ್ಲವೆ ಕನ್ನಡ ಮಾತ್ರ ಕಲಿತವರು, ಬಳಸುತ್ತಿರುವವರು ತಮ್ಮ ಕ್ಷೇತ್ರಗಳಲ್ಲಿ ತಮ್ಮ ಕೆಲಸ ಮಾಡಿಸಿಕೊಳ್ಳಲು ಇಂಗ್ಲಿಶ್ ಬಲ್ಲವರನ್ನು ಅವಲಂಭಿಸಬೇಕಾಗಿದೆ.

ಇಂತಹ ಸಮಸ್ಯೆಗಳು ತಮ್ಮ ಮಕ್ಕಳಿಗೆ ಎದುರಾಗದಿರಲಿ ಎಂಬ ಕಾರಣಕ್ಕಾಗಿ ಪೋಷಕರು ತಮ್ಮ ಮಕ್ಕಳಿಗೆ ಇಂಗ್ಲಿಶ್ ಕಲಿಸಲು ಆಸಕ್ತರಾಗಿದ್ದಾರೆ. ಇದಕ್ಕಾಗಿ ಕರ್ನಾಟಕದ ಶಿಕ್ಷಣದಲ್ಲಿ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಕಲಿಸುವ ನಿಯಮವನ್ನು ಅಳವಡಿಸಿವೆ. ಆದರೂ ರಾಜ್ಯದ ಮಾತೃಭಾಷೆ ಇಲ್ಲವೆ ಕನ್ನಡ ಮಾಧ್ಯಮದಲ್ಲಿ ಕಲಿಯುತ್ತಿರುವ ಮಕ್ಕಳು ಇಂದಿನ ಅಗತ್ಯಕ್ಕೆ ಅನುಗುಣವಾಗಿ ಇಂಗ್ಲಿಶ್ ಕಲಿಯಲು ಸಾಧ್ಯವಾಗಿಲ್ಲ. ಇದಕ್ಕೆ ಹಲವು ಕಾರಣಗಳು ಇವೆ. ಇವುಗಳನ್ನು ಮೂರನೇ ಅಧ್ಯಾಯದ ಇಂಗ್ಲಿಶ್ ಭಾಷಾಕಲಿಕೆ ಮತ್ತು ಸಮಸ್ಯೆಗಳು ಎಂಬ ಭಾಗದಲ್ಲಿ ಈಗಾಗಲೇ ಚರ್ಚಿಸಲಾಗಿದೆ. ಹೀಗಾಗಿ ಪೋಷಕರು ತಮ್ಮ ಮಕ್ಕಳಿಗೆ ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಕಲಿಸುವ ಬದಲಾಗಿ ಇಂಗ್ಲಿಶ್ ಮಾಧ್ಯಮದ ಮೂಲಕ ಶಿಕ್ಷಣ ಕಲಿಸಲು ಆಸಕ್ತರಾಗಿದ್ದಾರೆ. ಆದರೆ ಇದಕ್ಕೆ ಏಕೀಕರಣ ನಂತರದ ಕರ್ನಾಟಕದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಕನ್ನಡವನ್ನು ಕಟ್ಟುವ ಉದ್ದೇಶದಿಂದ ಕನ್ನಡಕ್ಕಾಗಿ ದುಡಿಯುತ್ತಿರುವ ಕನ್ನಡಪರ ಹೋರಾಟಗಾರರು, ಚಿಂತಕರ ವಿರೋಧಗಳಿಂದಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಮಾತೃಭಾಷೆ ಇಲ್ಲವೆ ಕನ್ನಡ ಮಾಧ್ಯಮದ ಪರವಾಗಿ ಜಾರಿಗೆ ತಂದಿರುವ ಭಾಷಾನೀತಿ ಸಮಸ್ಯೆಯಾಗಿ ಪರಿಣಮಿಸಿದೆ.

ಹೀಗಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಶಿಕ್ಷಣದಲ್ಲಿ ಬೋಧನೆಗೆ ಬಳಕೆಯಾಗಬೇಕಾದ ಭಾಷೆಗೆ ಸಂಬಂಧಿಸಿದರಂತೆ ಆದೇಶಿಲಾಗಿರುವ ಭಾಷಾನೀತಿಯನ್ನು ಕರ್ನಾಟಕದಲ್ಲಿನ ಕನ್ನಡಿಗರಲ್ಲಿಯೇ ಒಂದು ವರ್ಗ ವಿರೋಧಿಸಿದೆ. ಇದಕ್ಕೆ ಶಿಕ್ಷಣವನ್ನು ವ್ಯಾಪಾರೀಕರಣ ಮಾಡಿಕೊಂಡಿರುವ ಖಾಸಗಿ ಶಿಕ್ಷಣ ಸಂಸ್ಥೆಗಳ ಮಾಲೀಕರ ಸಂಘ ಬೆಂಬಲ ವ್ಯಕ್ತಪಡಿಸಿದೆ. ಈ ಸಂಘ ಪೋಷಕರ ಸಹಕಾರದೊಂದಿಗೆ ಕರ್ನಾಟಕ ಸರ್ಕಾರದ ಮಾತೃಭಾಷೆ ಇಲ್ಲವೆ ಕನ್ನಡ ಮಾಧ್ಯಮದ ಪರವಾದ ಭಾಷಾನೀತಿಯ ವಿರುದ್ಧವಾಗಿ ರಾಜ್ಯದ ಉಚ್ಚನ್ಯಾಯಾಲಯ ಮತ್ತು ದೇಶದ ಅತ್ಯುಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿ ಗೆಲುವು ಪಡೆದಿದೆ. ಹೀಗಾಗಿ ಕರ್ನಾಟಕ

ಸರ್ಕಾರ ೨೦೧೪ರಂದು ಮೇ ತಿಂಗಳಲ್ಲಿ ಸುಪ್ರೀಂಕೋರ್ಟ್ ನೀಡಿರುವ ತೀರ್ಪನ್ನು ಪುನರ್ ಪರಿಶೀಲಿಸುವಂತೆ ರಿಟ್ ಅರ್ಜಿಯನ್ನು ಸಲ್ಲಿಸುವ ಮಾತನ್ನಾಡಿದೆ. ಅಗತ್ಯಬಿದ್ದರೆ ಸಂವಿಧಾನಕ್ಕೆ ತಿದ್ದುಪಡಿತರುವಂತೆ ಕೇಂದ್ರದ ಮೇಲೆ ಒತ್ತಡವನ್ನು ತರಲಾಗುವುದು ಎಂದು ರಾಜ್ಯದ ಮುಖ್ಯಮಂತ್ರಿಯಾದ ಸಿದ್ಧರಾಮಯ್ಯನವರು ಮಾಧ್ಯಮದ ಮುಂದೆ ಹೇಳಿಕೆಗಳನ್ನು ನೀಡಿದ್ದಾರೆ. ಆದರೆ ರಾಜ್ಯಸರ್ಕಾರದ ಭಾಷಾನೀತಿಗೆ ದೇಶದ ನ್ಯಾಯಾಲಯಗಳಲ್ಲಿ ಸೋಲಾಗಲು ಕಾರಣಗಳು ಏನು? ರಾಜ್ಯದಲ್ಲಿ ಪೋಷಕರು ಯಾವ ಉದ್ದೇಶಗಳಿಗಾಗಿ ತಮ್ಮ ಮಕ್ಕಳನ್ನು ಮಾತೃಭಾಷಾ ಮಾಧ್ಯಮದ ಶಾಲೆಗಳಿಗೆ ಸೇರಿಸುವ ಬದಲಾಗಿ ಇಂಗ್ಲಿಷ್ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡುತ್ತಿದ್ದಾರೆ? ಮಾತೃಭಾಷಾಮಾಧ್ಯಮದ ಶಿಕ್ಷಣವನ್ನು ವಿರೋಧಿಸಲು ಅಥವಾ ತಿರಸ್ಕರಿಸಲು ಕಾರಣಗಳು ಏನು? ಎಂಬುದನ್ನು ವೈಜ್ಞಾನಿಕವಾಗಿ ಪರಿಶೀಲಿಸುವ ಕೆಲಸ ಮಾಡಿಲ್ಲ.

ಏಕೆಂದರೆ ಕರ್ನಾಟಕದಲ್ಲಿ ಕರ್ನಾಟಕ ಸರ್ಕಾರದ ಮಾತೃಭಾಷೆ ಇಲ್ಲವೆ ಕನ್ನಡಮಾಧ್ಯಮದ ಪರವಾದ ಭಾಷಾನೀತಿಗೆ ಹುಟ್ಟಿಕೊಂಡಿರುವ ವಿರೋಧ ಕನ್ನಡವನ್ನು ಭಾಷಿಕ ನೆಲೆಯಲ್ಲಿ ವಿರೋಧಿಸುವ ಉದ್ದೇಶದಿಂದ ಹುಟ್ಟಿರುವುದಲ್ಲ. ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರದ ಭಾಷಾನೀತಿಯನ್ನು ಒಪ್ಪಿಕೊಂಡರೆ ತಮ್ಮ ಆದಾಯದ ಮೂಲ ಕಳೆದುಕೊಳ್ಳುತ್ತೇವೆ ಎಂಬ ವ್ಯಾವಹಾರಿಕ ಮತ್ತು ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಕಲಿತರೆ ತಮ್ಮ ಮಕ್ಕಳು ಸಂವಹನ ರೂಪದ ಇಂಗ್ಲಿಶ್‌ನಲ್ಲಿ ಹಿಡಿತ ಸ್ಥಾಪಿಸಲು ಸಾಧ್ಯವಾಗದೆ ಉನ್ನತ, ವೃತ್ತಿಶಿಕ್ಷಣ, ಹಾಗೂ ಉದ್ಯೋಗಗಳಿಂದ ವಂಚಿತರಾಗುತ್ತಾರೆ ಎಂಬ ಪೋಷಕರ ಭಯದ ನೆಲೆಯೊಳಗಡೆ ಹುಟ್ಟಿದ ವಿರೋಧವಾಗಿದೆ. ಹೀಗಾಗಿ ಕರ್ನಾಟಕದ ಭಾಷಾಮಾಧ್ಯಮದ ಸಮಸ್ಯೆ ಭಾಷಿಕ ನೆಲೆಯೊಳಗಡೆ ಇಲ್ಲ. ಇದರ ಹಿಂದೆ ಸಾಮಾಜಿಕ, ರಾಜಕೀಯ, ಆರ್ಥಿಕ, ತಾಂತ್ರಿಕ, ಔದ್ಯೋಗಿಕ, ಶೈಕ್ಷಣಿಕ ಅಸಮಾನತೆಗಳ ಆಯಾಮಗಳು ಇವೆ. ಇವುಗಳನ್ನು ಅರ್ಥೈಸಿ ಪರಿಹಾರಕ್ಕೆ ಸೂಕ್ತ ಕ್ರಮಕೈಗೊಂಡು ಕರ್ನಾಟಕದ ಭಾಷಾಮಾಧ್ಯಮದ ಸಮಸ್ಯೆ ಬಗೆಹರಿಸಬೇಕಿದೆ. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಇಲ್ಲಿನ ಭಾಷಾಮಾಧ್ಯಮದ ಸಮಸ್ಯೆಗೆ ಕೇವಲ ಭಾಷಿಕ ನೆಲೆಯೊಳಗಡೆ ಮಾತ್ರ ಆಲೋಚಿಸಿ ಸಮಸ್ಯೆ ಪರಿಹರಿಸಲು ಪ್ರಯತ್ನಿಸಿವೆ. ಇದರಿಂದಾಗಿ ರಾಜ್ಯದಲ್ಲಿ ಮತ್ತೆ ಜಾತಿ, ಧರ್ಮ, ವರ್ಗ, ಶಿಕ್ಷಣ, ಉದ್ಯೋಗ ಇತ್ಯಾದಿಗಳ ಆಧಾರದಲ್ಲಿ ಮತ್ತೆ ಅಸಮಾನತೆಗಳು ಹುಟ್ಟಿಕೊಂಡಿವೆ. ಇವುಗಳಲ್ಲಿ ಸಮಾನತೆ ತರದಿದ್ದರೆ ಜನರು ಮಾತೃಭಾಷಾಮಾಧ್ಯಮದ ಶಿಕ್ಷಣದ ಕಲಿಕೆಯ ಕಡೆಗೆ ಆಸಕ್ತರಾಗುವುದಿಲ್ಲ. ಮಾತೃಭಾಷೆಗಳನ್ನು ಅಭಿವೃದ್ಧಿಪಡಿಸಿಲು ಸಾಧ್ಯವಿಲ್ಲ.

ಏಕೆಂದರೆ ಭಾರತದಂತಹ ಪ್ರಜಾಪ್ರಭುತ್ವದಲ್ಲಿ ಜನರ ಬೇಡಿಕೆಗೆ ಅನುಗುಣವಾಗಿ ನಿಯಮಗಳನ್ನು ರೂಪಿಸಬೇಕೇ ಹೊರತು ಜನರ ಬದುಕಿಗೆ ಮಾರಕವಾದ ನಿಯಮಗಳನ್ನಲ್ಲ. ಸರ್ಕಾರಗಳು ರೂಪಿಸಿರುವ ನಿಯಮಗಳು ನಮ್ಮ ಬದುಕಿಗೆ ಮಾರಕವಾಗಿ ಪರಿಣಮಿಸುತ್ತವೆ ಎಂಬ ಭಾವನೆ ಹುಟ್ಟುಹಾಕಿರುವುವನ್ನು ಜನ ತಿರಸ್ಕರಿಸಿದ್ದಾರೆ. ಇವುಗಳ ವಿರುದ್ಧವಾಗಿ ದೇಶದ ನ್ಯಾಯಾಲಯಗಳಲ್ಲಿ ಪ್ರಶ್ನಿಸುತ್ತಾರೆ. ಇವುಗಳನ್ನು ದೇಶದ ನ್ಯಾಯಾಲಯಗಳು ಪುರಸ್ಕರಿಸಿ ಜನರ ಬದುಕಿಗೆ ಪೂರಕವಾದ

ನಿಯಮಗಳ ಪರವಾಗಿ ತೀರ್ಪು ನೀಡಿ ಉಳಿದವುಗಳನ್ನು ಅನೂರ್ಜಿತಗೊಳಿಸಿವೆ. ಹೀಗಾಗಿಯೇ ಕರ್ನಾಟಕ ಸರ್ಕಾರ ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣ ನಿಯಂತ್ರಿಸಿ ಹೊರಡಿಸಿದ್ದ ಆದೇಶ ರದ್ದಾಗಿದೆ. ಆದುದರಿಂದ ಭಾಷಾಸಮಸ್ಯೆಗೆ ಪರಿಹಾರವನ್ನು ಕೇವಲ ಭಾಷಾನೀತಿಗಳ ಮೂಲಕ ಮಾತ್ರ ಮಾಡಲು ಸಾಧ್ಯವಿಲ್ಲ. ಬದಲಾಗಿ ಭಾಷೆಗಳನ್ನು ಜನರ ಬದುಕಿನ ಭಾಗವಾಗಿಸುವ ಮೂಲಕ ಪರಿಹರಿಸಬೇಕು. ಆಗ ಜನರು ಸರ್ಕಾರಗಳ ಭಾಷಾನೀತಿಯನ್ನು ವಿರೋಧಿಸದೆ ಆಸಕ್ತಿಯಿಂದ ಪಾಲಿಸುತ್ತಾರೆ. ಇದನ್ನು ಹೊರತುಪಡಿಸಿ ಬೇರೆಯದೇ ಆದ ನೆಲೆಯೊಳಗಡೆ ಯೋಚಿಸಿ ಸಮುದಾಯಗಳ ಹಿತಕ್ಕಾಗಿಯೇ ಸರ್ಕಾರಗಳು ಭಾಷಾನೀತಿಯನ್ನು ಜಾರಿಗೆ ತಂದರೂ ಇವುಗಳನ್ನು ಎಲ್ಲರೂ ಒಪ್ಪಿಕೊಳ್ಳುವುದಿಲ್ಲ. ಅವುಗಳನ್ನು ತಿರಸ್ಕರಿಸುತ್ತಾರೆ.

ಮಾತೃಭಾಷಾಮಾಧ್ಯಮವ ವಿಚಾರವಾಗಿ ಕರ್ನಾಟಕದ ಸಂದರ್ಭದಲ್ಲಿ ಉದ್ಭವಿಸಿರುವ ಸಮಸ್ಯೆ ಇದೆ ಆಗಿದೆ. ಹೇಗೆಂದರೆ ಇದುವರೆಗೆ ಭಾಷಾಮಾಧ್ಯಮದ ವಿಚಾರವಾಗಿ ನಡೆದ ಚಿಂತನೆಗಳನ್ನು ಗಮನಿಸಿದಾಗ ಒಂದುಕಡೆ ಅಭಿಮಾನದ ನೆಲೆಯೊಳಗಡೆ ಇದ್ದರೆ ಮತ್ತೊಂದು ಕಡೆ ವ್ಯಾವಹಾರಿಕ ನೆಲೆಯೊಳಗಡೆ ಇವೆ. ಇಂತಹ ಸಂದರ್ಭಗಳಲ್ಲಿ ಜನರು ಭಾಷೆಯನ್ನು ಅಭಿಮಾನದ ನೆಲೆಯೊಳಗಡೆ ನೋಡಿದರೂ ಮೊದಲನೇ ಪ್ರಾಶಸ್ತ್ಯ ಬದುಕಿನ ಭಾಗಕ್ಕೆ ನೀಡಿದ್ದಾರೆ. ಹೀಗಾಗಿಯೇ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರು ತಮ್ಮ ಮಾತೃಭಾಷೆಯಾದ ಕನ್ನಡವನ್ನು ಅಭಿಮಾನದ ನೆಲೆಯಲ್ಲಿ ನೋಡಿದರೂ, ಶಿಕ್ಷಣ ಉದ್ಯೋಗದ ಸಂದರ್ಭದಲ್ಲಿ ಇಂಗ್ಲಿಶ್ ಕಲಿಕೆ ಮತ್ತು ಬಳಕೆಗೆ ಮೊದಲ ಪ್ರಾಶಸ್ತ್ಯ ನೀಡಿದ್ದಾರೆ. ಹೀಗಾಗಿ ಕರ್ನಾಟಕದಲ್ಲಿನ ಮಾತೃಭಾಷಾಮಾಧ್ಯಮದ ಸಮಸ್ಯೆಯ ಬಗೆಗೆ ಮಾತನಾಡುವಾಗ ಅಥವಾ ಚರ್ಚಿಸುವಾಗ ನಾವು ಮೊದಲು ಭಾಷೆ ಅಥವಾ ಭಾಷೆಗಳನ್ನು ಬದುಕಿನ ಭಾಗವಾಗಿಸುವುದು ಹೇಗೆ? ಎಂಬ ಬಗೆಗೆ ತುಂಬಾ ಆಳವಾಗಿ ಮತ್ತು ಸೂಕ್ಷ್ಮವಾಗಿ ಚಿಂತಿಸಬೇಕಾದ ಅಗತ್ಯವಿದೆ. ಇದರ ಬಗೆಗೆ ಚಿಂತಿಸದೆ ಅಭಿಮಾನದ ನೆಲೆಯೊಳಗಡೆ ಹುಟ್ಟಿದ ಭಾಷಾಹೋರಾಟಗಳನ್ನು ಸಮಾಧಾನಪಡಿಸುವ ಉದ್ದೇಶದಿಂದ ಜಾರಿಗೆ ತರುವ ಭಾಷಾನೀತಿಗಳು ಭಾಷಾಸಮಸ್ಯೆಗೆ ಪರಿಹಾರ ನೀಡುವುದಿಲ್ಲ. ಬದಲಾಗಿ ಹೊಸ ಸಮಸ್ಯೆಗಳ ಹುಟ್ಟಿಗೆ ಕಾರಣವಾಗುತ್ತವೆ. ಹೀಗಾಗಿ ಯಾವುದೇ ಒಂದು ಪ್ರದೇಶದಲ್ಲಿ ಒಂದು ಭಾಷೆಯನ್ನು ಕಡ್ಡಾಯವಾಗಿ ಕಲಿಯುವಂತೆ, ಬಳಸುವಂತೆ ಭಾಷಾನೀತಿಯನ್ನು ಜಾರಿಗೊಳಿಸಲು ಪ್ರಯತ್ನಿಸುವಾಗ ಮೊದಲು ಆ ಭಾಷೆ ಅಥವಾ ಭಾಷೆಗಳನ್ನು ಅಲ್ಲಿನ ಜನರ ಬದುಕಿನ ಭಾಗವಾಗಿಸುವುದು ಹೇಗೆ ಎಂದು ಯೋಚಿಸಬೇಕಿದೆ.

ಈ ಬಗೆಗೆ ಯೋಚನೆ ಮಾಡದೆ ಭಾಷೆ ಅಥವಾ ಭಾಷೆಗಳನ್ನು ಅಭಿಮಾನದ ನೆಲೆಯೊಳಗಡೆ ನೋಡಿ ಭಾಷಾನೀತಿಯನ್ನು ಜಾರಿಗೆ ತಂದಿವೆ. ಇವುಗಳನ್ನು ರಾಜ್ಯದ ಎಲ್ಲಾ ಜನರು ಪಾಲಿಸಬೇಕು ಎಂದು ಹೇಳಿವೆ. ಇದರಿಂದಾಗಿ ರಾಜ್ಯದ ಎಲ್ಲಾ ಜನವರ್ಗಗಳು ಕರ್ನಾಟಕ ಸರ್ಕಾರದ ಮಾತೃಭಾಷಾಮಾಧ್ಯಮದ ಪರವಾದ ಭಾಷಾನೀತಿಯನ್ನು ಒಪ್ಪಿಲ್ಲ. ಇದನ್ನು ಮಾತೃಭಾಷೆಯ ಬಗೆಗೆ ಅಭಿಮಾನದ ನೆಲೆಯೊಳಗಡೆ ನೋಡಿರುವ ಜನವರ್ಗ ಮಾತ್ರ ಸ್ವಾಗತಿಸಿದೆ. ಉಳಿದ ಜನವರ್ಗಗಳು ಇದನ್ನು ನಿರಾಕರಿಸಿವೆ. ಇದನ್ನೇ ಬಂಡವಾಳ ಮಾಡಿಕೊಂಡಿರುವ ಖಾಸಗಿ ಶಿಕ್ಷಣ ಸಂಸ್ಥೆಗಳು

ಕರ್ನಾಟಕ ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ, ಜನರ ಬೇಡಿಕೆ ಮತ್ತು ಕಲಿಕೆಯ ಹಕ್ಕನ್ನು ಪ್ರಧಾನವಾಗಿಸಿಕೊಂಡು ಮಕ್ಕಳಿಗೆ ಇಂಗ್ಲಿಶ್‌ನಲ್ಲಿ ಕಲಿಸುತ್ತಿವೆ. ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಭಾಷೆ, ಭಾಷೆಯ ಉಗಮ, ಹಿನ್ನೆಲೆ, ಸ್ವರೂಪ, ಅವುಗಳ ಶಕ್ತಿ, ಸಾಮರ್ಥ್ಯ, ಭಾಷಾಬಳಕೆಯನ್ನು ತಪ್ಪಿಸುವುದರಿಂದ ಜಗತ್ತಿಗೆ, ಸಮಾಜಕ್ಕೆ, ಜನಾಂಗಕ್ಕೆ ಆಗುವ ನಷ್ಟ, ಇವುಗಳಿಂದ ಉಂಟಾಗುತ್ತಿರುವ ಸಮಸ್ಯೆ ಇತ್ಯಾದಿಗಳು ಮುಖ್ಯವಲ್ಲ. ಇವುಗಳಿಗೆ ಹಣ, ಸ್ವಾರ್ಥ, ವೈಯಕ್ತಿಕ ಹಿತಾಸಕ್ತಿ, ಪ್ರತಿಷ್ಠೆಗಳೇ ಪ್ರಧಾನ. ಹೀಗಾಗಿ ಸರ್ಕಾರಗಳ ಮಾತೃಭಾಷೆಯ ಪರವಾದ ಭಾಷಾನೀತಿಗಳ ಪಾಲನೆ, ಜನಸಮುದಾಯಗಳ ನಿಜವಾದ ಹಿತ, ಮಾತೃಭಾಷೆಗಳ ಅಭಿವೃದ್ಧಿ, ತಮ್ಮ ಪ್ರದೇಶದ ಭಾಷಾಸಮಸ್ಯೆಗಳಿಗೆ ಮಹತ್ವ ನೀಡಿಲ್ಲ. ಹೀಗಾಗಿ ಕರ್ನಾಟಕದಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳು ಕರ್ನಾಟಕ ಸರ್ಕಾರದ ಮಾತೃಭಾಷಾಮಾಧ್ಯಮದ ಪರವಾದ ಭಾಷಾನೀತಿಯನ್ನು ಉಲ್ಲಂಘಿಸಿ ಇಂಗ್ಲಿಶ್‌ನಲ್ಲಿ ಬೋಧಿಸುತ್ತಿವೆ. ಇದಕ್ಕೆ ಸುಪ್ರೀಂ ಕೋರ್ಟ್ ತೀರ್ಪು ಪೂರಕವಾಗಿ ಇದೆ.

ಏಕೆಂದರೆ ಸುಪ್ರೀಂಕೋರ್ಟ್‌ನ ತೀರ್ಪು ಈಗಾಗಲೇ ಚರ್ಚಿಸಿರುವ ಹಾಗೆ ಭಾರತ ಸಂವಿಧಾನ ಭಾರತೀಯ ಪ್ರಜೆಗೆ ನೀಡಿರುವ ಭಾಷಾಸ್ವಾತಂತ್ರ್ಯ ಮತ್ತು ಇತರ ಹಕ್ಕುಗಳು, ಕೇಂದ್ರ ಸರ್ಕಾರ ಭಾಷಾನೀತಿ, ಜನರ ಬದುಕು ಇತ್ಯಾದಿಗಳನ್ನು ಆಧರಿಸಿದೆ. ಸುಪ್ರೀಂಕೋರ್ಟ್‌ನ ತೀರ್ಪನ್ನು ಮೀರಿ ದೇಶದಲ್ಲಿ ಆಡಳಿತ ನಡೆಸುವ ಸರ್ಕಾರಗಳು ಭಾಷಾನೀತಿಯನ್ನು ಜಾರಿಗೊಳಿಸಲು ಸಾಧ್ಯವಿಲ್ಲ. ಹೀಗಾಗಿ ಸುಪ್ರೀಂಕೋರ್ಟ್‌ನ ತೀರ್ಪು ಮಾತೃಭಾಷಾಮಾಧ್ಯಮಕ್ಕೆ ಪೂರಕವಾಗಿ ಇಲ್ಲದೇ ಇರುವಾಗ ಸರ್ಕಾರಗಳು ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಗಳನ್ನು ಬದುಕಿನ ಭಾಗವಾಗಿಸಲು ಸಾಧ್ಯವಿಲ್ಲವೇ? ಆ ಮೂಲಕ ಮಾತೃಭಾಷೆಗಳನ್ನು ಅಭಿವೃದ್ಧಿ ಪಡಿಸಲು ಆಗುವುದಿಲ್ಲವೇ? ಎಂಬಂತಹ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗುತ್ತದೆ. ಏಕೆಂದರೆ ಇಂಗ್ಲೀಶರು ಭಾರತಕ್ಕೆ ಬಂದಾಗ ಇಂಗ್ಲಿಶ್ ಭಾಷೆ ಭಾರತದಲ್ಲಿ ಇರಲೇ ಇಲ್ಲ. ಆಗ ಅವರು ಭಾಷಾನೀತಿಯನ್ನು ಜಾರಿಗೊಳಿಸುವ ಮೂಲಕ ಎಲ್ಲಾ ಭಾರತೀಯರು ಕಡ್ಡಾಯವಾಗಿ ಇಂಗ್ಲಿಶ್ ಕಲಿಯಬೇಕು, ಬಳಸಬೇಕು ಎಂದು ಒತ್ತಡ ಹೇರಲಿಲ್ಲ. ಬದಲಾಗಿ ಶಿಕ್ಷಣಕ್ಕಾಗಿ ಬಳಸುವ ಸಂಪೂರ್ಣ ಹಣವನ್ನು ಇಂಗ್ಲಿಶ್ ಭಾಷೆಯ ಶಿಕ್ಷಣಕ್ಕೆ ಬಳಸಿ, ಇಂಗ್ಲಿಶ್‌ನ್ನು ಭಾರತೀಯರ ಬದುಕಿನ ಭಾಗವನ್ನಾಗಿಸಲು ಪ್ರಯತ್ನಿಸಿದರು. ಹೀಗಾಗಿ ಇಂಗ್ಲೀಶರು ಇಂಗ್ಲಿಶ್‌ನ್ನು ಕಲಿಯುವಂತೆ, ಬಳಸುವಂತೆ ಭಾಷಾನೀತಿಯ ಮೂಲಕ ಭಾರತೀಯರಿಗೆ ಒತ್ತಡ ಹೇರದಿದ್ದರೂ ಭಾರತೀಯರೇ ಅನಿವಾರ್ಯವಾಗಿ ಇಂಗ್ಲಿಶ್ ಕಲಿಯಲು ಆಸಕ್ತಿ ತೋರಿದ್ದರು. ಇದರ ಹಿಂದೆ ಸಾವಿರಾರು ವರ್ಷಗಳಿಂದ ಭಾರತೀಯ ಸಮಾಜದಲ್ಲಿ ಬೇರೂರಿದ್ದ ಜಾತಿ, ಧರ್ಮ, ವರ್ಗ, ಲಿಂಗ, ವೃತ್ತಿ ಇತ್ಯಾದಿ ಅಸಮಾನತೆಗಳನ್ನು ತೊಡೆದುಹಾಕಿ ಸಮಾನತೆ ತರುವುದು ಮತ್ತು ಬ್ರಾಹ್ಮಣರ ಹಿಡಿತದಲ್ಲಿದ್ದ ಶಿಕ್ಷಣವನ್ನು ಸಾರ್ವತ್ರಿಕರಣಗೊಳಿಸುವ ಉದ್ದೇಶ ಇದ್ದದ್ದು ಬೇರೆಯದೇ ಆದ ಮಾತು.

ಆದರೆ ಭಾರತೀಯ ಸಮಾಜದಲ್ಲಿದ್ದ ಅಸಮಾನತೆಯನ್ನು ನಾಶಗೊಳಿಸಿ, ಸಮಾನತೆಗಾಗಿ ಸಾರ್ವತ್ರಿಕರಣಗೊಂಡ ಭಾರತೀಯ ಶಿಕ್ಷಣ ಇಂದು ಭಾಷಾಮಾಧ್ಯಮದ ಆಧಾರದಲ್ಲಿ ಅಸಮಾನತೆ

ಹುಟ್ಟುಹಾಕಿದೆ. ಈ ಅಸಮಾನತೆಯ ಸೃಷ್ಟಿಯ ಹಿಂದೆ, ಹಿಂದೆ ಭಾರತೀಯ ಸಮಾಜದ ಅಸಮಾನತೆಗೆ ಕಾರಣವಾಗಿದ್ದ ಅದೇ ಹಳೆಯ ಜಾತಿ, ವರ್ಗಗಳ ಜೊತೆಗೆ ಜಾಗತಿಕ ಪ್ರಪಂಚದ ಆರ್ಥಿಕ ಶಕ್ತಿಗಳು ತನ್ನ ಪ್ರಭಾವ ಬೀರಿವೆ. ಇದರಿಂದಾಗಿ ಇಂದು ಕರ್ನಾಟಕದ ಶಿಕ್ಷಣ ಎರಡು ರೀತಿಯಲ್ಲಿ ವಿಂಗಡಣೆಗೊಂಡು ಅಸಮಾನತೆ ಹುಟ್ಟುಹಾಕಿದೆ. ಒಂದು ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣ. ಎರಡು ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡ ಮಾಧ್ಯಮದ ಶಿಕ್ಷಣ. ಈ ಭಾಷಾಮಾಧ್ಯಮದ ವಿಂಗಡಣೆಯ ಹಿಂದೆ ಕರ್ನಾಟಕದಲ್ಲಿ ಕೇವಲ ಭಾಷಿಕ ಆಯಾಮ ಮಾತ್ರ ಇಲ್ಲ. ಇದರ ಹಿಂದೆ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುವುದು ಶ್ರೇಷ್ಠ, ಉನ್ನತ, ಉತ್ತಮ, ಬುದ್ಧಿವಂತರು, ಶ್ರೀಮಂತರು ಎಂದೂ ಮಾತೃಭಾಷೆ ಅಥವಾ ಕನ್ನಡದಲ್ಲಿ ಕಲಿಯುವವರು ಕನಿಷ್ಠ, ಕೀಳು, ಕಳಪೆ ಗುಣಮಟ್ಟದವರು, ದಡ್ಡರು, ಆರ್ಥಿಕವಾಗಿ ಸಿರಿವಂತರಲ್ಲದ ಬಡವರು ಎಂದು ಅರ್ಥೈಸುವ ಮನಃಸ್ಥಿತಿ ಬೆಳೆದಿದೆ. ಇಲ್ಲಿ ಶ್ರೇಷ್ಠ ಎಂದು ಬಿಂಬಿತವಾಗಿರುವ ಭಾಷಾಮಾಧ್ಯಮದಲ್ಲಿ ಬೋಧನೆ ಮಾಡುತ್ತಿರುವ ಶಿಕ್ಷಣ ಸಂಸ್ಥೆಗಳು ಸರ್ಕಾರದ ಹಿಡಿತದಲ್ಲಿಲ್ಲ. ಇವು ಖಾಸಗಿ ಆಡಳಿತ ಮಂಡಳಿಗಳ ಒಡೆತನದಲ್ಲಿವೆ.

ಹೀಗಾಗಿ ಖಾಸಗಿ ಶಿಕ್ಷಣ ಸಂಸ್ಥೆಗಳು ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಮಕ್ಕಳಿಗೆ ಕಲಿಸಿದರೆ ವಿದ್ಯಾರ್ಥಿಗಳ ಪೋಷಕರಿಂದ ಹೆಚ್ಚಿನ ಹಣವನ್ನು ಶುಲ್ಕದ ರೂಪದಲ್ಲಿ ಪಡೆಯಲು ಸಾಧ್ಯವಾಗುವುದಿಲ್ಲ. ಇಂಗ್ಲಿಶ್ ಭಾಷಾಮಾಧ್ಯಮದ ಮೂಲಕ ಕಲಿಸಿದರೆ ಮಾತ್ರ ಹೆಚ್ಚು ಶುಲ್ಕ ಪಡೆಯಲು ಸಾಧ್ಯ ಎಂದು ಖಾಸಗಿ ಶಿಕ್ಷಣ ಸಂಸ್ಥೆಗಳು ನಂಬಿಕೊಂಡಿವೆ. ಇದಕ್ಕಾಗಿ ಈ ಶಿಕ್ಷಣ ಸಂಸ್ಥೆಗಳು ತಾವು ಶಾಲೆಯನ್ನು ಆರಂಭಿಸುವಾಗ ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಕನ್ನಡದಲ್ಲಿ ಬೋಧಿಸುತೇವೆ ಎಂದು ಸರ್ಕಾರದ ಷರತ್ತಿಗೆ ಒಳಪಟ್ಟು ಮುಚ್ಚಳಿಕೆ ಪತ್ರ ಬರೆದುಕೊಟ್ಟ ಶಾಲೆ ಆರಂಭಿಸಿದ ನಂತರದಲ್ಲಿಯೂ ಹೆಚ್ಚಿನ ಹಣದಾಸೆಗೆ ಸರ್ಕಾರದ ಭಾಷಾಮಾಧ್ಯಮದ ನೀತಿಯನ್ನು ಉಲ್ಲಂಘಿಸಿ ಇಂಗ್ಲಿಶ್‌ನಲ್ಲಿ ಬೋಧಿಸುತ್ತಿವೆ. ಇದಕ್ಕಾಗಿ ತಮ್ಮ ಶಿಕ್ಷಣ ಸಂಸ್ಥೆಗಳನ್ನು ಸರ್ಕಾರಿ ಶಿಕ್ಷಣ ಸಂಸ್ಥೆಗಳಿಗಿಂತ ಬಾಹ್ಯವಾಗಿ ಆಕರ್ಷಕವಾಗಿ ಕಾಣುವಂತೆ ಮಾಡಿ ಭಾಷಾಮಾಧ್ಯಮದ ಹೆಸರಿನಲ್ಲಿ ಪೋಷಕರಿಂದ ಹಣ ಸುಲಿಗೆ ಮಾಡುತ್ತಿವೆ. ಇವುಗಳ ಮೇಲೆ ಕ್ರಮಕೈಗೊಂಡು ಮಾತೃಭಾಷಾಮಾಧ್ಯಮದ ಶಾಲೆಗಳನ್ನು ಅಭಿವೃದ್ಧಿಪಡಿಸಬೇಕಾದ ಸರ್ಕಾರಿ ಅಧಿಕಾರಿಗಳು ಖಾಸಗಿ ಶಿಕ್ಷಣ ಸಂಸ್ಥೆಗಳ ಜೊತೆ ಆರ್ಥಿಕವಾಗಿ ಹೊಂದಾಣಿಕೆ ಮಾಡಿಕೊಂಡು ಸರ್ಕಾರಿ ಭಾಷಾನೀತಿಯನ್ನು ಉಲ್ಲಂಘಿಸುವ ಖಾಸಗಿ ಶಿಕ್ಷಣ ಸಂಸ್ಥೆಗಳ ಮೇಲೆ ಯಾವುದೇ ಕ್ರಮ ಕೈಗೊಂಡಿಲ್ಲ ಎಂಬ ಆರೋಪಗಳು ಕೇಳಿಬಂದಿವೆ.

ಖಾಸಗಿ ಶಿಕ್ಷಣ ಸಂಸ್ಥೆಗಳು ನಿಗದಿ ಪಡಿಸಿರುವ ದುಬಾರಿ ಶುಲ್ಕವನ್ನು ರಾಜ್ಯದ ಬಡಕುಟುಂಬಗಳ ಪೋಷಕರು ಪಾವತಿಸಲು ಸಾಧ್ಯವಾಗದೆ ತಮ್ಮ ಮಕ್ಕಳನ್ನು ಮಾತೃಭಾಷಾಮಾಧ್ಯಮದ ಶಾಲೆಗಳಿಗೆ ಸೇರಿಸಿದ್ದಾರೆ. ಇದು ರಾಜ್ಯದಲ್ಲಿ ಬಡ ಮತ್ತು ಶ್ರೀಮಂತ ಕುಟುಂಬಗಳು ನಡುವೆ ಅಂತರ ಕಾಯ್ದುಕೊಳ್ಳುವಂತೆ ಮಾಡಿದೆ. ಇದಕ್ಕೆ ಬೇಕಾದ ಪೂರಕ ನೆರವನ್ನು ಇಲ್ಲಿನ ಶ್ರೀಮಂತ ವರ್ಗ

ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ನೀಡುತ್ತಿದೆ. ಹೀಗಿದ್ದೂ ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ ಬೋಧನೆ ಮಾಡುತ್ತಿರುವ ಶಿಕ್ಷಣ ಸಂಸ್ಥೆಗಳ ಮೇಲೆ ಶಿಸ್ತುಕ್ರಮ ಜರುಗಿಸಬೇಕಾದ ಅಧಿಕಾರಿಗಳು ಅವುಗಳ ಮೇಲೆ ಶಿಸ್ತುಕ್ರಮವನ್ನು ಜರುಗಿಸಲು ಹಿಂದೇಟು ಹಾಕಿದ್ದಾರೆ. ಏಕೆಂದರೆ ಈಗಾಗಲೇ ಹೇಳಿದ ಹಾಗೆ ಖಾಸಗಿ ಶಿಕ್ಷಣ ಸಂಸ್ಥೆಗಳು ರಾಜಕಾರಣಿಗಳ, ಅಧಿಕಾರಿಗಳು ಮತ್ತು ಪ್ರಭಾವಿ ವ್ಯಕ್ತಿಗಳ ಹಿಡಿತದಲ್ಲಿವೆ. ಅಲ್ಲದೆ ಇಂತಹ ಶಿಕ್ಷಣ ಸಂಸ್ಥೆಗಳಲ್ಲಿ ಕಲಿಯುತ್ತಿರುವವರು . ಆರ್ಥಿಕವಾಗಿ ಶ್ರೀಮಂತರಾಗಿರುವವರ ಮಕ್ಕಳು. ಇವರು ತಮ್ಮ ಮಕ್ಕಳ ಭವಿಷ್ಯಕ್ಕಾಗಿ ಯಾವುದೇ ರೀತಿಯ ಪೈಪೋಟಿಯನ್ನು ನಡೆಸಿ ತಮ್ಮ ಮಕ್ಕಳಿಗೆ ಅಗತ್ಯವಾದ ಶಿಕ್ಷಣ ಕೊಡಿಸಬಲ್ಲರು. ಇವರ ವಿರೋಧವನ್ನು ಕಟ್ಟಿಕೊಂಡು ಕರ್ತವ್ಯ ನಿರ್ವಹಿಸುವುದು ಕಷ್ಟವೆಂದು ಶಿಕ್ಷಣ ಇಲಾಖೆಯ ಅಧಿಕಾರಿಗಳು ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ ಇಂಗ್ಲಿಶ್‌ನಲ್ಲಿ ಬೋಧಿಸುತ್ತಿದ್ದರೂ ಕಂಡೂಕಾಣದ ಹಾಗೆ ತಟಸ್ಥರಾಗಿದ್ದಾರೆ. ಮತ್ತೆ ಕೆಲವು ಅಧಿಕಾರಿಗಳು ಖಾಸಗಿ ಶಿಕ್ಷಣ ಸಂಸ್ಥೆಗಳು ನೀಡುವ ಲಂಚದಾಸೆಗೆ ಒಳಗಾಗಿ ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ ಬೋಧನೆ ಮಾಡುತ್ತಿರುವ ಶಿಕ್ಷಣ ಸಂಸ್ಥೆಗಳ ಮೇಲೆ ಶಿಸ್ತುಕ್ರಮ ಜರುಗಿಸಿಲ್ಲ.

ಆದರೆ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಸರ್ಕಾರದ ಹಿಡಿತದಲ್ಲಿವೆ. ಇಲ್ಲಿ ಸಾಮಾಜಿಕ ನ್ಯಾಯ, ಸಮಾನ ಶಿಕ್ಷಣ, ಜನಸಮುದಾಯಗಳ ಭಾಷಿಕ ಹಿತದಿಂದ ಪ್ರಾಥಮಿಕ ಮತು ಮಾಧ್ಯಮಿಕ ಶಿಕ್ಷಣವನ್ನು ಕನ್ನಡ ಅಥವಾ ಮಾತೃಭಾಷಾ ಮಾಧ್ಯಮದಲ್ಲಿ ಕಲಿಸಲಾಗುತ್ತಿದೆ. ಆದರೆ ಪ್ರೌಢಶಿಕ್ಷಣದ ನಂತರದ ವಿದ್ಯಾಭ್ಯಾಸವನ್ನು ಮಾತೃಭಾಷೆ ಇಲ್ಲವೆ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಸುತ್ತಿಲ್ಲ. ಈಗಾಗಲೇ ಚರ್ಚಿಸಿರುವ ಹಾಗೆ ಕರ್ನಾಟಕದ ಉನ್ನತ ಮತ್ತು ವೃತ್ತಿಪರ ಶಿಕ್ಷಣದಲ್ಲಿ ಇಂಗ್ಲಿಶ್‌ನ್ನು ಬೋಧನಾ ಮಾಧ್ಯಮವಾಗಿ ಬಳಲಾಗುತ್ತಿದೆ. ಇದರಿಂದಾಗಿ ಪ್ರಾಥಮಿಕ ಶಿಕ್ಷಣವನ್ನು ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಮಾತೃಭಾಷಾಮಾಧ್ಯಮದಲ್ಲಿ ಕಲಿತವರು ಉನ್ನತ ಮತ್ತು ವೃತ್ತಿಪರ ಶಿಕ್ಷಣದ ಕಡೆಗೆ ಮುಂದುವರಿದಂತೆಲ್ಲಾ ಭಾಷಾಸಮಸ್ಯೆಗೆ ಒಳಗಾಗಿದ್ದಾರೆ. ಇದಕ್ಕೆ ಮುಖ್ಯಕಾರಣ ಪ್ರಾಥಮಿಕ ಶಿಕ್ಷಣ ವಿದ್ಯಾರ್ಥಿಗಳ ಮಾತೃಭಾಷೆ ಇಲ್ಲವೆ ಕನ್ನಡದಲ್ಲಿದ್ದು ಉನ್ನತ ಮತ್ತು ವೃತ್ತಿಪರ ಶಿಕ್ಷಣ ಇಂಗ್ಲಿಶ್ ಮಾಧ್ಯಮದಲ್ಲಿರುವುದು. ಇದು ಕರ್ನಾಟಕದ ಭಾಷಾಮಾಧ್ಯಮದ ಸಮಸ್ಯೆಯನ್ನು ತೀವ್ರಗೊಳಿಸಿದೆ. ಈ ಸಮಸ್ಯೆಯಿಂದ ತಮ್ಮ ಮಕ್ಕಳನ್ನು ಪಾರುಮಾಡಲು ಪೋಷಕರು ಕರ್ನಾಟಕ ಸರ್ಕಾರದ ಮಾತೃಭಾಷಾಮಾಧ್ಯಮದ ಪರವಾದ ಭಾಷಾನೀತಿಯನ್ನು ಉಲ್ಲಂಘಿಸಿ ಖಾಸಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ.

ಇದರಿಂದಾಗಿ ಸರ್ಕಾರಿ ಶಾಲೆಗಳೆಂದರೆ ಮಾತೃಭಾಷೆ ಇಲ್ಲವೆ ಕನ್ನಡ ಮಾಧ್ಯಮದ ಶಾಲೆಗಳು ಎಂತಲೂ, ಖಾಸಗೀ ಶಾಲೆಗಳೆಂದರೆ ಇಂಗ್ಲಿಶ್ ಮಾಧ್ಯಮದ ಶಾಲೆಗಳು ಎಂದು ಕರೆಯುವ ಪರಿಸ್ಥಿತಿ ನಿರ್ಮಾಣವಾಗಿದೆ. ವಾಸ್ತವವಾಗಿ ರಾಜ್ಯದಲ್ಲಿರುವ ಶಿಕ್ಷಣ ಸಂಸ್ಥೆಗಳನ್ನು ಭಾಷಾಮಾಧ್ಯಮದ ಆಧಾರದಲ್ಲಿ ವಿಂಗಡಣೆ ಮಾಡಿಲ್ಲ. ಆಡಳಿತದ ಅನುಕೂಲಕ್ಕಾಗಿ ಸರ್ಕಾರಿ, ಅನುದಾನಿತ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು ಎಂದು ವಿಂಗಡಣೆ ಮಾಡಲಾಗಿದೆ. ಆದರೆ ಭಾಷಾಮಾಧ್ಯಮದ

ಆಧಾರದಲ್ಲಿ ಶಿಕ್ಷಣ ಸಂಸ್ಥೆಗಳನ್ನು ನೋಡುವ ದೃಷ್ಟಿಕೋನ ಜನತೆಯ ಮನಸ್ಸಲ್ಲಿ ಬೆಳೆದ ನಂತರ ಶಿಕ್ಷಣ ಸಂಸ್ಥೆಗಳ ನಡುವೆ ಅಸಮಾನತೆ ಉಂಟಾಗಿದೆ. ಈ ಅಸಮಾನತೆ ಹಿಂದೆ ನಗರ ಪ್ರದೇಶಗಳಲ್ಲಿ ಮಾತ್ರ ಇತ್ತು. ಈಗ ನಗರ ಮತ್ತು ಹಳ್ಳಿ ಎಂಬ ವ್ಯತ್ಯಾಸವಿಲ್ಲದೆ ಎಲ್ಲಾ ಕಡೆಗು ವ್ಯಾಪಿಸಿದೆ. ಇದರಿಂದಾಗಿ ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಸಿಗುವ ಉಚಿತ ಶಿಕ್ಷಣ ಗ್ರಾಮೀಣ ಭಾಗದ ಕೂಲಿಕಾರ್ಮಿಕರ ಮಕ್ಕಳಿಗೂ ಬೇಡವಾಗಿದೆ. ಎಲ್ಲರಿಗೂ ತಮ್ಮ ಮಕ್ಕಳನ್ನು ಇಂಗ್ಲಿಶ್‌ಭಾಷಾ ಮಾಧ್ಯಮದಲ್ಲಿ ಕಲಿಸಿ ಶ್ರೀಮಂತರಾಗುವ ಆಸೆ. ಅದಕ್ಕಾಗಿ ತಮ್ಮ ಮಕ್ಕಳನ್ನು ತಮ್ಮ ಕುಟುಂಬದ ಆರ್ಥಿಕ ಪರಿಸ್ಥಿತಿಯ ಶಕ್ತಿಮೀರಿ ಇಂಗ್ಲಿಷ್ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸುತ್ತಿದ್ದಾರೆ. ಇದು ರಾಜ್ಯದಲ್ಲಿ ಜಾತಿ, ಧರ್ಮ, ಆರ್ಥಿಕತೆ, ಸಾಮಾಜಿಕ, ಶೈಕ್ಷಣಿಕ, ಪ್ರಾದೇಶಿಕ, ಶ್ರೇಣೀಕೃತ ಅಸಮಾನತೆಗಳ ರೂಪ ಪಡೆದಿದೆ.

ಹೀಗಾಗಿ "ಶಿಕ್ಷಣ ಮಾಧ್ಯಮದ ಪ್ರಶ್ನೆ ಕೇವಲ ಭಾಷೆಗೆ ಸೀಮಿತವಾದುದಲ್ಲ. ಒಟ್ಟು ಶಿಕ್ಷಣ ಪದ್ಧತಿ, ಪಠ್ಯಕ್ರಮ, ಸಾಮಾಜಿಕ-ಆರ್ಥಿಕ ಸನ್ನಿವೇಶಗಳಿಂದ ಉಂಟಾಗುವ ನೀತಿ ನಿರೂಪಣೆಯ ನೆಲೆ-ಹೀಗೆ ವಿವಿಧ ಅಂಶಗಳ ಅಂತರ್ ಸಂಬಂಧವನ್ನು ಗ್ರಹಿಸುತ್ತಲೇ ಶಿಕ್ಷಣ ಮಾಧ್ಯಮದ ನಿಲುವುಗಳನ್ನು ಖಚಿತಪಡಿಸಿಕೊಳ್ಳುವುದು ಸೂಕ್ತ[೧೨]" ಎಂದಿದ್ದಾರೆ ನಾಡಿನ ಚಿಂತಕರಾದ ಬರಗೂರು ರಾಮಚಂದ್ರಪ್ಪನವರು. ಕರ್ನಾಟಕದ ಭಾಷಾಮಾಧ್ಯಮದ ಸಮಸ್ಯೆಯ ಹಿಂದಿರುವ ಇದುವರೆಗೆ ಚರ್ಚಿಸಿದ ಅಂಶಗಳನ್ನು ಪ್ರಧಾನವಾಗಿಸಿಕೊಂಡು ಪರಿಹರಿಸುವ ಕಾರ್ಯಗಳು ಆಗಬೇಕು. ಆಗ ಮಾತ್ರ ಕರ್ನಾಟಕದ ಮಾತೃಭಾಷಾಮಾಧ್ಯಮದ ಸಮಸ್ಯೆ ಬಗೆಹರಿಸಲು ಸಾಧ್ಯ. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಇದುವರೆಗೆ ಇಂತಹ ಕೆಲಸ ಮಾಡದೆ ಕೇವಲ ಮಾತೃಭಾಷಾ ಮಾಧ್ಯಮದಪರ ಹೋರಾಟಗಾರರನ್ನು ಸಮಾಧಾನಗೊಳಿಸುವ ಉದ್ದೇಶದಿಂದ ಭಾಷಾನೀತಿಗಳನ್ನು ಜಾರಿಗೆ ತಂದು ಅವುಗಳ ಅನುಷ್ಠಾನಕ್ಕೆ ಅಸಮರ್ಪಕವಾಗಿ ಹಣ ಹಂಚಿಕೆ ಮಾಡಿ, ಮಾತೃಭಾಷಾಮಾಧ್ಯಮದ ಅಭಿವೃದ್ಧಿಗೆ ಪೂರಕವಾಗಿ ಸ್ಪಂದಿಸದಿರುವುದರಿಂದ ಭಾಷಾಮಾಧ್ಯಮದ ಸಮಸ್ಯೆ ಜೀವಂತವಾಗಿ ಉಳಿದುಕೊಂಡಿದೆ.

### ೪.೩ ಕನ್ನಡ ಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು

ಕನ್ನಡ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರ ಮಾತೃಭಾಷೆ. ಮತ್ತು ೧೯೬೩ರ ನಂತರ ಕರ್ನಾಟಕ ರಾಜ್ಯದ ಅಧಿಕೃತ ಆಡಳಿತ ಭಾಷೆ. ಕರ್ನಾಟಕ ರಾಜ್ಯ ರಚನೆಗೊಂಡಿರುವುದೇ ಕನ್ನಡ ಭಾಷೆಯ ಆಧಾರದಲ್ಲಿ. ಹೀಗಾಗಿ ಕರ್ನಾಟಕದಲ್ಲಿ ಕನ್ನಡವೇ ಶಿಕ್ಷಣದ ಬೋಧನಾ ಮಾಧ್ಯಮವಾಗಬೇಕು ಎಂಬುದು ಕನ್ನಡಿಗರಲ್ಲಿನ ಒಂದು ವರ್ಗದ ಒತ್ತಾಯ. ಇದಕ್ಕೆ ಪೂರಕವಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಭಾಷಾನೀತಿಗಳನ್ನು ಜಾರಿಗೆ ತಂದು ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳಿಗೆ ಅನುಷ್ಠಾನಗೊಳಿಸುವಂತೆ ಆದೇಶಿಸಿವೆ. ಆದರೂ ಕರ್ನಾಟಕದಲ್ಲಿ ಸರ್ಕಾರಗಳು ಹೊರಡಿಸಿರುವ ಕನ್ನಡ ಭಾಷಾಮಾಧ್ಯಮದ ಪರವಾದ ಭಾಷಾನೀತಿಗಳು ಸಂಪೂರ್ಣವಾಗಿ ಅನುಷ್ಠಾನಗೊಂಡಿಲ್ಲ. ಏಕೆಂದರೆ

ಈಗಾಗಲೆ ಚರ್ಚಿಸಿರುವ ಹಾಗೆ ಕನ್ನಡ ಮಾಧ್ಯಮದ ಶಾಲೆಗಳೆಂದರೆ ಸರ್ಕಾರಿ ಶಾಲೆಗಳು. ಇಲ್ಲಿ ಮೂಲಭೂತ ಸೌಕರ್ಯಗಳಿರುವುದಿಲ್ಲ. ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಸಮರ್ಪಕವಾಗಿ ಶಿಕ್ಷಕರು ಇಲ್ಲ. ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕರು ವರ್ಗಾವಣೆಗೊಂಡರೆ ಆ ಸ್ಥಾನಗಳಿಗೆ ಮತ್ತೆ ವರ್ಷಗಳಾದರೂ ಶಿಕ್ಷಕರ ಹುದ್ದೆಗಳು ಭರ್ತಿಯಾಗುವುದಿಲ್ಲ. ಶಾಲೆಗಳಲ್ಲಿ ಶಿಕ್ಷಕರಿಲ್ಲದೆ ನಮ್ಮ ಮಕ್ಕಳು ಏನನ್ನು ಕಲಿಯಲು ಸಾಧ್ಯ? ಸರ್ಕಾರಿ ಶಾಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರಿಗೆ ಉದ್ಯೋಗದ ಭದ್ರತೆ ಇರುವುದರಿಂದ ಮತ್ತು ಅಲ್ಲಿನ ಒಳರಾಜಕಾರಣ, ಮೂಲಭೂತ ಸೌಕರ್ಯಗಳ ಕೊರತೆ, ಅಶಿಸ್ತು, ರಾಜಕಾರಣಿಗಳು, ಅಧಿಕಾರಿಗಳ ಪಕ್ಷಪಾತದ ಧೋರಣೆಯಿಂದಾಗಿ ಪ್ರತಿಭಾವಂತ, ಪ್ರಾಮಾಣಿಕ ಶಿಕ್ಷಕರು ತಮ್ಮ ಕ್ರಿಯಾಶೀಲತೆ ಕಳೆದುಕೊಂಡಿದ್ದಾರೆ. ಇಲ್ಲಿ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ಕಲಿಸಲಿಲ್ಲವೆಂದರೆ ಉದ್ಯೋಗ ಕಳೆದುಕೊಳ್ಳುವ ಭಯ ಇಲ್ಲ. ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಶಿಸ್ತು, ಸಮಯಪಾಲನೆ, ಶಿಕ್ಷಕರಿಗೆ ಸಮರ್ಪಣಾ ಮನೋಭಾವ ಇಲ್ಲ. ಅವರದು ಬೆಲ್ಲು-ಬಿಲ್ಲು ಎಂಬಂತಾಗಿದೆ. ಹೀಗಿರುವಾಗ ತಮ್ಮ ಮಕ್ಕಳನ್ನು ಸರ್ಕಾರದ ಕನ್ನಡ ಮಾಧ್ಯಮದ ಶಾಲೆಗಳಿಗೆ ಸೇರಿಸಿ ಗುಣಮಟ್ಟದ ಶಿಕ್ಷಣ ನಿರೀಕ್ಷಿಸಲು ಸಾಧ್ಯವೇ? ಎಂಬ ಆಲೋಚನೆ ಪೋಷಕರದ್ದಾಗಿದೆ.

ಕನ್ನಡ ಭಾಷಾಮಾಧ್ಯಮದ ಶಾಲೆಗಳು ಸರ್ಕಾರಿ ಶಾಲೆಗಳಾಗಿದ್ದು ಇಲ್ಲಿ ಮೂಲಭೂತ ಸೌಕರ್ಯಗಳು ಇಲ್ಲ. ಇಲ್ಲಿ ನಮ್ಮ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ದೊರಕುವುದಿಲ್ಲ. ಖಾಸಗೀ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳು ಇವೆ. ಇಲ್ಲಿ ಗುಣಮಟ್ಟದ ಶಿಕ್ಷಣ ದೊರಕುತ್ತದೆ. ಕನ್ನಡ ಮಾಧ್ಯಮದ ಶಾಲೆಗಳಲ್ಲು ಮೂಲಭೂತ ಸೌಕರ್ಯಗಳು ಗುಣಮಟ್ಟದ ಶಿಕ್ಷಣ, ಶಿಸ್ತು, ಸಮಯಪಾಲನೆ, ಶಿಕ್ಷಕರಲ್ಲಿ ಸಮರ್ಪಣಾ ಮನೋಭಾವ ಇತ್ಯಾದಿಗಳು ಇದ್ದರೆ ನಾವೂ ನಮ್ಮ ಮಕ್ಕಳನ್ನು ಕನ್ನಡ ಮಾಧ್ಯಮದ ಶಾಲೆಗಳಿಗೆ ಸೇರಿಸುತ್ತಿದ್ದೆವು ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ. ಇದಕ್ಕೆ "ಆಂಗ್ಲ ಮಾಧ್ಯಮದ ಶಾಲೆಗಳಷ್ಟೇ ಚೆನ್ನಾಗಿದ್ದರೆ, ಕನ್ನಡ ಶಾಲೆಗಳಿಗೂ ಪೋಷಕರು ತಮ್ಮ ಮಕ್ಕಳನ್ನು ಕಲಿಸುತ್ತಾರೆ ಎಂಬ ಭ್ರಮೆ ನಮಗೂ ಇತ್ತು. ಕನ್ನಡ ಭಾಷೆಯ ಬಗೆಗೆ ಕಾಳಜಿ ಇರುವ ಹಾಗೂ ಹೋರಾಟ ಮಾಡಿಕೊಂಡೇ ಬಂದಿರುವ ನನ್ನಂತಹ ಕೆಲವು ಕನ್ನಡ ಕಾರ್ಯಕರ್ತರು ಡಾ.ಹೆಚ್.ತಿಪ್ಪೇರುದ್ರಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ಮೈಸೂರಿನ ರಾಮಕೃಷ್ಣನಗರದಲ್ಲಿ 'ನೃಪತುಂಗ ಕನ್ನಡ ಶಾಲೆ' ಎಂಬ ಒಂದು ಸುಸಜ್ಜಿತ ಕನ್ನಡ ಶಾಲೆಯನ್ನು ಐದು ವರ್ಷಗಳ ಹಿಂದೆ ಪ್ರಾರಂಭ ಮಾಡಿದೆವು. ಉತ್ತಮ ಬೋಧನೆಯ ಜತೆಗೆ ಭವ್ಯ ಕಟ್ಟಡ, ಸುಸಜ್ಜಿತ ಪೀಠೋಪಕರಣ, ಆಕರ್ಷಕ ಸಮವಸ್ತ್ರಗಳ ಕಡೆ ಗಮನ ಕೊಟ್ಟು ಆಂಗ್ಲಶಾಲೆಗಳಿಗೆ ಸದೃಶವಾದ ಕನ್ನಡ ಶಾಲೆಯನ್ನೇ, ಪೋಷಕರಿಗೆ ಭಾರ ಎನಿಸದಷ್ಟು ಶುಲ್ಕ ಪಡೆದು ನಡೆಸುತ್ತಿದ್ದೇವೆ. ಆದರೆ ಕಳೆದ ಐದು ವರ್ಷಗಳಿಂದ ನಮ್ಮ ಶಾಲೆಗೆ ಸೇರುತ್ತಿದ್ದ ಮಕ್ಕಳ ಸಂಖ್ಯೆ ತೀರಾ ನಿರುತ್ಸಾಹದಾಯಕವಾಗಿತ್ತು. ಆರ್ಥಿಕ ನಷ್ಟದಲ್ಲಿ ನಾವು ಶಾಲೆಯನ್ನು ನಡೆಸಿಕೊಂಡು ಬರುತ್ತಿದ್ದೇವೆ. ಅದೇ ಸಂದರ್ಭದಲ್ಲಿ ಆಸುಪಾಸಿನಲ್ಲಿ ನಮ್ಮ ಶಾಲೆಗೆ ಕಿಂಚಿತ್ತೂ ಹೋಲಿಸಲಾಗದ, ಕಡಿಮೆ ದರ್ಜೆಯ ಆಂಗ್ಲಶಾಲೆಗಳಿಗೆ ಒಳ್ಳೆಯ ಸಂಖ್ಯೆಯಲ್ಲೇ ಮಕ್ಕಳು ಸೇರುತ್ತಿದ್ದರು[೧೩]" ಎಂದಿದ್ದಾರೆ ಸಾ.ರಾ.ಸುದರ್ಶನರವರು.

ಇದನ್ನು ಗಮನಿಸಿದಾಗ ಈಗಾಗಲೇ ಚರ್ಚಿಸಿರುವ ಹಾಗೆ ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಮೂಲಭೂತ ಸೌಕರ್ಯ, ಗುಣಮಟ್ಟದ ಶಿಕ್ಷಣದ ಕೊರತೆ ಇರುವುದು ಸತ್ಯ. ಇದಕ್ಕೆ ಸರ್ಕಾರದ ತೀರ್ಮಾನಗಳು, ಶಿಕ್ಷಣ ಕ್ಷೇತ್ರದಲ್ಲಿನ ಅಧಿಕಾರಿಗಳು, ಶಿಕ್ಷಕರು, ಸ್ಥಳೀಯ ರಾಜಕಾರಣಿಗಳು, ಖಾಸಗಿ ಶಿಕ್ಷಣ ಸಂಸ್ಥೆಗಳ ಪ್ರಭಾವ ಕಾರಣ ಇರಬಹುದು. ಆದರೆ ಇವಿಷ್ಟೇ ಕಾರಣಕ್ಕೆ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ಸೇರಿಸುತ್ತಿದ್ದಾರೆ ಎಂದು ಭಾವಿಸುವುದು ತಪ್ಪು. ಇಲ್ಲಿ ಸಾ.ರಾ.ಸುದರ್ಶನರವರು ಗುರುತಿಸಿದ ಹಾಗೆ ಕನ್ನಡ ಭಾಷಾಮಾಧ್ಯಮದ ಶಾಲೆಗಳಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣ, ಅತ್ಯಾಧುನಿಕವಾದ ಮೂಲಭೂತ ಸೌಕರ್ಯಗಳನ್ನು ಒದಗಿಸಿದಾಗಲೂ ಪೋಷಕರು ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮದ ಶಾಲೆಗಳಿಗೆ ಸೇರಿಸದೆ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ಸೇರಿಸಿದ್ದಾರೆ. ಈಗಲೂ ಸೇರಿಸುತ್ತಿದ್ದಾರೆ. ಪೋಷಕರು ಶಾಲೆಗಳ ಗುಣಮಟ್ಟ, ಮೂಲಭೂತ ಸೌಕರ್ಯಗಳನ್ನು ವಿಚಾರಿಸುವುದಕ್ಕಿಂತ ಮೊದಲು ಶಾಲಾನಾಮಫಲಕದಲ್ಲಿ ಯಾವ ಭಾಷಾಮಾಧ್ಯಮವನ್ನು ನಮೂದಿಸಿದ್ದಾರೆ ಎಂದು. ಹೀಗಾಗಿ ಶಿಕ್ಷಣದಲ್ಲಿ ಭಾಷಾಮಾಧ್ಯಮದ ಆಯ್ಕೆಯ ಹಿಂದೆ ಗುಣಮಟ್ಟ ಮತ್ತು ಮೂಲಭೂತ ಸೌಕರ್ಯ ಕೊರತೆ ಮಾತ್ರವಲ್ಲದೆ ಇತರೆ ಆಯಾಮಗಳಿವೆ. ಇವುಗಳನ್ನು ಕಂಡುಕೊಳ್ಳದೆ, ಇವುಗಳಿಗೆ ಪರಿಹಾರ ಕಂಡುಕೊಳ್ಳದೆ ಭಾಷಾಮಾಧ್ಯಮದ ಸಮಸ್ಯೆ ಪರಿಹರಿಸಲು ಸಾಧ್ಯವಿಲ್ಲ.

ಇದಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ನೇಮಕವಾಗಿರುವ ಭಾಷಾಸಮಿತಿಗಳು ಸಲಹೆ ನೀಡಿದ್ದರೂ ಇಲ್ಲಿನ ಸರ್ಕಾರಗಳು ಭಾಷಿಕ ನೆಲೆಯೊಳಗಡೆ ಅದೂ ಪ್ರಾಥಮಿಕ ಹಂತದ ಶಿಕ್ಷಣದಲ್ಲಿ ಮಾತ್ರ ಭಾಷಾಮಾಧ್ಯಮದ ಸಮಸ್ಯೆಯನ್ನು ಪರಿಹರಿಸಲು ಪ್ರಯತಿಸಿವೆ. ಇದರಿಂದಾಗಿ ಇಂದು ನಗರ ಮತ್ತು ಗ್ರಾಮೀಣ ಪ್ರದೇಶವೆಂಬ ವ್ಯತ್ಯಾಸವಿಲ್ಲದೆ ಎಲ್ಲಾ ಭಾಗಗಳ ಪೋಷಕರು ತಮ್ಮ ಮಕ್ಕಳನ್ನು ಸರ್ಕಾರದ ಭಾಷಾನೀತಿ ಉಲ್ಲಂಘಿಸಿ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡುತ್ತಿದ್ದಾರೆ. ಇಲ್ಲಿ ಕನ್ನಡ ಭಾಷಾಮಾಧ್ಯಮದ ಕಲಿಕೆಗೆ ಮತ್ತೊಂದು ಸಮಸ್ಯೆಯೂ ಇದೆ. ಅದೇನೆಂದರೆ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ಸೇರಿದ ಮಕ್ಕಳು ಇಂಗ್ಲಿಶ್ ಭಾಷೆಯ ವರ್ಣಮಾಲೆ ಓದುವುದು, ಬರೆಯುವುದು, ಕೆಲವೊಂದು ವಸ್ತು, ಪ್ರಾಣಿ, ಪಕ್ಷಿಗಳ ಹೆಸರು, ಅಂಕಿಗಳನ್ನು ಹೇಳಿ, ಬರೆದ ಮಾತ್ರಕ್ಕೆ ತಮ್ಮ ಮಕ್ಕಳು ಇಂಗ್ಲಿಶ್ ಕಲಿತುಬಿಟ್ಟರು, ಕನ್ನಡ ಮಾಧ್ಯಮದಲ್ಲಿ ಕಲಿತಿದ್ದರೆ ಇದು ಸಾಧ್ಯವಾಗುತ್ತಿರಲಿಲ್ಲ ಎಂದು ಕನ್ನಡ ಮಾಧ್ಯಮದಲ್ಲಿ ಕಲಿಯುತ್ತಿರುವ ಮಕ್ಕಳ ಜೊತೆ ಹೋಲಿಕೆ ಮಾಡಿ ತಮ್ಮ ಮಕ್ಕಳು ಶ್ರೇಷ್ಠರು, ಬುದ್ಧಿವಂತರು ಎಂದು ಬಿಂಬಿಸುವ ಪ್ರಯತ್ನಗಳು ನಡೆದಿವೆ. ಇದು ಕನ್ನಡದಲ್ಲಿ ಕಲಿಯುತ್ತಿರುವ ಮಕ್ಕಳಲ್ಲಿ ಕೀಳು ಎಂಬ ಭಾವನೆ ಹುಟ್ಟುಹಾಕಿ ಮಾನಸಿಕ ಆಘಾತ ಉಂಟುಮಾಡಿದೆ. ಮತ್ತು ಕನ್ನಡ ಮಾಧ್ಯಮದ ಶಿಕ್ಷಣದಿಂದ ವಿಮುಖರಾಗುವಂತೆ ಮಾಡಿದೆ.

ಇಂತಹ ಮನೋಭಾವನೆಯ ಕಾರಣದಿಂದಾಗಿ ಕನ್ನಡ ಅಥವಾ ಮಾತೃಭಾಷಾ ಮಾಧ್ಯಮದ ಶಾಲೆಗಳಲ್ಲಿ ಕಲಿತು ಎಸ್.ಎಸ್.ಎಲ್.ಸಿ ಮತ್ತು ಪಿಯುಸಿಯಲ್ಲಿ ಪರೀಕ್ಷೆಗಳಲ್ಲಿ ಶೇಕಡಾ ೯೦ ಮತ್ತು ಅದಕ್ಕಿಂತಲೂ ಅಧಿಕ ಅಂಕಗಳನ್ನು ಪಡೆದುಕೊಂಡಿದ್ದಾಗಲೂ ಕನ್ನಡ ಭಾಷಾಮಾಧ್ಯಮದಲ್ಲಿ ಶೇಕಡಾ

೯೦, ೯೫ರಷ್ಟು ಅಂಕಗಳನ್ನು ತೆಗೆದುಕೊಳ್ಳುವುದು ಏನು ಮಹಾ! ಇಂಗ್ಲಿಶ್ ಮಾಧ್ಯಮದಲ್ಲಿ ತೆಗೆದುಕೊಂಡಿದ್ದರೆ ಉತ್ತಮ ಕಾಲೇಜಿನಲ್ಲಿ ದಾಖಲಾತಿಯಾದರೂ ಸಿಗುತ್ತಿತ್ತು. ಕನ್ನಡದಲ್ಲಿ ಎಷ್ಟು ತೆಗೆದುಕೊಂಡರೆ ಏನು? ಇಂಗ್ಲಿಶ್ ಬರಲ್ಲ ಅನ್ನೋಕಾರಣಕ್ಕೆ ಒಳ್ಳೆಯ ಕಾಲೇಜಿನಲ್ಲಿ ಸೀಟು ಸಿಗಲ್ಲ. ನೀನು ಸೈನ್ಸು, ಕಾಮರ್ಸ್ ಓದಕ್ಕಾಗಲ್ಲ. ಆರ್ಟ್ಸ್ ಓದಿ ಏನು ಮಾಡುತ್ತೀಯ ಎಂದು ಕನ್ನಡದಲ್ಲಿ ಕಲಿತವರನ್ನು ಕೀಳಾಗಿ ಕಾಣುವ ಪರಿಸ್ಥಿತಿ ಬೆಳೆದಿದೆ. ಇದೇ ಇಂಗ್ಲಿಶ್‌ನಲ್ಲಿ ಕಲಿತು ಶೇ.೫೫, ೬೦ರಷ್ಟು ಅಂಕಗಳನ್ನು ತೆಗೆದುಕೊಂಡಿದ್ದರೂ ಅವರನ್ನು ಹೊಗಳುವ, ಬುದ್ಧಿವಂತರೂ ಎಂದು ಪರಿಗಣಿಸುವ ಸ್ಥಿತಿ ಇದೆ. ಈ ರೀತಿಯ ಭಾವನೆಯನ್ನು ಹೊಂದಿರುವುದು ಅನಕ್ಷರಸ್ತರು ತಿಳುವಳಿಕೆಯಿಲ್ಲದವರಲ್ಲ. ಓದು, ಬರಹ ಗೊತ್ತಿದ್ದು ಶಾಲೆ, ಕಾಲೇಜುಗಳಲ್ಲಿ ಶಿಕ್ಷಕರಾಗಿ, ಉಪನ್ಯಾಸಕರಾಗಿ ಕೆಲಸ ಮಾಡುತ್ತಿರುವವರು ಮತ್ತು ಇತರೆ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ವಿದ್ಯಾವಂತ ಸಮೂಹವೇ ಆಗಿದೆ.

ಇದರಿಂದಾಗಿ ರಾಜ್ಯದ ಪಿಯು ಕಾಲೇಜುಗಳ ಆಡಳಿತ ಮಂಡಳಿಗಳು ವಿಜ್ಞಾನ ಮತ್ತು ವಾಣಿಜ್ಯ ವಿಭಾಗಗಳಿಗೆ ದಾಖಲು ಮಾಡಿಕೊಳ್ಳುವಾಗ ಕನ್ನಡದಲ್ಲಿ ಕಲಿತ ವಿದ್ಯಾರ್ಥಿಗಳು ಹೆಚ್ಚಿನ ಅಂಕಗಳನ್ನು ಗಳಿಸಿ ಕೊಂಡಿದ್ದಾಗಲು ದಾಖಲು ಮಾಡಿಕೊಂಡಿಲ್ಲ. ಇಂಗ್ಲಿಶ್‌ನಲ್ಲಿ ಕಲಿತ ವಿದ್ಯಾರ್ಥಿಗಳು ಕನ್ನಡದಲ್ಲಿ ಕಲಿತ ವಿದ್ಯಾರ್ಥಿಗಳಿಗಿಂತ ಕಡಿಮೆ ಅಂಕಗಳನ್ನು ಪಡೆದುಕೊಂಡಿದ್ದಾಗಲೂ ಅವರಿಗೆ ವಿಜ್ಞಾನ ಮತ್ತು ವಾಣಿಜ್ಯ ವಿಭಾಗಗಳಿಗೆ ದಾಖಲಾತಿ ನೀಡಿದ್ದಾರೆ. ಸರ್ಕಾರದ ನಿಯಮಾವಳಿಗಳ ಪ್ರಕಾರ ವಿದ್ಯಾರ್ಥಿಗಳನ್ನು ಈ ರೀತಿ ಕಲಿಕೆ ಮಾಧ್ಯಮದ ಆಧಾರದಲ್ಲಿ ದಾಖಲು ಮಾಡಿಕೊಳ್ಳುವ ಆಗಿಲ್ಲ. ವಿದ್ಯಾರ್ಥಿಗಳ ಕಲಿಕೆ ಆಸಕ್ತಿ ಆಧಾರದಲ್ಲಿ ದಾಖಲಾತಿ ಮಾಡಿಕೊಳ್ಳಬೇಕು. ಆದರೆ ಕಾಲೇಜು ಆಡಳಿತ ಮಂಡಳಿಗಳು ರಾಜ್ಯದಲ್ಲಿ ಅನಧಿಕೃತವಾಗಿ ಪಾಲಿಸುತ್ತಿರುವ ಈ ಕಲಿಕಾ ಮಾಧ್ಯಮವನ್ನು ಆಧರಿಸಿದ ದಾಖಲಾತಿ ಪ್ರಕ್ರಿಯೆ ಸಾಕಷ್ಟು ಕನ್ನಡದಲ್ಲಿ ಕಲಿತ ವಿದ್ಯಾರ್ಥಿಗಳನ್ನು ಅವರ ಕಲಿಕೆಯ ಆಸಕ್ತ ವಿಷಯಗಳಿಂದ ವಂಚಿತಗೊಳಿಸಿದೆ.

ಇದಕ್ಕಾಗಿ "ಇಂಗ್ಲಿಷ್ ಬುದ್ಧಿವಂತರ, ಶ್ರೀಮಂತರ ಆಯ್ಕೆ ಎಂದೂ ಕನ್ನಡ ಅಷ್ಟು ಬುದ್ಧಿವಂತರಲ್ಲದವರ, ಬಡವರ ಆಯ್ಕೆ ಎಂದು ಬಿಂಬಿಸಲಾಗಿದೆ. ಇದಕ್ಕೆ ತಾರ್ಕಿಕ ಸಮರ್ಥನೇಗಳೇನೂ ಇಲ್ಲ. ಈ ಸಮಸ್ಯೆಗಳು ಉಂಟಾಗುವುದಕ್ಕೆ ಸಾಮಾಜಿಕ ವಿನ್ಯಾಸಗಳು ಉಂಟಾಗಿವೆ. ಶಿಕ್ಷಣದ ಸಾರ್ವತ್ರಿಕತೆ ನಮ್ಮ ವಿಧಾನದ ಆದರ್ಶ. ಎಲ್ಲರೂ ಸಮಾನರು. ಆದ್ದರಿಂದ ಎಲ್ಲರು ಸಮಾನ ಅವಕಾಶಗಳನ್ನು ಪಡೆಯಬೇಕು ಎಂಬುದು ನಮ್ಮ ಆದರ್ಶ. ಆದರೆ ಈ ನಮ್ಮ ಆದರ್ಶವು ಪ್ರಾಯೋಗಿಕ ನೆಲೆಯಲ್ಲಿ ಭಿನ್ನವಿನ್ಯಾಸಗಳನ್ನು ಪಡದುಕೊಳ್ಳುತ್ತದೆ. ಆಳುವ ವ್ಯವಸ್ಥೆಗೆ ಸಮಾನತೆ ಎನ್ನುವುದು ಒಂದು ಅವಕಾಶದ ಕಲ್ಪನೆ ಆದರೆ ಸಾಮರ್ಥ್ಯದ ಕಲ್ಪನೆಯಲ್ಲ.[೧೪]" ಹೀಗಾಗಿ ಕರ್ನಾಟಕದಲ್ಲಿ ವಿಜ್ಞಾನ ಮತ್ತು ವಾಣಿಜ್ಯ, ಡಿಪ್ಲೊಮೊದಂತಹ ಕೋರ್ಸ್‌ಗಳಿಗೆ ಕನ್ನಡದಲ್ಲಿ ಕಲಿತವರನ್ನು ನಿರಾಕರಿಸಲಾಗಿದೆ. ಇದು ಅನಧಿಕೃತ ಆಗಿರುವುದರಿಂದ ಇದನ್ನು ಎಲ್ಲಿಯೂ ಪ್ರಶ್ನಿಸುವ ಆಗಿಲ್ಲ. ಮತ್ತು ಸರ್ಕಾರಗಳು ಕೂಡ ಕಾಲೇಜುಗಳಲ್ಲಿ ಬೋಧನೆ ಮಾಡಬೇಕಾದ ಭಾಷಾಮಾಧ್ಯಮದ ವಿಚಾರಕ್ಕೆ ಸಂಬಂಧಿಸಿದ ಹಾಗೆ ಸರ್ಕಾರದಿಂದ ಯಾವುದೇ ಸ್ಪಷ್ಟ ನಿಯಮಗಳು ಇಲ್ಲ. ಹೀಗಾಗಿ

ಕಾಲೇಜುಗಳಲ್ಲಿ ಬೋಧಿಸುವ ಶಿಕ್ಷಕರು ತಮಗೆ ಇಚ್ಚೆ ಬಂದ ಭಾಷೆಯನ್ನು ಬೋಧನೆಗೆ ಬಳಸಿಕೊಳ್ಳುತ್ತಿದ್ದಾರೆ. ಮತ್ತು ಇಂಗ್ಲಿಶ್ ಬಳಸಲು ಬರದೆ ಕಾಲೇಜಿನಲ್ಲಿ ಕಲಿಯುತ್ತಿದ್ದಾರೆಂದರೆ ಅವರನ್ನು ದಡ್ಡರು, ಕೀಳು, ವ್ಯರ್ಥ ಎಂಬಂತೆ ಬಿಂಬಿಸಿದ್ದಾರೆ.

ಏಕೆಂದರೆ ವಿಜ್ಞಾನ ಮತ್ತು ವಾಣಿಜ್ಯ ವಿಭಾಗದಲ್ಲಿ ಬೋಧನೆ ಮಾಡುತ್ತಿರುವ ಉಪನ್ಯಾಸಕರು ಕಲಿತು ಬಂದಿರುವುದು ಇಂಗ್ಲಿಶ್‌ಮಾಧ್ಯಮದಲ್ಲಿಯೇ. ಇದನ್ನು ಬದಲಾಯಿಸಲು ಮಾತೃಭಾಷಾ ಮಾಧ್ಯಮದ ಪರವಾಗಿ ಕರ್ತವ್ಯ ನಿರ್ವಹಿಸಬೇಕಾದ ಈ ವಿಷಯಗಳ ಬೋಧಕರು ಕನ್ನಡವನ್ನು ಉಳಿಸುವವರೆಂದರೆ ಕನ್ನಡ ಭಾಷಾಶಿಕ್ಷಕರು. ಅದು ಅವರ ಕರ್ತವ್ಯ. ನಾವು ವಿಜ್ಞಾನ, ವಾಣಿಜ್ಯ ವಿಭಾಗಗಳ ಬೋಧಕರು. ಕನ್ನಡದಲ್ಲಿ ಬೋಧಿಸಿದರೆ ಇಂಗ್ಲಿಶ್ ಬರುವುದಿಲ್ಲವೆಂದು ಜನರು ಕೀಳಾಗಿ ಕಾಣುತ್ತಾರೆ. ಇದರಿಂದ ನಾವು ಹೆಚ್ಚಿನ ವೇತನ, ಉದ್ಯೋಗದ ಅವಕಾಶ ಪಡೆಯಲು ಸಾಧ್ಯವಾಗುವುದಿಲ್ಲ. ರಾಜ್ಯದ ಯಾವುದೇ ಕಾಲೇಜಿನಲ್ಲಿ ಬೋಧಕರಾಗಿ ಕೆಲಸ ಮಾಡಲು ಅರ್ಜಿ ಸಲ್ಲಿಸಿದಾಗ ಮಾತೃಭಾಷೆಯ ಉಪನ್ಯಾಸಕರನ್ನು ಹೊರತುಪಡಿಸಿ ಉಳಿದೆಲ್ಲಾ ವಿಷಯಗಳ ಉಪನ್ಯಾಸಕರಿಗೆ ನಿಮಗೆ ಇಂಗ್ಲಿಶ್ ಬರುತ್ತದೆಯೇ ಎಂದು ಕೇಳುತ್ತಾರೆ. ಯಾವ ಕಾಲೇಜಿನಲ್ಲಿಯೂ ನಿಮಗೆ ಕನ್ನಡ ಅಥವಾ ಮಾತೃಭಾಷೆಗಳು ಬರುತ್ತವೆಯೇ? ಎಂದು ಕೇಳುವುದಿಲ್ಲ. ರಾಜ್ಯದಲ್ಲಿಯೇ ಇಂತಹ ಪರಿಸ್ಥಿತಿ ಇರುವಾಗ ಕನ್ನಡದಲ್ಲಿ ಬೋಧಿಸಿ ಏನು ಮಾಡುವುದು? ಇಂಗ್ಲಿಶ್ ಬಳಸಿದರೆ ರಾಜ್ಯದಲ್ಲಿ ಮಾತ್ರವಲ್ಲ ಹೊರರಾಜ್ಯ, ದೇಶಗಳಲ್ಲೂ ಉದ್ಯೋಗ ಪಡೆಯಬಹುದು. ಕನ್ನಡದಲ್ಲಿ ಬೋಧಿಸಿದರೆ ವೇತನ ಕಡಿಮೆ, ಉದ್ಯೋಗದ ಅವಕಾಶಗಳು ಒಂದು ಪ್ರದೇಶಕ್ಕೆ ಸ್ಥೀಮಿತಗೊಳ್ಳುತ್ತವೆ. ಬೇಡಿಕೆಯೂ ಕಡಿಮೆ. ಮನೆಪಾಠಗಳನ್ನು ಮಾಡಿಯು ಹಣ ಸಂಪಾದನೆ ಮಾಡಲು ಸಾಧ್ಯವಿಲ್ಲ ಎಂಬ ಭಾವನೆ ರಾಜ್ಯದ ಕಾಲೇಜುಗಳಲ್ಲಿ ಬೋಧಕರಾಗಿ ಕೆಲಸ ಮಾಡುತ್ತಿರುವ ಬೋಧಕರ ಮನಸ್ಸಿನಲ್ಲಿ ಇದೆ.

ಹೀಗಾಗಿ ಈಗಲೂ ಕಾಲೇಜು ಶಿಕ್ಷಣ, ವಿಶ್ವವಿದ್ಯಾಲಯಗಳಲ್ಲಿ ಕಲಿಯುವವರು ಭಾಷಾವಿಷಯಗಳನ್ನು ಹೊರತುಪಡಿಸಿದರೆ ಇಂಗ್ಲಿಶ್‌ನಲ್ಲಿಯೇ ಓದುಬೇಕು, ಪರೀಕ್ಷೆಗಳನ್ನು ಬರೆಯಬೇಕು. ಇಲ್ಲಿ ಮಾತೃಭಾಷೆಗಳಲ್ಲಿ ಬೋಧಿಸುವುದಕ್ಕೆ, ಓದುವುದಕ್ಕೆ, ಬರೆಯುವುದಕ್ಕೆ ಸಿದ್ಧತೆಗಳನ್ನು ಮಾಡಿಲ್ಲ. ಹೀಗಾಗಿ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷಾಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳು ಕಾಲೇಜು, ವಿಶ್ವವಿದ್ಯಾಲಯಗಳು ಮತ್ತು ವೃತ್ತಿಶಿಕ್ಷಣದಲ್ಲಿ ಭಾಷೆಯ ಕಾರಣಕ್ಕಾಗಿ ಸಮಸ್ಯೆ ಎದುರಿಸುವಂತಾಗಿದೆ. ಇದು ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳಲ್ಲಿ ಕಲಿಕೆ, ಪರೀಕ್ಷೆಗಳಲ್ಲಿ ಗಳಿಸುವ ಅಂಕಗಳ ನಡುವೆ ವ್ಯತ್ಯಾಸಗಳು ಉಂಟಾಗಲು ಕಾರಣವಾಗಿದೆ. ಸರ್ಕಾರಗಳು ಇದನ್ನು ಬದಲಾಯಿಸಿ ರಾಜ್ಯದ ಎಲ್ಲಾ ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳು ಎಲ್ಲಾ ವಿಷಯಗಳನ್ನು ಕನ್ನಡದಲ್ಲಿ ಕಲಿಯುವುದಕ್ಕೆ ವ್ಯವಸ್ಥೆ ಮಾಡುವ ಮೂಲಕ ಪ್ರಾಥಮಿಕ ಶಿಕ್ಷಣವನ್ನು ಕನ್ನಡದಲ್ಲಿ ಕಲಿಯಬೇಕು ಎಂದು ಹೇಳಬೇಕಿತ್ತು. ಆ ಮೂಲಕ ಯಾರು ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ ಮಕ್ಕಳಿಗೆ ಇಂಗ್ಲಿಶ್ ಮಾಧ್ಯಮದಲ್ಲಿ

ಕಲಿಸುತ್ತಿದ್ದಾರೋ ಅಂತಹವರ ಮೇಲೆ ಶಿಸ್ತುಕ್ರಮ ಜರುಗಿಸಬೇಕಿತ್ತು. ಆದರೆ ಸರ್ಕಾರ ಹೀಗೆ ಮಾಡದೆ ದಿನಾಂಕ ೦೩.೦೧.೨೦೦೪ರಂದು ಒಂದು ಸುತ್ತೋಲೆ ಹೊರಡಿಸಿದೆ.

ಈ ಸುತ್ತೋಲೆಯಲ್ಲಿ ಕರ್ನಾಟಕ ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ, ಕನ್ನಡ ಮಾಧ್ಯಮದಲ್ಲಿ ಬೋಧನೆ ಮಾಡುತ್ತೇವೆ ಎಂದು ಸರ್ಕಾರಕ್ಕೆ ಮುಚ್ಚಳಿಕೆ ಬರೆದುಕೊಟ್ಟು ಇಂಗ್ಲಿಶ್‌ನಲ್ಲಿ ಕಲಿಸುತ್ತಿದ್ದ ಶಿಕ್ಷಣ ಸಂಸ್ಥೆಗಳ ಸಂಖ್ಯೆ ಸರ್ಕಾರವೇ ಗುರ್ತಿಸಿರುವ ಪ್ರಕಾರ ೨೬೯೮. ಇವುಗಳ ವಿರುದ್ಧವಾಗಿ ಸರ್ಕಾರ ದಿನಾಂಕ ೨೩.೫.೨೦೦೬ರ ಸುತ್ತೋಲೆ ಸಂಖ್ಯೆ ಇಡಿ ೯೮ ಪಿಜಿಸಿ ೬ರಲ್ಲಿ ದಿನಾಂಕ ೨೯.೦೪.೧೯೯೪ರ ಸರ್ಕಾರದ ಆದೇಶ ಸಂಖ್ಯೆ: ಇಡಿ೨೮ ಪಿಜಿಸಿ ೧೯೯೪ರ ಆದೇಶದನ್ವಯ "೩೦.೦೫.೨೦೦೨ರ ಸರ್ಕಾರದ ಆದೇಶ ಸಂಖ್ಯೆಯನ್ನು ಓದಿಕೊಂಡಂತೆ ಪ್ರಸ್ತುತ ಜಾರಿಯಲ್ಲಿರುವ ಶಿಕ್ಷಣದಲ್ಲಿ ಭಾಷಾನೀತಿಯ ಪ್ರಕಾರ ೧ರಿಂದ ೫ನೇ ತರಗತಿಯವರೆಗೆ ಕಲಿಕೆಯ ಮಾಧ್ಯಮ ಮಾತೃಭಾಷೆ ಅಥವಾ ಕನ್ನಡ ಆಗಿರಬೇಕು. ಈ ಉದ್ದೇಶಕ್ಕಾಗಿ ಈ ಕೆಳಕಂಡ ಭಾಷೆಗಳನ್ನು ಮಾತೃಭಾಷೆಗಳನ್ನಾಗಿ ಗುರುತಿಸಲಾಗಿದೆ. ೧) ಕನ್ನಡ ೨) ತಮಿಳು ೩) ತೆಲುಗು ೪) ಮಲಯಾಳಂ ೫)ಮರಾಠಿ ೬) ಹಿಂದಿ ೭) ಉರ್ದು ೮) ಇಂಗ್ಲೀಷ್ (ಆಂಗ್ಲೋ ಇಂಡಿಯನ್ನರಿಗೆ ಸಂಬಂಧಿಸಿದಂತೆ) ಮೇಲೆ ಉಲ್ಲೇಖಿಸಿದ ಕಲಿಕೆಯ ಮಾಧ್ಯಮದ ನೀತಿಯ ಪ್ರಕಾರವಾಗಿ ೧ನೇ ತರಗತಿಯಿಂದ ೫ನೇ ತರಗತಿಯವರೆಗೆ ಮಾತೃಭಾಷೆ ಅಥವಾ ಕನ್ನಡ ಮಾಧ್ಯಮದಲ್ಲಿ ಕಲಿಸದೆ ಅದನ್ನು ಉಲ್ಲಂಘಿಸಿ ಆ ತರಗತಿಗಳಲ್ಲಿ ಇಂಗ್ಲೀಷ್ ಮಾಧ್ಯಮದಲ್ಲಿ ಕಲಿಸಿದ ಮಾನ್ಯತೆ ಪಡೆದ ಖಾಸಗಿ ಪ್ರಾಥಮಿಕ ಶಾಲೆಗಳ ಮಾನ್ಯತೆಯನ್ನ ಹಿಂಪಡೆಯಲು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿನ ಸಕ್ಷಮ ಪ್ರಾಧಿಕಾರಗಳು ೨೦೦೬ನೇ ಸಾಲಿನಲ್ಲಿ ಕ್ರಮ ತೆಗೆದುಕೊಂಡಿರುತ್ತಾರೆ, ಅಂತಹ ಶಾಲೆಗಳ ಸಂಖ್ಯೆ, ಅವುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಅವುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆಯು ಈ ಕೆಳಕಂಡ ಪಟ್ಟಿಯಲ್ಲಿ ನಮೂದಿಸಿದಂತೆ ಇರುತ್ತದೆ.

| ಮಾನ್ಯತೆಯನ್ನು ಹಿಂಪಡೆದ ಶಾಲೆಗಳ ಸಂಖ್ಯೆ | ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ | ಕೆಲಸ ನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ |
|---|---|---|
| ೨೨೧೫ | ೩೦೦೫೨೬ | ೧೧೮೦೮ |

ರಾಜ್ಯದಲ್ಲಿ ಕನ್ನಡ ಮಾಧ್ಯಮದಲ್ಲಿ ನಡೆಸಲು ಅನುಮತಿ ಪಡೆದ ೭೨೯೧ ಖಾಸಗಿ ಪ್ರಾಥಮಿಕ ಶಾಲೆಗಳ ಪೈಕಿ ಭಾಷಾಮಾಧ್ಯಮ ನೀತಿಯನ್ನು ಉಲ್ಲಂಘಿಸಿ ಇಂಗ್ಲೀಷ್ ಮಾಧ್ಯಮದಲ್ಲಿ ಕಲಿಸುತ್ತಿರುವ ೨೬೯೮ ಶಾಲೆಗಳನ್ನು ಗುರುತಿಸಲಾಗಿದೆ. ಆ ೨೬೯೮ ಶಾಲೆಗಳ ಪೈಕಿ ಸದರಿ ೨೨೧೫ ಶಾಲೆಗಳ ಮಾನ್ಯತೆಯನ್ನು ಹಿಂಪಡೆದಿದ್ದು ಉಳಿದ ೪೮೩ ಶಾಲೆಗಳ ಮಾನ್ಯತೆಯನ್ನು ಹಿಂಪಡೆಯುವ ಪ್ರಕ್ರಿಯೆ ಜಾರಿಯಲ್ಲಿರುತ್ತದೆ.[೧೫]" ಎಂದು ಹೇಳಿದೆ.

ಸರ್ಕಾರ ತಾನು ಜಾರಿಗೆತಂದ ಭಾಷಾನೀತಿಯನ್ನು ಖಾಸಗಿ ಶಿಕ್ಷಣ ಸಂಸ್ಥೆಗಳು ಅನುಸರಿಸದೆ ಉಲ್ಲಂಘಿಸುತ್ತಿವೆ ಎಂದು ಅವುಗಳ ಮೇಲೆ ಶಿಸ್ತುಕ್ರಮ ಜರುಗಿಸಲು ಶಾಲಾ ಮಾನ್ಯತೆ ಹಿಂಪಡೆಯುವ

ಕ್ರಮಕ್ಕೆ ಮುಂದಾದಾಗ ಹಲವು ಸಮಸ್ಯೆಗಳು ಉದ್ಭವಿಸಿವೆ. ಇವುಗಳಲ್ಲಿ ಮುಖ್ಯವಾಗಿ ಈ ಶಾಲೆಗಳಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳು ಶಾಲೆ ಮತ್ತು ಕಲಿಕಾಮಾಧ್ಯಮ ಬದಲಾಯಿಸುವ, ಶಿಕ್ಷಕರು ಉದ್ಯೋಗ ಕಳೆದುಕೊಳ್ಳುವ ಭಯಕ್ಕೆ ಒಳಗಾಗಿದ್ದಾರೆ. ವಿದ್ಯಾರ್ಥಿಗಳು ಕಲಿಕಾಹಂತದ ಮಧ್ಯಭಾಗದಲ್ಲಿ ಮಾಧ್ಯಮ ಬದಲಾವಣೆ ಮಾಡುವುದರಿಂದ ಹೊಸ ಕಲಿಕಾಮಾಧ್ಯಮಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದೆ ಸಮಸ್ಯೆಗೆ ಸಿಲುಕಿದ್ದಾರೆ. ಇವಿಷ್ಟೇ ಅಲ್ಲದೆ ಶೈಕ್ಷಣಿಕ ವರ್ಷದ ಮಧ್ಯಭಾಗದಲ್ಲಿ ಇಂತಹ ತೀರ್ಮಾನ ತೆಗೆದುಕೊಂಡಿರುವುದರಿಂದ ವಿದ್ಯಾರ್ಥಿಗಳಿಗೆ ಪರ್ಯಾಯ ವ್ಯವಸ್ಥೆ ಕಲ್ಪಿಸುವುದು ಅಂದರೆ ಬೇರೆ ಶಾಲೆಗಳಿಗೆ ದಾಖಲಾತಿಗೆ ವ್ಯವಸ್ಥೆ ಮಾಡುವುದು ಸೇರಿದಂತೆ ಸರ್ಕಾರಕ್ಕೆ ಇತರ ಆಡಳಿತಾತ್ಮಕ ಸಮಸ್ಯೆಗಳು ಎದುರಾಗಿವೆ. ಇವುಗಳನ್ನು ಗಮನಿಸಿರುವ ಸರ್ಕಾರ ಸದರಿ ಶಾಲೆಗಳ ಮಾನ್ಯತೆಯನ್ನು ಸಕ್ಷಮ ಪ್ರಾಧಿಕಾರಗಳು ಶೈಕ್ಷಣಿಕ ವರ್ಷದ ಮಧ್ಯದಲ್ಲಿ ಹಿಂಪಡೆದು ಆದೇಶಗಳನ್ನು ಹೊರಡಿಸಿದ್ದು, ಆ ಹಂತದಲ್ಲಿ ವಿದ್ಯಾರ್ಥಿಗಳನ್ನು ಇತರೆ ಯಾವುದೇ ಶಾಲೆಗೆ ಸೇರಿಸಿದಲ್ಲಿ ಅವರ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ ಎಂಬ ಕಾರಣಕ್ಕಾಗಿ ಆ ಆದೇಶಗಳ ಜಾರಿಗೊಳಿಸುವಿಕೆಯನ್ನು ದಿನಾಂಕ ೧೦.೦೪.೨೦೦೭ರ ವರೆಗೆ ತಡೆಹಿಡಿಯತಕ್ಕದ್ದೆಂದು ನಿರ್ದೇಶಿಸಿದೆ.

ಈ ಮಧ್ಯದಲ್ಲಿ ಸರ್ಕಾರವು ೧೦.೦೪.೨೦೦೭ರ ನಂತರದಲ್ಲಿ ತಡೆಹಿಡಿಯಲಾಗಿರುವ ಆದೇಶವನ್ನು ರದ್ದು ಮಾಡಿದ ನಂತರ ಉದ್ಭವವಾಗುವ ಸಮಸ್ಯೆಗಳ ಬಗೆಗೆ ಸುದೀರ್ಘವಾಗಿ ಚರ್ಚೆ ಮಾಡಿದೆ. ಇದರ "ಸಾಧಕ ಬಾಧಕ ಹಾಗೂ ವಿವಿಧ ಪರ್ಯಾಯಗಳನ್ನು ಪರಿಶೀಲಿಸಿ ೧ನೇ ತರಗತಿಯಿಂದ ೪ನೇ ತರಗತಿಯವರೆಗೆ ಕನ್ನಡ ಅಥವಾ ಮಾತೃಭಾಷಾ ಮಾಧ್ಯಮದಲ್ಲಿ ಕಲಿಸಲು ಶಾಲೆಯನ್ನು ನಡೆಸಲು ಅನುಮತಿ ಪಡೆದು ಅದನ್ನು ಉಲ್ಲಂಘಿಸಿ ಇಂಗ್ಲೀಷ್ ಭಾಷಾಮಾಧ್ಯಮದಲ್ಲಿ ಕಲಿಸಿದ ಶಾಲೆಗಳ ಮಾನ್ಯತೆಯನ್ನು ಹಿಂಪಡೆಯಲು ಸಾರ್ವಜನಿಕ ಶಿಕ್ಷಣ ಇಲಾಖೆಯ ಸಕ್ಷಮ ಪ್ರಾಧಿಕಾರಗಳು ತೆಗೆದುಕೊಂಡ ಕ್ರಮ ಸದರಿ ನೀತಿಯನ್ನು ಜಾರಿಗೊಳಿಸುವ ನಿಟ್ಟಿನಲ್ಲಿ ತೆಗೆದುಕೊಂಡ ಸರಿಯಾದ ಕ್ರಮವಾಗಿದೆ. ಆದರೂ ಹಲವಾರು ಕಾರಣಗಳಿಂದ ಅದನ್ನು ಕಟ್ಟುನಿಟ್ಟಾಗಿ ಸಾರ್ವಜನಿಕ ಶಿಕ್ಷಣ ಇಲಾಖೆ ಜಾರಿಗೊಳಿಸದೇ ಇರುವುದರಿಂದ ಅಂತಹ ಶಾಲೆಗಳು ದೊಡ್ಡ ಪ್ರಮಾಣದಲ್ಲಿ ನಡೆದುಕೊಂಡು ಬಂದಿವೆ. ಸಾವಿರಾರು ಸಂಖ್ಯೆಯಲ್ಲಿರುವ ಆ ಶಾಲೆಗಳಲ್ಲಿ ಮೂರು ಲಕ್ಷಕ್ಕೂ ಮೇಲ್ಪಟ್ಟು ಮಕ್ಕಳು ವಿವಿಧ ತರಗತಿಗಳಲ್ಲಿ ಓದುತ್ತಿದ್ದಾರೆ. ಹಾಗೂ ಸುಮಾರು ೧೨,೦೦೦ ಶಿಕ್ಷಕರುಗಳನ್ನು ಅವುಗಳಲ್ಲಿ ತೊಡಗಿಸಲಾಗಿದೆ. ಮಾನ್ಯತೆಯನ್ನು ಹಿಂಪಡೆದು ಆದೇಶಗಳನ್ನು ಜಾರಿಗೊಳಿಸಿದಲ್ಲಿ ಏಕಾಏಕಿ ಅಷ್ಟು ಶಾಲೆಗಳನ್ನು ಮುಚ್ಚಿದಂತಾಗುತ್ತದೆ. ಹಾಗೂ ಈ ಕೆಳಕಂಡ ಪ್ರತಿಕೂಲ ಪರಿಣಾಮಗಳು ಉಂಟಾಗುವ ಸಾಧ್ಯತೆ ಇದೆ.

೨೦೦೬-೦೭ನೇ ಶೈಕ್ಷಣಿಕ ವರ್ಷದಲ್ಲೇ ಸದರಿ ಶಾಲೆಗಳಲ್ಲಿ ೧, ೨, ೩ ಮತ್ತು ೪ನೇ ತರಗತಿಗಳಲ್ಲಿ ಆಂಗ್ಲ ಮಾಧ್ಯಮದಲ್ಲಿ ಓದುತ್ತಿರುವ ಮಕ್ಕಳು ೨೦೦೭-೦೮ನೇ ಸಾಲಿನಲ್ಲಿ ಕ್ರಮವಾಗಿ ೨, ೩, ೪ ಮತ್ತು ೫ನೇ ತರಗತಿಗಳಿಗೆ ಪ್ರವೇಶ ಹೊಂದುವರು ಈ ಹಂತದಲ್ಲಿ ಅವರ ಕಲಿಕೆಯ ಮಾಧ್ಯಮ ಪರಿವರ್ತಿಸಿದಲ್ಲಿ ಶೈಕ್ಷಣಿಕವಾಗಿ ಅವರಿಗೆ ತೊಂದರೆಯಾಗುವುದು.

(೧) ಅದರಿಂದಾಗಿ ೩,೦೦,೦೦೦ಕ್ಕೂ (ಮೂರು ಲಕ್ಷ)ಕ್ಕೂ ಮೇಲ್ಪಟ್ಟು ವಿದ್ಯಾರ್ಥಿಗಳು ಯಾವುದೇ ತಪ್ಪು ಮಾಡದಿದ್ದರೂ ಅವರ ಈಗಿನ ಶಾಲೆಗಳಿಂದ ಹೊರಬಂದು ಬೇರೆ ಶಾಲೆಗಳಲ್ಲಿ ಪ್ರವೇಶ ಪಡೆಯಬೇಕಾದರೆ ಅವರಿಗೂ ಹಾಗೂ ಅವರ ತಂದೆ, ತಾಯಿ ಹಾಗೂ ಪೋಷಕರಿಗೆ ಸಾಕಷ್ಟು ತೊಂದರೆಯಾಗುವ ಸಾಧ್ಯತೆಯಿದೆ; ಮತ್ತು

(೨) ಸುಮಾರು ೧೨,೦೦೦ ಶಿಕ್ಷಕರು ನಿರುದ್ಯೋಗಿಗಳಾಗುತ್ತಾರೆ

ಸದರಿ ಪ್ರತಿಕೂಲ ಪರಿಣಾಮಗಳನ್ನು ತಡೆಗಟ್ಟುವ ಸಲುವಾಗಿ ಅಂದರೆ ಸದರಿ ಶಾಲೆಗಳನ್ನು ಒಮ್ಮೆಯೇ ಮಾನ್ಯತೆಯನ್ನು ಹಿಂಪಡೆದ ಆದೇಶಗಳನ್ನು ಜಾರಿಗೊಳಿಸಿ ಮುಚ್ಚುವ ಬದಲು ಅವುಗಳನ್ನು ಹಂತಹಂತವಾಗಿ ಮಾತೃಭಾಷೆ ಅಥವಾ ಕನ್ನಡ ಮಾಧ್ಯಮದ ಶಾಲೆಗಳನ್ನಾಗಿ ಪರಿವರ್ತನೆ ಮಾಡುವ ಇತ್ಯಾದಿ ಬಗ್ಗೆ ಸರ್ಕಾರವು ಈ ಕೆಳಕಂಡಂತೆ ಸ್ವಇಚ್ಛಾ ಯೋಜನೆಯನ್ನು (voluntary scheme) ರೂಪಿಸಿದೆ[೧೭]." ಇದರ ಪ್ರಕಾರವಾಗಿ–

೧) ಈ ಯೋಜನೆ ಸ್ವಇಚ್ಛಾ ಯಾಜನೆಯಾಗಿದ್ದು ಸಂಬಂಧಿಸಿದ ಶಿಕ್ಷಣ ಸಂಸ್ಥೆ ತನ್ನ ಸ್ವಇಚ್ಛೆಯಿಂದ (voluntary) ಅದನ್ನು ಆರಿಸಿಕೊಳ್ಳಬಹುದಾಗಿದೆ.

೨) ಸಂಬಂಧಿಸಿದ ಸಂಸ್ಥೆ ಅದನ್ನು ಆರಿಸಿಕೊಳ್ಳಲು ಇಚ್ಛಿಸಿದಲ್ಲಿ ತನ್ನ ಇಚ್ಛೆಯನ್ನು ಲಿಖಿತ ರೂಪದಲ್ಲಿ ಸಂಬಂಧಿಸಿದ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಇವರಿಗೆ ದಿನಾಂಕ ೧೫–೦೫–೨೦೦೭ರೊಳಗಾಗಿ ತಿಳಿಸತಕ್ಕದ್ದು

೩) ಶಾಲೆಗಳ ಆಡಳಿತ ಮಂಡಳಿಗಳು ಮೇಲಿನ ಸ್ವಇಚ್ಛಾ ಯೋಜನೆಗಳನ್ನು ಆರಿಸಿದಲ್ಲಿ ಹೊಸದಾಗಿ ಮಾನ್ಯತೆಗಾಗಿ ಅರ್ಜಿಗಳನ್ನು ಸಕ್ಷಮ ಪ್ರಾಧಿಕಾರಗಳಿಗೆ ಸಲ್ಲಿಸಬಹುದು. ಯೋಜನೆಯ ಪ್ರಕಾರ ಕ್ರಮ ತೆಗೆದುಕೊಳ್ಳಲು ಇಚ್ಛಿಸಿ ಮಾನ್ಯತೆಗಾಗಿ ದಿನಾಂಕ೧೫–೫–೨೦೦೭ರೊಳಗೆ ಅರ್ಜಿ ಕೊಟ್ಟು ಗ್ರಾಮೀಣ ಪ್ರದೇಶದಲ್ಲಿನ ಶಾಲೆಗಳಿಗೆ ರೂ.೨೫೦೦೦ (ರೂಪಾಯಿ ಇಪ್ಪತ್ತೈದು ಸಾವಿರ)ದಂತೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ಶಾಲೆಗಳಿಗೆ ರೂ ೧,೦೦,೦೦೦ (ರೂಪಾಯಿ ಒಂದು ಲಕ್ಷ)ದಂತೆ ಮತ್ತು ಉಳಿದ ನಗರ ಪ್ರದೇಶಗಳಲ್ಲಿನ ಶಾಲೆಗಳಿಗೆ ರೂ.೫೦,೦೦೦ (ರೂಪಾಯಿ ಐವತ್ತು ಸಾವಿರ)ದಂತೆ ಆಡಳಿತಾತ್ಮಕ ವೆಚ್ಚಗಳಿಗೆ ಸಂಬಂಧಿಸಿದ ಬಾಬ್ತಿನ ಹಣ ಪಾವತಿ ಮಾಡಿ ಸದರಿ ಶಾಲೆಗಳ ನಿಗದಿತ ಷರತ್ತುಗಳನ್ನು ಪೂರೈಸಿದಲ್ಲಿ ಹೊಸದಾಗಿ ಮಾನ್ಯತೆಯನ್ನು ನೀಡಬಹುದು. ಸರ್ಕಾರದ ಭಾಷಾಮಾಧ್ಯಮ ನೀತಿಯನ್ನು ಉಲ್ಲಂಘಿಸಿದ ಶಿಕ್ಷಣ ಸಂಸ್ಥೆಗಳ ಪೈಕಿ ಯಾವುದೇ ಸಂಸ್ಥೆಯು ಪ್ರಸ್ತುತ ಸ್ವಇಚ್ಛಾ ಯೋಜನೆಯನ್ನು ದಿನಾಂಕ ೧೫–೫–೨೦೦೭ರೊಳಗಾಗಿ ಆರಿಸದೇ ಇದ್ದಲ್ಲಿ ಅಂತಹ ಶಿಕ್ಷಣ ಸಂಸ್ಥೆಗಳ ಸಂಬಂಧಿಸಿದ ಶಾಲೆಗಳ ಮಾನ್ಯತೆ/ನೊಂದಣಿಯನ್ನು ಹಿಂಪಡೆಲು ಸಕ್ಷಮ ಪ್ರಾಧಿಕಾರಗಳು ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು[೧೮]" ಎಂದು ಸೂಚಿಸಿದೆ.

ಇವು ಕರ್ನಾಟಕ ಸರ್ಕಾರ ಕನ್ನಡಮಾಧ್ಯಮದ ಭಾಷಾನೀತಿಯನ್ನು ಜಾರಿಗೆ ತಂದುದರ ಪರಿಣಾಣಮವಾಗಿ ಉದ್ಭವಿಸಿರುವ ಸಮಸ್ಯೆಗಳು. ಮತ್ತು ಇವುಗಳನ್ನು ಪರಿಹರಿಸಲು ತೆಗೆದುಕೊಂಡಿರುವ ಕ್ರಮಗಳು. ಹೀಗೆ ಕನ್ನಡಮಾಧ್ಯಮದ ಅಭಿವೃದ್ದಿಗಾಗಿ ಭಾಷಾಯೋಜನೆ ರೂಪಿಸುವುದು, ಜಾರಿಗೆ ತರುವುದು, ಭಾಷಾನೀತಿಯನ್ನು ಉಲ್ಲಂಘಿಸುವ ಶಿಕ್ಷಣ ಸಂಸ್ಥೆಗಳ ವಿರುದ್ಧ ಕ್ರಮಕೈಗೊಳ್ಳಲು ಮುಂದಾಗುವುದು, ಅನಂತರದಲ್ಲಿ ಇವುಗಳಿಂದ ಉದ್ಭವಿಸಿದ ಸಮಸ್ಯೆಗಳನ್ನು ಮಾನವೀಯತೆಯ ನೆಲೆಯಲ್ಲಿ ನೋಡಿ ಒಂದು ಹಂತದವರೆಗೆ ಮುಂದುವರೆಯಲು ಅವಕಾಶ ಕೊಡುವುದು, ನಂತರದಲ್ಲಿ ಶಾಲೆಗಳನ್ನು ಇಂಗ್ಲಿಶ್‌ನಿಂದ ಕನ್ನಡಕ್ಕೆ ಬದಲಾವಣೆ ಮಾಡಿಕೊಳ್ಳಲು ಅವಕಾಶ ಕಲ್ಪಿಸುವುದು ಕನ್ನಡ ಮಾಧ್ಯಮದ ಅಭಿವೃದ್ಧಿಗೆ ಯುಕ್ತವಾದ ಕ್ರಮಗಳೇ? ಎಂಬುದನ್ನು ಯೋಚಿಸಬೇಕಿದೆ. ಅಲ್ಲದೆ ಈ ಕ್ರಮಗಳನ್ನು ಅನುಸರಿಸುವ ಮೂಲಕ ಕರ್ನಾಟಕದ ಭಾಷಾಮಾಧ್ಯಮದ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವೇ? ಇವು ಹೊಸ ಸಮಸ್ಯೆಗಳ ಹುಟ್ಟಿಗೆ

ಕಾರಣವಾಗುವುದಿಲ್ಲವೇ? ಎಂಬ ಪ್ರಶ್ನೆಗಳನ್ನು ನಾವು ಕೇಳಿಕೊಳ್ಳಬೇಕಿದೆ. ಈ ಎಲ್ಲಾ ಪ್ರಶ್ನೆಗಳನ್ನು ಕೇಳಿಕೊಂಡು ಇದುವರೆಗೆ ಚರ್ಚಿಸಿದ ಅಂಶಗಳನ್ನು ಪ್ರಧಾನವಾಗಿಸಿಕೊಂಡು ಕನ್ನಡ ಭಾಷಾಮಾಧ್ಯಮದ ಶಿಕ್ಷಣದ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರ ತೆಗೆದುಕೊಂಡಿರುವ ನಿಲುವು, ನಿರ್ಧಾರ ಮತ್ತು ಕ್ರಮಗಳು ಸೂಕ್ತವಾದವಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಏಕೆಂದರೆ ಕನ್ನಡ ಭಾಷಾಮಾಧ್ಯಮದ ಸಮಸ್ಯೆಗೆ ಯುಕ್ತವಾದ ಪರಿಹಾರ ಯಾವುದು ಎಂದು ನಾವು ಹುಡುಕುವಾಗ ಮೊದಲು ಯಾವ ಕಾರಣಗಳಿಗಾಗಿ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಶ್‌ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸುತ್ತಿದ್ದಾರೆ ಎಂಬುದನ್ನು ಅರಿಯಬೇಕಿದೆ. ಈ ಬಗೆಗೆ ನಾವು ಗಮನಿಸುವುದಾದರೆ "ಯಾವ ಕಾರಣಗಳಿಗಾಗಿ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಷ್ ಭಾಷಾಮಾಧ್ಯಮದ ಶಾಲೆಗಳಿಗೆ ಸೇರಿಸುತ್ತಿದ್ದಾರೆ ಎಂಬುದನ್ನು ಎ.ಓ.ಆವಲಮೂರ್ತಿಯವರು ಸಮೀಕ್ಷೆಯ ಮೂಲಕ ಅಂಕಿಅಂಶಗಳನ್ನು ಸಂಗ್ರಹಿಸಿ ಕೋಷ್ಟಕದಲ್ಲಿ ಕೊಟ್ಟಿದ್ದಾರೆ. ಆ ಕೋಷ್ಟಕ ಈ ಕೆಳಕಂಡಂತೆ ಇದೆ[೧೭].

**ಕೋಷ್ಟಕ**

| | ಹೌದು | ಇಲ್ಲ | ಗೊತ್ತಿಲ್ಲ |
|---|---|---|---|
| ೧. ಇಂಗ್ಲಿಶ್ ಚೆನ್ನಾಗಿ ಬರುತ್ತದೆ | ೭೨ | ೧೬ | ೧೨ |
| ೨. ಉದ್ಯೋಗ ಸಿಗುತ್ತದೆ | ೫೦ | ೫೦ | – |
| ೩. ಉನ್ನತ ಶಿಕ್ಷಣಕ್ಕೆ ಅನುಕೂಲ | ೯೧.೨ | ೭.೮ | – |
| ೪. ಜಾಣರಾಗುತ್ತಾರೆ | ೬೬.೪ | ೩೩.೬ | – |
| ೫. ನಿರೀಕ್ಷಿತ ಉನ್ನತಿ ಸಾಧಿಸುತ್ತದೆ | ೭೬ | ೮.೮ | ೧೫.೨ |
| ೬. ಗೌರವ ಹೆಚ್ಚುತ್ತದೆ | ೪೦.೮ | ೫೯.೨ | – |

ಈ ಅಂಕಿಅಂಶಗಳನ್ನು ಗಮನಿಸಿದಾಗ ಹೆಚ್ಚಿನ ಜನರು ಮೊದಲನೆಯದಾಗಿ ಉನ್ನತ ಶಿಕ್ಷಣಕ್ಕೆ ಅನುಕೂಲ, ಎರಡನೆಯದಾಗಿ ನಿರೀಕ್ಷಿತ ಉನ್ನತಿ ಸಾಧಿಸುತ್ತದೆ. ಮೂರನೆಯದಾಗಿ ಇಂಗ್ಲಿಶ್ ಚೆನ್ನಾಗಿ ಬರುತ್ತದೆ ಎಂಬ ಕಾರಣಕ್ಕಾಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಎರಡನೆಯದಾಗಿ ಜಾಗತಿಕ ಪ್ರಪಂಚದ ಭಾಷಾ ಅಗತ್ಯತೆ ಮನಗಂಡು ವ್ಯಾವಹಾರಿಕ ಹಿನ್ನೆಲೆಯಲ್ಲಿ ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಕಲಿಸಲಾಗುತ್ತಿದೆ. ಇದಕ್ಕೆ ಪೂರಕವಾಗಿ ಯೋಜನೆಗಳನ್ನು ರೂಪಿಸಿ, ನೀತಿಗಳನ್ನು ಜಾರಿಗೊಳಿಸಲಾಗಿದೆ. ಆದರೂ ಕರ್ನಾಟಕದ ಶಾಲೆಗಳಲ್ಲಿ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಕಲಿಯುತ್ತಿರುವ ಮಕ್ಕಳು ಇಂದಿನ ಅಗತ್ಯಕ್ಕೆ ಪೂರಕವಾಗಿ ಕಲಿಯಲು ಸಾಧ್ಯವಾಗಿಲ್ಲ. ಇದಕ್ಕೆ ಕಾರಣಗಳು ಮತ್ತು ಇದರಿಂದ ಉದ್ಭವಿಸಿರುವ ಸಮಸ್ಯೆಗಳನ್ನು ಈಗಾಗಲೇ ಮೂರನೇ ಅಧ್ಯಾಯದ ಇಂಗ್ಲಿಶ್ ಭಾಷಾಕಲಿಕೆ ಮತ್ತು ಸಮಸ್ಯೆಗಳು ಭಾಗದಲ್ಲಿ ಚರ್ಚಿಸಲಾಗಿದೆ. ಇವುಗಳನ್ನು ಸರಿಪಡಿಸಿ ಕನ್ನಡ ಭಾಷಾಮಾಧ್ಯಮದ ಶಿಕ್ಷಣವನ್ನು ಅಭಿವೃದ್ಧಿಪಡಿಸಬೇಕಾದ ಸರ್ಕಾರಗಳು ಆ ಬಗೆಗೆ

ಯೋಚನೆಯನ್ನೂ ಮಾಡದೆ ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಮಾತ್ರ ಕಲಿಯಬೇಕು ಎಂದು ಭಾಷಾನೀತಿ ಜಾರಿಗೆ ತಂದಿರುವುದರಿಂದ ಮಾತೃಭಾಷೆ ಇಲ್ಲವೆ ಕನ್ನಡಮಾಧ್ಯಮದ ಶಿಕ್ಷಣ ಅಭಿವೃದ್ಧಿ ಹೊಂದಿಲ್ಲ. ಇದು ಕರ್ನಾಟಕದಲ್ಲಿ ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆಯ ಬೇಡಿಕೆಯನ್ನು ಹೆಚ್ಚಿಸಿದೆ.

ಹೀಗಾಗಿ ಮಾತೃಭಾಷೆ ಇಲ್ಲವೆ ಕನ್ನಡ ಮಾಧ್ಯಮದ ಅಭಿವೃದ್ಧಿಗೆ ಇಂಗ್ಲಿಶ್‌ಮಾಧ್ಯಮದ ಶಿಕ್ಷಣವನ್ನು ನಿಯಂತ್ರಿಸುವುದರಲ್ಲಿ ಇಲ್ಲ. ಬದಲಾಗಿ ಮಾತೃಭಾಷೆ ಇಲ್ಲವೆ ಕನ್ನಡವನ್ನು ಎಲ್ಲಾ ವಿವಿಧ ಶಿಕ್ಷಣ, ಉದ್ಯೋಗ ಮತ್ತು ಇತರ ಕ್ಷೇತ್ರಗಳಲ್ಲಿ ಬಳಕೆಗೆ ತರುವ ವ್ಯವಸ್ಥೆ ಮಾಡುವುದರಲ್ಲಿ ಇದೆ. ಈ ಪ್ರಯತ್ನ ಮಾಡದೆ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಗಳನ್ನು ಅಭಿವೃದ್ಧಿಪಡಿಸಲು ಇಂಗ್ಲಿಶ್‌ಮಾಧ್ಯಮದ ಶಿಕ್ಷಣವನ್ನು ನಿಯಂತ್ರಿಸುವುದರಿಂದ ಉದ್ಭವಿಸುವ ಸಮಸ್ಯೆಗಳ ಬಗೆಗೆ ನಿಜವಾದ ಅರಿವಿದ್ದ ಕೋಠಾರಿ ಆಯೋಗವು ವಿಶ್ವವಿದ್ಯಾಲಯ ಧನಸಹಾಯ ಆಯೋಗ ಮತ್ತು ವಿಶ್ವವಿದ್ಯಾನಿಲಯಗಳು ಉನ್ನತ ಶಿಕ್ಷಣದಲ್ಲಿ ಮಾತೃಭಾಷೆ ಮತ್ತು ಪ್ರಾದೇಶಿಕ ಭಾಷೆಗಳ ಬಳಕೆಗೆ ಸಂಬಂಧಿಸಿದಂತೆ ಸೂಕ್ತವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಸಾಧ್ಯವಾದಷ್ಟು ಬೇಗನೆ, ಅಂದರೆ ಹತ್ತು ವರ್ಷಗಳ ಒಳಗೆ ಬಳಕೆಗೆ ತರಬೇಕು. ಇಲ್ಲವಾದರೆ ದಿನಗಳೆದಂತೆ ಸಮಸ್ಯೆ ಮತ್ತಷ್ಟು ಜಟಿಲವಾಗುತ್ತದೆ. ಭಾರತೀಯ ಭಾಷೆಗಳಲ್ಲಿ ಅಗತ್ಯವಾದ ಸಾಹಿತ್ಯವನ್ನು ಸಿದ್ಧಪಡಿಸಲು ಬಲು ದೊಡ್ಡಕಾರ್ಯಕ್ರಮವನ್ನು ರೂಪಿಸಬೇಕು, ಶಿಕ್ಷಕರ ತರಬೇತಿಗೂ ಸೂಕ್ತ ಕ್ರಮ ಕೈಗೊಳ್ಳಬೇಕು ಎಂಬ ಸಲಹೆಯನ್ನು ನೀಡಿದ್ದರು. ಆದರೆ ಕೋಠಾರಿ ಆಯೋಗದ ಸಲಹೆಗಳನ್ನು ವಿಶ್ವವಿದ್ಯಾಲಯ ಧನಸಹಾಯ ಆಯೋಗ ಮತ್ತು ವಿಶ್ವವಿದ್ಯಾಲಯಗಳು ಗಂಭೀರವಾಗಿ ಪರಿಣಮಿಸಿಲ್ಲ. ಇಂದರಿಂದಾಗಿ ಭಾರತದಲ್ಲಿ ಉನ್ನತ ಶಿಕ್ಷಣ ಇಂಗ್ಲಿಶ್‌ನಲ್ಲಿ ಮುಂದುವರಿಯುತ್ತಿದೆ. ಸರ್ಕಾರಗಳು ಇದನ್ನು ಸರಿಪಡಿಸದೆ ಸ್ಥಳೀಯ ಸಮುದಾಯಗಳ ಒತ್ತಡಕ್ಕೆ ಮಣಿದು ಶಿಕ್ಷಣತಜ್ಞರು, ಭಾಷಾವಿಜ್ಞಾನಿಗಳು ಮತ್ತು ಕಾನೂನು ಸಲಹೆಗಾರರ ಸಲಹೆಗಳನ್ನು ಆಧರಿಸಿ ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ತಮ್ಮ ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಮಾತ್ರ ಕಲಿಯಬೇಕು, ಶಿಕ್ಷಣ ಸಂಸ್ಥೆಗಳು ಕಲಿಸಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತಂದು ಇವುಗಳನ್ನು ಪಾಲಿಸದ ಶಾಲೆಗಳ ವಿರುದ್ಧ ಶಿಸ್ತುಕ್ರಮ ಜರುಗಿಸುವಂತೆ ಅಧಿಕಾರಿಗಳಿಗೆ ಸೂಚಿಸಿವೆ.

ಆದರೆ ದೇಶದಲ್ಲಿ ಭಾಷಾಮಾಧ್ಯಮದ ಸಮಸ್ಯೆ ಮುಂದೆ ಉಂಟುಮಾಡಬಹುದಾದ ಬಿಕ್ಕಟ್ಟಿನ ಅರಿವಿದ್ದ ಕೋಠಾರಿ ಸಮಿತಿ ನೀಡಿದ ಸಲಹೆಯ ಪ್ರಕಾರ ಕರ್ನಾಟಕದ ಉನ್ನತ ಶಿಕ್ಷಣ, ವೃತ್ತಿಪರ ಶಿಕ್ಷಣವನ್ನು ಮಾತೃಭಾಷೆ ಮತ್ತು ಪ್ರಾದೇಶಿಕ ಭಾಷೆಯಲ್ಲಿ ಬೋಧಿಸುವಂತಹ ವ್ಯವಸ್ಥೆ ಇದುವರೆಗೂ ಆಗಿಲ್ಲ. ಇದಕ್ಕೆ ಪರ್ಯಾಯವಾಗಿ ರಾಜ್ಯದಲ್ಲಿರುವ ಮಕ್ಕಳನ್ನು ಕನ್ನಡ ಮಾಧ್ಯಮದ ಶಾಲೆಗಳ ಕಡೆಗೆ ಆಕರ್ಷಿಸಲು ಪ್ರಾಥಮಿಕ ಹಂತದಿಂದ ಪ್ರೌಢಶಿಕ್ಷಣ ಪೂರ್ಣಗೊಳ್ಳುವವರೆಗೆ ಒಟ್ಟು ಹತ್ತು ವರ್ಷಗಳ ಕಾಲ ಕನ್ನಡಮಾಧ್ಯಮದಲ್ಲಿ ಕಲಿತಿದ್ದರೆ ಮಾತ್ರ ಅಂತಹ ವಿದ್ಯಾರ್ಥಿ, ಅಭ್ಯರ್ಥಿಗಳಿಗೆ ವೃತ್ತಿಶಿಕ್ಷಣ, ಉದ್ಯೋಗಗಳಲ್ಲಿ ಮೀಸಲಾತಿ ಕೊಡುವ ಅವೈಜ್ಞಾನಿಕ ನಿಯಮ ಅಳವಡಿಸಿವೆ. ಏಕೆಂದರೆ ಕರ್ನಾಟಕ

ಸರ್ಕಾರದ ಈ ನಿಯಮದ ಪ್ರಕಾರ ವಿದ್ಯಾರ್ಥಿಗಳು ವೃತ್ತಿ ಶಿಕ್ಷಣದಲ್ಲಿ ಮೀಸಲಾತಿ ಪಡೆಯಲು ಪಿಯುಸಿಯ ವಿಜ್ಞಾನ, ವಾಣಿಜ್ಯ ವಿಭಾಗಗಳಲ್ಲಿ ಅಧ್ಯಯನ ಮಾಡಿ ಮತ್ತು ಸಿಇಟಿ ಪರೀಕ್ಷೆಗೆ ಹಾಜರಾಗಿ ಉತ್ತೀರ್ಣಗೊಂಡಿರಬೇಕು. ಉದ್ಯೋಗದ ಸಂದರ್ಭದಲ್ಲಿ ಸಿಇಟಿ ಪರೀಕ್ಷೆಗೆ ಹಾಜರಾಗಿ ಅಲ್ಲಿ ಇಂಗ್ಲಿಶ್ ಭಾಷಾಪರೀಕ್ಷೆ ಸೇರಿ ಎಲ್ಲಾ ವಿಷಯಗಳ ಪತ್ರಿಕೆಗಳಲ್ಲಿ ಉತ್ತಮ ರ್‍ಯಾಂಕ್‌ನೊಂದಿಗೆ ಆಯ್ಕೆಯಾಗಬೇಕು. ಆಗ ಮಾತ್ರ ಕನ್ನಡಮಾಧ್ಯಮದ ಮೀಸಲಾತಿ ಪಡೆಯಲು ಸಾಧ್ಯ. ಆದರೆ ಕರ್ನಾಟಕದಲ್ಲಿ ವಿಜ್ಞಾನ ಮತ್ತು ವಾಣಿಜ್ಯ ವಿಭಾಗಗಳ ಶಿಕ್ಷಣ ಇಂಗ್ಲಿಶ್‌ನಲ್ಲಿ ಮುಂದುವರಿದಿದೆ. ಇಲ್ಲಿ ಪ್ರಾಥಮಿಕ ಹಂತದಿಂದ ಕನ್ನಡದಲ್ಲಿ ಕಲಿತವರು ಉತ್ತೀರ್ಣವಾಗುವುದೇ ಕಷ್ಟವಾಗಿದೆ. ಇದರಿಂದ ರಾಜ್ಯದಲ್ಲಿ ಆಸಕ್ತಿಯಿಂದ ವಿಜ್ಞಾನ, ವಾಣಿಜ್ಯ ವಿಭಾಗಗಳನ್ನು ಆಯ್ಕೆಮಾಡಿಕೊಂಡು ಕಲಿಯುವ ಪ್ರಯತ್ನ ಮಾಡಿದ್ದರೂ ಭಾಷೆಯ ಕಾರಣದಿಂದಾಗಿ ಪರೀಕ್ಷೆಗಳಲ್ಲಿ ಉತ್ತೀರ್ಣವಾಗಲು ಸಾಧ್ಯವಾಗದೆ ಶಿಕ್ಷಣದಿಂದ ವಂಚಿತರಾಗಿದ್ದಾರೆ.

ಕರ್ನಾಟಕ ಸರ್ಕಾರದ ನಿಯಮಗಳ ಪ್ರಕಾರ ದ್ವಿತೀಯ ಪಿಯುಸಿಯಲ್ಲಿ ಅನುತ್ತೀರ್ಣರಾದವರು ವೃತ್ತಿಶಿಕ್ಷಣ ಪ್ರವೇಶ ಪರೀಕ್ಷೆ ತೆಗೆದುಕೊಳ್ಳಲು ಅನರ್ಹರು. ದ್ವಿತೀಯ ಪಿಯುಸಿಯಲ್ಲಿ ಭಾಷಾಸಮಸ್ಯೆಯ ಕಾರಣದಿಂದಾಗಿ ಕಡಿಮೆ ಅಂಕಗಳೊಂದಿಗೆ ಉತ್ತೀರ್ಣರಾದವರು ವೃತ್ತಿಶಿಕ್ಷಣ ಪ್ರವೇಶ ಪರೀಕ್ಷೆಯಲ್ಲಿ ಮತ್ತೆ ಭಾಷಾಸಮಸ್ಯೆಯ ಕಾರಣದಿಂದ ಕಡಿಮೆ ಅಂಕಗಳನ್ನು ತೆಗೆದುಕೊಂಡು ಅಥವಾ ಅನುತ್ತೀರ್ಣಗೊಂಡ ಕನ್ನಡ ಮಾಧ್ಯಮದ ಮೀಸಲಾತಿಯಿಂದ ವಂಚಿತರಾಗಿದ್ದಾರೆ. ವೃತ್ತಿಶಿಕ್ಷಣಕ್ಕೆ ಉದ್ಯೋಗಗಳ ಸಂದರ್ಭದಲ್ಲಿ ಕನಿಷ್ಟ ವಿದ್ಯಾರ್ಹತೆ ಪೂರ್ಣಗೊಳಿಸಿ ಸಿಇಟಿ ಪರೀಕ್ಷೆಯಲ್ಲಿ ಉತ್ತೀರ್ಣಗೊಂಡ ವಿದ್ಯಾರ್ಥಿಗಳು ಮಾತ್ರ ವೃತ್ತಿಶಿಕ್ಷಣದಲ್ಲಿ ಕನ್ನಡದ ಮೀಸಲಾತಿ ಪಡೆಯಲು ಸಾಧ್ಯ. ಆದರೆ ಕರ್ನಾಟಕದಲ್ಲಿ ಈ ಎಲ್ಲಾ ಶಿಕ್ಷಣ ಮತ್ತು ಪರೀಕ್ಷೆಗಳನ್ನು ಇಂಗ್ಲಿಶ್‌ನಲ್ಲಿ ಮುಂದುವರಿಯಲು ಅವಕಾಶ ನೀಡಿ ಕನ್ನಡ ಮಾಧ್ಯಮದ ಶಿಕ್ಷಣಕ್ಕೆ ಮೀಸಲಾತಿ ಕಲ್ಪಿಸಿರುವುದು ಕನ್ನಡ ಭಾಷಾಮಾಧ್ಯಮದ ಶಿಕ್ಷಣವನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರ ತೆಗೆದುಕೊಂಡಿರುವ ನಿರ್ಧಾರ ಭಾಷಾಮಾಧ್ಯಮದ ಸಮಸ್ಯೆಗೆ ಸೂಕ್ತವಾದ ಪರಿಹಾರವಲ್ಲ. ಇಲ್ಲಿ ಈಗಾಗಲೇ ಮಾತೃಭಾಷಾಮಾಧ್ಯಮ ಕಲಿಕೆ ಮತ್ತು ಸಮಸ್ಯೆಗಳು ಭಾಗದಲ್ಲಿ ಚರ್ಚಿಸಿರುವ ಹಾಗೆ ಪ್ರಾಥಮಿಕ ಹಂತದಿಂದ ಪ್ರೌಢಶಿಕ್ಷಣದವರೆಗೆ ಕನ್ನಡ ಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳು ಭಾಷಾಸಮಸ್ಯೆಯನ್ನು ಎದುರಿಸಿ ವಾರ್ಷಿಕಪರೀಕ್ಷೆ, ಪ್ರವೇಶ ಪರೀಕ್ಷೆಗಳಲ್ಲಿ ಅನುತ್ತೀರ್ಣಗೊಂಡು ಶಿಕ್ಷಣದಿಂದ ಅಥವಾ ತಮ್ಮ ಕಲಿಕೆಯ ಆಸಕ್ತ ವಿಷಯಗಳಿಂದ ವಂಚಿತರನ್ನಾಗಿ ಮಾಡಿದೆ. ಇವುಗಳನ್ನು ಸರಿಪಡಿಸಿ ಕನ್ನಡ ಮಾಧ್ಯಮದ ಕನ್ನಡಮಾಧ್ಯಮದ ಶಿಕ್ಷಣವನ್ನು ಅಭಿವೃದ್ಧಿಪಡಿಸಬೇಕಾದ ಸರ್ಕಾರಗಳು ಪ್ರಾಥಮಿಕ ಹಂತದಿಂದ ಪ್ರೌಢಶಿಕ್ಷಣದವರಗೆ ಒಟ್ಟು ಹತ್ತು ವರ್ಷಗಳ ಕಾಲ ಕನ್ನಡದಲ್ಲಿ ಕಲಿತವರಿಗೆ ಮೀಸಲಾತಿ ನಿಯಮ ಕಲ್ಪಿಸುವ ಮೂಲಕ ಕನ್ನಡ ಭಾಷಾಮಾಧ್ಯಮದ ಸಮಸ್ಯೆಯನ್ನು ಜೀವಂತವಾಗಿ ಉಳಿಸಿ ರಾಜ್ಯದಲ್ಲಿನ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸುವಂತೆ ಮಾಡಿವೆ. ಹೀಗಾಗಿ ಇಲ್ಲಿ ಕನ್ನಡದಲ್ಲಿ ಕಲಿತವರಿಗೆ ಮೀಸಲಾತಿ ಕಲ್ಪಿಸುವ ಬದಲಾಗಿ ಉನ್ನತ,

ವೃತ್ತಿಶಿಕ್ಷಣವನ್ನೇ ಕನ್ನಡ ಮಾಧ್ಯಮವನ್ನಾಗಿ ಪರಿವರ್ತಿಸುವ ಮೂಲಕ ಕನ್ನಡ ಭಾಷಾಮಾಧ್ಯಮದ ಸಮಸ್ಯೆಗೆ ಶಾಶ್ವತ ಪರಿಹಾರ ಕಂಡುಕೊಳ್ಳಲು ಸಾಧ್ಯವಿದೆ. ಇದನ್ನು ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಭಾರತದ ಮತ್ತು ಕರ್ನಾಟಕದ ಭಾಷಾಸಮಸ್ಯೆಗಳಿಗೆ ಪರಿಹಾರ ಸೂಚಿಸಲು ಸರ್ಕಾರಗಳಿಂದಲೇ ನೇಮಕವಾಗಿರುವ ಭಾಷಾಸಮಿತಿ ತಿಳಿಸಿವೆ. ಆದರೆ ಸರ್ಕಾರಗಳು ಈ ಬಗೆಗೆ ಗಂಭೀರ ಪ್ರಯತ್ನ ಮಾಡದೆ ಕನ್ನಡದಲ್ಲಿ ಕಲಿತವರಿಗೆ ಮೀಸಲಾತಿ ಕಲ್ಪಿಸುವ ಮೂಲಕ ಕನ್ನಡ ಭಾಷಾಮಾಧ್ಯಮದ ಸಮಸ್ಯೆಯನ್ನು ಜೀವಂತವಾಗಿ ಉಳಿಸಿವೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಕರ್ನಾಟಕ ಸರ್ಕಾರ ಕನ್ನಡಮಾಧ್ಯಮದ ಶಿಕ್ಷಣದ ಅಭಿವೃದ್ಧಿಗೆ ತೆಗೆದುಕೊಂಡಿರುವ ನಿರ್ಧಾರಕ್ಕೂ ಕರ್ನಾಟಕದ ಭಾಷಾಮಾಧ್ಯಮದ ಸಮಸ್ಯೆಗೂ ಹೊಂದಾಣಿಕೆಯ ಕೊರತೆ ಇರುವುದು ಸ್ಪಷ್ಟವಾಗುತ್ತದೆ. ಇದರಿಂದಾಗಿ ಕರ್ನಾಟಕ ಸರ್ಕಾರ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿತವರಿಗೆ ವೃತ್ತಿ ಶಿಕ್ಷಣದಲ್ಲಿ ಶೇ.೫ರಷ್ಟು ಮೀಸಲಾತಿ ಕಲ್ಪಿಸಿದ್ದರು ಕರ್ನಾಟಕದ ಭಾಷಾಮಾಧ್ಯಮದ ಸಮಸ್ಯೆ ಬಗೆಹರಿದಿಲ್ಲ. ಬದಲಾಗಿ ಇದುವರೆಗೆ ಚರ್ಚಿಸಿರುವ ಹಾಗೆ ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ, ಆಡಳಿತಾತ್ಮಕವಾಗಿ, ಸಾಮಾಜಿಕವಾಗಿ ಹೊಸ ಹೊಸ ಸಮಸ್ಯೆಗಳನ್ನು ಹುಟ್ಟುಹಾಕಿವೆ. ಇವುಗಳ ಪ್ರಭಾವ ಸಹಜವಾಗಿಯೇ ಪ್ರಾಥಮಿಕ ಶಿಕ್ಷಣದಲ್ಲಿ ಮಗು ಕಲಿಯುವ ಭಾಷಾಮಾಧ್ಯಮದ ಮೇಲೆ ಬೀರಿದೆ. ಇದರ ಜೊತೆಗೆ ಇಲ್ಲಿರುವ ಮತ್ತೊಂದು ಮುಖ್ಯ ಸಮಸ್ಯೆಯೆಂದರೆ ಮಗು ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಕಲಿಯಬೇಕು. ಅನಂತರದ ಶಿಕ್ಷಣವನ್ನು ಯಾವ ಮಾಧ್ಯಮದಲ್ಲಿ ಬೇಕಾದರೂ ಕಲಿಯಲಿ ಎನ್ನುವುದು. ಹೌದು ಮಗು ಪ್ರಾಥಮಿಕ ಶಿಕ್ಷಣದ ನಂತರದ ವಿದ್ಯಾಭ್ಯಾಸವನ್ನು ಯಾವ ಮಾಧ್ಯಮದಲ್ಲಾದರು ಕಲಿಯಲಿ. ಆದರೆ ಯಾವ ಮಾಧ್ಯಮದಲ್ಲಾದರೂ ಕಲಿಯುವುದಕ್ಕೆ ವ್ಯವಸ್ಥೆ ಮಾಡಬೇಕಲ್ಲವೇ! ವ್ಯವಸ್ಥೆಯನ್ನೇ ಮಾಡದೆ ಮಗು ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಮಾತ್ರ ಕಲಿಯಬೇಕು ಎಂದು ಭಾಷಾನೀತಿ ಜಾರಿಗೆ ತಂದು ಅದನ್ನು ಪಾಲಿಸಬೇಕು ಎಂದು ಒತ್ತಡ ಉಂಟುಮಾಡಿ ಉನ್ನತ, ವೃತ್ತಿಶಿಕ್ಷಣದಲ್ಲಿ ಇಂಗ್ಲಿಶ್ ಮುಂದುವರಿಸುವುದು ಸರಿಯಾದ ಕ್ರಮವೇ? ವಿದ್ಯಾರ್ಥಿಗಳಿಗೆ ಉನ್ನತ, ವೃತ್ತಿಶಿಕ್ಷಣದ ಸಂದರ್ಭದಲ್ಲಿ ಎದುರಾಗುವ ಭಾಷಾಸಮಸ್ಯೆಯನ್ನು ಪರಿಹರಿಸುವವರು ಯಾರು? ಎಂಬ ಪ್ರಶ್ನೆಗಳಿಗೆ ಸರ್ಕಾರಗಳು ಅಥವಾ ಇಂತಹ ಒತ್ತಡ ಉಂಟಾಗಲು ಕಾರಣರಾದವರು ಉತ್ತರ ಕೊಡಬೇಕಾಗುತ್ತದೆ.

ಇವುಗಳಿಗೆ ಉತ್ತರಗಳನ್ನು ಕೊಡದೆ ಅಥವಾ ಇಲ್ಲಿ ಉದ್ಭವಿಸಿರುವ ಸಮಸ್ಯೆಗಳನ್ನು ಪರಿಹರಿಸದೆ ವೈಜ್ಞಾನಿಕ ಕಾರಣಗಳನ್ನು ನೀಡಿ ಮಕ್ಕಳು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಮಾತ್ರ ಕಲಿಯಬೇಕು ಎಂದು ಒತ್ತಡ ಉಂಟುಮಾಡಿರುವುದು ಮಗುವಿಗೆ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಕಲಿಸದೆ ಅನ್ಯಭಾಷೆಯಲ್ಲಿ ಶಿಕ್ಷಣ ಕಲಿಸುವುದು ಎಷ್ಟು ಅವೈಜ್ಞಾನಿಕವೋ ಇದೂ ಅಷ್ಟೇ ಅವೈಜ್ಞಾನಿಕ ಪದ್ಧತಿ. ಇಂತಹ ಅವೈಜ್ಞಾನಿಕ ಪದ್ಧತಿಯನ್ನು ನಿರ್ಮೂಲನೆ ಮಾಡಿ ವೈಜ್ಞಾನಿಕ ಕ್ರಮದ ಅಡಿಯಲ್ಲಿ ಮಾತೃಭಾಷೆ ಇಲ್ಲವೆ ಕನ್ನಡ ಮಾಧ್ಯಮದ ಶಿಕ್ಷಣವನ್ನು ಅಭಿವೃದ್ಧಿಪಡಿಸಬೇಕು. ಆ ತರದ ಹೋರಾಟಗಳು ಆರಂಭವಾಗಬೇಕು. ಆದರೆ

ಕರ್ನಾಟಕದಲ್ಲಿ ಈ ವಿಚಾರವಾಗಿ ಇದುವರೆಗೆ ಗಂಭೀರವಾದ ಹೋರಾಟ, ಚರ್ಚೆಗಳು ಆಗಿಲ್ಲ. ಇಲ್ಲಿನ ಚರ್ಚೆ, ಹೋರಾಟಗಳು ಕೇವಲ ಪ್ರಾಥಮಿಕ ಹಂತದ ಶಿಕ್ಷಣದಲ್ಲಿ ಮಗುವಿಗೆ ಕಲಿಸಲು ಬಳಸಬೇಕಾದ ಭಾಷೆಯ ಬಗೆಗೆ ಮಾತ್ರ ಸೀಮಿತಗೊಂಡಿವೆ. ಮಾತೃಭಾಷೆ ಇಲ್ಲವೆ ಕನ್ನಡ ಭಾಷಾಮಾಧ್ಯಮದ ಬಗೆಗೆ ಚಿಂತಿಸುತ್ತಿರುವವರು, ಹೋರಾಟ ಮಾಡುತ್ತಿರುವವರು, ಸಮಾನ ಶಿಕ್ಷಣಕ್ಕಾಗಿ ಹಕ್ಕೊತ್ತಾಯ ಮಾಡುತ್ತಿರುವವರು ಕೂಡ ಮಾತೃಭಾಷೆ ಇಲ್ಲವೆ ಪ್ರಾದೇಶಿಕ ಭಾಷೆಗಳನ್ನು ಅಭಿವೃದ್ಧಿಪಡಿಸಲು ಇರುವ ಇಂತಹ ದಾರಿಗಳನ್ನು ಪ್ರಧಾನವಾಗಿಸಿಕೊಂಡು ಇದಕ್ಕೆ ವ್ಯವಸ್ಥೆ ಮಾಡುವಂತೆ ಸರ್ಕಾರಗಳ ಮೇಲೆ ತೀವ್ರತರ ಒತ್ತಡಗಳನ್ನು ಉಂಟುಮಾಡಿಲ್ಲ.

ಇದರಿಂದಾಗಿ ಕರ್ನಾಟಕದಲ್ಲಿ ರಾಜಕೀಯ ಅಧಿಕಾರಕ್ಕೆ ಮಾತ್ರ ಕಟ್ಟುಬಿದ್ದು ಆಡಳಿತ ನಡೆಸಿರುವ ಸರ್ಕಾರಗಗಳು ಭಾಷಾಮಾಧ್ಯಮದ ಸಮಸ್ಯೆಗಳನ್ನು ಸರಿಪಡಿಸುವ ಇರುವ ಇಂತಹ ದಾರಿಗಳ ಬಗೆಗೆ ಆಸಕ್ತಿ ವಹಿಸಿಲ್ಲ. ಇದು ಸರ್ಕಾರಗಳಿಗೆ ಬೇಕಾಗಿಯು ಇಲ್ಲ. ಸರ್ಕಾರಗಳು ಜನರಿಂದ ಮಾತೃಭಾಷಾ ಮಾಧ್ಯಮದ ಶಿಕ್ಷಣದ ಬಗೆಗೆ ಒತ್ತಡ ಉಂಟಾದ ಸಂದರ್ಭಗಳಲ್ಲಿ ಮಗು ತನ್ನ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಇಲ್ಲವೆ ಕನ್ನಡದಲ್ಲಿ ಮಾತ್ರ ಕಲಿಯಬೇಕು ಎಂದು ಆದೇಶ ಹೊರಡಿಸಿ ಮಕ್ಕಳು ಈ ಪ್ರಕಾರ ಶಿಕ್ಷಣ ಕಲಿಯಬೇಕು, ಶಿಕ್ಷಣ ಸಂಸ್ಥೆಗಳು ಕಲಿಸಬೇಕು ಎಂದು ಒತ್ತಡ ಉಂಟುಮಾಡಿವೆ. ಈ ರೀತಿ ಒತ್ತಡ ಉಂಟುಮಾಡುವುದು ಜನವಿರೋಧಿ ನಿಲುವು. ಇದೇ ಕರ್ನಾಟಕ ಸರ್ಕಾರ ೧೯೯೪ರಲ್ಲಿ ಜಾರಿಗೆ ತಂದಿದ್ದ ಭಾಷಾನೀತಿಯನ್ನು ಸುಪ್ರೀಂಕೋರ್ಟ್ ಅನೂರ್ಜಿತಗೊಳಿಸಲು ಕಾರಣವಾಗಿರುವ ಮುಖ್ಯ ಅಂಶ. ಇದಕ್ಕೆ ಸುಪ್ರೀಂಕೋರ್ಟ್ ಕೊಟ್ಟಿರುವ ಕಾರಣಗಳು ಬೇರೆಬೇರೆ ಇರಬಹುದು. ಆದರೆ ಇಂಗ್ಲಿಶ್ ಬೇಡಿಕೆ ಭಾಷೆಯಾಗಿರುವಾಗ ಅದನ್ನು ನಿಯಂತ್ರಿಸುವುದು ಜನವಿರೋಧಿ ನಿಲುವು ಎಂಬ ಕಾರಣಕ್ಕೆ ಕರ್ನಾಟಕ ಸರ್ಕಾರದ ಭಾಷಾನೀತಿಯನ್ನು ಸುಪ್ರೀಂಕೋರ್ಟ್ ಮಾನ್ಯ ಮಾಡಿಲ್ಲ. ಸುಪ್ರೀಂಕೋರ್ಟ್ ತೀರ್ಪಿನ ವಿರುದ್ಧವಾಗಿ ರಾಜ್ಯ ಸರ್ಕಾರಗಳು ಭಾಷಾನೀತಿಯನ್ನು ಜಾರಿಗೆ ತರಲು ಸಾಧ್ಯವಿಲ್ಲ. ಹೀಗಾಗಿ ಉನ್ನತ ಶಿಕ್ಷಣ, ವೃತ್ತಿಪರ ಶಿಕ್ಷಣವನ್ನು ಕನ್ನಡದಲ್ಲಿ ಕಲಿಯುವಂತಹ ವ್ಯವಸ್ಥೆ ನಿರ್ಮಾಣ ಮಾಡುವ ಮೂಲಕ ಒಂದು ಭಾಷೆಯಾಗಿ ಇಂಗ್ಲಿಶ್‌ನ್ನು ಕಲಿಸುತ್ತಿರುವಾಗ ಅನುಸರಿಸುತ್ತಿರುವ ವಿಧಾನಗಳನ್ನು ಸರಿಪಡಿಸಿ ಕನ್ನಡ ಮಾಧ್ಯಮದ ಶಿಕ್ಷಣವನ್ನು ಅಭಿವೃದ್ಧಿ ಪಡಿಸಬಹುದು. ಇದು ಸುಪ್ರೀಂಕೋರ್ಟ್ ತೀರ್ಪಿಗೆ ಒಳಗಾಗಿ ಮಾತೃಭಾಷೆ ಮತ್ತು ಕನ್ನಡ ಮಾಧ್ಯಮದ ಶಿಕ್ಷಣವನ್ನು ಅಭಿವೃದ್ಧಿಪಡಿಸಲು ಇರುವ ದಾರಿ.

ಇಂತಹ ದಾರಿಗಳನ್ನು ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ಈಗಾಗಲೇ ಸರ್ಕಾರಗಳಿಂದಲೇ ನೇಮಕವಾಗಿ ವರದಿ ಸಲ್ಲಿಸಿರುವ ಭಾಷಾಆಯೋಗ, ಸಮಿತಿಗಳು ತೋರಿಸಿವೆ. ಆದರೂ ಸರ್ಕಾರಗಳು ಪಾಲಿಸಿಲ್ಲ. ಹೀಗಾಗಿ ಕರ್ನಾಟಕ ಸರ್ಕಾರ ಮಾತೃಭಾಷೆ ಇಲ್ಲವೆ ಕನ್ನಡಮಾಧ್ಯಮದ ಪರವಾಗಿ ತೆಗೆದುಕೊಂಡಿರುವ ಭಾಷಾನಿಲುವುಗಳು ಜನವಿರೋಧಿಯಾಗಿ ಕಾಣುತ್ತಿವೆ. ಪ್ರಜಾಪ್ರಭುತ್ವದಲ್ಲಿ ಆಡಳಿತ ನಡೆಸುವ ಸರ್ಕಾರಗಳು ಜನ ವಿರೋಧಿ ನಿಲುವುಗಳನ್ನು ತೆಗೆದುಕೊಳ್ಳುವ ಅಧಿಕಾರವಿಲ್ಲ. ಹೀಗಾಗಿ ಭಾಷಾಮಾಧ್ಯಮದ ಸಮಸ್ಯೆಗಳ ಹಿಂದಿರುವ ಕಾರಣಗಳನ್ನು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಕಂಡುಕೊಂಡು

ಜನರ ಬದುಕಿಗೆ ಹತ್ತಿರವಾಗುವಂತೆ ಭಾಷಾಸಮಸ್ಯೆಗಳನ್ನು ಬಗೆಹರಿಸಬೇಕು. ಭಾಷೆಗಳು ಜನರ ಬದುಕಿಗೆ ದೂರವಾಗುತ್ತಿರುವಾಗ ಅಭಿಮಾನದ ನೆಲೆಯಲ್ಲಿ ಅದರಲ್ಲಿಯೇ ಕಲಿಯುವಂತೆ ಒತ್ತಡ ಹೇರುವುದು ಜನವಿರೋಧಿ ನಿಲುವು ಆಗುತ್ತದೆ. ಇದು ಪ್ರಜಾಪ್ರಭುತ್ವಕ್ಕೆ ವಿರುದ್ಧವಾದುದು ಕೂಡ ಹೌದು. ಕರ್ನಾಟಕದ ಸಂದರ್ಭದಲ್ಲಿ ಆಗಿರುವುದು ಇದೇ. ಕನ್ನಡ ಬದುಕಿನ ಭಾಗದಿಂದ ದೂರವಾಗುತ್ತಿರುವಾಗ ಕನ್ನಡವನ್ನು ಕಲಿಯುವಂತೆ ಒತ್ತಡ ಹೇರಲಾಗಿದೆ. ಸಾಮಾನ್ಯವಾಗಿ ಜನ ಭಾಷೆಯನ್ನು ಅಭಿಮಾನದ ನೆಲೆಯಲ್ಲಿ ನೋಡಿದರು ಆಯ್ಕೆಮಾಡಿಕೊಳ್ಳುವಾಗ ಬದುಕಿನ ಭಾಗವಾಗಿಯೇ ಆಯ್ಕೆಮಾಡಿಕೊಳ್ಳುತ್ತಾರೆ. ಹೀಗಾಗಿ ಸರ್ಕಾರಗಳು ಮೊದಲು ಭಾಷೆಯನ್ನು ಬದುಕಿನ ಭಾಗವಾಗಿಸಬೇಕು. ಆಗ ಮಾತ್ರ ಭಾಷಾಮಾಧ್ಯಮದ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯ. ಇದನ್ನು ಮಾಡದೆ ಭಾಷಾಮಾಧ್ಯಮದ ಸಮಸ್ಯೆ ಬಗೆಹರಿಸಲು ಸಾಧ್ಯವಿಲ್ಲ. ಕರ್ನಾಟಕದಲ್ಲಿ ಆಗಿರುವುದು ಇದೇ. ಇಲ್ಲಿ ಕನ್ನಡವನ್ನು ಬದುಕಿನ ಭಾಗವಾಗಿಸದೆ, ಕನ್ನಡಮಾಧ್ಯಮದ ಶಿಕ್ಷಣಕ್ಕೆ ಪೂರಕ ವ್ಯವಸ್ಥೆ ಕಲ್ಪಿಸದೆ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಇಲ್ಲವೆ ಕನ್ನಡದಲ್ಲಿಯೇ ಕಲಿಯಬೇಕು ಎಂದು ಭಾಷಾನೀತಿ ಹೊರಡಿಸಿ ಒತ್ತಡ ಉಂಟುಮಾಡಿರುವುದು ಕರ್ನಾಟಕದಲ್ಲಿ ಭಾಷಾಮಾಧ್ಯಮದ ಸಮಸ್ಯೆಗೆ ಕಾರಣವಾಗಿದೆ.

**೪.೪ ಭಾಷಾಅಲ್ಪಸಂಖ್ಯಾತರು: ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು**

ಭಾಷಾಮಾಧ್ಯಮ:ಪರ ಮತ್ತು ವಿರೋಧದ ಚರ್ಚೆಯಲ್ಲಿ ಶಿಕ್ಷಣತಜ್ಞರು, ಭಾಷಾವಿದ್ವಾಂಸರು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಗಮನಿಸಿದಾಗ ಮಗುವಿನ ಮಾತೃಭಾಷೆಯಲ್ಲಿ ಶಿಕ್ಷಣ ಕಲಿಸುವುದು ಉತ್ತಮವಾದುದು. ಅದರಲ್ಲೂ ಪ್ರಾಥಮಿಕ ಶಿಕ್ಷಣದ ಭಾಷೆ ಮಗುವಿನ ಮಾತೃಭಾಷೆಯೇ ಆಗಿರಬೇಕು. ಏಕೆಂದರೆ "ಮಾತೃಭಾಷೆಯಲ್ಲಿ ಮಗುವನ್ನು ಕಲಿಸುವುದೆಂದರೆ ನೀರಿನಲ್ಲಿ ಈಜಲು ಕಲಿಸಿದಂತೆ. ಮುಳುಗುವ ಭಯವೂ ಕಾಡಿಸುತ್ತದೆ. ಇಂಗ್ಲಿಶ್‌ನಂಥ ಪರಕೀಯ ಭಾಷೆಯಲ್ಲಿ ಕಲಿಸುವುದೆಂದರೆ ಬೆನ್ನಮೇಲೆ ಕಲ್ಲುಕಟ್ಟಿ ಈಜಲು ಕಲಿಸಿದಂತೆ, ಮುಳುಗುವ ಭಯಕ್ಕೆ ಹೆಚ್ಚು ಅವಕಾಶ ಕಲ್ಪಿಸಿಕೊಟ್ಟಂತಾಗುವುದು. ಮಾತೃಭಾಷೆಯಲ್ಲಿ ಕಲಿಯುವವನಿಗೆ ಕಲಿಯುವ ವಿಷಯದ ಕಠಿಣತೆ ಮಾತ್ರ ಎದುರಾಗಬಹುದು. ಆದರೆ ಪರಕೀಯ ಭಾಷೆಯಲ್ಲಿ ಓದುವವನಿಗೆ ಎರಡು ಬಿಕ್ಕಟ್ಟುಗಳು ಒಂದು ಭಾಷೆಯ ಕಠಿಣತೆ, ಮತ್ತೊಂದು ವಿಷಯದ ಕಠಿಣತೆ.[೧೮]" ಈ ಎರಡು ಕಠಿಣತೆಗಳಿಂದ ವಿದ್ಯಾರ್ಥಿಗಳನ್ನು ಪಾರುಮಾಡಿ ಕಲಿಕೆಯನ್ನು ಸುಲಭಗೊಳಿಸಲು ವಿದ್ಯಾರ್ಥಿಗಳ ಮಾತೃಭಾಷೆಯನ್ನು ಬೋಧನಾ ಮಾಧ್ಯಮವಾಗಿ ಬಳಸಬೇಕು ಎಂಬುದು ಅವರು ನೀಡಿರುವ ವೈಜ್ಞಾನಿಕ ಕಾರಣ. ಆದರೆ ಹೀಗೆ ವೈಜ್ಞಾನಿಕ ಕಾರಣ ಆಧರಿಸಿ ಬಹುಭಾಷಿಕ ಪ್ರದೇಶದಲ್ಲಿನ ಎಲ್ಲಾ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಶಿಕ್ಷಣ ಕಲಿಸಲು ಸಾಧ್ಯವೇ? ಎಂಬ ಪ್ರಶ್ನೆ ಕೇಳಿಕೊಂಡು ಸ್ವಲ್ಪ ಸೂಕ್ಷ್ಮವಾಗಿ ಅವಲೋಕಿಸ ಬೇಕಿದೆ.

ಏಕೆಂದರೆ ಒಂದು ಭಾಷೆಯನ್ನು ಶಿಕ್ಷಣದಲ್ಲಿ ಬೋಧನಾಮಾಧ್ಯಮವಾಗಿ ಬಳಸಬೇಕಾದರೆ .ಈಗಾಗಲೆ ಚರ್ಚಿಸಿರುವ ಹಾಗೆ ಆ ಭಾಷೆ ಬರವಣಿಗೆಯ ಸ್ವರೂಪ ಪಡೆದಿರಬೇಕು. ಆ ಭಾಷೆಯಲ್ಲಿ

ಉತ್ಕೃಷ್ಟ ಸಾಹಿತ್ಯ ರಚನೆಯಿರಬೇಕು. ಎಲ್ಲಾ ವಿಷಯಗಳನ್ನು ಆ ಭಾಷೆಯಲ್ಲಿ ಬೋಧಿಸುವುದಕ್ಕೆ ಪಠ್ಯಗಳನ್ನು ರೂಪಿಸಲು ಸಾಧ್ಯವಾಗುವಂತ ಸಾಮರ್ಥ್ಯ ಇರಬೇಕು. ಹಾಗೂ ಒಂದು ತರಗತಿಯಲ್ಲಿ ನಿರ್ದಿಷ್ಟ ಸಂಖ್ಯೆಯ ವಿದ್ಯಾರ್ಥಿಗಳು ಇರಬೇಕು. ಇವಿಲ್ಲದೆ ಒಂದು ಭಾಷೆಯನ್ನು ಶಿಕ್ಷಣದಲ್ಲಿ ಬೋಧನಾ ಮಾಧ್ಯಮವಾಗಿ ಬಳಸಲು ಸಾಧ್ಯವಿಲ್ಲ. ಹೀಗಾಗಿ ಕರ್ನಾಟಕ ಸರ್ಕಾರ ಈ ಹಿಂದೆ ಉಲ್ಲೇಖಿಸಿರುವ ಹಾಗೆ ಮಗುವಿನ ಪ್ರಾಥಮಿಕ ಶಿಕ್ಷಣದ ಕಲಿಕಾಮಾಧ್ಯಮದ ಭಾಷೆ ಮಾತೃಭಾಷೆ ಇಲ್ಲವೆ ಕನ್ನಡ ಮಾತ್ರ ಆಗಿರುತ್ತದೆ ಎಂದು ಆದೇಶಿಸಿ ಈ ಭಾಷಾನೀತಿಯ ಅನುಬಂಧ-೧ರಲ್ಲಿ ಕನ್ನಡ, ತಮಿಳು, ತೆಲುಗು, ಮಲಯಾಳಂ, ಮರಾಠಿ, ಹಿಂದಿ, ಉರ್ದು, ಇಂಗ್ಲಿಶ್ ಸೇರಿ ಒಟ್ಟು ಎಂಟು ಭಾಷೆಗಳನ್ನು ಮಾತ್ರ ಉಲ್ಲೇಖಿಸಿ ಮಹಾರಾಷ್ಟ್ರದ ಗಡಿಭಾಗದಲ್ಲಿ ಮರಾಠಿಮಾಧ್ಯಮದ ಶಾಲೆಗಳನ್ನು, ಮುಸ್ಲಿಂ ರಾಜಮನೆತನಗಳು ಆಡಳಿತ ನಡೆಸಿರುವ ಜಿಲ್ಲೆಗಳಾದ ಬೀದರ್, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಉರ್ದುಮಾಧ್ಯಮದ ಶಾಲೆಗಳನ್ನು, ಆಂಧ್ರಪ್ರದೇಶದ ಗಡಿಭಾಗದ ಜಿಲ್ಲೆಗಳಲ್ಲಿ ತೆಲುಗು ಮಾಧ್ಯಮದ ಶಾಲೆಗಳನ್ನು, ಕೇರಳದ ಗಡಿಭಾಗದಲ್ಲಿ ಮಲಯಾಳಿಮಾಧ್ಯಮದ ಶಾಲೆಗಳನ್ನು ಮತ್ತು ತಮಿಳುನಾಡು ಗಡಿಭಾಗದಲ್ಲಿ ತಮಿಳು ಭಾಷಾಮಾಧ್ಯಮದ ಶಾಲೆಗಳನ್ನು ಆರಂಭಿಸಿವೆ. ಉಳಿದಂತೆ ಕರ್ನಾಟಕದ ಕೆಲವು ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಮಾತ್ರ ಭಾಷಾಅಲ್ಪಸಂಖ್ಯಾತರ ಜನಸಂಖ್ಯೆಗೆ ಅನುಗುಣವಾಗಿ ಅವರ ಮಾತೃಭಾಷಾಮಾಧ್ಯಮದ ಶಾಲೆಗಳನ್ನು ತೆರೆಯಲಾಗಿದೆ. ಹೀಗಾಗಿ ಕರ್ನಾಟಕದ ಶಿಕ್ಷಣದಲ್ಲಿ ಕೇವಲ ಎಂಟು ಭಾಷೆಗಳಲ್ಲಿ ಮಾತ್ರ ಕಲಿಕಾಮಾಧ್ಯಮದ ಸ್ಥಾನ ಪಡೆದಿದ್ದು, ಇವುಗಳನ್ನು ಕಲಿಸುವ ವ್ಯವಸ್ಥೆ ಮಾಡಿರುವ ಕಡೆಗಳಲ್ಲಿ ಮಾತ್ರ ಮಾತೃಭಾಷಾಮಾಧ್ಯಮದಲ್ಲಿ ಕಲಿಯಲು ಸಾಧ್ಯವಿದೆ.

ಆದರೆ ಕರ್ನಾಟಕದಲ್ಲಿ ಒಂದು ಅಂದಾಜಿನ ಪ್ರಕಾರ ಒಟ್ಟು ೧೬೬ ಭಾಷೆಗಳಿವೆ. ಕರ್ನಾಟಕ ಸರ್ಕಾರ ತನ್ನ ಭಾಷಾನೀತಿಯಲ್ಲಿ ಮಗುವಿನ ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಿರುವುದು ಎಂದು ಹೇಳಿದರೂ ಅನುಬಂಧ-೧ರಲ್ಲಿ ಕೇವಲ ಎಂಟು ಭಾಷೆಗಳನ್ನು ಮಾತ್ರ ಉಲ್ಲೇಖಿಸಿರುವುದರಿಂದ ಈ ಎಂಟು ಭಾಷೆಗಳನ್ನು ಮಾತೃಭಾಷೆಯಾಗಿ ಬಳಸುವವರು ಮಾತ್ರ ತಮ್ಮ ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಕಲಿಯಲು ಸಾಧ್ಯವಿದೆ. ಅದೂ ತಮ್ಮ ಭಾಷೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಮಾತನಾಡುವವರು ಯಾವ ಪ್ರದೇಶದಲ್ಲಿ ವಾಸಿಸುತ್ತಿದ್ದಾರೋ ಅಂತಹ ಸ್ಥಳಗಳಲ್ಲಿ ಮಾತ್ರ, ಏಕೆಂದರೆ ಸರ್ಕಾರಗಳು ಎಂಟು ಭಾಷೆಗಳ ಜನರು ಹೆಚ್ಚಿನ ಸಂಖ್ಯೆಯಲ್ಲಿ ಯಾವ ಭಾಗದಲ್ಲಿ ವಾಸಿಸುತ್ತಿದ್ದಾರೋ ಅಂತಹ ಪ್ರದೇಶಗಳಲ್ಲಿ ಮಾತ್ರ ಅವರ ಮಾತೃಭಾಷಾಮಾಧ್ಯಮದ ಪ್ರಾಥಮಿಕ ಶಾಲೆಗಳನ್ನು ಆರಂಭಿಸಿ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಕಲಿಯಲು ಅವಕಾಶ ಮಾಡಿಕೊಟ್ಟಿವೆ. ಇತ್ತೀಚಿನ ದಿನಗಳಲ್ಲಿ ಅವರ ಸಂಖ್ಯೆ ಹೆಚ್ಚಾಗಿದ್ದರೂ ಸರ್ಕಾರಗಳು ಭಾಷಾಅಲ್ಪಸಂಖ್ಯಾತರ ಮಾತೃಭಾಷಾಮಾಧ್ಯಮದ ಶಾಲೆಗಳನ್ನು ಪ್ರಾರಂಭಿಸಿಲ್ಲ. ಹೀಗಾಗಿ ಕರ್ನಾಟಕದಲ್ಲಿ ಈ ಎಂಟು ಭಾಷೆಗಳಿಗೆ ಸೇರಿದ ಹೆಚ್ಚಿನ ಮಕ್ಕಳು ತಮ್ಮ ಮಾತೃಭಾಷೆಯಲ್ಲಿ ಕಲಿಯುವುದರಿಂದ ವಂಚಿತವಾಗಿವೆ.

ಇನ್ನು ಕರ್ನಾಟಕದಲ್ಲಿ ಈಗಾಗಲೇ ಚರ್ಚಿಸಿರುವ ಹಾಗೆ ಶಿಕ್ಷಣದಲ್ಲಿ ಬೋಧನಾಮಾಧ್ಯಮವಾಗಿ ಬಳಕೆಯಾಗುವ ಸಾಮರ್ಥ್ಯ ಪಡೆದುಕೊಳ್ಳದ ತುಳು, ಕೊರಗ, ಕೊಡವ, ಇರುಳ, ಬ್ಯಾರಿ, ಕೊಂಕಣಿ, ಕುರುಬ, ಬಡಗ, ಯರವ, ಸೋಲಿಗ, ಗೌಳಿ, ಜೇನುಕುರುಬ, ಬೆಟ್ಟಕುರುಬ, ಸಿದ್ದಿ, ಲಂಬಾಣಿ, ಹಕ್ಕಿಪಿಕ್ಕಿ ಮುಂತಾದ ಭಾಷೆಗಳು ಇವೆ. ಇವುಗಳಲ್ಲಿ ಹೆಚ್ಚಿನವು ಅಪಾಯಕ್ಕೆ ಒಳಗಾಗಿ ತಮ್ಮ ಅಸ್ತಿತ್ವದ ಉಳಿವಿಗಾಗಿ ಪ್ರಬಲ ಪೈಪೋಟಿ ನಡೆಸುತ್ತಿರುವ ಭಾಷೆಗಳಾಗಿವೆ. ಏಕೆಂದರೆ ಭಾಷೆ-ಭಾಷೆಗಳ ನಡುವೆ ಸೃಷ್ಟಿಯಾಗಿರುವ ಮೇಲು-ಕೀಳಿನ ಅಸಮಾನತೆ ಬುಡಕಟ್ಟು ಸಮುದಾಯಗಳ ಜನರು ನಾಗರೀಕ ಸಮಾಜದಲ್ಲಿ ತಮ್ಮ ಭಾಷೆಗಳನ್ನು ಬಳಸಲು ಹಿಂದೆ ಸರಿಯುವಂತೆ ಮಾಡಿದೆ. ಹಾಗೆಯೇ ಇದುವರೆಗೆ ಚರ್ಚಿಸಿದ ಕಾರಣಗಳಿಂದಾಗಿ ಕರ್ನಾಟಕ ಶಿಕ್ಷಣ, ಉದ್ಯೋಗ, ಆಡಳಿತ ಮುಂತಾದ ಕ್ಷೇತ್ರಗಳಲ್ಲಿ ಅವರ ಭಾಷೆ ಬಳಕೆಯಾಗದಿರುವುದರಿಂದ ಕನ್ನಡ ಇಲ್ಲವೆ ಇಂಗ್ಲಿಶ್ ಕಲಿಯುವುದು ಮತ್ತು ಬಳಸುವುದು ಅನಿವಾರ್ಯವಾಗಿದೆ. ಅಲ್ಪಸಂಖ್ಯಾತ ಭಾಷಾಸಮುದಾಯಗಳಲ್ಲಿ ಹೀಗೆ ಅನ್ಯಭಾಷೆಗಳ ಕಲಿಕೆ ಮತ್ತು ಬಳಕೆಯ ಪ್ರಕ್ರಿಯೆ ಎಷ್ಟು ವೇಗವಾಗಿ ಸಾಗಿದೆಯೋ ಅಷ್ಟು ವೇಗವಾಗಿ ಈ ಸಮುದಾಯಗಳ ಭಾಷೆಗಳು ಅಳಿವಿನ ಅಂಚಿಗೆ ಸರಿದಿವೆ. ಅಂದರೆ ಶಿಕ್ಷಣ, ಉದ್ಯೋಗ, ಆಡಳಿತ, ವ್ಯವಹಾರ ಇತ್ಯಾದಿಗಳಿಗೆ ಅನ್ಯಭಾಷೆ ಕಲಿಯಲು ಆರಂಭಿಸಿ, ತಮ್ಮ ಸಮುದಾಯ .ಅಥವಾ ಜಾತಿ ಆಧಾರಿತ ವೃತ್ತಿಗಳನ್ನು ತ್ಯಜಿಸಿ ಬೇರೆ ವೃತ್ತಿಗಳ ಮೇಲೆ ಅವಲಂಭಿತರಾಗಿದ್ದಾರೆ. ಈ ರೀತಿಯ ಬದಲಾವಣೆ ಮತ್ತು ಅವಲಂಬನೆ ಅಲ್ಪಸಂಖ್ಯಾತ ಭಾಷಾಸಮುದಾಯಗಳ ಜನರಿಗೆ ತಮ್ಮ ಮಾತೃಭಾಷೆಯ ನಡುವಿನ ಭಾವನಾತ್ಮಕ ಸಂಬಂಧ ಕಡಿಮೆಯಾಗುವಂತೆ ಮಾಡಿದೆ. ಹೀಗೆ ಬೇರೆಬೇರೆ ಕಾರಣಗಳಿಂದಾಗಿ ಭಾಷಾಅಲ್ಪಸಂಖ್ಯಾತರು ತಮ್ಮ ಮಾತೃಭಾಷೆಯಲ್ಲಿ ಕಲಿಯುವುದು ಮತ್ತು ಬಳಸುವುದನ್ನು ಕಡಿಮೆ ಮಾಡಿರುವಾಗ ರಾಜ್ಯದಲ್ಲಿ ಕನ್ನಡ ಇಲ್ಲವೆ ಇಂಗ್ಲಿಶ್‌ನ್ನು ಕಲಿತಿರುವುದು ಮತ್ತು ಬಳಸಿರುವುದು ಹೆಚ್ಚಾಗಿದೆ.

ಹೀಗಾಗಿ ಕರ್ನಾಟಕದ ಅಲ್ಪಸಂಖ್ಯಾತ ಭಾಷಾಸಮುದಾಯಗಳು ಮಕ್ಕಳು ಶಿಕ್ಷಣ ಕಲಿಯಲು ಆರಂಭಿಸಿದ ಹಾಗೆ ಭಾಷಿಕವಾಗಿ ಅತಂತ್ರರಾಗಿದ್ದಾರೆ. ಇದು ಈ ಸಮುದಾಯಗಳ ಜನರು ತಮ್ಮ ಅಸ್ತಿತ್ವದ ಉಳಿವಿಗಾಗಿ ಪ್ರಬಲ ಹೋರಾಟ ನಡೆಸಬೇಕಾದ ಅನಿವಾರ್ಯತೆಯನ್ನು ಉಂಟುಮಾಡಿದೆ. ಏಕೆಂದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳಿಗೆ ಬಹುಸಂಖ್ಯಾತರ ಭಾಷೆಯಾದ ಕನ್ನಡ, ವಿಶ್ವದ ಜ್ಞಾನದ ಕಿಂಡಿ ಎಂದು ಭಾವಿಸಿರುವ ಇಂಗ್ಲಿಶ್ ಹಾಗೂ ಕೇಂದ್ರ ಸರ್ಕಾರದ ರಾಜಕಾರಣದ ಫಲವಾಗಿ ಪ್ರಭುತ್ವದ ಶಕ್ತಿ ಪಡೆದಿರುವ ಹಿಂದಿಗಳು ಪ್ರಧಾನವಾಗಿ ಕಂಡಿವೆ. ಇವುಗಳ ಕಲಿಕೆ ಮತ್ತು ಬಳಕೆಗೆ ಹೆಚ್ಚಿನ ಮಹತ್ವ ನೀಡಿವೆ. ಇನ್ನು ಕರ್ನಾಟಕ ಸರ್ಕಾರ ತನ್ನ ಭಾಷಾನೀತಿಯಲ್ಲಿ ಬೋಧನಾಮಾಧ್ಯಮವಾಗಿ ಬಳಸಲು ಅವಕಾಶ ಕಲ್ಪಿಸಿರುವ ಭಾಷೆಗಳ ಪಟ್ಟಿಯನ್ನು ಗಮನಿಸಿದಾಗ ತಮಿಳು, ತೆಲುಗು, ಉರ್ದು, ಹಿಂದಿ, ಮರಾಠಿ ಮಲಯಾಳಂ ಭಾಷೆಗಳು ಕರ್ನಾಟಕದ ನೆರೆಯ ರಾಜ್ಯಗಳಲ್ಲಿ ರಾಜ್ಯಭಾಷೆಗಳಾಗಿವೆ. ಹಾಗೆಯೇ ಇವು ಅಲ್ಲಿನ ಬಹುಸಂಖ್ಯಾತರ ಭಾಷೆಗಳಾಗಿ ಪ್ರಭುತ್ವ ಪಡೆದಿವೆ.

ಹೀಗೆ ಕರ್ನಾಟಕದ ನೆರೆಯ ರಾಜ್ಯಗಳಲ್ಲಿ ರಾಜ್ಯಭಾಷೆ ಆಗಿ, ಅಲ್ಲಿನ ಬಹುಸಂಖ್ಯಾತರ ಭಾಷೆಗಳು ಮಾತ್ರ ಕರ್ನಾಟಕದ ಶಿಕ್ಷಣದಲ್ಲಿ ಕಲಿಕಾಮಾಧ್ಯಮವಾಗಿ ಬಳಕೆಯಾಗುವ ಅರ್ಹತೆ ಪಡೆದಿವೆ. ಉಳಿದ ಭಾಷೆಗಳು ಕರ್ನಾಟಕದ ಶಿಕ್ಷಣದಲ್ಲಿ ಬೋಧನಾಮಾಧ್ಯಮವಾಗಿ ಬಳಕೆಯಾಗುವುದರಿಂದ ವಂಚಿತವಾಗಿವೆ. ಇದಕ್ಕೆ ಮೇಲೆ ಹೇಳಿದ ಅಂಶಗಳು ಕಾರಣ ಇರಬಹುದಾದರೂ ಈ ಭಾಷೆಗಳ ಉಳಿವಿಗಾಗಿ, ಅಭಿವೃದ್ಧಿಗಾಗಿ ಪರ್ಯಾಯ ದಾರಿಗಳನ್ನು ಕಂಡುಕೊಳ್ಳುವುದು ಕಷ್ಟದ ಕೆಲಸವೇನು ಅಲ್ಲ. ಆದರೆ ಸರ್ಕಾರಗಳಿಗೆ ಭಾಷೆ, ಸಾಹಿತ್ಯ, ಸಂಸ್ಕೃತಿ, ಜನಸಮುದಾಯಗಳು ಮುಖ್ಯವಾಗದೆ ಹಣ, ಅಧಿಕಾರಗಳೇ ಪ್ರಧಾನವಾಗಿದೆ. ಮತ್ತು ಈ ಭಾಷಾಸಮುದಾಯಗಳ ಜನರು ಸಂಖ್ಯೆಯಲ್ಲಿ ಕಡಿಮೆಯಿದ್ದು, ಕೆಲವು ಸಮುದಾಯಗಳ ಜನರು ರಾಜ್ಯದ ನಾನಾಭಾಗಗಳಲ್ಲಿ ಚೆದುರಿ ಹೋಗಿದ್ದಾರೆ. ಇವರು ಶಾಸಕರು, ಸಂಸದರು, ವಿಧಾನಪರಿಷತ್ ಮತ್ತು ರಾಜ್ಯಸಭೆಯ ಸದಸ್ಯರ ಆಯ್ಕೆಯಲ್ಲಿ ನಿರ್ಣಾಯಕ ಪಾತ್ರ ವಹಿಸುವಷ್ಟು ಪ್ರಬಲವಾಗಿ ಬೆಳೆದಿಲ್ಲ. ಹೀಗಾಗಿ ಈ ಸಮುದಾಯಗಳ ಅಭಿವೃದ್ಧಿಯ ಕಡೆಗೆ ರಾಜ್ಯಸರ್ಕಾರಗಳಾಗಲಿ, ಕೇಂದ್ರಸರ್ಕಾರಗಳಾಗಲಿ ವಿಶೇಷ ಗಮನ ಹರಿಸದೆ ತುಳು, ಬ್ಯಾರಿ, ಕೊಡವ ಭಾಷೆಗಳ ಅಭಿವೃದ್ಧಿಗಾಗಿ ಅಕಾಡೆಮಿಗಳನ್ನು ಸ್ಥಾಪಿಸಿರುವುದು ಬಿಟ್ಟರೆ, ಆ ಸಮುದಾಯಗಳ ಜನರು ಭಾಷಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಅಭಿವೃದ್ಧಿ ಹೊಂದಲು ಸೂಕ್ತ ಪ್ರೋತ್ಸಾಹ ನೀಡದೆ ಕಡೆಗಣಿಸಿವೆ.

ಹೀಗಾಗಿ ಕರ್ನಾಟಕದಲ್ಲಿ ಮೇಲೆ ಉಲ್ಲೇಖಿಸಲಾಗಿರುವ ಅಲ್ಪಸಂಖ್ಯಾತ ಸಮುದಾಯಗಳು ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಂಖಿಕವಾಗಿ ಅಭಿವೃದ್ಧಿ ಹೊಂದಿಲ್ಲ. ಇದೇ ಅಂಶಗಳನ್ನು ಪ್ರಧಾನವಾಗಿಸಿಕೊಂಡು ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಈ ಭಾಷೆಗಳ ಅಭಿವೃದ್ಧಿಗೆ ಪೂರಕ ಯೋಜನೆಗಳನ್ನು ಕಲ್ಪಿಸಿಲ್ಲ. ಆದ್ದರಿಂದ ಈ ಸಮುದಾಯಗಳಿಗೆ ಸೇರಿದ ಜನರು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಬೌದ್ಧಿಕವಾಗಿ, ಸಾಮಾಜಿಕವಾಗಿ ಅಭಿವೃದ್ಧಿ ಹೊಂದಲು ಮತ್ತು ನಾಗರೀಕ ಸಮಾಜದಲ್ಲಿ ಕೀಳು, ಅನಾಗರೀಕರು ಎಂಬ ಅಸಮಾನತೆಯ ಭಾವನೆಯಿಂದ ಹೊರಬರಲು ಶಿಕ್ಷಣ ಕಲಿಯುತ್ತಿದ್ದಾರೆ. ಆದರೆ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷೆಗಳನ್ನು ಈಗಾಗಲೇ ಚರ್ಚಿಸಿರುವ ಕಾರಣಗಳಿಂದಾಗಿ ಶಿಕ್ಷಣದಲ್ಲಿ ಬೋಧನಾ ಮಾಧ್ಯಮವಾಗಿ ಬಳಸುತ್ತಿಲ್ಲ. ಹಾಗೆಯೇ ರಾಜ್ಯದಲ್ಲಿ ಅವರ ಮಾತೃಭಾಷಾಮಾಧ್ಯಮದಲ್ಲಿ ಕಲಿಯಲು ಅವಕಾಶ ಕಲ್ಪಿಸಿಕೊಟ್ಟಿರುವ ಭಾಷಿಕ ಸಮುದಾಯಗಳ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಕಲಿಯಲು ಅನುಕೂಲವಾಗುವಂತೆ ಶಾಲೆಗಳು ಇಲ್ಲ.

ಇದರಿಂದಾಗಿ ಭಾಷಾಅಲ್ಪಸಂಖ್ಯಾತ ಸಮುದಾಯಗಳಿಗೆ ಸೇರಿದ ಮಕ್ಕಳ ಪೋಷಕರು ತಮ್ಮ ತಿಳುವಳಿಕೆ, ಆರ್ಥಿಕಶಕ್ತಿ, ಮಕ್ಕಳನ್ನು ಶಾಲೆಗೆ ಕಳುಹಿಸಲು ಇರುವ ಅನುಕೂಲ ಇತ್ಯಾದಿಗಳನ್ನು ಗಮನದಲ್ಲಿ ಇರಿಸಿಕೊಂಡು ಎಲ್ಲಿ ತಮ್ಮ ಮಾತೃಭಾಷಾಮಾಧ್ಯಮದ ಶಾಲೆಗಳು ಇಲ್ಲವೋ ಅಂತಹ ಕಡೆಗಳಲ್ಲಿ ಕನ್ನಡ ಇಲ್ಲವೆ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ. ಅಂದರೆ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷಾಮಾಧ್ಯಮದ ಕಲಿಯಲು

ಅನುಕೂಲವಾಗುವಂತೆ ಪ್ರಾಥಮಿಕ ಶಾಲೆಗಳನ್ನು ಆರಂಭಿಸಿದ್ದರೆ ಎಲ್ಲಾ ಭಾಷಾಅಲ್ಪಸಂಖ್ಯಾತರ ಮಕ್ಕಳು ಅವರ ಮಾತೃಭಾಷಾಮಾಧ್ಯಮದಲ್ಲಿ ಕಲಿಯುತ್ತಿದ್ದರು ಎಂದು ಅರ್ಥವಲ್ಲ. ಏಕೆಂದರೆ ತಾವು ವಾಸಿಸುವ ಪ್ರದೇಶದಲ್ಲಿಯೇ ತಮ್ಮ ಮಾತೃಭಾಷಾಮಾಧ್ಯಮದ ಶಾಲೆಗಳು ಇದ್ದರೂ ಭಾಷಾಅಲ್ಪಸಂಖ್ಯಾತ ಸಮುದಾಯಗಳಿಗೆ ಸೇರಿದ ಮಕ್ಕಳ ಹೆಚ್ಚಿನ ಪೋಷಕರು ತಮ್ಮ ಮಕ್ಕಳನ್ನು ಮಾತೃಭಾಷಾಮಾಧ್ಯಮದ ಶಾಲೆಗಳಿಗೆ ದಾಖಲಿಸದೆ ಇಂಗ್ಲಿಶ್ ಇಲ್ಲವೆ ಕನ್ನಡ ಮಾಧ್ಯಮದ ಶಾಲೆಗಳಿಗೆ ದಾಖಲಿಸಿದ್ದಾರೆ. ಈ ಪ್ರಕ್ರಿಯೆ ಅಲ್ಪಸಂಖ್ಯಾತ ಭಾಷಾಸಮುದಾಯಗಳಲ್ಲಿ ಅಕ್ಷರಸ್ತರ ಸಂಖ್ಯೆ ಜಾಸ್ತಿಯಾದಂತೆ ಹೆಚ್ಚಾಗಿದೆ.

ಏಕೆಂದರೆ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರಿಗೆ ಕನ್ನಡದಲ್ಲಿ ಕಲಿತರ ಹೇಗೆ ನಮಗೆ ಬದುಕು ಇಲ್ಲ, ಭವಿಷ್ಯದ ಶಿಕ್ಷಣ, ಉದ್ಯೋಗ, ವ್ಯವಹಾರಗಳಲ್ಲಿ ಭಾಷಿಕ ಸಮಸ್ಯೆ ಎದುರಿಸಬೇಕಾಗುತ್ತದೆ ಎಂಬ ಭಾವನೆ ಬಂದಿದೆಯೋ ಅದೇ ರೀತಿಯಲ್ಲಿ ಭಾಷಾಅಲ್ಪಸಂಖ್ಯಾತ ಸಮುದಾಯಗಳ ಪೋಷಕರಿಗೆ ತಮ್ಮ ಮಕ್ಕಳು ಮಾತೃಭಾಷೆಯಲ್ಲಿ ಕಲಿತರೆ ಮುಂದಿನ ವಿದ್ಯಾಭ್ಯಾಸ, ಉದ್ಯೋಗ, ವ್ಯವಹಾರಗಳ ಸಂದರ್ಭದಲ್ಲಿ ಭಾಷಿಕ ಸಮಸ್ಯೆ ಎದುರಿಸುತ್ತಾರೆ ಎಂಬ ಕಾರಣಕ್ಕಾಗಿ ತಮಗೆ ಹತ್ತಿರದಲ್ಲೇ ಮಾತೃಭಾಷಾಮಾಧ್ಯಮದ ಶಾಲೆಗಳು ಇದ್ದರೂ ಕನ್ನಡ ಇಲ್ಲವೆ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ. ಇದರಿಂದಾಗಿ ಕರ್ನಾಟಕದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳ ಕಲಿಕೆ ಮತ್ತು ಬಳಕೆ ಹಂತಹಂತ ಕಡಿಮೆಯಾಗಿ ಜನರ ಬದುಕಿನಿಂದ ದೂರವಾಗುತ್ತಿವೆ. ಹಾಗೆಯೇ ಈಗಾಗಲೇ ಚರ್ಚಿಸಿರುವ ಹಾಗೆ ಭಾಷೆ-ಭಾಷೆಗಳ ನಡುವೆ ಅಸಮಾನತೆ ಬೆಳೆದು ಭಾಷಾಅಲ್ಪಸಂಖ್ಯಾತರು ನಾಗರೀಕ ಸಮಾಜದಲ್ಲಿ ತಮ್ಮ ಭಾಷೆಗಳನ್ನು ಬಳಸಲು ಹಿಂಜರಿಯುವಂತೆ ಮಾಡಿದೆ. ಇದರಿಂದಾಗಿ ಭಾಷಾಅಲ್ಪಸಂಖ್ಯಾತ ಸಮುದಾಯಗಳ ಮಕ್ಕಳು ಕರ್ನಾಟಕದ ಗಡಿಭಾಗಗಳಲ್ಲಿ ಹೊರತು ಪಡಿಸಿದರೆ ಉಳಿದ ಭಾಗಗಳಲ್ಲಿ ಮಾತೃಭಾಷೆಯನ್ನು ಕಲಿತು, ಬಳಸುವುದಕ್ಕಿಂತ ಹೆಚ್ಚಾಗಿ ಕನ್ನಡ ಇಲ್ಲವೆ ಇಂಗ್ಲಿಶ್‌ನಲ್ಲಿ ಕಲಿತು ಬಳಸುತ್ತಿದ್ದಾರೆ.

ಇದರಿಂದಾಗಿ ಯುನೆಸ್ಕೊ ಸಂಸ್ಥೆ ಗುರುತಿಸಿರುವ ಪ್ರಕಾರವಾಗಿ ದಕ್ಷಿಣ ಭಾರತದಲ್ಲಿ ಅಳಿವಿನಂಚಿನಲ್ಲಿರುವ ಒಟ್ಟು ಎಂಟು ಭಾಷೆಗಳಲ್ಲಿ ಐದು (ತುಳು, ಕೊಡವ, ಕೊರಗ, ಕುರುಬ, ಇರುಳ) ಭಾಷೆಗಳು ಕರ್ನಾಟಕಕ್ಕೆ ಸೇರಿದ ಭಾಷೆಗಳಾಗಿವೆ. ಹಾಗೆಯೇ ಹಿಂದು ಪತ್ರಿಕೆಯಲ್ಲಿ ವರದಿಯಾಗಿರುವ ಪ್ರಕಾರ ಕರ್ನಾಟಕದ ಹತ್ತು (ಕೊರಗ, ಬಡಗ, ಯರೆವ, ಇರುಳ, ಸೋಲಿಗ, ಗೌಳಿ, ಜೇನುಕುರುಬ, ಬೆಟ್ಟಕುರುಬ, ಸಿದ್ಧಿ ಮತ್ತು ಹಕ್ಕಿಪಿಕ್ಕಿ) ಭಾಷೆಗಳು ಅಳಿವಿನಂಚಿನಲ್ಲವೆ. (ಹಿಂದು ಪತ್ರಿಕೆ, ಆಗಸ್ಟ್ ೨ ೨೦೧೩) ಇವುಗಳನ್ನು ಗಮನಿಸಿದಾಗ ಶಿಕ್ಷಣದಲ್ಲಿ ಭಾಷೆಯಾಗಿ, ಭಾಷಾಮಾಧ್ಯಮವಾಗಿ, ಆಡಳಿತ ಭಾಷೆಯಾಗಿ ಬಳಕೆಯಾಗದ ಭಾಷೆಗಳು ಬಹುಬೇಗ ತನ್ನ ಅಸ್ತಿತ್ವ ಕಳೆದುಕೊಳ್ಳುತ್ತಿವೆ ಎಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ ಹಿಂದಿನ ಕಾಲದಲ್ಲಿ ಜನಸಮುದಾಯಗಲಿಗೆ ತನ್ನದಲ್ಲದ ಭಾಷೆಯನ್ನು ಕಡ್ಡಾಯವಾಗಿ ಕಲಿಯಬೇಕಾದ, ಬಳಸಬೇಕಾದ ಒತ್ತಡ ಇರಲಿಲ್ಲ. ಆಗ ಜನರು ತಮ್ಮ ಭಾಷೆಯನ್ನು ಮಾತ್ರ ಕಲಿತು, ಬಳಸುತ್ತಿದ್ದರು. ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ತಾವು

ವಾಸಿಸುವ ಪ್ರದೇಶದ ಜನರ ಜೊತೆಗೂಡಿ ಸ್ಥಳೀಯ ಪ್ರದೇಶದಲ್ಲಿ ಬಳಕೆಯಲ್ಲಿದ್ದ ಭಾಷೆಗಳನ್ನು ಸಹಜವಾಗಿ ಕಲಿತು, ಬಳಸಿದ್ದಾರೆ. ಆದರೆ ಅವುಗಳ ಕಲಿಕೆ ಮತ್ತು ಬಳಕೆ ಕಡ್ಡಾಯವಾಗಿರಲಿಲ್ಲ. ಅಂತಹ ಒತ್ತಡವು ಅಲ್ಪಸಂಖ್ಯಾತ ಭಾಷಾಸಮುದಾಯಗಳಿಗೆ ಇರಲಿಲ್ಲ. ಇದರಿಂದಾಗಿ ಅಂದು ಲಿಪಿಯನ್ನು ಒಳಗೊಳ್ಳದ ಭಾಷಾಸಮುದಾಯಗಳ ಜನರು ಅಗತ್ಯ ಸಂದರ್ಭಗಳಲ್ಲಿ ಅನ್ಯಭಾಷೆಗಳನ್ನು ಕಲಿಯುವ ಒತ್ತಡಕ್ಕೆ ಒಳಗಾಗಿದ್ದರೂ ತಮ್ಮ ಅಸ್ತಿತ್ವ ಕಳೆದುಕೊಳ್ಳುವ ಆತಂಕಕ್ಕೆ ಒಳಗಾಗಿರಲಿಲ್ಲ. ಯಾವಾಗ ಶಿಕ್ಷಣ, ಉದ್ಯೋಗ, ಆಡಳಿತ, ವ್ಯವಹಾರ ಇತ್ಯಾದಿ ಕಾರಣಗಳಿಂದಾಗಿ ಈ ಸಮುದಾಯಗಳ ಜನರು ತಮ್ಮ ಮಾತೃಭಾಷೆಯ ಬದಲಿಗೆ ಇತರ ಭಾಷೆಗಳಲ್ಲಿ ಕಲಿಯುವುದು ಕಡ್ಡಾಯ ಅಥವಾ ಅನಿವಾರ್ಯವಾಗಿದೆಯೋ ಅಲ್ಲಿಂದ ಅಸ್ತಿತ್ವ ಕಳೆದುಕೊಳ್ಳುವ ಭಯಕ್ಕೆ ಒಳಗಾಗಿದ್ದಾರೆ.

ಅಲ್ಪಸಂಖ್ಯಾತ ಭಾಷಾಸಮುದಾಯಗಳಲ್ಲಿನ ಈ ಭಯ ತಪ್ಪಿಸುವ ಉದ್ದೇಶದಿಂದ ಅಧ್ಯಾಯ ಎರಡರಲ್ಲಿ ಉಲ್ಲೇಖಿಸಲಾಗಿರುವ ಹಾಗೆ ಭಾರತ ಸಂವಿಧಾನದಲ್ಲಿ ನಿಯಮಗಳನ್ನು ಅಳವಡಿಸಲಾಗಿದೆ. ಇದನ್ನು ಪಾಲನೇ ಮಾಡಬೇಕಾದ ಒತ್ತಡದಲ್ಲಿ ಕರ್ನಾಟಕ ಸರ್ಕಾರ ತನ್ನ ಭಾಷಾನೀತಿಯಲ್ಲಿ ಮಗುವಿನ ಪ್ರಾಥಮಿಕ ಶಿಕ್ಷಣ ಮಾತೃಭಾಷೆ ಇಲ್ಲವೆ ಕನ್ನಡ ಮಾತ್ರ ಆಗಿರುತ್ತದೆ ಎಂದು ಹೇಳಿದೆ. ಆದರೆ ಇದುವರೆಗೆ ಚರ್ಚಿಸಿದ ಕಾರಣಗಳಿಂದಾಗಿ ಅಲ್ಪಸಂಖ್ಯಾತ ಭಾಷಾಸಮುದಾಯಗಳ ಮಕ್ಕಳು ತಮ್ಮ ಮಾತೃಭಾಷಾ ಮಾಧ್ಯಮದಲ್ಲಿ ಕಲಿಯುವ ಬದಲಾಗಿ ಬೇರೆ ಭಾಷೆಯನ್ನು ಅವಲಂಬಿಸಿವೆ. ಇದರಲ್ಲಿ ಮುಖ್ಯವಾಗಿ ಪ್ರಾದೇಶಿಕ ಭಾಷೆಯಾದ ಕನ್ನಡ ಇಲ್ಲವೆ ಇಂಗ್ಲಿಶ್ ಮಾತ್ರ ಆಗಿದೆ. ಇವುಗಳನ್ನು ಹೊರತುಪಡಿಸಿ ಉಳಿದ ಭಾಷೆಗಳಲ್ಲಿ ಮಕ್ಕಳು ಶಿಕ್ಷಣ ಕಲಿತಿರುವುದು ಅಪರೂಪವಾಗಿದೆ. ಹೀಗೆ ಅನಿವಾರ್ಯ ಕಾರಣಗಳಿಂದ ಭಾಷಾಅಲ್ಪಸಂಖ್ಯಾತರ ಮಕ್ಕಳು ತನ್ನ ಮಾತೃಭಾಷಾ ಮಾಧ್ಯಮದಲ್ಲಿ ಕಲಿಯದೇ ಬೇರೊಂದು ಭಾಷೆಯಲ್ಲಿ ಕಲಿತಿರುವಾಗ ಒಂದು ಕಡೆ ವಿಷಯದ ಕಠಿಣತೆ ಮತ್ತೊಂದು ಕಡೆ ಭಾಷಾಕಠಿಣತೆಯನ್ನು ಎದುರಿಸಿದ್ದಾರೆ.

ಏಕೆಂದರೆ ತರಗತಿಗಳಲ್ಲಿ ವಿದ್ಯಾರ್ಥಿಗಳಿಗೆ ಅವರ ಮಾತೃಭಾಷೆಯನ್ನು ಆಧರಿಸಿ ಬೋಧನೆ ಮಾಡದೆ, ಏಕರೂಪದಲ್ಲಿ ಬೋಧನೆ ಮಾಡುವುದರಿಂದ ಅಲ್ಪಸಂಖ್ಯಾತರ ಮಕ್ಕಳು ಬೋಧನಾಮಾಧ್ಯಮದ ಭಾಷೆ ಮಾತೃಭಾಷೆಯಾಗಿರುವ ಮಕ್ಕಳಿಗೆ ಬೋಧನೆಯಾದ ಭಾಷೆಯಲ್ಲಿ ಕಲಿಯಬೇಕಿದೆ. ಇದಕ್ಕೆ ಅಲ್ಪಸಂಖ್ಯಾತರ ಮಕ್ಕಳಿಗೆ ಪೂರಕ ಭಾಷಾಪರಿಸರ ಮತ್ತು ಗುಣಮಟ್ಟದ ಬೋಧನೆ ಲಭ್ಯವಾಗಿರುವಾಗ ಕಠಿಣತೆಗಳನ್ನು ದಿಟ್ಟತನದಿಂದ ಎದುರಿಸಿ ತಮ್ಮ ವಿದ್ಯಾಭ್ಯಾಸ ಮುಂದುವರೆಸಿದ್ದಾರೆ. ಆದರೆ ಅಲ್ಪಸಂಖ್ಯಾತರ ಮಕ್ಕಳಿಗೆ ಅನ್ಯಭಾಷಾಮಾಧ್ಯಮದಲ್ಲಿ ಕಲಿಯುವಾಗ ಪೂರಕ ಭಾಷಾಪರಿಸರ ಮತ್ತು ಗುಣಮಟ್ಟದ ಶಿಕ್ಷಣ ಲಭ್ಯವಾಗದಿದ್ದಾಗ ಅನ್ಯಭಾಷಾಮಾಧ್ಯಮದ ಕಲಿಕೆಯ ಕಠಿಣತೆಗಳನ್ನು ಎದುರಿಸಲು ಸಾಧ್ಯವಾಗದೆ ಕಲಿಕೆಯಲ್ಲಿ ಹಿಂದೆ ಉಳಿದುಕೊಂಡಿದ್ದಾರೆ. ಇದನ್ನು ಮುಖ್ಯವಾಗಿ ಗಮನಿಸದ ಜನರು ವಿದ್ಯಾರ್ಥಿಗಳು ಕಲಿಕೆಯಲ್ಲಿ ಹಿಂದೆ ಉಳಿದುಕೊಂಡಾಗ ಅಥವಾ ಪರೀಕ್ಷೆಗಳಲ್ಲಿ ಅನುತ್ತೀರ್ಣಗೊಂಡಾಗ ಇವರನ್ನು ಪ್ರತಿಭಾವಂತರಲ್ಲದವರು, ದಡ್ಡರು, ಶಿಕ್ಷಣದ

ಬಗೆಗೆ ಆಸಕ್ತಿಯಿಲ್ಲದವರು, ಅವಿದ್ಯಾವಂತ ಎಂಬಂತೆ ಪರಿಗಣಿಸಿ ಕೀಳಾಗಿ ಕಂಡಿದ್ದಾರೆ. ಏಕೆಂದರೆ ಜನರು ವಿದ್ಯಾರ್ಥಿಗಳ ಪ್ರತಿಭೆಯನ್ನು ಅವರು ಪರೀಕ್ಷೆಯಲ್ಲಿ ಗಳಿಸುವ ಅಂಕಗಳ ಆಧಾರದಲ್ಲಿ ನಿರ್ಧರಿಸುವುದರಿಂದ ಭಾಷೆಯ ಕಾರಣದಿಂದ ಕಲಿಕೆಯಲ್ಲಿ ಹಿಂದೆ ಉಳಿದುಕೊಂಡ, ಹೆಚ್ಚು ಅಂಕಗಳಿಸಲು ಸಾಧ್ಯವಾಗದ ಪ್ರತಿಭಾವಂತ ವಿದ್ಯಾರ್ಥಿಗಳೂ ಕೂಡ ಪ್ರತಿಭಾವಂತರಲ್ಲದ ವಿದ್ಯಾರ್ಥಿಗಳೆಂದು ಪರಿಗಣಿಸಲ್ಪಟ್ಟಿದ್ದಾರೆ.

ಆದರೂ ಕರ್ನಾಟಕದಲ್ಲಿ ಇಂತಹ ಅಂಶಗಳು ಚರ್ಚಿತ ವಿಷಯಗಳಾಗಿಲ್ಲ. ಇಲ್ಲಿನ ಸರ್ಕಾರಗಳಿಗೆ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರ ಕನ್ನಡ ಭಾಷಾಮಾಧ್ಯಮದ ಪರವಾದ ಒತ್ತಡ ಒಂದೆಡೆಯಾದರೆ ಶ್ರೀಮಂತ, ಬಂಡವಾಳಶಾಹಿ ಮತ್ತು ಅಧಿಕಾರಶಾಹಿಗಳ ಇಂಗ್ಲಿಶ್ ಭಾಷಾಮಾಧ್ಯಮದ ಪರವಾದ ಒತ್ತಡಗಳು ಮತ್ತೊಂದೆಡೆಯಿವೆ. ಇವುಗಳ ನಡುವೆ ಭಾಷಾಅಲ್ಪಸಂಖ್ಯಾತರ ಮಾತೃಭಾಷಾಮಾಧ್ಯಮದ ಶಾಲೆಗಳು, ಅವುಗಳ ಅಭಿವೃದ್ಧಿ, ಅವರ ಭಾಷಾಸಮಸ್ಯೆಗಳು ಗೌಣವಾಗಿವೆ. ಹೀಗಿದ್ದರೂ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಇಲ್ಲಿ ಎಲ್ಲಾ ವ್ಯವಹಾರ, ಶಿಕ್ಷಣ ಕನ್ನಡದಲ್ಲಿಯೇ ಆಗಬೇಕು. "ಕರ್ನಾಟಕದಲ್ಲಿ ತಮಿಳು, ತೆಲುಗು, ಮಲಯಾಳಂ, ಬಂಗಾಳಿ ಮುಂತಾದ ಭಾಷೆಗಳು, ಅಂತೆಯೇ ತಮಿಳುನಾಡಿನಲ್ಲಿ ಕನ್ನಡ, ತೆಲುಗು, ಮಲಯಾಳಂ ಇತ್ಯಾದಿ ಭಾಷೆಗಳು ಅಲ್ಪಸಂಖ್ಯಾತ ವರ್ಗಕ್ಕೆ ಸೇರುತ್ತವೆ. ಅವುಗಳನ್ನು ಕೇವಲ ಭಾಷೆಯಾಗಿ ಕಲಿಯಲು ಪೂರ್ಣಾವಕಾಶವೊದಗಿಸಬೇಕಾದ್ದು ಸಹಜ. ಆದರೆ ಅವು ಶಿಕ್ಷಣ ಮಾಧ್ಯಮವಾಗಬೇಕೆಂದು ಆಡಳಿತ ಮಾಧ್ಯಮವಾಗಬೇಕೆಂದು ಹಂಬಲಿಸಬಾರದು. ಹಾಗೆ ಹಂಬಲಿಸುವುದಾದರೆ ಭಾಷಾಧಾರಿತ ಪ್ರಾಂತೀಕರಣ ತತ್ವವೇ ಹುಸಿಯಾಗುವುದಲ್ಲದೆ, ಅನಾವಶ್ಯಕವಾದ ದೇಶಹಿತ ವಿರೋಧಿಯಾದ ಐಕ್ಯಭಂಗಕಾರಿಗಳಾದ ಅಪಾಯಗಳಿಗೆ ಗುರಿಯಾಗಬೇಕಾಗುತ್ತದೆ. ಒಂದು ಕಡೆ ಅಲ್ಪಸಂಖ್ಯಾತರ ಸ್ಥಾನವನ್ನು ಪಡೆದಿರುವ ಭಾಷೆಗಳಿಗೆ ಬೇರೆ ಕಡೆ ಬಹುಸಂಖ್ಯಾತ ಸ್ಥಾನವಿದೆ ಎಂಬುದನ್ನು ಮರೆಯಲಾಗದು[೧೯]" ಎಂದು ಕರ್ನಾಟಕದ ಶಿಕ್ಷಣ ಮಾಧ್ಯಮದ ಭಾಷೆ ಕನ್ನಡ ಮಾತ್ರ ಆಗಬೇಕು, ಉಳಿದ ಭಾಷೆಗಳು ಕರ್ನಾಟಕದಲ್ಲಿ ಶಿಕ್ಷಣ ಮಾಧ್ಯಮವಾಗಿ ಬಳಕೆಯಾಗುವುದು ಪ್ರಾಂತೀಕರಣ ತತ್ವಕ್ಕೆ ವಿರುದ್ಧವಾದುದು ಎಂದು ಭಾಷಾಅಲ್ಪಸಂಖ್ಯಾತರ ಮಾತೃಭಾಷಾಮಾಧ್ಯಮದ ಕಲಿಕೆ ನಾಡಿನ ಹಿರಿಯ ಚಿಂತಕರಾದ ದೇ.ಜವರೇಗೌಡರು ವಿರೋಧ ವ್ಯಕ್ತಪಡಿಸಿದ್ದಾರೆ.

ಈ ವಿರೋಧ ಭಾಷಾಅಲ್ಪಸಂಖ್ಯಾತ ಸಮುದಾಯಗಳ ಮಕ್ಕಳು ತಮ್ಮ ಮಾತೃಭಾಷಾ ಮಾಧ್ಯಮದಲ್ಲಿ ಕಲಿಯುವುದನ್ನು ದ್ವೇಷಿಸುವ ಉದ್ದೇಶದಿಂದ ಹುಟ್ಟಿರುವುದಲ್ಲ. ಬದಲಾಗಿ ತನ್ನ ಭಾಷೆಯನ್ನು ರಕ್ಷಿಸಿಕೊಳ್ಳುವ ಹಿನ್ನೆಲೆಯಲ್ಲಿ ಹುಟ್ಟಿರುವುದು. ಈ ವಿರೋಧದ ಹಿಂದಿನ ಉದ್ದೇಶ ಏನೇ ಇದ್ದರೂ ಕರ್ನಾಟಕದ ಶಿಕ್ಷಣದಲ್ಲಿ ಕನ್ನಡ ಭಾಷಾಮಾಧ್ಯಮ ಮಾತ್ರ ಇರಬೇಕು, ಉಳಿದ ಭಾಷೆಗಳು ಶಿಕ್ಷಣ ಮಾಧ್ಯಮವಾಗಿ ಬಳಕೆಯಾಗಬಾರದು ಎಂಬ ಅಭಿಪ್ರಾಯವಿರುವುದಂತು ಸತ್ಯ. ಹೀಗೆ ತನ್ನ ಭಾಷೆಯನ್ನು ರಕ್ಷಿಸಿಕೊಳ್ಳಲು ಕರ್ನಾಟಕದಲ್ಲಿನ ಭಾಷಾಅಲ್ಪಸಂಖ್ಯಾತರ ಭಾಷೆಗಳು ಬೇರೆ ರಾಜ್ಯಗಳಲ್ಲಿ

ಬಳಕೆಯಲ್ಲಿವೆ ಎಂಬ ಕಾರಣಕ್ಕಾಗಿ ಅವುಗಳ ಕಲಿಕಾಮಾಧ್ಯಮವನ್ನು ಬಳಸದಂತೆ ಹೇಳುವುದು ಎಷ್ಟು ಸರಿಯಾದುದು? ಎಂಬುದನ್ನು ನಾವು ಯೋಚಿಸಬೇಕಾಗುತ್ತದೆ. ಏಕೆಂದರೆ ಈ ಭಾಷಾಮಾಧ್ಯಮದ ಪ್ರಶ್ನೆಯಿರುವುದು ಒಂದು ಭಾಷೆ ಎಲ್ಲಿ ಬಳಕೆಯಾಗುತ್ತಿದೆ, ಎಲ್ಲಿ ಬಳಕೆಯಾಗುತ್ತಿಲ್ಲ ಎಂಬುದಲ್ಲ. ಬದಲಾಗಿ ಮಕ್ಕಳ ಕಲಿಕೆ, ಅವರ ಬದುಕಿನ ಮೇಲೆ ಬೀರುತ್ತಿರುವ ಪರಿಣಾಮಗಳಲ್ಲಿ. ಏಕೆಂದರೆ ಹೀಗೆ ತಮ್ಮದೇ ಆದ ಕಾರಣಗಳನ್ನು ಕೊಟ್ಟು ಒಂದು ರಾಜ್ಯದಲ್ಲಿರುವ ಎಲ್ಲಾ ಮಕ್ಕಳಿಗೂ ಅವರ ಮಾತೃಭಾಷಾಮಾಧ್ಯಮದಲ್ಲಿ ಕಲಿಸಲು ಸಾಧ್ಯವಾಗುವುದಿಲ್ಲ ಎನ್ನುವುದಾದರೆ ಆ ಸಮುದಾಯಗಳ ಮಕ್ಕಳ ಕಲಿಕೆಯ ಸ್ಥಿತಿ ಏನು? ಎಂಬುದು ಬಹಳ ಮುಖ್ಯವಾದ ಪ್ರಶ್ನೆ. ಏಕೆಂದರೆ ಶಿಕ್ಷಣದಲ್ಲಿ ಪಠ್ಯಗಳನ್ನು ರೂಪಿಸುವಾಗ, ತರಗತಿಗಳಲ್ಲಿ ಬೋಧನೆ ಮಾಡುವಾಗ ಶಿಕ್ಷಕರು ಮಾತೃಭಾಷಾಮಾಧ್ಯಮದ ಮಕ್ಕಳಿಗೆ ಪೂರಕವಾಗಿ ಬೋಧನೆ ಮಾಡಿದ್ದಾರೆ. ಇದರಿಂದಾಗಿ ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ತರಗತಿಗಳಲ್ಲಿ ಏನಾಗುತ್ತಿದೆ ಎಂಬುದರ ತಿಳುವಳಿಕೆಯೇ ಇಲ್ಲದೆ ತರಗತಿಗಳಲ್ಲಿ ಯಾಂತ್ರಿಕವಾಗಿ ಕುಳಿತಿದ್ದಾರೆ. ಇದರಿಂದಾಗಿ ವಿದ್ಯಾರ್ಥಿಗಳು ಬೌದ್ಧಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಯಾಗದೆ, ಅವರು ತಮ್ಮಲ್ಲಿನ ಪ್ರತಿಭೆಯನ್ನು ಸ್ವತಂತ್ರವಾಗಿ ಅಭಿವ್ಯಕ್ತಿಸಲು ಸಾಧ್ಯವಾಗದೆ ಕಳೆದುಕೊಂಡಿದ್ದಾರೆ.

ಈ ಎಲ್ಲಾ ಸಮಸ್ಯೆಗಳ ಪರಿಹಾರಕ್ಕೆ ಸೂಕ್ತಕ್ರಮಕೈಗೊಳ್ಳದೆ ದೇ.ಜವರೇಗೌಡರು ಹೇಳಿದ ಹಾಗೆ ಎಲ್ಲರಿಗೂ ಪ್ರಾದೇಶಿಕ ಭಾಷೆಯಾದ ಕನ್ನಡ ಭಾಷಾಮಾಧ್ಯಮದಲ್ಲಿ ಶಿಕ್ಷಣ ಕಲಿಸುವುದು ಎಷ್ಟು ವೈಜ್ಞಾನಿಕವಾದುದು? ಈಗಾಗಲೇ ಚರ್ಚಿಸಿರುವ ಕಾರಣಗಳಿಂದಾಗಿ ಕರ್ನಾಟಕದಲ್ಲಿ ಕನ್ನಡದ ಮಕ್ಕಳನ್ನೇ ಕನ್ನಡ ಮಾಧ್ಯಮದಲ್ಲಿ ಕಲಿಯುವಂತೆ ಮಾಡಲು ಸಾಧ್ಯವಾಗದಿರುವಾಗ ಭಾಷಾಅಲ್ಪಸಂಖ್ಯಾತರ ಎಲ್ಲಾ ಮಕ್ಕಳಿಗೆ ಕನ್ನಡದಲ್ಲಿಯೇ ಕಲಿಸಬೇಕು ಎನ್ನುವುದು ಅವೈಜ್ಞಾನಿಕವಾದುದು. ಮೊದಲು ಎಲ್ಲಾ ಕನ್ನಡದ ಮಕ್ಕಳು ಕನ್ನಡದಲ್ಲಿ ಕಲಿಯುವಂತೆ ಮಾಡಬೇಕು. ಭಾಷಾಅಲ್ಪಸಂಖ್ಯಾತರ ಮಕ್ಕಳಿಗೆ ಸಾಧ್ಯವಾದಷ್ಟು ಅವರ ಮಾತೃಭಾಷಾ ಮಾಧ್ಯಮದಲ್ಲಿ ಕಲಿಯಲು ಅವಕಾಶ ಮಾಡಿಕೊಟ್ಟು ಅದು ಸಾಧ್ಯವಾಗದಿದ್ದಾಗ ಮಾತ್ರ ಭಾಷಾಅಲ್ಪಸಂಖ್ಯಾತರ ಮಕ್ಕಳು ಕನ್ನಡ ಮಾಧ್ಯಮದ ಶಿಕ್ಷಣಕ್ಕೆ ಹೊಂದಿಕೊಳ್ಳುವ ಪೂರ್ವ ತಯಾರಿ ಮಾಡಿ ಅವರಿಗೆ ಕನ್ನಡ ಮಾಧ್ಯಮದ ಶಿಕ್ಷಣ ಕಲಿಸಬೇಕು. ಇದನ್ನು ಮಾಡದೆ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಇಲ್ಲಿ ಕನ್ನಡವೇ ಸಾರ್ವಭೌಮ. ಉಳಿದ ಯಾವ ಭಾಷೆಗಳು ಬಳಕೆಯಾಗಬಾರದು ಎಂದು ಭಾಷಾಅಲ್ಪಸಂಖ್ಯಾತರ ಭಾಷೆಗಳ ಕಲಿಕೆ ಮತ್ತು ಬಳಕೆಗೆ ನಿಯಂತ್ರಣ ಹೇರುವುದು ಈ ಸಮುದಾಯಗಳ ಮೇಲೆ ಕನ್ನಡ ಭಾಷಿಕ ಸಮುದಾಯ ಮಾಡುವ ಆಕ್ರಮಣವೇ ಆಗುತ್ತದೆ. ಇಲ್ಲಿ ಕನ್ನಡ ಭಾಷಿಕ ಇಂಗ್ಲಿಶ್, ಹಿಂದಿಗಳಿಂದ ರಕ್ಷಣೆ ಮಾಡಿಕೊಳ್ಳಬೇಕೇ ಹೊರತು ಅಲ್ಪಸಂಖ್ಯಾತ ಸಮುದಾಯಗಳ ಮೇಲೆ ಆಕ್ರಮಣ ಮಾಡಬಾರದು. ಆದರೂ ಕರ್ನಾಟಕ ಸರ್ಕಾರ ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಭಾಷಾನೀತಿಯನ್ನು ಜಾರಿಗೆ ತಂದು ಅವುಗಳ ಕಲಿಕೆಗೆ ಪೂರಕ ವ್ಯವಸ್ಥೆ

ಮಾಡಿಲ್ಲ. ಹೀಗಾಗಿ ಭಾಷಾಅಲ್ಪಸಂಖ್ಯಾತರ ಮಕ್ಕಳು ಕನ್ನಡ ಇಲ್ಲವೆ ಇಂಗ್ಲಿಶ್‌ನಲ್ಲಿ ಕಲಿಯುತ್ತಿದ್ದಾರೆ. ಇದರಿಂದಾಗಿ ತರಗತಿಗಳಲ್ಲಿ ಸಮಸ್ಯೆಗಳು ಉದ್ಭವವಾಗಿವೆ.

ಹೀಗಾಗಿ ಭಾಷಾಅಲ್ಪಸಂಖ್ಯಾತರ ಮಾತೃಭಾಷಾಮಾಧ್ಯಮದ ಸಮಸ್ಯೆ ಕರ್ನಾಟಕದಲ್ಲಿ ಬಗೆಹರಿಯದ ಬಿಕ್ಕಟ್ಟಾಗಿ ಪರಿಣಮಿಸಿದೆ. ಈ ಬಿಕ್ಕಟ್ಟಿಗೆ ಮತ್ತಷ್ಟು ಪುಷ್ಟಿ ನೀಡುವಂತೆ ರಾಜ್ಯರಾಜ್ಯಗಳ ನಡುವೆ ಇರುವ ಗಡಿವಿವಾದ, ಜಲವಿವಾದ, ರಾಜಕೀಯ ದ್ವೇಷಗಳು ಇವೆ. ಈ ವಿವಾದಗಳು ರಾಜ್ಯರಾಜ್ಯಗಳ ನಡುವೆ ತೀವ್ರವಾದಾಗ ಅವುಗಳ ಪರಿಣಾಮ ನೇರವಾಗಿ ಬೀರಿರುವುದು ಕರ್ನಾಟಕದಲ್ಲಿರುವ ಭಾಷಾಅಲ್ಪಸಂಖ್ಯಾತರ ಮಾತೃಭಾಷಾಮಾಧ್ಯಮದ ಶಾಲೆಗಳ ಮೇಲೆ. ರಾಜ್ಯರಾಜ್ಯಗಳ ನಡುವೆ ಬೇರೆಬೇರೆ ಕಾರಣಗಳಿಗಾಗಿ ವಿವಾದಗಳು ಹುಟ್ಟಿಕೊಂಡಾಗ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರು ಭಾಷಾಅಲ್ಪಸಂಖ್ಯಾತರ ಮಾತೃಭಾಷಾಮಾಧ್ಯಮದ ಶಾಲೆಗಳನ್ನು ನಿರ್ಬಂಧಿಸುವಂತೆ, ಅವರುಗಳ ಶಾಲೆಗಳಿಗೆ ಶಿಕ್ಷಕರನ್ನು ನೇಮಿಸದಂತೆ, ಆ ಶಾಲೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸದಂತೆ ಒತ್ತಡಗಳು ಉಂಟುಮಾಡಿದ್ದಾರೆ. ಹಾಗೆಯೇ ಅಂತಹ ಶಾಲೆಗಳಿಗೆ ಮುತ್ತಿಗೆ ಹಾಕಿ ನಾಮಫಲಕಗಳಿಗೆ ಮಸಿ ಬಳಿದಿರುವ ಪ್ರಕರಣಗಳು ನಡೆದಿವೆ.

ಹೀಗಾಗಿಯೇ ಬೆಳಗಾವಿ ಪ್ರದೇಶದ ಮರಾಠಿ ಭಾಷಿಕರು "Marathi schools in Belgaum district were not provided with adequate number of teachers even though the number of pupils demend it and rules provided for the same." "That during the last two years, new kannad primary schools had been started by the district school board, Belgaum, in Marathi speaking areas of peeranwadi, majagaon, kuttalawadi, homage, sambre, machhe village and hence Marathi boys were forced to attend these kannada schools." "It was complained that excepting two or three government buildings for the Marathi primary schools, there were no independent buildings for them whereas almost all the kannada schools had independent government buildings." "It was complained that during the last seven years not a single marathi school has been started by the district school board or by other authorities in the border areas[20]" ಎಂದು ಆರೋಪಿಸಿದ್ದಾರೆ.

ಇದಕ್ಕೆ ಕರ್ನಾಟಕ ಸರ್ಕಾರದ ಭಾಷಾಅಲ್ಪಸಂಖ್ಯಾತರ ವರ್ಗದ ಆಯುಕ್ತರು ನೀಡಿರುವ ವರದಿಯಲ್ಲಿ ಕೆಲವು ವಿಚಾರಗಳು ತನಿಖೆಯಲ್ಲಿವೆ ಎಂದು ಹೇಳಿ ಈ ರೀತಿ ಉಲ್ಲೇಖಿಸಿದ್ದಾರೆ. "there were 1707 teachers for 67916 pupils in Marathi primary schools run by the district school Board, Belgaum. The teachers pupil ratio thus comes to 1:39:7 against corresponding ratio of kannada schools 1:41:9 They however agreed that infour cases the ratio may be more than 1:40 which may be reduced by inter school transfer of such Marathi teachers" "According to a reor a report received the state Government

the question of securing accommodation for all schools whether Kannada or Marathi of Urdu is equally difficult. during 1963-64 the state government sanctioned for construction of 127 rooms of schools only six rooms were meant for kannada schools and the remaing 121 rooms for Marathi schools. An equal amount of money had been sanctioned for 1964-65 for the same purpose. It was not a fact that all the kannada schools were held in independent government buildings." "investigation revealed that 37 new primary Marathi schools were opened from 1956 to 1963 and the number of posts for Marathi teachers sanctioned during the above period was 574."[21]

ಇವುಗಳನ್ನು ಕನ್ನಡ ಮತ್ತು ಮರಾಠಿ ಭಾಷಿಕ ನಡುವೆ ಭಾಷಾಮಾಧ್ಯಮದ ಶಾಲೆಗಳ ವಿಚಾರದಲ್ಲಿ ಬಿಕ್ಕಟ್ಟು ಸೃಷ್ಟಿ ಯಾಗಿರುವುದು ತಿಳಿಯುತ್ತದೆ. ಇದೇ ರೀತಿಯ ಬಿಕ್ಕಟ್ಟುಗಳು ಕರ್ನಾಟಕದಲ್ಲಿ ತಮಿಳು, ಉರ್ದು, ತೆಲುಗು, ಮಲಯಾಳಿ ಭಾಷಿಕ ಸಮುದಾಯಗಳ ನಡುವೆಯೂ ಏರ್ಪಟ್ಟಿವೆ. ಇವು ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷಾಮಾಧ್ಯಮದ ಸಮಸ್ಯೆ ತೀವ್ರಗೊಳ್ಳಲು ಕಾರಣವಾಗಿವೆ. ಹಾಗೆಯೇ ಹಿಂದೆ ಕರ್ನಾಟಕದ ಒಂದೇ ಭಾಗದಲ್ಲಿ ನೆಲೆಸಿದ್ದ ಕೊಡವ, ತುಳು, ಕೊಂಕಣಿ ತರದ ಭಾಷೆಗಳನ್ನಾಡುವ ಜನರು ಉದ್ಯೋಗ, ಶಿಕ್ಷಣ, ವ್ಯವಹಾರ ಇತ್ಯಾದಿ ಕಾರಣಗಳಿಂದಾಗಿ ತಮ್ಮ ಮೂಲಸ್ಥಳಗಳನ್ನು ಬಿಟ್ಟು ರಾಜ್ಯದ ನಾನಾ ಭಾಗಗಳಲ್ಲಿ ಚದುರಿಹೋಗಿದ್ದಾರೆ. ಇದರ ಜೊತೆಗೆ ಜಾಗತಿಕ ಪ್ರಪಂಚದ ಉಗಮವಾಗಿ ಬೆಂಗಳೂರು ಸಾಫ್ಟ್‌ವೇರ್ ಕ್ಷೇತ್ರದಲ್ಲಿ ಪ್ರಸಿದ್ಧಿ ಪಡೆದ ನಂತರ ಕರ್ನಾಟಕಕ್ಕೆ ಅಪರೂಪವಾಗಿದ್ದ ಪಂಜಾಬಿಗಳು, ರಾಜಸ್ತಾನಿಗಳು, ಬಿಹಾರಿಗಳು, ಒರಿಯಾಗಳು, ಬಂಗಾಳಿಗಳು, ಅಸ್ಸಾಮಿಗಳು ಭಾಷಿಕರು ಸೇರಿದಂತೆ ದೇಶ ಮತ್ತು ವಿದೇಶಗಳ ಇತರ ಭಾಷಿಕರು ವಲಸೆ ಬಂದು ವಾಸಿಸುತ್ತಿದ್ದಾರೆ. ಇವರೆಲ್ಲರಿಗೂ ಇವರ ಮಾತೃಭಾಮಾಧ್ಯಮದಲ್ಲಿ ಶಿಕ್ಷಣ ಕಲಿಸುವ ವ್ಯವಸ್ಥೆ ಕರ್ನಾಟಕದ ಶಿಕ್ಷಣ ಕ್ರಮದಲ್ಲಿ ಇಲ್ಲ. ಹೀಗಾಗಿ ಈ ಎಲ್ಲಾ ಭಾಷೆಗಳನ್ನು ಮಾತೃಭಾಷೆಗುಳ್ಳ ಮಕ್ಕಳು ರಾಜ್ಯದಲ್ಲಿ ಇಂಗ್ಲಿಶ್ ಇಲ್ಲವೆ ಕನ್ನಡದಲ್ಲಿ ಕಲಿಯಬೇಕು.

ಆದರೆ ಬೇರೆ ರಾಜ್ಯ ಮತ್ತು ದೇಶಗಳಿಂದ ವಲಸೆ ಬಂದು ಕರ್ನಾಟಕದಲ್ಲಿ ನೆಲೆಸಿರುವ ಇತರ ಭಾಷಿಕರ ಮಕ್ಕಳಿಗೆ ಕನ್ನಡ ಅಥವಾ ಇಂಗ್ಲಿಶ್ ಎರಡೂ ಸಮರ್ಪಕವಾಗಿ ಬರುವುದಿಲ್ಲ. ಈ ಮಕ್ಕಳು ಕನ್ನಡ ಮಾಧ್ಯಮದ ಶಾಲೆಗಳಿಗೆ ದಾಖಲಾದರೆ ಭಾಷೆ ಗೊತ್ತಿಲ್ಲದೆ ತರಗತಿಯಲ್ಲಿ ಏನಾಗುತ್ತಿದೆ ಎಂಬುದರ ತಿಳುವಳಿಕೆಯೇ ಇಲ್ಲದೆ ಈ ಮಕ್ಕಳಿಗೆ ತರಗತಿಗಳು ಒಂದು ರೀತಿ ಯಾಂತ್ರಿಕವಾಗಿವೆ. ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯಬೇಕೆಂದರೆ ಖಾಸಗಿ ಶಾಲೆಗಳಿಗೆ ದಾಖಲಾಗಬೇಕು. ಇದಕ್ಕೆ ದುಬಾರಿ ಶುಲ್ಕ ಪಾವತಿಸಬೇಕು. ಇಲ್ಲಿಯೂ ಭಾಷಾಸಮಸ್ಯೆ ಇದ್ದೇ ಇದೆ. ಆರ್ಥಿಕ ಕಾರಣಗಳಿಂದಾಗಿ ಖಾಸಗಿ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲಿಸಲು ಸಾಧ್ಯವಾಗದಿದ್ದಾಗ ಸರ್ಕಾರಿ ಶಾಲೆಗಳಿಗೆ ದಾಖಲಿಸಬೇಕು. ಸರ್ಕಾರಿ ಶಾಲೆಗಳಲ್ಲಿ ಈಗಾಗಲೇ ಚರ್ಚಿಸಿರುವ ಹಾಗೆ ಕನ್ನಡ ಮಾಧ್ಯಮ ಇಲ್ಲವೆ ಭಾಷಾನೀತಿಯಲ್ಲಿ ಉಲ್ಲೇಖಿಸಿರುವ ಮಾತೃಭಾಷೆಗಳು ಮಾತ್ರ ಬೋಧನಾ ಮಾಧ್ಯಮವಾಗಿ ಬಳಕೆ ಆಗುತ್ತಿವೆ. ಇವುಗಳ ಕಲಿಕೆಗೂ ಪೂರಕ ವ್ಯವಸ್ಥೆಯಿಲ್ಲ. ಆದರೂ ಇಂದಿನ ಕಾಲದಲ್ಲಿ ಶಿಕ್ಷಣ

ಇಲ್ಲದಿದ್ದರೆ ನಮ್ಮ ಮಕ್ಕಳಿಗೆ ಬದುಕು ಇಲ್ಲ ಎಂಬ ಕಾರಣಕ್ಕಾಗಿ ಪೋಷಕರು ತಮ್ಮ ಆರ್ಥಿಕ ಶಕ್ತಿಗೆ ಅನುಗುಣವಾಗಿ ಕನ್ನಡ ಇಲ್ಲವೆ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿದ್ದಾರೆ.

ಇದರಿಂದಾಗಿ ಸರ್ಕಾರಿ ಶಾಲೆಗೆ ದಾಖಲಾಗಿರುವ ಮಕ್ಕಳು ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಯುತ್ತಿದ್ದಾರೆ. ಆದರೆ ಇವರಿಗೆ ಕನ್ನಡ ಭಾಷೆಯ ಸಾಮಾನ್ಯ ತಿಳುವಳಿಕೆ ಇಲ್ಲ. ಬೋಧಕರಿಗೆ ಈ ಮಕ್ಕಳ ಭಾಷೆಯ ತಿಳುವಳಿಕೆ ಇಲ್ಲದೆ ಕನ್ನಡ ಮಾತೃಭಾಷೆಯಾಗುಳ್ಳ ಮಕ್ಕಳಿಗೆ ಬೋಧನೆ ಮಾಡಿದ ಕ್ರಮದಲ್ಲಿಯೇ ಈ ಮಕ್ಕಳಿಗೂ ಬೋಧನೆ ಮಾಡುತ್ತಿದ್ದಾರೆ. ಇದರಿಂದಾಗಿ ಕನ್ನಡವನ್ನು ಮಾತೃಭಾಷೆಯಾಗುಳ್ಳ ಮಕ್ಕಳು ತರಗತಿಗಳಲ್ಲಿ ಅರ್ಥೈಸಿಕೊಂಡು ಪರೀಕ್ಷೆಯಲ್ಲಿ ಉತ್ತರಿಸಿದ ಹಾಗೆ ಭಾಷಾಅಲ್ಪಸಂಖ್ಯಾತರ ಮಕ್ಕಳು ಕನ್ನಡದ ಶಿಕ್ಷಣವನ್ನು ಅರ್ಥೈಸಿ ಪರೀಕ್ಷೆಗಳಲ್ಲಿ ಉತ್ತರಿಸಲು ಸಾಧ್ಯವಾಗದೆ ಕಲಿಕೆಯಲ್ಲಿ ಹಿಂದೆ ಉಳಿದುಕೊಂಡಿದ್ದಾರೆ. ಇಲ್ಲವೆ ಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಈ ವಿದ್ಯಾರ್ಥಿಗಳು ಕರ್ನಾಟಕದಲ್ಲಿ ಕನ್ನಡದಲ್ಲಿ ಕಲಿತು ಇದಕ್ಕೆ ಹೊಂದಿಕೊಂಡು ಮತ್ತೆ ಕಾರಣಾಂತರಗಳಿಂದ ಮತ್ತೆ ತಮ್ಮ ರಾಜ್ಯ ಅಥವಾ ದೇಶಗಳಿಗೆ ಹಿಂತಿರುಗಿ ಶಿಕ್ಷಣ ಕಲಿಯಬೇಕೆಂದರೆ ಅಲ್ಲಿ ಕನ್ನಡ ಮಾಧ್ಯಮದ ಶಿಕ್ಷಣ ಇಲ್ಲ. ಅಲ್ಲಿ ಅಲ್ಲಿನ ರಾಜ್ಯಭಾಷಾಮಾಧ್ಯಮದ ಅಥವಾ ಇಂಗ್ಲಿಶ್‌ನಲ್ಲಿ ಕಲಿಯಬೇಕಾಗುತ್ತದೆ.

ಹೀಗೆಯೇ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಬೇರೆಬೇರೆ ರಾಜ್ಯ ಮತ್ತು ದೇಶಗಳಲ್ಲಿ ತಮ್ಮ ಮಾತೃಭಾಷೆ ಅಥವಾ ರಾಜ್ಯಭಾಷೆ ಅಥವಾ ಇಂಗ್ಲಿಶ್‌ನಲ್ಲಿ ಕಲಿತು ಕಾರಣಾಂತರಗಳಿಂದ ಕರ್ನಾಟಕಕ್ಕೆ ವಲಸೆ ಬಂದು ಶಿಕ್ಷಣ ಕಲಿಯುತ್ತಿದ್ದಾರೆ. ಇವರು ಕರ್ನಾಟಕದ ಹೊರಗೆ ತಮ್ಮ ಮಾತೃಭಾಷಾಮಾಧ್ಯಮದಲ್ಲಿ ಅಥವಾ ರಾಜ್ಯಭಾಷೆಯಲ್ಲಿ ಶಿಕ್ಷಣ ಕಲಿತಿದ್ದಾಗ ಕರ್ನಾಟಕದ ಎಲ್ಲಾ ಕಡೆಗಳಲ್ಲಿ ಈಗಾಗಲೇ ಹೇಳಿದ ಕಾರಣಗಳಿಂದಾಗಿ ಅವರು ತಮ್ಮ ಮಾತೃಭಾಷಾ ಮಾಧ್ಯಮದಲ್ಲಿ ಕಲಿಯಲು ಶಾಲೆಗಳು ಇಲ್ಲ. ಇದರಿಂದಾಗಿ ಬೇರೆ ರಾಜ್ಯ ಅಥವಾ ದೇಶಗಳಿಂದ ಕರ್ನಾಟಕಕ್ಕೆ ವಲಸೆಬಂದ ವಿದ್ಯಾರ್ಥಿಗಳು ರಾಜ್ಯಭಾಷೆಯಾದ ಕನ್ನಡ ಇಲ್ಲವೆ ಇಂಗ್ಲಿಶ್‌ನಲ್ಲಿ ಕಲಿಯಬೇಕು. ಆದರೆ ಇದರಿಂದ ವಿದ್ಯಾರ್ಥಿಗಳು ತರಗತಿಗಳಲ್ಲಿ ಈಗಾಗಲೇ ಚರ್ಚಿಸಿರುವ ಹಾಗೆ ಸಮಸ್ಯೆಗಳನ್ನು ಎದುರಿಸುವಂತಾಗಿದೆ. ಈ ಸಮಸ್ಯೆಗಳ ಪರಿಹಾರಕ್ಕೆ ಸರ್ಕಾರಗಳು ಯಾವುದೇ ಕ್ರಮಗಳನ್ನು ಕೈಗೊಂಡಿಲ್ಲ. ಹೀಗಾಗಿ ಮಗುವಿನ ಮಾತೃಭಾಷೆಯೇ ಕಲಿಕೆಗೆ ಉತ್ತಮವಾದ ಬೋಧನಾ ಮಾಧ್ಯಮ ಎಂದು ಹೇಳಿದರೂ ಬಹುಭಾಷೆಗಳು ಬಳಕೆಯಲ್ಲಿರುವ ಕರ್ನಾಟಕದಲ್ಲಿ ಭಾಷಾಅಲ್ಪಸಂಖ್ಯಾತರಿಗೆ ಅವರ ಮಾತೃಭಾಷೆಯಲ್ಲಿ ಶಿಕ್ಷಣ ಕಲಿಸಲಾಗದೆ ಅವರ ಅಸ್ತಿತ್ವದ ಸಮಸ್ಯೆಯನ್ನು ಹಾಗೆ ಉಳಿಸಲಾಗಿದೆ. ಹೀಗಾಗಿ ಬಹುಭಾಷಿಕ ಪ್ರದೇಶದಲ್ಲಿ ಅಲ್ಪಸಂಖ್ಯಾತರ ಪರವಾಗಿ ರೂಪಿಸುವ ಭಾಷಾಯೋಜನೆಗಳು ಮತ್ತು ಜಾರಿಗೆ ತರುವ ಭಾಷಾನೀತಿಗಳು ಅಸ್ತಿತ್ವವನ್ನು ಉಳಿಸುವ ಅಡಿಪಾಯ ಅಥವಾ ಸಮಸ್ಯೆಗಳನ್ನು ಬಗೆಹರಿಸುವ ಮಾರ್ಗಗಳಲ್ಲ.

## ೪.೫ ಇಂಗ್ಲಿಶ್ ಭಾಷಾಮಾಧ್ಯಮ: ಕಲಿಕೆ ಮತ್ತು ಸಮಸ್ಯೆಗಳು

ಆಂಗ್ಲರು ಭಾರತದಲ್ಲಿ ರಾಜಕೀಯ ಆಡಳಿತ ಆರಂಭಿಸುವ ಪೂರ್ವದಲ್ಲಿಯೇ ಶಿಕ್ಷಣ ಪದ್ಧತಿ ಜಾರಿಯಲ್ಲಿತ್ತು. ಹಿಂದೂಗಳಲ್ಲಿ ಉನ್ನತ ಶಿಕ್ಷಣ ಸಂಸ್ಕೃತ ಭಾಷೆಯಲ್ಲಿ ಕಲಿಸಲಾಗುತ್ತಿದ್ದು ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿತ್ತು. ಇಲ್ಲಿ ಧಾರ್ಮಿಕ ವಿಚಾರಗಳನ್ನು ಹೆಚ್ಚಾಗಿ ಬೋಧಿಸುತ್ತಿದ್ದರು. ಮುಸ್ಲಿಮರಲ್ಲಿ ಉನ್ನತ ಶಿಕ್ಷಣ ಅರೇಬಿಕ್ ಭಾಷೆಯಲ್ಲಿದ್ದು ಇಲ್ಲಿಯೂ ಧಾರ್ಮಿಕ ವಿಚಾರಗಳನ್ನು ಕಲಿಸುತ್ತಿದ್ದರು. ಹೀಗಾಗಿ ಬ್ರಿಟೀಷ್ ಪೂರ್ವಕಾಲದ ಭಾರತದ ವಿದ್ಯಾಭ್ಯಾಸ ತರ್ಕಸಮ್ಮತವಾದ ಮತ್ತು ವ್ಯಕ್ತಿವಿಕಾಸಕ್ಕೆ ಅಗತ್ಯ ವಿಚಾರಗಳನ್ನು ತುಂಬದೇ ವಿದ್ಯಾರ್ಥಿಗಳನ್ನು ಕಟ್ಟಾ ಹಿಂದೂ ಅಥವಾ ಮುಸ್ಲಿಮರನ್ನಾಗಿಸುತ್ತಿತ್ತು. ಭಾರತೀಯ ಶಿಕ್ಷಣ ಪದ್ಧತಿಯಲ್ಲಿದ್ದ ಧಾರ್ಮಿಕ ಸಂಕುಚಿತತನವನ್ನು ನಾಶಗೊಳಿಸಿ ಪ್ರಗತಿಪರ ವಿಚಾರಗಳನ್ನು ಭಿತ್ತಲು ಮತ್ತು ಹಿಂದೂಗಳಲ್ಲಿ ಬ್ರಾಹ್ಮಣರ ಹಿಡಿತದಲ್ಲಿದ್ದ ಶಿಕ್ಷಣದ ಏಕಸೌಮ್ಯವನ್ನು ನಾಶಗೊಳಿಸಿ ಭಾರತೀಯ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಬ್ರಿಟೀಷ್ ಸರ್ಕಾರ ಭಾರತದಲ್ಲಿ ಆಧುನಿಕ ಶಿಕ್ಷಣ ಪದ್ಧತಿ ಆರಂಭಿಸಿದೆ. ಈ ಪದ್ಧತಿಯ ಪ್ರಕಾರ ಎಲ್ಲಾ ಜಾತಿ, ಧರ್ಮ, ಮತ, ಪಂಥ, ವರ್ಗಗಳ ವ್ಯತ್ಯಾಸವಿಲ್ಲದೆ ಆಸಕ್ತಿಯಿರುವ ಪ್ರತಿಯೊಬ್ಬರು ಶಿಕ್ಷಣ ಕಲಿಯಬಹುದಾಗಿತ್ತು. ಇದಕ್ಕೆ ಈ ಹಿಂದೆ ಇದ್ದ ಹಾಗೆ ಧಾರ್ಮಿಕವಾದ ಅಡಚಣೆಗಳು ಯಾವುದೇ ಇರಲಿಲ್ಲ. ಆದರೆ ಬ್ರಿಟೀಷರಿಂದ ಭಾರತದಲ್ಲಿ ರೂಪುಗೊಂಡ ಹೊಸ ಶಿಕ್ಷಣ ಪದ್ಧತಿ ಭಾರತೀಯ ವ್ಯವಸ್ಥೆಯಿಂದ ರೂಪುಗೊಂಡಿರುವುದಲ್ಲ. ಬದಲಾಗಿ ಇಂಗ್ಲೆಂಡ್‌ನಲ್ಲಿ ಜಾರಿಯಲ್ಲಿದ್ದ ಶಿಕ್ಷಣ ಪದ್ಧತಿಯನ್ನು ಭಾರತದಲ್ಲಿ ಆಳವಡಿಸಿದ್ದಾಗಿತ್ತು. ಇದರಿಂದ ಬ್ರಿಟೀಷರ ಕಾಲದಲ್ಲಿ ಆರಂಭಗೊಂಡ ಭಾರತದ ಹೊಸ ಶಿಕ್ಷಣ ಪದ್ಧತಿಯಲ್ಲಿ ಇಂಗ್ಲಿಶ್‌ನ್ನು ಬೋಧನಾ ಮಾಧ್ಯಮವಾಗಿ ಬಳಸಲಾಗಿದೆ. ಇದರಿಂದಾಗಿ ಭಾರತದ ಶಿಕ್ಷಣ ಪದ್ಧತಿಯಲ್ಲಿ ಭಾರತೀಯ ಭಾಷೆಗಳ ಬಳಕೆ ಕಡಿಮೆಯಾಗಿದೆ. ಹೀಗಾಗಿ ಭಾರತದ ಹೊಸ ಶಿಕ್ಷಣ ಪದ್ಧತಿ ಭಾರತೀಯರಲ್ಲಿದ್ದ ಧಾರ್ಮಿಕ ಸಂಕುಚಿತತನ ನಾಶಗೊಳಿಸಿ ಪ್ರಗತಿಪರ ವಿಚಾರಗಳನ್ನು ಭಿತ್ತುವುದು ಮತ್ತು ಭಾರತೀಯ ಶಿಕ್ಷಣದಲ್ಲಿದ್ದ ಏಕಸೌಮ್ಯವನ್ನು ನಾಶಗೊಳಿಸಿ ಸಾರ್ವತ್ರಿಕಗೊಳಿಸುವುದರ ಜೊತೆಗೆ ಬ್ರಿಟೀಷರ ಭಾಷಾಸಾಮ್ರಾಜ್ಯದ ವಿಸ್ತರಣೆಗೆ ದಾರಿಯು ಆಗಿದೆ.

ಬ್ರಿಟೀಷರು ಭಾರತದಲ್ಲಿ ರಾಜಕೀಯ ಆಡಳಿತ ಆರಂಭಿಸಿದಾಗ ಬ್ರೀಟಿಷರಿಗೆ ಭಾರತೀಯ ಭಾಷೆಗಳ ತಿಳುವಳಿಕೆ ಇರಲಿಲ್ಲ. ಹಾಗೆಯೇ ಭಾರತೀಯರಿಗೆ ಇಂಗ್ಲಿಶ್ ಭಾಷೆಯ ತಿಳುವಳಿಕೆ ಇರಲಿಲ್ಲ. ಇದರಿಂದಾಗಿ ಬ್ರಿಟೀಷರಿಗೆ ಭಾರತದಲ್ಲಿ ಆಡಳಿತ ನಡೆಸಲು ಭಾಷಾಸಮಸ್ಯೆ ಎದುರಾಗಿತ್ತು. ಈ ಸಮಸ್ಯೆಯ ಪರಿಹಾರಕ್ಕಾಗಿ ಬ್ರಿಟೀಷ್ ಸಾಮ್ರಾಜ್ಯ ಎಲ್ಲಾ ಅಧಿಕಾರಿಗಳು ಭಾರತೀಯ ಭಾಷೆಗಳನ್ನು ಕಲಿತು ಆಡಳಿತ ನಡೆಸುವುದರ ಕಡೆಗೆ ಆಸಕ್ತಿ ವಹಿಸಿಲ್ಲ. ಬದಲಾಗಿ ಅಧ್ಯಾಯ ಮೂರರಲ್ಲಿ ಪ್ರಸ್ತಾಪಿಸಿರುವ ಹಾಗೆ ಕೆಲವು ಆಂಗ್ಲ ಅಧಿಕಾರಿಗಳನ್ನು ಹೊರತುಪಡಿಸಿದರೆ ಉಳಿದವರೆಲ್ಲ ಭಾರತೀಯರಿಗೆ ಇಂಗ್ಲಿಶ್ ಕಲಿಸಿ, ಅವರನ್ನು ಸರ್ಕಾರಿ ನೌಕರಿಗೆ ನೇಮಕ ಮಾಡಿಕೊಂಡು ಅವರ ನೆರವಿನೊಂದಿಗೆ ಆಡಳಿತ ನಡೆಸಿದವರಾಗಿದ್ದಾರೆ. ಇದಕ್ಕೆ ಅನುಕೂಲ ಮಾಡಿಕೊಳ್ಳುವ ಉದ್ದೇಶದಿಂದ

ಭಾರತೀಯ ಶಿಕ್ಷಣವನ್ನು ಆಧುನೀಕರಿಸುವ ನೆಪದಲ್ಲಿ ಉದಾರವಾಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲಾ ಕಾಲೇಜುಗಳ ಜಾಲವನ್ನು ಆರಂಭಿಸಿದ್ದಾರೆ. ಏಕೆಂದರೆ ಆಗ ಭಾರತದಲ್ಲಿ ಬ್ರಿಟೀಷರ ಆಡಳಿತದ ವಿಸ್ತರಣೆ ಮತ್ತು ಸಂಘಟನೆಗೆ ಹೆಚ್ಚಿನ ಸಂಖ್ಯೆಯ ವಿದ್ಯಾವಂತ ನೌಕರರ ಅಗತ್ಯವಿತ್ತು. ಇದಕ್ಕಾಗಿ ನೌಕರರನ್ನು ಬ್ರಿಟನ್ನಿನಿಂದ ಕರೆತರುವುದು ಕಷ್ಟದ ಕೆಲಸವಾಗಿತ್ತು. ಜೊತೆಗೆ ದುಬಾರಿಯಾಗಿತ್ತು. ಇದರಿಂದಾಗಿ "ಸಮರ್ಥರಾದ ಅಧಿಕಾರಿಗಳನ್ನು ತಯಾರಿಸುವುದು, ಐರೋಪ್ಯ ಜ್ಞಾನವನ್ನು ಹರಡುವುದು, ಜನತೆಯ ನೈತಿಕ, ಬೌದ್ಧಿಕ ಮಟ್ಟವನ್ನು ಹೆಚ್ಚುಸುವುದು[೨೨]" ಇಂಗ್ಲಿಶ್ ಭಾಷಾಮಾಧ್ಯಮದ ಶಿಕ್ಷಣದ ಮುಖ್ಯ ಉದ್ದೇಶವಾಗಿತ್ತು.

ಇದೇ ಸಂದರ್ಭದಲ್ಲಿ ಭಾರತೀಯ ಸಮಾಜದಲ್ಲಿ ಸಾವಿರಾರು ವರ್ಷಗಳಿಂದ ಬೇರು ಬಿಟ್ಟಿದ್ದ ಜಾತಿ, ಧರ್ಮ, ಲಿಂಗ, ವೃತ್ತಿ ಇತ್ಯಾದಿಗಳ ಆಧಾರದಲ್ಲಿ ಹುಟ್ಟಿಕೊಂಡಿದ್ದ ಅಸಮಾನತೆಯನ್ನು ತೊಡೆದು ಹಾಕಬೇಕು. ಅಜ್ಞಾನ, ಅಂಧಕಾರ, ಮೂಢನಂಬಿಕೆಗಳಿಗೆ ಒಳಗಾಗಿರುವ ಭಾರತೀಯ ಜನತೆಯನ್ನು ಬಿಡುಗಡೆಗೊಳಿಸಿ ಅವರಲ್ಲಿ ವೈಚಾರಿಕ ಪ್ರಜ್ಞೆ ಮೂಡಿಸಬೇಕಾದರೆ ಇಂಗ್ಲಿಶ್ ಶಿಕ್ಷಣದ ಅಗತ್ಯ ಇದೆ ಎಂದು ಅಂದು ಭಾರತೀಯ ಸಮಾಜದ ಸುಧಾರಣೆಗಾಗಿ ಹೋರಾಡುತ್ತಿದ್ದ ರಾಜರಾಂ ಮೋಹನ್ ರಾಯ್‌ರಂತಹ ಚಿಂತಕರು ಭಾವಿಸಿದ್ದರು. ಅಷ್ಟೇ ಅಲ್ಲದೆ ತಾವೇ ಸ್ವತಹವಾಗಿ ಇಂಗ್ಲಿಶ್ ಕಲಿತು ಇತರ ಭಾರತೀಯರ ಇಂಗ್ಲಿಷ್ ಕಲಿಕೆಗೆ ಪ್ರೇರಕ ಶಕ್ತಿಯಾಗಿದ್ದರು. ಹೀಗೆ ಭಾರತದ ಭಾರತೀಯರಲ್ಲಿ ಇಂಗ್ಲಿಶ್ ಕಲಿಕೆಗೆ ಹುಟ್ಟಿಕೊಂಡ ಆಸಕ್ತಿಯನ್ನು ಬ್ರಿಟೀಷರು ತುಂಬಾ ಜಾಣತನದಿಂದ ಬಳಸಿಕೊಂಡು ಉದಾರವಾಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳನ್ನು ಆರಂಭಿಸಿದ್ದಾರೆ. ಅದೂ ಭಾರತೀಯರ ಹಣದಲ್ಲಿ. ಇದರಿಂದಾಗಿ ಕರ್ನಾಟಕದಲ್ಲಿ "೧೮೦೦ರಲ್ಲಿ ಹೊನ್ನಾವರದಲ್ಲಿ ೧೮೧೦ಕ್ಕೆ ಲಂಡನ್ ಮಿಷನ್‌ನಿಂದ ಬಳ್ಳಾರಿ ಮತ್ತು ಬೆಳಗಾಂಗಳಲ್ಲಿ, ೧೮೨೦ಕ್ಕೆ ಬೆಂಗಳೂರಿನಲ್ಲಿ, ವೆಸ್ಲಿಯನ್ ಮಿಷನ್‌ನಿಂದ ೧೮೨೦ಕ್ಕೆ ಮೈಸೂರಿನಲ್ಲಿ, ಹಡ್ಸನ್ ಮಿಷನ್‌ನಿಂದ ೧೮೩೫ಕ್ಕೆ ಮತ್ತೆ ಮೈಸೂರು ಮತ್ತು ಮಂಗಳೂರುಗಳಲ್ಲಿ, ೧೮೪೮ಕ್ಕೆ ಧಾರವಾಡದಲ್ಲಿ, ೧೮೫೫ಕ್ಕೆ ಮಡಕೇರಿಯಲ್ಲಿ ಸಂಪೂರ್ಣ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಶಾಲೆಗಳನ್ನು ಆರಂಭಿಸಲಾಗಿತ್ತು.[೨೩]" ಇವು ಆಗಿನ ಬ್ರಿಟೀಷ್ ಅಧಿಕಾರಿಗಳ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಕಲಿಸಲು ಆರಂಭಿಸಿದ ಶಾಲೆಗಳಾಗಿದ್ದವು. ಇವು ಬ್ರಿಟಿಷ್ ಸರ್ಕಾರದ ಹಿಡಿತದಲ್ಲಿರಲಿಲ್ಲ. ಮಿಷನರಿಗಳ ಹಿಡಿತದಲ್ಲಿದ್ದವು. ಆದರೆ ಇಂಗ್ಲಿಶ್ ಭಾಷೆಗೆ ಉಂಟಾದ ಬೇಡಿಕೆಯನ್ನು ಪೂರೈಸಲು ಆರಂಭಿಸಿದ ಶಾಲೆಗಳು ಬ್ರಿಟಿಷ್ ಸರ್ಕಾರದ ಹಿಡಿತದಲ್ಲಿದ್ದವು. ಇವುಗಳ ಸಂಖ್ಯೆ "೧೯೧೪ರ ವೇಳೆಗೆ ಬ್ರಿಟೀಷ್ ಆಡಳಿತದ ಕನ್ನಡನಾಡಿನಲ್ಲಿ ೩೨೨ ಹಿರಿಯ ಪ್ರಾಥಮಿಕ ಶಾಲೆಗಳು ಇಂಗ್ಲಿಷ್ ಮಾಧ್ಯಮದಲ್ಲಿದ್ದರೆ ೧೭೩ ಶಾಲೆಗಳು ಮಾತ್ರ ಕನ್ನಡ ಮಾಧ್ಯಮದಲ್ಲಿದ್ದವು. ನಮ್ಮ ನಾಡಿನ ೨೬ ಸಂಸ್ಥೆಗಳಲ್ಲಿ ಇಂಗ್ಲಿಷ್ ಮಾಧ್ಯಮ ಪ್ರೌಢಶಾಲೆಗಳಿದ್ದರೆ ಕೇವಲ ೫ ಮಾತ್ರ ಕನ್ನಡ ಮಾಧ್ಯಮದ ಪ್ರೌಢಶಾಲೆಗಳಿದ್ದವು[೨೪]".

ಹೀಗೆ ಆಂಗ್ಲರ ಆಡಳಿತದ ಭಾರತದಲ್ಲಿ ಇಂಗ್ಲಿಶ್ ಭಾರತದ ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯ ಸೇರಿದಂತೆ ಎಲ್ಲಾ ಕ್ಷೇತ್ರಗಳಲ್ಲಿ ಬಳಕೆಯಾಗಲು ಆರಂಭಿಸಿ, ಹಂತಹಂತವಾಗಿ

ಬೆಳವಣಿಗೆ ಹೊಂದಿ ತನ್ನ ಬಳಕೆಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಇದು ಭಾರತದ ಆಡಳಿತ, ಶಿಕ್ಷಣ, ಉದ್ಯೋಗ ಸೇರಿದಂತೆ ಇತರ ಕ್ಷೇತ್ರಗಳಲ್ಲಿ ಭಾರತೀಯ ಭಾಷೆ ಅಥವಾ ಭಾಷೆಗಳ ಬಳಕೆಯನ್ನು ಕಡಿಮೆ ಮಾಡಿದೆ. ಇಂತಹ ಸಂದರ್ಭದಲ್ಲಿ ಇಂಗ್ಲಿಶ್‌ನ ಕಲಿಕೆ ಮತ್ತು ಬಳಕೆಗೆ ಕಡಿವಾಣ ಹಾಕಿ ಭಾರತೀಯ ಭಾಷೆಗಳನ್ನು ರಕ್ಷಿಸಿಕೊಳ್ಳಬೇಕಾಗಿದ್ದ ಭಾರತೀಯರು ರಾಜಕೀಯ ಅಧಿಕಾರ ಕಳೆದುಕೊಂಡು ಬ್ರಿಟೀಷರ ಅಧೀನದಲ್ಲಿದ್ದರು. ಇದರಿಂದ ಅಂದು ಭಾರತೀಯರಿಗೆ ಇಂಗ್ಲಿಶ್‌ನ ಕಲಿಕೆ ಮತ್ತು ಬಳಕೆಯನ್ನು ನಿಯಂತ್ರಿಸುವುದಾಗಲಿ ಅಥವಾ ಭಾರತೀಯ ಭಾಷೆಗಳನ್ನು ಅಭಿವೃದ್ಧಿಪಡಿಸುವುದಾಗಲಿ ಸಾಧ್ಯವಾಗದ ಕೆಲಸವಾಗಿತ್ತು. ಇದಕ್ಕೆ ವ್ಯತಿರಿಕ್ತವಾಗಿ ಈಗಾಗಲೇ ಚರ್ಚಿಸಿರುವ ಹಾಗೆ ಭಾರತೀಯ ಸಮಾಜ ಸುಧಾರಕರು ಭಾರತದಲ್ಲಿದ್ದ ಅಸಮಾನತೆಗಳಿಂದ ಹೊರಬರುವ ಮಾರ್ಗವಾಗಿ ಇಂಗ್ಲಿಶ್ ಸ್ವೀಕರಿಸಿ, ಅದರ ಕಲಿಕೆಗೆ ಆಸಕ್ತಿ ತೋರಿದ್ದರು. ಇದನ್ನು ಸಮರ್ಥವಾಗಿ ಬಳಸಿಕೊಂಡಿರುವ ಆಂಗ್ಲರು ಇದು ಭಾರತದಲ್ಲಿ ತಮ್ಮ ಭಾಷಾಸಾಮ್ರಾಜ್ಯದ ವಿಸ್ತರಣೆಗೆ ಸೂಕ್ತ ಸಂದರ್ಭವೆಂದು ಭಾವಿಸಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ಭದ್ರಬುನಾದಿ ಹಾಕಿದ್ದಾರೆ.

ಹೀಗೆ ಆಂಗ್ಲರ ಆಡಳಿತದ ಭಾರತದಲ್ಲಿ ಭದ್ರಬುನಾದಿ ಕಂಡುಕೊಂಡ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳು ಅನಂತರದಲ್ಲಿ ಭಾರತೀಯ ಭಾಷೆ, ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ ಹಾಗೂ ಜನರ ಜೀವನ ಕ್ರಮದ ಮೇಲೆ ವ್ಯತಿರಿಕ್ತ ಪರಿಣಾಮ ಉಂಟುಮಾಡಲು ಆರಂಭಿಸಿವೆ. ಇದರಿಂದಾಗಿ ಭಾರತೀಯ ಭಾಷೆ, ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಜೀವನಕ್ರಮಗಳನ್ನು ಉಳಿಸಿಕೊಳ್ಳುವ ಹಿನ್ನೆಲೆಯಲ್ಲಿ ಭಾರತ ಸ್ವಾತಂತ್ರ್ಯಗೊಂಡ ನಂತರ ದೇಶದಲ್ಲಿನ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವನ್ನು ಅವರ ಮಾತೃಭಾಷೆಯಲ್ಲಿಯೇ ಕಲಿಸಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತರಲಾಗಿದೆ. ಆದರೆ ಸರ್ಕಾರದ ಭಾಷಾನೀತಿಯ ಪ್ರಕಾರ ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ತಮ್ಮ ಮಾತೃಭಾಷೆಯಲ್ಲಿ ಕಲಿಯುತ್ತಿಲ್ಲ. ಇದಕ್ಕೆ ಕಾರಣಗಳು ಮತ್ತು ಮಾತೃಭಾಷಾಮಾಧ್ಯಮದ ಕಲಿಕೆಯಿಂದ ಉದ್ಭವಿಸಿರುವ ಸಮಸ್ಯೆಗಳನ್ನು ಕುರಿತು ಈಗಾಗಲೇ 'ಮಾತೃಭಾಷಾಮಾಧ್ಯಮ ಕಲಿಕೆ ಮತ್ತು ಸಮಸ್ಯೆಗಳು' ಎಂಬ ಭಾಗದಲ್ಲಿ ಚರ್ಚಿಸಲಾಗಿದೆ. ಇಲ್ಲಿ ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು ಏನೇ ಇದ್ದರೂ ಮಾತೃಭಾಷಾಮಾಧ್ಯಮದ ಕಲಿಕೆಯಿಂದ ಎದುರಾಗಿರುವ ಸಮಸ್ಯೆಗಳ ಪರಿಹಾರಕ್ಕಾಗಿ ಕರ್ನಾಟಕ ಹೆಚ್ಚಿನ ಸಂಖ್ಯೆಯ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲಿಸಿದ್ದಾರೆ. ಆದರೆ ಮಕ್ಕಳು ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿತಿರುವುದರಿಂದ ಪೋಷಕರ ಎಲ್ಲಾ ಆಸೆಗಳು ಈಡೇರಿವೆಯೇ? ಮಕ್ಕಳ ಸಮಸ್ಯೆಗಳು ಬಗೆಹರಿದಿವೆಯೇ? ಎಂಬುವು ಸ್ವಲ್ಪ ಸೂಕ್ಷ್ಮವಾಗಿ ಗಮನಿಸಬೇಕಾದ ಅಂಶಗಳು.

ಏಕೆಂದರೆ ಭಾರತ ಸ್ವತಂತ್ರಗೊಂಡ ನಂತರ ಏಕಕಾಲದಲ್ಲಿ ದೇಶದ ಆಡಳಿತ, ರಾಜ್ಯ-ರಾಜ್ಯಗಳ ನಡುವಿನ ವ್ಯವಹಾರ ಮತ್ತು ಅಂತರಾಷ್ಟ್ರೀಯ ವ್ಯವಹಾರಕ್ಕಾಗಿ ಹಾಗೂ ಉನ್ನತ ಶಿಕ್ಷಣ, ಉದ್ಯೋಗ, ನ್ಯಾಯಾಲಯ ಸೇರಿದಂತೆ ಎಲ್ಲಾ ಕ್ಷೇತ್ರಗಳಲ್ಲಿ ಈಗಾಗಲೇ ಬಳಕೆಯಲ್ಲಿದ್ದ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆ ಅಥವಾ ಭಾಷೆಗಳನ್ನು ಬಳಕೆಗೆ ತರಲು ಸಾಧ್ಯವಿಲ್ಲವೆಂದು ಭಾವಿಸಿ ಸಂವಿಧಾನ

ರಚನಾಕಾರರು ಸಂವಿಧಾನ ಅಂಗೀಕೃತವಾದ ನಂತರ ಹದಿನೈದು ವರ್ಷಗಳವರೆಗೆ ದೇಶದ ಆಡಳಿತದಲ್ಲಿ ಇಂಗ್ಲಿಶ್‌ನ ಮುಂದುವರಿಕೆಗೆ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಆದರೆ ರಾಜಕೀಯ, ಆರ್ಥಿಕ, ಔದ್ಯೋಗಿಕ, ಸಾಮಾಜಿಕ ಕಾರಣಗಳಿಂದಾಗಿ ಭಾರತದಲ್ಲಿ ಇಂಗ್ಲಿಶ್ ಭಾಷಾಬಳಕೆಯನ್ನು ನಿಯಂತ್ರಿಸಲು ಸಾಧ್ಯವಾಗದ ಪರಿಣಾಮವಾಗಿ ಭಾರತ ಸಂವಿಧಾನ ಅಂಗೀಕೃತವಾದ ಹದಿನೈದು ವರ್ಷಗಳ ನಂತರದಲ್ಲಿಯೂ ಇಂಗ್ಲಿಶ್ ಹಿಂದಿಗಿಂತ ಹೆಚ್ಚಾಗಿ ಬಳಕೆಯಲ್ಲಿದೆ. ಇದರ ಪೂರೈಕೆಗಾಗಿ ರಾಜ್ಯದ ಶಾಲೆಗಳಲ್ಲಿ ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಕಲಿಸುವ ವ್ಯವಸ್ಥೆ ಮಾಡಲಾಗಿದೆ. ಆದರೆ ರಾಜ್ಯದ ಶಾಲೆಗಳಲ್ಲಿ ಶಿಕ್ಷಕರು 'ಏಕೀಕರಣ ನಂತರದ ಕರ್ನಾಟಕ: ಇಂಗ್ಲಿಶ್ ಕಲಿಕೆ ಮತ್ತು ಸಮಸ್ಯೆಗಳು ಎಂಬ ಭಾಗದಲ್ಲಿ ಚರ್ಚಿಸಿರುವ ಹಾಗೆ ಇಂದಿನ ಜಾಗತಿಕ ಪ್ರಪಂಚದ ಬೇಡಿಕೆಗೆ ಅನುಗುಣವಾಗಿ ವಿದ್ಯಾರ್ಥಿಗಳಿಗೆ ಇಂಗ್ಲಿಶ್‌ನ್ನು ಕಲಿಸುವಲ್ಲಿ ವಿಫಲರಾಗಿದ್ದಾರೆ. ಇದು ರಾಜ್ಯದಲ್ಲಿ ಪೋಷಕರು ತಮ್ಮ ಮಕ್ಕಳನ್ನು ಸರ್ಕಾರದ ಮಾತೃಭಾಷಾಮಾಧ್ಯಮದ ಪರವಾದ ಭಾಷಾನೀತಿಯನ್ನು ಧಿಕ್ಕರಿಸಿ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡುವಂತೆ ಮಾಡಿದೆ.

ಇಲ್ಲಿ ಮಕ್ಕಳಿಗೆ ಯಾವ ಭಾಷಾಮಾಧ್ಯಮದಲ್ಲಿ ಕಲಿಸಬೇಕು ಎಂಬುದು ಪ್ರಶ್ನೆಯಲ್ಲ. ಏಕೆಂದರೆ ಮಕ್ಕಳಿಗೆ ಯಾವ ಭಾಷಾಮಾಧ್ಯಮದಲ್ಲಿ ಕಲಿಸಿದರೆ ಮಕ್ಕಳ ಕಲಿಕೆ ಸುಲಭವಾಗುತ್ತದೆ, ಭಾಷೆ, ಸಾಹಿತ್ಯ, ಸಂಸ್ಕೃತಿ ಜೀವನವಿಧಾನಗಳು ಉಳಿಯುತ್ತವೆ ಎಂಬುದಕ್ಕೆ ಭಾಷಾವಿದ್ವಾಂಸರು, ಶಿಕ್ಷಣ ತಜ್ಞರು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಈಗಾಗಲೇ ಸ್ಪಷ್ಟಪಡಿಸಿಕೊಳ್ಳಲಾಗಿದೆ. ಇವರೆಲ್ಲರ ಒಮ್ಮತದ ಅಭಿಪ್ರಾಯದಂತೆ ಮಕ್ಕಳಿಗೆ ಮಾತೃಭಾಷೆಯಲ್ಲಿ ಕಲಿಸುವುದು ಉತ್ತಮ. ಆದರೆ ಕರ್ನಾಟಕದಲ್ಲಿ ಪೋಷಕರು 'ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು' ಭಾಗದಲ್ಲಿ ಈಗಾಗಲೇ ಚರ್ಚಿಸಿರುವ ಹಾಗೆ ಮಾತೃಭಾಷಾ ಮಾಧ್ಯಮದಲ್ಲಿ ಕಲಿಯುತ್ತಿರುವುದರಿಂದ ಎದುರಾಗುತ್ತಿರುವ ಸಮಸ್ಯೆಗಳನ್ನು ತಪ್ಪಿಸಲು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸುತ್ತಿದ್ದಾರೆ. ಇದಕ್ಕೆ ಸಾಕಷ್ಟು ವಿರೋಧಗಳು ವ್ಯಕ್ತವಾಗುತ್ತಿವೆ. ಇದಕ್ಕೆ ಮುಖ್ಯ ಕಾರಣ ಮೊದಲನೆಯದಾಗಿ ಕರ್ನಾಟಕದಲ್ಲಿ ಬಹುಸಂಖ್ಯಾತರಾಗಿರುವ ಕನ್ನಡಿಗರ ಮಕ್ಕಳು ತಮ್ಮ ಮಾತೃಭಾಷೆಯಾದ ಕನ್ನಡದ ಬದಲಿಗೆ ಇಂಗ್ಲಿಶ್‌ನಲ್ಲಿ ಕಲಿಯುತ್ತಿರುವುದು. ಎರಡನೆಯದು ಇಂಗ್ಲಿಶ್ ಮಾಧ್ಯಮದ ಶಿಕ್ಷಣವನ್ನು ಆರ್ಥಿಕವಾಗಿ ಶ್ರೀಮಂತರಾಗಿರುವವರ ಮಕ್ಕಳು ಮಾತ್ರ ಕಲಿಯುವಂತಹ ಪರಿಸ್ಥಿತಿ ನಿರ್ಮಾಣವಾಗಿರುವುದು. ಈ ಇದರಲ್ಲಿ ಒಂದು ಭಾಷೆಯ ಮೇಲಿನ ಅಭಿಮಾನವಾದರೆ ಮತ್ತೊಂದು ಸಾಮಾಜಿಕ ಅಸಮಾನತೆಯನ್ನು ವಿರೋಧಿಸುವಂತಹದ್ದು. ಈ ಎರಡೂ ಕನ್ನಡಿಗರಲ್ಲಿನ ಒಂದು ವರ್ಗದಲ್ಲಿ ಕನ್ನಡದ ಬಗೆಗೆ ಹೋರಾಡುವಂತಹ ಮನಃಸ್ಥಿತಿಯನ್ನು ಬೆಳೆಸಿವೆ. ಹೀಗಾಗಿ ಕರ್ನಾಟಕದಲ್ಲಿ ಕನ್ನಡದ ಮಕ್ಕಳು ಕನ್ನಡದಲ್ಲಿ ಕಲಿಯದೆ ಇಂಗ್ಲಿಶ್‌ನಲ್ಲಿ ಕಲಿಯುವುದು ಹೀಗೇ ಮುಂದುವರಿದರೆ ಮುಂದಿನ ದಿನಗಳಲ್ಲಿ ಕನ್ನಡದಲ್ಲಿ ಕಲಿಯುವವರೇ ಇಲ್ಲವಾಗುತ್ತಾರೆ. ಕನ್ನಡದಲ್ಲಿ ಕಲಿಯುವವರೇ ಇಲ್ಲವೆಂದರೆ ಕನ್ನಡದ ಶಾಲೆಗಳು ಉಳಿಯುವುದಾದರೂ ಹೇಗೆ? ಕನ್ನಡದ ಶಾಲೆಗಳು ಇಲ್ಲವೆಂದ ಮೇಲೆ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ಕಲೆ, ಜೀವನ ವಿಧಾನಗಳು ಉಳಿಯುವುದು ಹೇಗೆ? ಕರ್ನಾಟಕ

ಏಕೀಕರಣದ ಉದ್ದೇಶವಾದರೂ ಏನು? ಎಂಬ ಪ್ರಶ್ನೆಗಳನ್ನಿಡುವುದರ ಮೂಲಕ ಒಂದು ಕಡೆ ಮಾತೃಭಾಷಾ ಮಾಧ್ಯಮದ ಹೆಸರಿನಲ್ಲಿ, ಮತ್ತೊಂದು ಕಡೆ ಪ್ರಾದೇಶಿಕ ಭಾಷೆಯ ಹೆಸರಿನಲ್ಲಿ ಕನ್ನಡವನ್ನೇ ಶಿಕ್ಷಣ ಮಾಧ್ಯಮವನ್ನಾಗಿಸಬೇಕು ಎಂದು ಸರ್ಕಾರದ ಮೇಲೆ ಒತ್ತಡ ಉಂಟುಮಾಡಿದೆ.

ಹೀಗೆ ಕರ್ನಾಟಕದಲ್ಲಿ ಇಂಗ್ಲಿಶ್ ಭಾಷಾಮಾಧ್ಯಮದ ಪರ ಮತ್ತು ವಿರೋಧಿ ಚರ್ಚೆಗಳು ನಡೆಯುತ್ತಿರುವಾಗಲೆ ಸರ್ಕಾರ ಮಾತೃಭಾಷೆಯೇ ಮಗುವಿನ ಪ್ರಾಥಮಿಕ ಶಿಕ್ಷಣದ ಕಲಿಕಾ ಮಾಧ್ಯಮ ಆಗಿರುತ್ತದೆ. ಅದು ಸಾಧ್ಯವಾಗದಿದ್ದಾಗ ಮಾತ್ರ ಮಗುವಿನ ಕಲಿಕಾ ಮಾಧ್ಯಮ ಕಡ್ಡಾಯವಾಗಿ ಕನ್ನಡವಾಗಿರುತ್ತದೆ ಎಂದು ಭಾಷಾನೀತಿಯನ್ನು ಜಾರಿಗೆ ತಂದಿದೆ. ಇದರ ಪ್ರಕಾರ ರಾಜ್ಯದಲ್ಲಿರುವ ಎಲ್ಲಾ ಶಿಕ್ಷಣ ಸಂಸ್ಥೆಗಳು ಮಕ್ಕಳಿಗೆ ಮಗುವಿನ ಮಾತೃಭಾಷೆಯಲ್ಲಿ ಕಲಿಸಬೇಕು. ಅದು ಸಾಧ್ಯವಾಗದಿದ್ದಾಗ ಕನ್ನಡದಲ್ಲಿ ಕಲಿಸಬೇಕು. ಇದನ್ನು ರಾಜ್ಯದ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಸರ್ಕಾರದ ಹಿಡಿತದಲ್ಲಿ ಇರುವುದರಿಂದ ಪಾಲಿಸುತ್ತಿವೆ. ಆದರೆ ಖಾಸಗಿ ಶಿಕ್ಷಣ ಸಂಸ್ಥೆಗಳು ಸರ್ಕಾರದ ಈ ಭಾಷಾನೀತಿಯನ್ನು ಉಲ್ಲಂಘಿಸಿ ಇಂಗ್ಲಿಶ್‌ನಲ್ಲಿ ಬೋಧಿಸುತ್ತಿವೆ. ಏಕೆಂದರೆ ಖಾಸಗಿ ಶಿಕ್ಷಣ ಸಂಸ್ಥೆಗಳು ಸರ್ಕಾರದ ಮಾತೃಭಾಷೆಯ ಪರವಾದ ಭಾಷಾನೀತಿಯನ್ನು ಪಾಲಿಸುವುದರಿಂದ ಪೋಷಕರಿಂದ ಹೆಚ್ಚಿನ ಹಣವನ್ನು ಶುಲ್ಕದ ರೂಪದಲ್ಲಿ ಸಂಗ್ರಹಿಸಲು ಸಾಧ್ಯವಾಗುವುದಿಲ್ಲ. ಪೋಷಕರಿಂದ ಹೆಚ್ಚಿನ ಹಣ ಸಂಗ್ರಹಿಸದಿದ್ದರೆ ಶಾಲೆಗಳನ್ನು ನಡೆಸುವುದು, ಲಾಭ ಗಳಿಸುವುದು ಕಷ್ಟ. ಇದರಿಂದ ನಷ್ಟಕ್ಕೆ ಒಳಗಾಗಿ ಶಾಲೆಗಳನ್ನು ಮುಚ್ಚಬೇಕಾಗುತ್ತದೆ ಎಂಬ ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಕಾಡಿದೆ. ಇದರಿಂದಾಗಿ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳ ಬೋಧನಾ ಮಾಧ್ಯಮದ ನಡುವೆ ಅಂತರ ಉಂಟಾಗಿದೆ. ಈ ಅಂತರ ದಿನದಿಂದ ದಿನಕ್ಕೆ ಬೆಳೆದು ಕರ್ನಾಟಕದಲ್ಲಿ ಶಿಕ್ಷಣ ಸಂಸ್ಥೆಗಳ ನಡುವೆ ದೊಡ್ಡ ಅಸಮಾನತೆಯನ್ನೇ ಸೃಷ್ಟಿಸಿದೆ. ಏಕೆಂದರೆ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರದಿಂದ ಯಾವುದೇ ಅನುದಾನ ದೊರಕುವುದಿಲ್ಲ. ಇದರಿಂದಾಗಿ ಈ ಶಾಲೆ-ಕಾಲೇಜುಗಳು ಶಿಕ್ಷಕರು, ಉಪನ್ಯಾಸಕರ ವೇತನ, ಶಾಲೆ-ಕಾಲೇಜುಗಳ ಅಭಿವೃದ್ಧಿ ಇತ್ಯಾದಿಗಳ ಹೆಸರಿನಲ್ಲಿ ವಿದ್ಯಾರ್ಥಿಗಳು ಪೋಷಕರಿಂದ ಹೆಚ್ಚು ಹಣ ಪಡೆಯಲು ದುಬಾರಿ ಶುಲ್ಕವನ್ನು ನಿಗದಿ ಪಡಿಸಿದ್ದಾರೆ. ಈ ಶುಲ್ಕವನ್ನು ಕಟ್ಟಲಾಗದೆ ಬಡಕುಟುಂಬಗಳ ಜನರು ತಮ್ಮ ಮಕ್ಕಳನ್ನು ಮಾತೃಭಾಷಾಮಾಧ್ಯಮ ಅಥವಾ ಕನ್ನಡ ಭಾಷಾಮಾಧ್ಯಮದ ಸರ್ಕಾರಿ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ. ಆದರೆ ಶ್ರೀಮಂತ ವರ್ಗದ ಪೋಷಕರು ಆರ್ಥಿಕವಾಗಿ ಸಬಲರಾಗಿದ್ದರಿಂದ ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ. ಇದರಿಂದಾಗಿ ಶಾಲೆಗಳ ನಡುವೆ ವ್ಯತ್ಯಾಸ ಉಂಟಾಗಿದೆ.

ಈ ವ್ಯತ್ಯಾಸ ಕರ್ನಾಟಕದಲ್ಲಿ ಸರ್ಕಾರಿ ಶಾಲೆಗಳೆಂದರೆ ಮಾತೃಭಾಷೆ ಅಥವಾ ಕನ್ನಡ ಮಾಧ್ಯಮದ ಶಾಲೆಗಳು, ಬಡವರ ಶಾಲೆಗಳು. ಖಾಸಗಿ ಶಿಕ್ಷಣ ಸಂಸ್ಥೆಗಳೆಂದರೆ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳು, ಶ್ರೀಮಂತರ ಶಾಲೆಗಳು ಎಂದು ಕರೆಯುವಷ್ಟರ ಮಟ್ಟಿಗೆ ಬೆಳೆದಿದೆ. ವಾಸ್ತವವಾಗಿ ಕರ್ನಾಟಕದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಈ ರೀತಿ ಭಾಷಾಮಾಧ್ಯಮದ ಆಧಾರದಲ್ಲಿ

ವಿಂಗಡಣೆ ಮಾಡಿಲ್ಲ. ಆಡಳಿತದ ಅನುಕೂಲಕ್ಕಾಗಿ ಸರ್ಕಾರಿ ಶಿಕ್ಷಣ ಸಂಸ್ಥೆಗಳು, ಖಾಸಗಿ ಶಿಕ್ಷಣ ಸಂಸ್ಥೆಗಳು ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳೆಂದು ವಿಂಗಡಣೆ ಮಾಡಲಾಗಿದೆ. ಆದರೆ ಖಾಸಗಿ ಶಿಕ್ಷಣ ಸಂಸ್ಥೆಗಳು ಇದುವರೆಗೆ ಚರ್ಚಿಸಿದ ಅಂಶಗಳ ಕಾರಣದಿಂದ ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ ಕನ್ನಡ ಮಾಧ್ಯಮದಲ್ಲಿ ಕಲಿಸದೆ ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಸುತ್ತಿವೆ. ಈ ರೀತಿ ಮಕ್ಕಳಿಗೆ ಇಂಗ್ಲಿಶ್ ಭಾಷಾಮಧ್ಯಮದಲ್ಲಿ ಕಲಿಸುವುದರಿಂದ ದೇಶಿಯ ಭಾಷೆಗಳು, ಅದರಲ್ಲೂ ವಿಶೇಷವಾಗಿ ಕರ್ನಾಟಕದ ರಾಜ್ಯಭಾಷೆಯಾದ ಕನ್ನಡ ಕರ್ನಾಟಕದಲ್ಲಿಯೇ ತನ್ನ ಅಸ್ತಿತ್ವ ಕಳೆದುಕೊಳ್ಳುತ್ತದೆ. ಕರ್ನಾಟಕದಲ್ಲಿಯೇ ಕನ್ನಡ ಅಸ್ತಿತ್ವದಲ್ಲಿ ಇಲ್ಲದೆ ಹೋದರೆ ಕನ್ನಡ ಸಾಹಿತ್ಯ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪ, ಇತ್ಯಾದಿಗಳು ಉಳಿಯುವುದಾದರೂ ಹೇಗೆ? ಕನ್ನಡ ಉಳಿಯದಿದ್ದರೆ ಕನ್ನಡಿಗರು ಸಾವಿರಾರು ವರ್ಷಗಳಿಂದ ರೂಢಿಸಿಕೊಂಡು ಬಂದಿದ್ದ ತಮ್ಮ ಸ್ವಂತಿಕೆ ಕಳೆದುಕೊಂಡು ಕರ್ನಾಟಕದಲ್ಲಿಯೇ ಅತಂತ್ರರಾಗುತ್ತಾರೆ. ಇದರಿಂದ ಅಧ್ಯಾಯ ಎರಡರಲ್ಲಿ ಚರ್ಚಿಸಿರುವ ಹಾಗೆ ಕರ್ನಾಟಕ ಮತ್ತು ಕನ್ನಡ ಭಾಷೆಯ ನಡುವಿನ ಸಂಬಂಧ ಕಡಿದು ಬೀಳುತ್ತದೆ. ಕರ್ನಾಟಕ ಏಕೀಕರಣದ ಉದ್ದೇಶವು ಫಲಿಸುವುದಿಲ್ಲ.

ಕರ್ನಾಟಕ ಏಕೀಕರಣ ಹೋರಾಟದ ಉದ್ದೇಶ ಫಲಿಸಬೇಕಾದರೆ, ಸಾವಿರಾರು ವರ್ಷಗಳ ಕರ್ಣಾಟಕ ಮತ್ತು ಕನ್ನಡ ಭಾಷೆಯ ನಡುವಿನ ಸಂಬಂಧ, ಕನ್ನಡಿಗರ ವಿಶೇಷತೆಗಳು ಉಳಿಯಬೇಕಾದರೆ ಕನ್ನಡ ಉಳಿಯಬೇಕು, ಕನ್ನಡ ಉಳಿಯಬೇಕಾದರೆ ಕರ್ನಾಟಕದಲ್ಲಿರುವ ಮಕ್ಕಳಿಗೆ ಕನ್ನಡದಲ್ಲಿಯೇ ಶಿಕ್ಷಣ ಕಲಿಸಬೇಕು. ಇದಕ್ಕೆ ಪೂರಕವಾಗಿ ಸರ್ಕಾರ ಈಗಾಗಲೇ ಭಾಷಾನೀತಿಯನ್ನು ಜಾರಿಗೆ ತಂದಿದ್ದರೂ ಕೆಲವು ಖಾಸಗಿ ಶಿಕ್ಷಣ ಸಂಸ್ಥೆಗಳು ಅದನ್ನು ಪಾಲಿಸುತ್ತಿಲ್ಲ. ಇದರಿಂದಾಗಿ ಸರ್ಕಾರದ ಭಾಷಾನೀತಿಯನ್ನು ಉಲ್ಲಂಘಿಸಿ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಶಿಕ್ಷಣ ಕಲಿಸುತ್ತಿರುವ ಖಾಸಗಿ ಶಿಕ್ಷಣ ಸಂಸ್ಥೆಗಳ ವಿರುದ್ಧವಾಗಿ ಕ್ರಮ ಕೈಗೊಳ್ಳಬೇಕು ಮತ್ತು ಈ ರೀತಿ ಅಕ್ರಮವಾಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಲ್ಲಿ ಬೋಧನೆ ಮಾಡುತ್ತಿರುವ ಶಿಕ್ಷಣ ಸಂಸ್ಥೆಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಒಂದು ಕಠಿಣ ಕಾನೂನನ್ನು ರೂಪಿಸಬೇಕು ಎಂದು ಕನ್ನಡ ಭಾಷಾಪರವಾದ ಹೋರಾಟಗಾರರು, ಚಿಂತಕರು ಸರ್ಕಾರದ ಮೇಲೆ ಒತ್ತಡ ಹಾಕಿದ್ದಾರೆ. ಇದರಿಂದಾಗಿ ಕರ್ನಾಟಕ ಸರ್ಕಾರವು ತನ್ನ ಕಾರ್ಯಾಂಗದ ಅಧಿಕಾರ ಬಳಸಿಕೊಂಡು ೧೯-೧೦-೧೯೬೯ರಂದು ಪ್ರಾಥಮಿಕ ಶಾಲೆಗಳ ಸಹಾಯಾನುದಾನ ಸಂಹಿತೆಯನ್ನು ರೂಪಿಸಿದೆ. ಇದನ್ನು ಅಧ್ಯಾಯ ಎರಡರಲ್ಲಿ ಉಲ್ಲೇಖಿಸಲಾಗಿದೆ.

ಈ ಸಂಹಿತೆಯನ್ನು ಗಮನಿಸಿದಾಗ ಇಂಗ್ಲಿಶ್ ಮಾತೃಭಾಷೆಯಾಗಿರುವ ಮಕ್ಕಳು, ಕೇಂದ್ರ ಸರ್ಕಾರಿ ನೌಕರಿಯಲ್ಲಿರುವ ನೌಕರರ ಮಕ್ಕಳು, ಬೇರೆಬೇರೆ ರಾಜ್ಯಗಳಿಗೆ ವಲಸೆ ಹೋಗಿ ಕಾರ್ಯನಿರ್ವಹಿಸುವವರ ಮಕ್ಕಳು, ಬೇರೆಬೇರೆ ರಾಜ್ಯಗಳಲ್ಲಿ ಶಾಖೆಗಳನ್ನು ಹೊಂದಿರುವ ಬ್ಯಾಂಕುಗಳಲ್ಲಿ ಕೆಲಸ ಮಾಡುವ ನೌಕರರ ಮಕ್ಕಳು. ಸ್ಥಳೀಯ ಶಾಲೆಗಳಲ್ಲಿ ಯಾವ ವ್ಯವಸ್ಥೆಯೂ ಇಲ್ಲದ ಭಾಷಾಅಲ್ಪಸಂಖ್ಯಾತರ ಮಕ್ಕಳು, ಒಂದರಿಂದ ನಾಲ್ಕನೇ ತರಗತಿಯವರೆಗೆ ಒಂದು ತರಗತಿಯಲ್ಲಿ ೧೦ ರಿಂದ ೩೦ ಮಕ್ಕಳು, ಐದರಿಂದ ಏಳನೇ ತರಗತಿಯಲ್ಲಿ ಕನಿಷ್ಟ ೧೦ ಮಕ್ಕಳು

ಇರುವ ಶಾಲೆಗಳಲ್ಲಿ ನಿರ್ದೇಶಕರ ಅನುಮತಿ ಪಡೆದು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯಬಹುದು. ಆದರೆ ಕರ್ನಾಟಕದಲ್ಲಿ ವಾಸಮಾಡುವ ಇತರರು ಮಾತ್ರ ಇಂಗ್ಲಿಶ್‌ನಲ್ಲಿ ಕಲಿಯಬಾರದು ಎಂಬಂತೆ ಸಂಹಿತೆಯನ್ನು ರೂಪಿಸಲಾಗಿದೆ. ಹೀಗೆ ರೂಪಿಸಲಾಗಿರುವುದರ ಹಿಂದಿನ ಉದ್ದೇಶಗಳು ಏನೇ ಇದ್ದರೂ ಕರ್ನಾಟಕದಲ್ಲಿ ಇಂಗ್ಲಿಶ್ ಕಲಿತರೆ ಮಾತ್ರ ಬದುಕು, ಉದ್ಯೋಗ, ಉನ್ನತ ಮತ್ತು ವೃತ್ತಿಪರ ಶಿಕ್ಷಣ, ಸ್ಥಾನಮಾನ ಎಂಬಂತಹ ಪರಿಸ್ಥಿತಿ ನಿರ್ಮಾಣವಾಗಿರುವಾಗ ಕೇಂದ್ರ ಸರ್ಕಾರಿ ನೌಕರರ ಮಕ್ಕಳಿಗೆ, ಹೊರರಾಜ್ಯಗಳಿಗೆ ವಲಸೆ ಹೋಗುವ ಕಾರ್ಮಿಕರ ಮಕ್ಕಳಿಗೆ, ಬೇರೆ ಬೇರೆ ರಾಜ್ಯಗಳಲ್ಲಿ ಶಾಖೆಯನ್ನು ಹೊಂದಿರುವ ಬ್ಯಾಂಕ್ ನೌಕರರ ಮಕ್ಕಳಿಗೆ ಮತ್ತು ಶಾಲೆಯಲ್ಲಿನ ಸಂಖ್ಯೆಯನ್ನು ಆಧರಿಸಿ ಆ ಮಕ್ಕಳಿಗೆ ಮಾತ್ರ ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುವ ಅವಕಾಶ ಮಾಡಿಕೊಟ್ಟು ಉಳಿದವರಿಗೆ ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆಯನ್ನು ತಡೆದಿರುವುದು ಎಷ್ಟರ ಮಟ್ಟಿಗೆ ಸರಿ? ಎಂಬುದು ಪರಿಶೀಲಿಸಬೇಕಾದ ವಿಷಯವಾಗಿದೆ.

ಇಲ್ಲಿ ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆಯನ್ನು ತಡೆದಿರುವುದು ಎಷ್ಟರ ಮಟ್ಟಿಗೆ ಸರಿ? ಎಂಬ ಪ್ರಶ್ನೆಯನ್ನೆತ್ತಿರುವುದು ಕರ್ನಾಟಕ ಎಲ್ಲಾ ಮಕ್ಕಳಿಗೂ ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಸುವ ನಿಯಮ ಅಥವಾ ವ್ಯವಸ್ಥೆ ರೂಪಿಸಬೇಕು ಎಂಬ ಉದ್ದೇಶದಿಂದಲ್ಲ. ಇದುವರಗೆ ಚರ್ಚಿಸಿರುವ ಅಂಶಗಳಿಂದಾಗಿ ಮಾತೃಭಾಷೆಗಳಿಗೆ ಬೇಡಿಕೆ ಕುಸಿದಿರುವಾಗ ಅವುಗಳನ್ನು ಅಭಿವೃದ್ಧಿಪಡಿಸದೆ ಒಂದು ವರ್ಗಕ್ಕೆ ಇಂಗ್ಲಿಶ್‌ನಲ್ಲಿ ಕಲಿಯಲು ಅವಕಾಶ ಕಲ್ಪಿಸಿಕೊಟ್ಟು ಮತ್ತೊಂದು ವರ್ಗಕ್ಕೆ ಅದನ್ನು ಕಲಿಯದಂತೆ ನಿಯಂತ್ರಿಸುವುದು ಯಾವ ನ್ಯಾಯ? ಇದು ಭಾಷಿಕ ಸಮುದಾಯಗಳ ನಡುವೆ ಅಥವಾ ವರ್ಗಗಳ ಆಧಾರದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಔದ್ಯೋಗಿಕವಾಗ ಅಸಮಾನತೆಗಳನ್ನು ಸೃಷ್ಟಿಸುವುದಿಲ್ಲವೆ? ಇದು ಮಾತೃಭಾಷೆ ಅಥವಾ ಕನ್ನಡದಲ್ಲಿ ಕಲಿಯುವವರನ್ನು ವಿಮುಖಗೊಳಿಸುವುದಿಲ್ಲವೇ? ಎಂಬರ್ಥದಲ್ಲಿ. ಏಕೆಂದರೆ ಸರ್ಕಾರದ ಈ ರೀತಿಯ ನಿರ್ಧಾರದಿಂದಾಗಿ ಎಲ್ಲಾ ಸೌಲಭ್ಯಗಳು ಒಂದು ವರ್ಗಕ್ಕೆ ಲಭ್ಯವಾಗಿ ಆ ವರ್ಗ ಮಾತ್ರ ಎಲ್ಲಾ ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದುತ್ತದೆ. ಇನ್ನೊಂದು ವರ್ಗವನ್ನು ಇದರಿಂದ ವಂಚಿತವಾಗಿ ಹಿಂದೆ ಉಳಿಯುತ್ತದೆ.

ಇದು ಸಾಮಾಜಿಕ ನ್ಯಾಯಕ್ಕೆ ಅದರಲ್ಲೂ ಪ್ರಜಾಪ್ರಭುತ್ವದಲ್ಲಿ ಇದಕ್ಕೆ ವಿರೋಧಗಳು ಸಹಜವಾಗಿಯೇ ವ್ಯಕ್ತವಾಗುತ್ತವೆ. ಇದು ಒಂದು ಪ್ರದೇಶದಲ್ಲಿ ಭಾಷಿಕ ಅಸಮಾನತೆ ಮಾತ್ರ ಅಲ್ಲ, ಶೈಕ್ಷಣಿಕ ಅಸಮಾನತೆ, ಸಾಮಾಜಿಕ ಅಸಮಾನತೆ, ಆರ್ಥಿಕ ಅಸಮಾನತೆಗಳ ಹುಟ್ಟಿಗೆ ಅಲ್ಲಿನ ಸರ್ಕಾರವೇ ಅವಕಾಶ ಮಾಡಿಕೊಟ್ಟ ಹಾಗೆ ಆಗುತ್ತದೆ. ಆದುದರಿಂದ ರಾಜ್ಯದಲ್ಲಿ ಮಾತೃಭಾಷಾಮಾಧ್ಯಮದಲ್ಲಿ ಕಲಿತರೆ ಬದುಕು, ಉದ್ಯೋಗ ಇದೆ ಎಂಬ ಪರಿಸ್ಥಿತಿ ನಿರ್ಮಾಣವಾಗುವವರೆಗೂ, ಮಾತೃಭಾಷಾಮಾಧ್ಯಮ ಶಾಲೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿ, ಅಭಿವೃದ್ಧಿಪಡಿಸಿ ಗುಣಮಟ್ಟದ ಶಿಕ್ಷಣದ ಶಿಕ್ಷಣದ ವ್ಯವಸ್ಥೆ ನಿರ್ಮಾಣ ಮಾಡುವವರೆಗೂ ಇಂಗ್ಲಿಶ್ ಮಾಧ್ಯಮದ ಕಲಿಕೆಯನ್ನು ನಿರ್ಬಂಧಿಸುವುದರಲ್ಲಿ ಅರ್ಥ ಇಲ್ಲ. ಸರ್ಕಾರ ಇಂತಹ ಪ್ರಶ್ನೆಗಳನ್ನೆ ಎತ್ತಬಾರದು. ಉತ್ತಮವಾದ ಉದ್ಯೋಗದ ಅವಕಾಶ, ಉನ್ನತ ಸ್ಥಾನಗಳನ್ನು ಉಳ್ಳವರು,

ಹೊರರಾಜ್ಯದವರು, ಭಾಷಾಅಲ್ಪಸಂಖ್ಯಾತರಿಗೆ ಮಾತ್ರ ಒದಗಿಸಿಕೊಡಬೇಕೆ? ಕರ್ನಾಟಕದಲ್ಲಿನ ಕನ್ನಡಿಗರು ಮತ್ತು ಇತರರು ಇಂತಹ ಅವಕಾಶಗಳಿಂದ ವಂಚಿತರಾಗಬೇಕೆ? ಎಂದು ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಮಾತೃಭಾಷಾಮಾಧ್ಯಮದ ಪರ ಮತ್ತು ಇಂಗ್ಲಿಶ್‌ಮಾಧ್ಯಮದ ವಿರುದ್ಧವಾದ ಭಾಷಾನೀತಿಗೆ ವಿರೋಧಗಳು ಹುಟ್ಟಿಕೊಂಡಿವೆ. ಇದಕ್ಕೆ ಈಗಾಗಲೇ ಕನ್ನಡ ಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು ಭಾಗದಲ್ಲಿ ಚರ್ಚಿಸಿರುವ ಹಾಗೆ ಖಾಸಗಿ ಶಿಕ್ಷಣ ಸಂಸ್ಥೆಗಳು ಬೆಂಬಲ ನೀಡಿವೆ.

ಏಕೆಂದರೆ ಖಾಸಗಿ ಶಿಕ್ಷಣ ಸಂಸ್ಥೆಗಳ ಆದಾಯದ ಮೂಲವೇ ಇಂಗ್ಲಿಶ್ ಭಾಷಾಮಾಧ್ಯಮ. ಇದನ್ನು ಬಳಸುವುದು ನಿಲ್ಲಿಸಿದರೆ ಅವುಗಳು ತಮ್ಮ ಆದಾಯದ ಮೂಲ ಕಳೆದುಕೊಳ್ಳುತ್ತವೆ. ಇದರಿಂದ ಕರ್ನಾಟಕದಲ್ಲಿನ ಖಾಸಗಿ ಶಿಕ್ಷಣ ಸಂಸ್ಥೆಗಳು ಒಂದು ಸಂಘ ಕಟ್ಟಿಕೊಂಡು ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಇಂಗ್ಲಿಶ್ ಮಾಧ್ಯಮದ ವಿರುದ್ಧವಾದ ಭಾಷಾನೀತಿಗೆ ವಿರುದ್ಧವಾಗಿ ನ್ಯಾಯಾಲಯದಲ್ಲಿ ದಾವೆ ಹೂಡಿವೆ. ಇದಕ್ಕೆ ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಸಬೇಕು ಎಂದು ಆಸಕ್ತಿ ಹೊಂದಿರುವ ಪೋಷಕವರ್ಗ ಬೆಂಬಲಿಸಿದೆ. ಭಾರತೀಯ ಸಂವಿಧಾನ ಭಾರತೀಯ ಪ್ರಜೆಗೆ ನೀಡಿರುವ ಭಾಷಾಸ್ವಾತಂತ್ರ್ಯ, ರಾಷ್ಟ್ರೀಯ ಅಂತಾರಾಷ್ಟ್ರೀಯ ಮಟ್ಟದಲ್ಲಿ ದೇಶದ ವಿದ್ಯಾರ್ಥಿಗಳು ತಮ್ಮ ಪ್ರತಿಭೆಯನ್ನು ಅನಾವರಣಗೊಳಿಸಲು ಅಗತ್ಯವಿರುವ ಭಾಷೆ, ವಿದ್ಯಾರ್ಥಿಗಳು ಭವಿಷ್ಯ ಇತ್ಯಾದಿಗಳನ್ನು ಆಧಾರವಾಗಿಸಿಕೊಂಡು ನ್ಯಾಯಾಲಯಗಳು ಖಾಸಗಿ ಶಿಕ್ಷಣ ಸಂಸ್ಥೆಗಳ ಪರವಾಗಿ ತೀರ್ಪು ನೀಡಿವೆ. ಆದರೆ ಇದು ಖಾಸಗಿ ಶಿಕ್ಷಣ ಸಂಸ್ಥೆಗಳ ಪರವಾದ ತೀರ್ಪಲ್ಲ. ಮಕ್ಕಳು ಮಾತೃಭಾಷಾ ಮಾಧ್ಯಮದಲ್ಲಿ ಕಲಿತರೆ ಒಂದು ನಿರ್ದಿಷ್ಟ ಪ್ರದೇಶಕ್ಕೆ ಮಾತ್ರ ಸೀಮಿತಗೊಳ್ಳುತ್ತಾರೆ. ಅದರಾಚೆಗೆ ಅವರಲ್ಲಿನ ಪ್ರತಿಭೆ ಅನಾವರಣ ಗೊಳ್ಳುವುದಿಲ್ಲ. ಭಾರತೀಯ ವಿದ್ಯಾರ್ಥಿಗಳ ಪ್ರತಿಭೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿ ಪಡೆಯಬೇಕಾದರೆ, ಅವರ ಪ್ರತಿಭೆಗೆ ತಕ್ಕನಾಗಿ ಅವಕಾಶಗಳು ಲಭ್ಯವಾಗಬೇಕಾದರೆ ಅವರಿಗೆ ಇಂಗ್ಲಿಶ್‌ನಲ್ಲಿ ಕಲಿಸುವ ಅಗತ್ಯವಿದೆ ಎಂಬುದರ ಪರವಾದ ತೀರ್ಪಾಗಿದೆ.

ಇವುಗಳ ಜೊತೆಗೆ ಇಂದು ಮಗುವಿನ ಮಾತೃಭಾಷೆಯನ್ನು ಗುರುತಿಸುವುದು ಕಷ್ಟ. ಏಕೆಂದರೆ ಶಿಕ್ಷಣ, ಉದ್ಯೋಗ, ದೂರದ ಊರು, ರಾಜ್ಯಗಳಿಗೆ ಮದುವೆ ಮಾಡಿಕೊಡುವುದು ಇತ್ಯಾದಿ ಕಾರಣಗಳಿಂದಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವವರ ಸಂಖ್ಯೆ ಹೆಚ್ಚಾಗಿದೆ. ಹಾಗೆಯೇ ತಂದೆ, ತಾಯಿಯರ ಭಾಷೆಗಳು ಬೇರೆಬೇರೆಯಾಗಿದ್ದು ಮನೆಗಳಲ್ಲಿ ಮಕ್ಕಳಿಗೆ ಎರಡಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಸುತ್ತಿದ್ದಾರೆ. ಹೀಗೆಯೇ ಮಕ್ಕಳು ಶಾಲೆಗೆ ಸೇರುವ ಮುನ್ನ ತಾನು ವಾಸಿಸುವ ಪ್ರದೇಶದ ಮಕ್ಕಳ ಜೊತೆ ಬೆರೆತು ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುತ್ತಿವೆ. ಹಾಗೆಯೇ ಬಳಸುತ್ತಿವೆ. ಇಲ್ಲಿ ಮಗುವಿನ ಮಾತೃಭಾಷೆ ಯಾವುದು ಎಂದು ಗುರ್ತಿಸುವುದು ಕಷ್ಟವಾಗಿದೆ. ಇಂತಹ ಸಂದರ್ಭದಲ್ಲಿ ಮಗುವಿಗೆ ಮಾತೃಭಾಷಾ ಮಾಧ್ಯಮದಲ್ಲಿಯೇ ಶಿಕ್ಷಣ ಕಲಿಸಬೇಕು ಎಂದು ಸರ್ಕಾರ ಭಾಷಾನೀತಿಯನ್ನು ಜಾರಿಗೆ ತಂದು ಆ ಪ್ರಕಾರ ಕಲಿಸಬೇಕು ಎಂದರೆ

ಮಗುವಿಗೆ ಯಾವ ಭಾಷೆಯಲ್ಲಿ ಕಲಿಸುವುದು. ಹೀಗೆ ಮಾಡುವುದು ಮಗುವಿನ ಕಲಿಕೆಯ ಸ್ವಾತಂತ್ರ್ಯವನ್ನು ಕಸಿದುಕೊಂಡ ಹಾಗೆ ಆಗುತ್ತದೆ. ಹೀಗಾಗಿ ಮಗುವಿಗೆ ಶಾಲೆಗೆ ಸೇರುವಾಗ ತಾನು ಯಾವ ಭಾಷೆಯಲ್ಲಿ ಕಲಿಯಬೇಕು ಎಂದು ನಿರ್ಧರಿಸುವ ಶಕ್ತಿ ಇಲ್ಲದೆ ಇರುವುದರಿಂದ ಮಕ್ಕಳು ಯಾವ ಭಾಷಾಮಾಧ್ಯಮದಲ್ಲಿ ಕಲಿಯಬೇಕು ಎಂದು ತೀರ್ಮಾನಿಸುವ ಸ್ವಾತಂತ್ರ್ಯ ಮಕ್ಕಳ ಪೋಷಕರಿಗೆ ಬಿಡುವುದು ಒಳ್ಳೆಯದು ಎಂಬ ಅಭಿಪ್ರಾಯದಲ್ಲಿ ದೇಶದ ಅತ್ಯುಚ್ಚ ನ್ಯಾಯಾಲಯವಾದ ಸುಪ್ರೀಂಕೋರ್ಟ್ ಮಕ್ಕಳಿಗೆ ಯಾವ ಭಾಷಾಮಾಧ್ಯಮದಲ್ಲಿ ಶಿಕ್ಷಣ ಕಲಿಸಬೇಕು ಎಂಬುದಕ್ಕೆ ಪೋಷಕರು ಸ್ವತಂತ್ರರು, ಇದನ್ನು ಕಸಿದುಕೊಳ್ಳುವ ಅಧಿಕಾರ ಸರ್ಕಾರಗಳಿಗೆ ಇಲ್ಲ ಎಂದು ತೀರ್ಪು ಕೊಟ್ಟಿದೆ.

ಇದನ್ನೇ ಬಂಡವಾಳ ಮಾಡಿಕೊಂಡಿರುವ ಖಾಸಗಿ ಶಿಕ್ಷಣ ಸಂಸ್ಥೆಗಳು ಮಕ್ಕಳಿಗೆ ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಸುತ್ತೇವೆ ಎಂದು ಹೇಳಿಕೊಂಡು ಪೋಷಕರಿಂದ ಹಣ ಸುಲಿಗೆ ಮಾಡುವ ಕಾರ್ಯಕ್ಕೆ ಮುಂದಾಗಿವೆ. ಆದರೆ ಖಾಸಗಿ ಶಿಕ್ಷಣ ಸಂಸ್ಥೆಗಳು ಹೀಗೆ ಸುಪ್ರೀಂಕೋರ್ಟ್‌ನ ತೀರ್ಪನ್ನು ಪ್ರಧಾನವಾಗಿಸಿಕೊಂಡು ಇಂಗ್ಲಿಶ್‌ನಲ್ಲಿ ಕಲಿಸುತ್ತಿರುವುದರಿಂದ ಮತ್ತು ಮಾತೃಭಾಷಾ ಮಧ್ಯಮದಲ್ಲಿ ಕಲಿತರೆ ಉನ್ನತ ಶಿಕ್ಷಣ, ಉದ್ಯೋಗಕ್ಕೆ ಕಷ್ಟ ಎಂಬ ಕಾರಣಕ್ಕಾಗಿ ಇಂಗ್ಲಿಶ್‌ನಲ್ಲಿ ಕಲಿಯುತ್ತಿರುವುದರಿಂದ ಉದ್ಭವಿಸಿರುವ ಸಮಸ್ಯೆಗಳೇನು? ಎಂಬ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಏಕೆಂದರೆ ಖಾಸಗಿ ಇಂಗ್ಲಿಶ್ ಮಾಧ್ಯಮದ ಶಿಕ್ಷಣ ಸಂಸ್ಥೆಗಳು ಲಾಭವನ್ನೇ ಪ್ರಧಾನವಾಗಿಸಿಕೊಂಡು ಆರಂಭಗೊಂಡಿರುವುದರಿಂದ ರಾಜ್ಯದಲ್ಲಿರುವ ಎಲ್ಲಾ ಖಾಸಗಿ ಇಂಗ್ಲಿಶ್ ಮಾಧ್ಯಮದ ಶಿಕ್ಷಣ ಸಂಸ್ಥೆಗಳು ಮಕ್ಕಳಿಗೆ ಗುಣಮಟ್ಟದ ಶಿಕ್ಷಣ, ಪೋಷಕರ ನಿರೀಕ್ಷೆಗೆ ತಕ್ಕನಾಗಿ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸಲು ಪ್ರಾಮಾಣಿಕವಾಗಿ ದುಡಿಯುತ್ತಿಲ್ಲ. ಹೀಗಾಗಿ ಖಾಸಗಿ ಇಂಗ್ಲಿಶ್‌ಮಾಧ್ಯಮದ ಶಿಕ್ಷಣ ಸಂಸ್ಥೆಗಳು ಮಕ್ಕಳಲ್ಲಿ ಸ್ವತಂತ್ರ ಆಲೋಚನಾ ಕ್ರಮ, ನೈತಿಕ ಮೌಲ್ಯಗಳು, ಆದರ್ಶ ವ್ಯಕ್ತಿತ್ವ ಬೆಳೆಸುವುದರ ಬದಲಾಗಿ ತಮ್ಮ ಆದಾಯ ಹೆಚ್ಚಿಸಿಕೊಳ್ಳುವ ಬಗೆ ಹೇಗೆ, ಯಾವ ತಂತ್ರವನ್ನು ಅನುಸರಿಸಿದರೆ ವಿದ್ಯಾರ್ಥಿಗಳನ್ನು ನಮ್ಮ ಶಾಲೆಗಳ ಕಡೆಗೆ ಆಕರ್ಷಿಸಬಹುದು ಎಂಬುದರ ಕಡೆಗೆ ಆಸಕ್ತಿ ವಹಿಸಿವೆ. ಇದರಿಂದಾಗಿ ರಾಜ್ಯದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳೆಂಬ ವ್ಯತ್ಯಾಸವಿಲ್ಲದೆ ಹುಟ್ಟಿಕೊಂಡಿರುವ ಖಾಸಗಿ ಇಂಗ್ಲಿಶ್ ಭಾಷಾಮಾಧ್ಯಮದ ಎಲ್ಲಾ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳೂ ಇಲ್ಲ. ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣವೂ ಇಲ್ಲ. ಇವು ಸರ್ಕಾರಿ ಶಾಲೆಗಳಿಗಿಂತಲೂ ಕೆಟ್ಟ ಸ್ಥಿತಿಯಲ್ಲಿವೆ.

ಏಕೆಂದರೆ ಹಣ ಮಾಡಬೇಕೆಂಬ ದುರಾಸೆಗೆ ಬಿದ್ದಿರುವ ವ್ಯಕ್ತಿಗಳಲ್ಲಿ ಕೆಲವರು ವೈಯಕ್ತಿಕವಾಗಿ, ಮತ್ತೆ ಕೆಲವರು ಒಟ್ಟುಗೂಡಿ ಒಂದು ಮಂಡಳಿಯನ್ನು ರಚಿಸಿಕೊಂಡು ತಮಗೆ ಪರಿಚಿತರಿರುವ ರಾಜಕಾರಣಿಗಳ ಪ್ರಭಾವ ಬಳಸಿ ಇಂಗ್ಲಿಶ್ ಮಾಧ್ಯಮದ ಹೆಸರಿನಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿವೆ. ಈ ಶಿಕ್ಷಣ ಸಂಸ್ಥೆಗಳ ಮಾಲೀಕರು ಅಥವಾ ಆಡಳಿತ ಮಂಡಳಿಗಳಿಗೆ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ನೀಡಲು ಅಗತ್ಯವಾದ ಪೂರಕ ವಾತಾವರಣವನ್ನು ನಿರ್ಮಾಣ ಮಾಡಲು ಆರ್ಥಿಕ ಶಕ್ತಿ ಇಲ್ಲ. ಆದರೂ ಕಡಿಮೆ ಹಣ ಹೂಡಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿ ಅದರಲ್ಲಿಯೇ

ಲಾಭ ಮಾಡಿ, ಶಾಲೆಗಳನ್ನು ಅಭಿವೃದ್ಧಿಪಡಿಸಿ ತಾವು ಅಭಿವೃದ್ಧಿಯಾಗುವ ಯೋಜನೆ ಇಂಗ್ಲಿಶ್ ಮಾಧ್ಯಮದ ಶಿಕ್ಷಣ ಸಂಸ್ಥೆಗಳ ಆಡಳಿತಗಾರರದ್ದಾಗಿದೆ. ಹೀಗಾಗಿ ಕರ್ನಾಟಕದಲ್ಲಿ ಇಂಗ್ಲಿಶ್ ಮಾಧ್ಯಮದ ಶಾಲೆಗಳ ಸ್ಥಿತಿ ಮತ್ತು ಪೋಷಕರ ಮನಃಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಿರುವ ಡಿ. ಆರ್. ನಾಗರಾಜ್ ರವರು ಇದನ್ನು ಈ ರೀತಿ ವಿವರಿಸುತ್ತಾರೆ. 'ಇವತ್ತು ಕರ್ನಾಟಕದ ಚಿಕ್ಕಪುಟ್ಟ ಊರುಗಳನ್ನು ಭೇಟಿ ನೀಡಿದರೆ ವಾಸ್ತವದ ಸ್ಪಷ್ಟ ಚಿತ್ರಣ ಸಿಗುತ್ತದೆ. ಹಳ್ಳಿಗಳಲ್ಲೂ ಇದು ವಾಸ್ತವವಾಗಿ ಬಿಟ್ಟಿದೆ. ಇಂಗ್ಲಿಷ್ ಒಂದು ಮಹತ್ತರ ಭರವಸೆ, ಕನಸು. ಈ ಇಂಗ್ಲಿಷ್ ಮೀಡಿಯಂ ಶಾಲೆಗಳೆಂದರೆ ಎಂಥವು? ನಾನು ಹೋಗಿದ್ದ ಊರಿನ ಇಂಗ್ಲಿಷ್ ಮೀಡಿಯಂ ಸ್ಕೂಲ್‌ಗಳಂತೂ ಚಿಕ್ಕಚಿಕ್ಕ ಹಳೆಯ ಕಾಲದ ಮನೆಗಳಲ್ಲಿವೆ. ಶಾಲೆ ಅಂತ ಮಾತ್ರ ಅನಿಸುವುದಿಲ್ಲ. ಸಾರಾಯಿ ಅಂಗಡಿ, ಸೂಳೆ ಮನೆ, ಕದ್ದಾಡುವ ಇಸ್ಪೀಟ್ ಮನೆ, ಮಿಲಿಟರಿ ಹೋಟೆಲ್–ಹೀಗೆ ಇವು ಶಾಲೆಬಿಟ್ಟು ಇಂದು ಬೇರೆ ಯಾವುದಕ್ಕೆ ಬೇಕಾದರೂ ಬಳಸಬಹುದಾದ ಕಟ್ಟಡಗಳು.'[೨೫]

ಇದರಿಂದಾಗಿ ಅರ್ಹರನ್ನು ಶಾಲೆಗಳಿಗೆ ಶಿಕ್ಷಕರನ್ನಾಗಿ ನೇಮಕ ಮಾಡಿಕೊಂಡರೆ ಹೆಚ್ಚಿನ ಸಂಬಳ ಕೊಡಬೇಕಾಗುತ್ತದೆ ಎಂಬ ಕಾರಣಕ್ಕಾಗಿ ಅನರ್ಹರನ್ನು ಶಿಕ್ಷಕರನ್ನಾಗಿ ನೇಮಕ ಮಾಡಿಕೊಂಡಿವೆ. ಹೀಗಾಗಿ ಬೆಂಗಳೂರು ನಗರ ಮತ್ತು ರಾಜ್ಯದ ಇತರ ಕೆಲವು ನಗರ ಪ್ರದೇಶಗಳ ಪ್ರತಿಷ್ಠಿತ ಇಂಗ್ಲಿಶ್ ಮಾಧ್ಯಮದ ಶಾಲೆಗಳನ್ನು ಹೊರತುಪಡಿಸಿದರೆ ಉಳಿದಂತೆ ರಾಜ್ಯದ ಬಹುತೇಕ ಇಂಗ್ಲಿಶ್ ಮಾಧ್ಯಮದ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಕರಾಗಿ ಕೆಲಸ ನಿರ್ವಹಿಸುತ್ತಿರುವವರಿಗೆ ಇಂಗ್ಲಿಶ್ ಭಾಷೆಯ ಸಾಮಾನ್ಯಜ್ಞಾನವೇ ಇಲ್ಲ. ಇಲ್ಲಿನ ಇನ್ನೊಂದು ವಿಪರ್ಯಾಸವೆಂದರೆ ಕೆಲವು ಖಾಸಗಿ ಇಂಗ್ಲಿಶ್ ಮಾಧ್ಯಮದ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿರುವವರು ಶಾಲಾಶಿಕ್ಷಕರಾಗಿ ಕರ್ತವ್ಯ ನಿರ್ವಹಿಸಲು ಕನಿಷ್ಠ ವಿದ್ಯಾರ್ಹತೆಯಾದ ಡಿಎಡ್, ಬಿಎಡ್‌ಗಳಲ್ಲಿ ಉನ್ನತ ದರ್ಜೆಯಲ್ಲಿ ಉತ್ತೀರ್ಣವಾಗುವುದು ಬೇಡ, ಸಾಮಾನ್ಯ ದರ್ಜೆಯಲ್ಲಿಯೂ ಪಾಸಾಗಿದ್ದರೂ ಸಾಕಿತ್ತು. ಅದೂ ಆಗದೆ ಪಿಯುಸಿ, ಪದವಿ ತರಗತಿಯ ಪರೀಕ್ಷೆಗಳಲ್ಲಿ ಅನುತ್ತೀರ್ಣರಾಗಿ ಮನೆಯಲ್ಲಿ ಇದ್ದವರು ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದಾರೆ. ಇನ್ನು ವಿಜ್ಞಾನದ ಶಿಕ್ಷಕರಿಗಂತೂ "ವಿಜ್ಞಾನದ ಮೂಲಭೂತ ತತ್ವಗಳು ಅವರಿಗೆ ಅರ್ಥವಾಗಿಯೇ ಇರುವುದಿಲ್ಲ. ಅವರು ಬೋಧಿಸುವುದೆಲ್ಲ ತರ್ಕರಹಿತ ಮೂಢಸಿದ್ಧಾಂತ, ಅಂಧ ಕಾರ್ಯವಿಧಾನ ತಂತ್ರಗುಚ್ಚ. ಸ್ಥಳೀಯ ಭಾಷೆಯ ಬದಲು ಅಂತರಾಷ್ಟ್ರೀಯ ಭಾಷಾಮಾಧ್ಯಮದ ಮೂಲಕ ಇದನ್ನು ಬೋಧಿಸಿದ್ದಾದರೆ, ಹಾಗೆ ಕಲಿತದ್ದನ್ನು ಸ್ಥಳೀಯ ಪರಿಸ್ಥಿತಿಗೆ ಲಾಭಪ್ರದವಾಗಿ ಅನ್ವಯಿಸಲು ಸಾಧ್ಯವಾಗದೇ ಅಪಾಯ ಇನ್ನೂ[೨೬] ಅಧಿಕವಾಗಿರುತ್ತದೆ.

ಹೀಗಿದ್ದೂ ಕರ್ನಾಟಕದ ಶಿಕ್ಷಣ ಪದ್ಧತಿಯಲ್ಲಿ ವಿಜ್ಞಾನದ ವಿಷಯಗಳನ್ನು ಇಂಗ್ಲಿಶ್‌ನಲ್ಲಿಯೇ ಕಲಿಸಲಾಗುತ್ತಿದೆ. ಇದಕ್ಕೆ ಖಾಸಗಿ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳು ಮತ್ತು ಮಾಲೀಕರ ಬೆಂಬಲವು ಇದೆ. ಏಕೆಂದರೆ ತಮ್ಮ ಶಾಲೆಗಳಿಗೆ ಸಮರ್ಥರನ್ನು ಅಂದರೆ ಪ್ರತಿಭಾವಂತರು, ಅನುಭವ ಇರುವವರನ್ನು ಶಿಕ್ಷಕರನ್ನಾಗಿ ನೇಮಕ ಮಾಡಿಕೊಂಡರೆ ಅವರಿಗೆ ಹೆಚ್ಚಿನ ವೇತನ ನೀಡಬೇಕು. ಇದು ತಮಗೆ ಆರ್ಥಿಕ ಹೊರೆಯಾಗುತ್ತದೆ. ಕನಿಷ್ಠ ವಿದ್ಯಾರ್ಹತೆಯೂ ಇಲ್ಲದ, ಅನನುಭವಿಗಳನ್ನು,

ಪ್ರತಿಭಾವಂತರಲ್ಲದವರನ್ನು ನೇಮಕ ಮಾಡಿಕೊಂಡರೆ ಅವರಿಗೆ ಹೆಚ್ಚಿನ ವೇತನ ಕೊಡಬೇಕಾದ ಅಗತ್ಯ ಇರುವುದಿಲ್ಲ. ಇವರು ನಾವು ಹೇಳಿದ ಹಾಗೆ ಕೇಳುತ್ತಾರೆ. ಅವರಿಂದ ಬೋಧನೆ ಜೊತೆಗೆ ಶಾಲೆಯ ಇತರ ಕೆಲಸಗಳನ್ನು ಮಾಡಿಸಿಕೊಳ್ಳಬಹುದು. ಪ್ರತಿಭಾವಂತರನ್ನು ನೇಮಕ ಮಾಡಿಕೊಂಡರೆ ಹೆಚ್ಚಿನ ವೇತನ ಕೊಡಬೇಕು. ಕೊಡದಿದ್ದರೆ ಶಾಲೆಯನ್ನು ತ್ಯಜಿಸಿ ಹೆಚ್ಚಿನ ವೇತನ ಕೊಡುವ ಶಾಲೆಗಳಿಗೆ ಹೋಗುತ್ತಾರೆ. ಇಲ್ಲವೆ ಇತರ ವೃತ್ತಿಗಳಲ್ಲಿ ತೊಡಗುತ್ತಾರೆ. ಇವರು ತಾವು ಹೇಳಿದ ಹಾಗೆ ಕೇಳದೆ ಶಾಲೆಯ ಎಲ್ಲಾ ಕೆಲಸಗಳನ್ನು ಮಾಡದೆ ದೂರ ಉಳಿಯುತ್ತಾರೆ. ಇದಕ್ಕಾಗಿ ನಾವು ಹೆಚ್ಚಿನ ನೌಕರರನ್ನು ನೇಮಕ ಮಾಡಿಕೊಳ್ಳಬೇಕಾಗುತ್ತದೆ. ಅನರ್ಹರನ್ನು ನೇಮಕ ಮಾಡಿಕೊಂಡರೆ ಇಂತಹ ಸಮಸ್ಯೆಗಳು ಇರುವುದಿಲ್ಲ ಎಂದು ಖಾಸಗಿ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳು ಅಥವಾ ಮಾಲೀಕರು ಕನಿಷ್ಠ ವಿದ್ಯಾರ್ಹತೆಯೂ ಇಲ್ಲದವರನ್ನು ಶಿಕ್ಷಕರನ್ನಾಗಿ ನೇಮಕ ಮಾಡಿಕೊಂಡಿವೆ.

ಇವುಗಳನ್ನು ಗಮನಿಸಿ ಶಿಕ್ಷಣ ಸಚಿವರು ಕ್ರಮಕೈಗೊಳ್ಳುವಂತೆ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಯ ಕಾರ್ಯದರ್ಶಿಯವರಿಗೆ ಸೂಚಿಸಿದ್ದಾರೆ. ಆ ಪ್ರಕಾರವಾಗಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಯ ಕಾರ್ಯದರ್ಶಿಯಾಗಿದ್ದ ತ.ಮ.ವಿಜಯಭಾಸ್ಕರ್ ರವರು ದಿನಾಂಕ ೮-೬-೨೦೦೬ರಂದು ಅರ್ಜಿಸಂಖ್ಯೆ: ಇಡಿ ೧೦೬ ಪಿಜಿಸಿ ೨೦೦೬ ರಲ್ಲಿ ಒಂದು ಸುತ್ತೋಲೆಯನ್ನು ಹೊರಡಿಸಿದ್ದಾರೆ. ಇದರಲ್ಲಿ ಶಿಕ್ಷಣ ಸಚಿವರಿಂದ ಬಂದ ಆದೇಶವನ್ನು ಈ ರೀತಿ ಉಲ್ಲೇಖಿಸಿದ್ದಾರೆ. 'ಕೂಡಲೆ ಅಧಿಕಾರಿಗಳ ತಂಡವನ್ನು ಶಾಲೆಗಳಿಗೆ ಕಳುಹಿಸಿ ನೇಮಕಾತಿ ಹೊಂದಿದ ಶಿಕ್ಷಕರ ಸೇವಾ ಪರಿಶೀಲನೆ, ಅವರು ಪಾಸಾದ ಸಂಸ್ಥೆ ಹಾಗೂ ಭಾಷಾಮಾಧ್ಯಮ ಪರಿಶೀಲಿಸುವುದು.' ಖಾಸಗಿ ಶಿಕ್ಷಣ ಸಂಸ್ಥೆಗಳು ಭಾಷಾಮಾಧ್ಯಮದ ಹೆಸರಿನಲ್ಲಿ ಶಿಕ್ಷಣ ಸಂಸ್ಥೆಗಳನ್ನು ತೆರೆದು ಅನಧಿಕೃತವಾಗಿ ಶಿಕ್ಷಕರುಗಳನ್ನು ನೇಮಕ ಮಾಡಿ ಶಿಕ್ಷಕರುಗಳಿಗೆ ಉತ್ತಮ ವೇತನಗಳನ್ನು ನೀಡದೆ, ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣವನ್ನು ನೀಡದೆ ವಂಚಿಸುತ್ತಿವೆ. ಇಂತಹ ಅವ್ಯವಸ್ಥೆ ಇಂದು ಕರ್ನಾಟಕದ ನಗರ ಮತ್ತು ಗ್ರಾಮೀಣ ಪ್ರದೇಶಗಳೆಂಬ ವ್ಯತ್ಯಾಸಗಳಿಲ್ಲದೆ ಎಲ್ಲಾ ಕಡೆಯೂ ಹರಡಿದೆ. ಖಾಸಗಿ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಗಳು ಅಥವಾ ಮಾಲೀಕರಲ್ಲಿರುವ ಇಂತಹ ಲೆಕ್ಕಾಚಾರಗಳನ್ನು ಅರ್ಥಮಾಡಿಕೊಳ್ಳದ ಪೋಷಕರು ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ತಮ್ಮ ಮಕ್ಕಳನ್ನು ಸೇರಿಸಿದರೆ ಅವರ ಭವಿಷ್ಯ ಉತ್ತಮವಾಗಿರುತ್ತದೆ ಎಂಬ ಆಸೆಯಿಂದ ಇಂಗ್ಲಿಶ್‌ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿದ್ದಾರೆ. ಆದರೆ ಇದುವರೆಗೆ ಚರ್ಚಿಸಿದ ಕಾರಣಗಳಿಂದಾಗಿ ಮಕ್ಕಳು ಇಂಗ್ಲಿಶ್ ಭಾಷಾಮಾಧ್ಯಮದಲ್ಲಿ ಕಲಿಯುವುದಿರಲಿ, ಇಂಗ್ಲಿಶ್‌ನ್ನು ಕಲಿಯಲು ಸಾಧ್ಯವಾಗದೆ ಕಲಿಕೆಯಲ್ಲಿ ಹಿಂದೆ ಉಳಿದುಕೊಂಡಿದ್ದಾರೆ.

ಇಂತಹ ಸಂದರ್ಭದಲ್ಲಿ ಆರ್ಥಿಕವಾಗಿ ಸದೃಢವಾಗಿರುವ ಪೋಷಕರು ಹೆಚ್ಚು ಹಣ ವ್ಯಯಿಸಿ ತಮ್ಮ ಮಕ್ಕಳನ್ನು ಮನೆಪಾಠಗಳಿಗೆ ಸೇರಿಸಿದ್ದಾರೆ. ಆದರೆ ಕೂಲಿ ಮಾಡಿ ಜೀವನ ಸಾಗಿಸುತ್ತಿದ್ದ ಬಡಕುಟುಂಬಗಳಿಗೆ ಸೇರಿದ ಪೋಷಕರು ತಮ್ಮ ದುಡಿಮೆಯ ಇಡೀ ಆದಾಯವನ್ನು ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ಶುಲ್ಕದ ರೂಪದಲ್ಲಿ ಕಟ್ಟಲು ಸಾಧ್ಯವಾಗದೆ ಅತಂತ್ರ ಸ್ಥಿತಿಗೆ ಒಳಗಾಗಿದ್ದಾರೆ. ಹೀಗಿದ್ದರೂ ಈ ಕುಟುಂಬಗಳಿಗೆ ಸೇರಿದ ಮಕ್ಕಳು ಇಂಗ್ಲಿಶ್‌ಮಾಧ್ಯಮದ ಶಾಲೆಗಳಿಗೆ ದಾಖಲಾದ

ಕಾರಣದಿಂದಾಗಿ ಶಿಕ್ಷಣದಲ್ಲಿ ಇಂಗ್ಲಿಶ್ ಬೋಧನೆಯನ್ನು ಅರಗಿಸಿಕೊಳ್ಳಲು ಸಾಧ್ಯವಾಗದೆ ಗೊಂದಲಕ್ಕೆ ಒಳಗಾಗಿ ಕಲಿಕೆಯಲ್ಲಿ ಹಿಂದೆ ಉಳಿದಿದ್ದಾರೆ. ಮಕ್ಕಳು ಹೀಗೆ ಕಲಿಕೆಯಲ್ಲಿ ಹಿಂದೆ ಉಳಿದುಕೊಂಡಾಗ ಕೆಲವು ಪೋಷಕರು ಸಾಲ ಮಾಡಿ ತಮ್ಮ ಮಕ್ಕಳನ್ನು ಮನೆಪಾಠಗಳಿಗೆ ಸೇರಿಸುವ ಮೂಲಕ ಈ ಸಮಸ್ಯೆಯನ್ನು ಪರಿಹರಿಸುವ ಕೆಲಸ ಮಾಡಿದ್ದಾರೆ. ಮತ್ತೆ ಈ ಸಾಲಕ್ಕೆ ಬಡ್ಡಿ, ಚಕ್ರಬಡ್ಡಿ ಬೆಳೆದು ಅದನ್ನು ತೀರಿಸಲಾಗದೆ ತಮ್ಮಲ್ಲಿದ್ದ ಆಸ್ತಿ, ಒಡವೆಗಳನ್ನು ಒತ್ತೆಯಿಟ್ಟಿದ್ದಾರೆ. ಅದರಿಂದಲೂ ಹಣ ಹೊಂದಿಸಲು ಸಾಧ್ಯವಾಗದೆ ಆಸ್ತಿ, ಒಡವೆಗಳನ್ನು ಮಾರಿ ಸಾಲ ತೀರಿಸಿದ್ದಾರೆ. ಹೀಗೆ ಬಡಕುಟುಂಬಗಳಿಗೆ ಸೇರಿದ ಪೋಷಕರು ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಸಲು ಹೋಗಿ ತೀವ್ರ ಆರ್ಥಿಕವಾಗಿ ಸಂಕಷ್ಟಕ್ಕೆ ಒಳಗಾಗಿದ್ದಾರೆ.

ಇಷ್ಟೆಲ್ಲಾ ಕಷ್ಟಪಟ್ಟು ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಸಲು ಸಾಧ್ಯವಾಗದ ಪೋಷಕರು ಖಾಸಗಿ ಶಾಲೆಗಳಿಂದ ಸರ್ಕಾರಿ ಶಾಲೆಗಳಿಗೆ ಬದಲಾಯಿಸಿದ್ದಾರೆ. ಆದರೆ ಹೀಗೆ ಪೋಷಕರು ತಮ್ಮ ಆರ್ಥಿಕ ಕಾರಣದಿಂದ ಮಕ್ಕಳ ಕಲಿಕಾಮಾಧ್ಯಮವನ್ನು ಬದಲಾಯಿಸಿರುವಾಗ ಕಲಿಕೆಯಲ್ಲಿ ಹಿನ್ನೆಡೆ ಅನುಭವಿಸಿದ್ದಾರೆ. ಇನ್ನು ಮನೆಪಾಠಗಳಿಗೆ ಕಳುಹಿಸಿದರೂ ಇಂಗ್ಲಿಶ್ ಮಾಧ್ಯಮದ ಕಲಿಕೆಯಲ್ಲಿ ಅಭಿವೃದ್ಧಿ ಕಾಣದ ವಿದ್ಯಾರ್ಥಿಗಳನ್ನು ಭಾಷಾಮಾಧ್ಯಮದ ಕಾರಣದಿಂದಾಗಿ ಕಲಿಕೆಯಲ್ಲಿ ಹಿಂದೆ ಉಳಿದುಕೊಂಡಿದ್ದಾರೆ, ಪರೀಕ್ಷೆಯಲ್ಲಿ ಅನುತ್ತೀರ್ಣ ಗೊಂಡಿದ್ದಾರೆ ಎಂದು ಅವರ ಕಲಿಕಾ ಮಾಧ್ಯಮವನ್ನು ಇಂಗ್ಲಿಶ್‌ನಿಂದ ಕನ್ನಡಕ್ಕೆ ಬದಲಾಯಿಸಿದ್ದಾರೆ. ಏಕೆಂದರೆ ಅನ್ಯಭಾಷಾಮಾಧ್ಯಮದ ಮೂಲಕ ಮಗುವಿಗೆ ಶಿಕ್ಷಣ ಕಲಿಸುವಾಗ ಶಾಲೆಯಲ್ಲಿ ಅದಕ್ಕೆ ಪೂರಕವಾದ ಭಾಷಾಪರಿಸರ ಇರಬೇಕಾಗುತ್ತದೆ. ಇಲ್ಲವೆ ಆ ಭಾಷೆಯನ್ನು ಮನೆಯಲ್ಲಿ ಅಥವಾ ಪರಿಸರದಲ್ಲಿ ನಿತ್ಯವ್ಯವಹಾರದ ಭಾಷೆಯಾಗಿ ಮಗು ಬಳಸುತ್ತಾ ಇರಬೇಕಾಗುತ್ತದೆ. ಇಂತಹ ಭಾಷಾಪರಿಸರ ಇಲ್ಲದೆ ಇದ್ದಾಗಲು ಇಂಗ್ಲಿಶ್ ಭಾಷೆಯ ಕಲಿಕೆಯ ಅಗತ್ಯವಿದೆ ಎಂದು ಒತ್ತಾಯ ಪೂರ್ವಕವಾಗಿ ಇಂಗ್ಲಿಶ್‌ನಲ್ಲಿ ಕಲಿಸುವುದು ಅವೈಜ್ಞಾನಿಕವಾದುದು. ಈ ರೀತಿ ಮಕ್ಕಳಿಗೆ ಒತ್ತಾಯಪೂರ್ವಕವಾಗಿ ಇಂಗ್ಲಿಶ್ ಮಾಧ್ಯಮದ ಮೂಲಕ ಶಿಕ್ಷಣ ಕಲಿಸುತ್ತಾ ಹೋದರೆ ಮಕ್ಕಳಿಗೆ ತರಗತಿಗಳಲ್ಲಿ ಏನಾಗುತ್ತಿದೆ, ಶಿಕ್ಷಕರು ಏನನ್ನು ಹೇಳುತ್ತಿದ್ದಾರೆ ಎಂಬುದರ ಅರಿವೇ ಇರುವುದಿಲ್ಲ. ಇದರಿಂದ ಮಗು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿತು ಬದುಕು ಕಟ್ಟಿಕೊಳ್ಳುವುದಕ್ಕಿಂದ ತನ್ನಲ್ಲಿರುವ ಪ್ರತಿಭೆಯನ್ನು ಕಳೆದುಕೊಳ್ಳುವುದೇ ಹೆಚ್ಚು.

ಹೀಗಾಗಿ ಒತ್ತಡದ ಕಲಿಕೆಯ ದುಷ್ಪರಿಣಾಮವನ್ನು ಕುರಿತು ದೆಹಲಿ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರಾದ ರಮಾಕಾಂತ ಅಗ್ನಿಹೋತ್ರಿಯವರು ಈ ರೀತಿ ಹೇಳುತ್ತಾರೆ. "It is a common experience that languages of children in the school are ignored. Ii is assumed that all education can/should take place through the dominant regional or official languages of the state. The vernacular voices of children are silenced and more often than not they do not understand what is going on in the classroom. The consequences of such a scenario shoud be obvious and are there for everybody to see."

"The dropout rate from class 1 to 5 and from class 6 to 8 continues to remain very high and the general levels of school achievement are miserabally low. Even today, of the total number of children who enrol in schools in class 1, very few manage to complete the middle school or the high school. In fact, accordingly to the government's own estimates, about 11 percent children dropout after class 1 itself and about 16 percent children dropout after class 5. The state-specific transition rate from primary to upper primary-class 6-is 83 percent for the whole country. In some of the large states such as Uttar Pradesh and Bihar, it is between 60 and 70 percent.[27]"

ಹೀಗಾಗಿ "ಇಂಗ್ಲಿಷ್ ಮಾಧ್ಯಮವನ್ನುಳಿಸಿಕೊಳ್ಳಬೇಕೆಂಬುದು ಪಟ್ಟಭದ್ರ ಹಿತಾಸಕ್ತಿಗಳ ಹತಾಶ ಪ್ರಯತ್ನವಾಗಿದೆ. ಇಂಗ್ಲಿಷ್ ಬೇಡವೆಂದಲ್ಲ, ಯಾರಿಗೆ ಬೇಕು, ಎಷ್ಟು ಬೇಕು ಎಂಬುದು ಮುಖ್ಯವಾದ ಪ್ರಶ್ನೆ. ಕೇವಲ ಹಿಡಿಮಂದಿಯ ಸುಖಸ್ವಾರ್ಥಗಳಿಗಾಗಿ ಇಂಗ್ಲಿಷಿನ ವದ್ಯಪೀಠದ ಮೇಲೆ ಕೋಟ್ಯಾಂತರ ಜನತೆಯ ಕಲ್ಯಾಣದ ಮಾರಣ ಹೋಮವಾಗುತ್ತಿರುವುದು ಪ್ರಜಾಪ್ರಭುತ್ವ ತತ್ವದ ಬುಡಕ್ಕೆ ಕಂಟಕಪ್ರಾಯವಾಗಿದೆ.[೨೮]" ಎನ್ನುತ್ತಾರೆ ಕುವೆಂಪುರವರು. ಕುವೆಂಪುರವರ ಈ ಚಿಂತನೆಗಳ ಬಗೆಗೆ ತಮ್ಮ ಮಕ್ಕಳು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯಬೇಕು ಎಂದು ಆಸಕ್ತಿ ಹೊಂದಿರುವ ಪೋಷಕರಾಗಲಿ, ಶಿಕ್ಷಣ ತಜ್ಞರಾಗಲಿ ಇದುವರೆಗೆ ಅಷ್ಟು ಸೂಕ್ಷ್ಮವಾಗಿ ಚಿಂತಿಸಿಲ್ಲ. ಇವರಲ್ಲಿ ಕೆಲವು ವಿದ್ಯಾವಂತ ಪೋಷಕರನ್ನು ಹೊರತು ಪಡಿಸಿದರೆ ಉಳಿದವರಿಗೆ ತಮ್ಮ ಮಕ್ಕಳನ್ನು ಸೇರಿಸುವ ಶಾಲೆಯಲ್ಲಿನ ಬೋಧನ ಗುಣಮಟ್ಟ ಅಳೆಯುವ ಶಕ್ತಿ ಇಲ್ಲ. ಇವರಿಗೆ ತಮ್ಮ ಮಕ್ಕಳು ಇಂಗ್ಲಿಶ್ ಮಾಧ್ಯಮದ ಶಾಲೆಯಲ್ಲಿ ಕಲಿಯುತ್ತಿದ್ದಾರೆ ಎನ್ನುವುದು ಬಿಟ್ಟರೆ ಅಲ್ಲಿನ ಶಿಕ್ಷಣ, ಗುಣಮಟ್ಟ, ಶಿಕ್ಷಣದಲ್ಲಿ ಭಾಷೆ, ಭಾಷಾಮಾಧ್ಯಮ, ಅವುಗಳ ಸಮಸ್ಯೆ, ತಮ್ಮ ಮಕ್ಕಳ ಕಲಿಕೆಯಲ್ಲಿ ಹೊಂದಿರುವ ಪ್ರಗತಿ, ಕಲಿಕೆಯ ಸಂದರ್ಭದಲ್ಲಿ ತಮ್ಮ ಮಕ್ಕಳಿಗೆ ಎದುರಾಗುವ ಭಾಷಾಸಮಸ್ಯೆ, ಅವುಗಲ ಪರಿಹಾರಕ್ಕೆ ತಾವು ಮಾಡಬೇಕಾದ ಕೆಲಸ ಇತ್ಯಾದಿ ವಿಚಾರಗಳ ಬಗೆಗೆ ಆಲೋಚನೆ ಸಾಮರ್ಥ್ಯ ಇಲ್ಲ. ಪೋಷಕರಿಗೆ ತಮ್ಮ ಮಕ್ಕಳನ್ನು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಸುವುದೇ ಒಂದು ಪ್ರತಿಷ್ಠೆಯಾಗಿದೆ. ಇಂತಹ ಮನಃಸ್ಥಿತಿ ಹೊಂದಿರುವ ಪೋಷಕರು ತಮ್ಮ ಮಕ್ಕಳು ಇಂಗ್ಲಿಶ್ ಮಾಧ್ಯಮದ ಶಾಲೆಗಳಲ್ಲಿ ಕಲಿಯುವಾಗ ಹಿಂದೆ ಉಳಿದುಕೊಂಡರೆ ಅದಕ್ಕೆ ಭಾಷಾಸಮಸ್ಯೆ ಕಾರಣವಿರಬಹುದು, ಸ್ವಲ್ಪದಿನಗಳು ಕಳೆದರೆ ಹೊಂದಿಕೊಂಡು ಸರಿಹೋಗುತ್ತಾರೆ ಎಂದು ಸುಮ್ಮನಾಗಿದ್ದಾರೆ. ಅದೇ ಮಾತೃಭಾಷಾಮಾಧ್ಯಮದ ಶಾಲೆಗಳಲ್ಲಿ ಕಲಿಯುವಾಗ ಮಕ್ಕಳು ಕಲಿಕೆಯಲ್ಲಿ ಹಿಂದೆ ಉಳಿದುಕೊಂಡರೆ ಇದಕ್ಕೇ ಸರ್ಕಾರಿ ಶಾಲೆಯಲ್ಲಿನ ಬೋಧನೆಯ ಗುಣಮಟ್ಟ ಸರಿಯಿಲ್ಲವೆಂದು ದೂರಿದ್ದಾರೆ. ಇದು ಇಂಗ್ಲಿಶ್ ಮಾಧ್ಯಮದ ಶಾಲೆಗಳ ಕಳಪೆ ಗುಣಮಟ್ಟದ ಸಮರ್ಥನೆಗೆ ಕಾರಣವಾಗಿದೆ. ಆದರೆ ಕನ್ನಡ ಅಥವಾ ಮಾತೃಭಾಷಾಮಾಧ್ಯಮ ಶಾಲೆಗಳಿಗೆ ಇಂತಹ ಸಮರ್ಥನೆಗಳು ಇಲ್ಲ.

ಖಾಸಗಿ ಇಂಗ್ಲಿಶ್ ಮಾಧ್ಯಮದ ಶಿಕ್ಷಣ ಸಂಸ್ಥೆಗಳಿಗೆ ಇರುವ ಇಂತಹ ಸಮರ್ಥನೆಗಳ ಜೊತೆಯಲ್ಲಿಯೇ ಇಂಗ್ಲಿಶ್ ಮಾಧ್ಯಮದ ಶಾಲೆಗಳಲ್ಲಿ ಕಲಿಯಲು ಕೆಲವು ಸಮಸ್ಯೆಗಳು ಇವೆ.

ಅವೇನೆಂದರೆ ತಮ್ಮ ಮಕ್ಕಳಿಗೆ ಉತ್ತಮ ಗುಣಮಟ್ಟದ ಇಂಗ್ಲಿಶ್ ಶಿಕ್ಷಣ ಕಲಿಸಬೇಕಾದರೆ ಉತ್ತಮ ಬೋಧನಾ ಗುಣಮಟ್ಟ, ಮೂಲಭೂತ ಸೌಕರ್ಯ, ಮಕ್ಕಳ ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆಗೆ ಪೂರಕ ವಾತಾವರಣ ಇರುವಂತಹ ಇಂಗ್ಲಿಶ್ ಶಾಲೆಗಳನ್ನು ಆಯ್ಕೆಮಾಡಿ ದಾಖಲಿಸಬೇಕು. ಇದರ ತಿಳುವಳಿಕೆ ಪೋಷಕರಿಗೆ ಇರಬೇಕು. ಜೊತೆಗೆ ಆರ್ಥಿಕವಾಗಿ ಶ್ರೀಮಂತರಾಗಿರಬೇಕು. ಇದಕ್ಕಾಗಿ ದೂರದ ಊರುಗಳಿಗೂ ತಮ್ಮ ಮಕ್ಕಳನ್ನು ಕಳುಹಿಸಲು ಸಿದ್ಧರಿರಬೇಕು. ಇಲ್ಲದಿದ್ದರೆ ಮಕ್ಕಳಿಗೆ ಗುಣಮಟ್ಟದ ಇಂಗ್ಲಿಶ್ ಶಿಕ್ಷಣ ಕಲಿಸುವುದು ಕಷ್ಟ. ಹೀಗಾಗಿ ಆರ್ಥಿಕವಾಗಿ ಶ್ರೀಮಂತರಿರುವ ಪೋಷಕರು ತಮ್ಮ ಮಕ್ಕಳ ಭವಿಷ್ಯಕ್ಕಾಗಿ ದೂರದ ಊರುಗಳಾದರೂ ಲೆಕ್ಕಿಸದೆ, ಪ್ರತಿಷ್ಠಿತ ಇಂಗ್ಲಿಶ್ ಮಾಧ್ಯಮದ ಶಾಲೆಗಳು ನಿಗದಿಪಡಿಸಿರುವ ದುಬಾರಿ ಶುಲ್ಕ ಪಾವತಿಸಿ ತಮ್ಮ ಮಕ್ಕಳನ್ನು ಗುಣಮಟ್ಟದ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ. ಆದರೆ ಇಂತಹ ಸಾಮರ್ಥ್ಯವಿಲ್ಲದ ಪೋಷಕರು ತಾವು ವಾಸಿಸುವ ಪ್ರದೇಶದಲ್ಲಿನ ಇಂಗ್ಲಿಶ್ ಮಾಧ್ಯಮದ ಶಾಲೆಗಳಲ್ಲಿ ತಮ್ಮ ಆರ್ಥಿಕ ಶಕ್ತಿಗೆ ನಿಲುಕಿದ ಹಾಗೆ ತಮ್ಮ ಮಕ್ಕಳ ಕಲಿಕೆಗೆ ಉತ್ತಮವಾದದ್ದು ಎನಿಸಿದ್ದನ್ನು ಆಯ್ಕೆಮಾಡಿ ದಾಖಲು ಮಾಡಿಸಿದ್ದಾರೆ. ಉಳಿದಂತೆ ಬಹುತೇಕ ಪೋಷಕರು ಇಂಗ್ಲಿಶ್ ಭಾಷಾಮಾಧ್ಯಮದ ಭ್ರಮೆಯಲ್ಲಿ ತಮಗೆ ಹತ್ತಿರದಲ್ಲಿರುವ ಇಂಗ್ಲಿಶ್ ಮಾಧ್ಯಮದ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳು ಇರಲಿ, ಇಲ್ಲದಿರಲಿ, ಗುಣಮಟ್ಟದ ಶಿಕ್ಷಣ ಸಿಗಲಿ, ಸಿಗದಿರಲಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆ ಎಂಬ ಏಕೈಕ ಕಾರಣಕ್ಕಾಗಿ ತಮ್ಮ ಮಕ್ಕಳನ್ನು ದಾಖಲು ಮಾಡಿಸಿದ್ದಾರೆ. ಹೀಗಾಗಿ "ಈವತ್ತಿನ ಮೆಜಾರಿಟಿ ಶಾಲೆಗಳಲ್ಲಿ ಒಳ್ಳೆಯ ಇಂಗ್ಲಿಷನ್ನು ಕಲಿಸುವ ವ್ಯವಸ್ಥೆಯೇ ಇಲ್ಲ. ಶಿಕ್ಷಕರಿಗೇ ಇಂಗ್ಲಿಷ್ ಬರುವುದಿಲ್ಲ. ಅವರು ತಾನೆ ಏನು ಮಾಡಿಯಾರು? ನಗರದ ಅತೀ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಲ್ಲಿ ಮಾತ್ರ ಒಳ್ಳೆಯ ಇಂಗ್ಲಿಷ್ ಕಲಿಸುವ ವ್ಯವಸ್ಥೆ ಇದೆ. ಅಲ್ಲಿ ಯಾವ ಸಾಮಾನ್ಯ ಮಕ್ಕಳಿಗೂ ಪ್ರವೇಶ ದುರ್ಲಭ. ಅಧಿಕಾರದ ಪರಮ ಲಾಭ[೨೮]" ಎಂದಿದ್ದರು ನಾಡಿನ ಪ್ರಸಿದ್ಧ ಸಂಸ್ಕೃತಿ ಚಿಂತಕರಾಗಿದ್ದ ಡಿ.ಆರ್.ನಾಗರಾಜ್‌ರವರು.

ಹೀಗಾಗಿ ಕರ್ನಾಟಕದಲ್ಲಿ ಮಾತೃಭಾಷೆ ಮತ್ತು ಇಂಗ್ಲಿಶ್‌ನಲ್ಲಿ ಕಲಿಯುತ್ತಿರುವ ಮಕ್ಕಳ ನಡುವೆ ಮಾತ್ರ ಅಸಮಾನತೆ ಸೃಷ್ಟಿಯಾಗಿಲ್ಲ. ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಯುವ ಮಕ್ಕಳ ನಡುವೆಯೇ ಅಸಮಾನತೆ ಸೃಷ್ಟಿಯಾಗಿದೆ. ಏಕೆಂದರೆ ಇದುವರೆಗೆ ಚರ್ಚಿಸಿದ ಹಾಗೆ ಇಂಗ್ಲಿಶ್ ಮಾಧ್ಯಮದಲ್ಲಿ ಕಲಿಸುವ ಶಾಲೆಗಳ ನಡುವೆಯೇ ಏಕರೂಪತೆ ಇಲ್ಲ. ಇವುಗಳ ಮಾಲೀಕರು ಮತ್ತು ಆಡಳಿತ ಮಂಡಳಿಗಳ ಆರ್ಥಿಕ ಶಕ್ತಿ, ಸೇವಾ ಮನೋಭಾವಗಳ ಆಧಾರದಲ್ಲಿ ಖಾಸಗಿ ಇಂಗ್ಲಿಶ್ ಮಾಧ್ಯಮದ ಶಿಕ್ಷಣ ಸಂಸ್ಥೆಗಳಲ್ಲಿ ಗುಣಮಟ್ಟ ನಿರ್ಧಾರವಾಗಿದೆ. ಹೀಗಿದ್ದು ಕರ್ನಾಟಕದ ಇಂಗ್ಲಿಶ್ ಮಾಧ್ಯಮದಲ್ಲಿ ಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳ ಪೋಷಕರು ಖಾಸಗಿ ಶಿಕ್ಷಣ ಸಂಸ್ಥೆಗಳ ಅವ್ಯವಸ್ಥೆಯ ವಿರುದ್ಧ ಮಾತನಾಡುವಂತಹ, ಅವುಗಳನ್ನು ಪ್ರಶ್ನಿಸುವ ಧೈರ್ಯ ಮಾಡಿಲ್ಲ. ಏಕೆಂದರೆ ಈ ಶಿಕ್ಷಣ ಸಂಸ್ಥೆಗಳಲ್ಲಿ ಅವ್ಯವಸ್ಥೆಯ ವಿರುದ್ಧವಾಗಿ ಮಾತನಾಡಿದರೆ, ಪ್ರಶ್ನಿಸಿದರೆ ಆಡಳಿತ ಮಂಡಳಿಗಳು ಮತ್ತು ಶಿಕ್ಷಕರು

ತಮ್ಮ ಮಕ್ಕಳ ಮೇಲೆ ಪ್ರತಿಕಾರ ತೀರಿಸಿಕೊಳ್ಳುತ್ತಾರೆ. ಇದು ಅವರ ಭವಿಷ್ಯಕ್ಕೆ ಮಾರಕವಾಗುತ್ತದೆ ಎಂಬ ಭಯದಿಂದ ತಟಸ್ಥ ನಿಲುವು ತಳೆದಿದ್ದಾರೆ.

ಇದನ್ನು ಮೀರಿಯೂ ಕೆಲವು ಪೋಷಕರು ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿರುವ ಅವ್ಯವಸ್ಥೆಯನ್ನು ಪ್ರಶ್ನಿಸಿರುವಾಗ ನೀವು ಕಟ್ಟುವ ಶುಲ್ಕಕ್ಕೇ ನೀವು ಹೇಳಿದ ಎಲ್ಲಾ ಸೌಲಭ್ಯಗಳನ್ನು ಕೊಡುವುದಕ್ಕೆ ಆಗುತ್ತಾ. ಅದು ಆಗುವುದಿಲ್ಲ. ಅಂತಹ ಅಗತ್ಯವಿದ್ದರೆ ನಿಮ್ಮ ಮಕ್ಕಳನ್ನು ಎಲ್ಲಾ ಸೌಲಭ್ಯ ದೊರಕುವ ಶಾಲೆಗಳಿಗೆ ದಾಖಲು ಮಾಡಿ. ಅವರ ವರ್ಗಾವಣೆ ಪ್ರಮಾಣಪತ್ರ ನೀಡುತ್ತೇವೆ ಎಂದು ಅಸಡ್ಡೆಯಿಂದ ಮಾತನಾಡಿದ್ದಾರೆ. ಇದರಿಂದಾಗಿ ಪೋಷಕರು ತಮ್ಮ ಮಕ್ಕಳನ್ನು ಸಮಸ್ಯೆಗಳಿಂದ ಮುಕ್ತವಾಗಿರುವ, ಗುಣಮಟ್ಟದ ಶಿಕ್ಷಣ ಕಲಿಸುತ್ತಿರುವ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಲು ಲಕ್ಷಾಂತರ ರೂಪಾಯಿಗಳನ್ನು ಶುಲ್ಕದ ರೂಪದಲ್ಲಿ ಪಾವತಿಸಲು ಸಾಧ್ಯವಾಗದೆ ಅವ್ಯವಸ್ಥೆಗಳಿಂದ ಕೂಡಿರುವ, ಗುಣಮಟ್ಟದ ಶಿಕ್ಷಣ ಲಭ್ಯವಾಗದಿದ್ದರೂ ಪ್ರಶ್ನಿಸದೆ ಸುಮ್ಮನಾಗಿದ್ದಾರೆ. ಇಂತಹ ಸ್ಥಿತಿಯಲ್ಲಿ ಮಕ್ಕಳು ರಾಜ್ಯದ ಇಂಗ್ಲಿಶ್ ಮಾಧ್ಯಮದ ಶಿಕ್ಷಣ ಸಂಸ್ಥೆಗಳಲ್ಲಿ ಜಾಗತಿಕ ಪ್ರಪಂಚದ ವ್ಯವಹಾರ, ಉನ್ನತ ಶಿಕ್ಷಣ, ವೃತ್ತಿಶಿಕ್ಷಣಕ್ಕೆ ಅನುಕೂಲವಾಗುವಂತೆ ಇಂಗ್ಲಿಶ್ ಕಲಿಯಲು ಸಾಧ್ಯವೇ? ಎಂಬುದರ ಇದುವರಗೆ ಯಾರೂ ಸೂಕ್ಷ್ಮವಾಗಿ ಚಿಂತಿಸಿಲ್ಲ. ಪೋಷಕರೂ ಕೂಡ ಇಂಗ್ಲಿಶ್ ಭಾಷೆಯ ಅನಿವಾರ್ಯತೆ ಇದೆ ಎಂಬ ಕಾರಣಕ್ಕಾಗಿ ಇಂಗ್ಲಿಶ್‌ಮಾಧ್ಯಮದ ಶಾಲೆಗಳ ಸಮಸ್ಯೆಗಳನ್ನು ಗಮನಿಸದೆ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ಒತ್ತಾಯಪೂರ್ವಕವಾಗಿ ದಾಖಲು ಮಾಡಿಸಿದ್ದಾರೆ.

ಹೀಗೆ "ಕನ್ನಡವನ್ನು ಬಿಟ್ಟುಕೊಟ್ಟು ಒತ್ತಾಯಪೂರ್ವಕವಾಗಿ ಇಂಗ್ಲಿಶ್ ಮಾಧ್ಯಮಕ್ಕೆ ತಳ್ಳಲಾದ ವಿದ್ಯಾರ್ಥಿಗಳು ಔಪಚಾರಿಕವಾಗಿ ಮಾತ್ರ ಇಂಗ್ಲಿಶನ್ನು ನಂಬಿದ್ದಾರೆ. ಅನೌಪಚಾರಿಕವಾಗಿ ಅವರು ಕಲಿಕೆಯ ಮಾಧ್ಯಮವಲ್ಲದ ಕನ್ನಡವನ್ನೇ ಆಶ್ರಯಿಸುತ್ತಾರೆ. ಇಲ್ಲಿ ಒಂದು ವಿಭಿನ್ನ ಪರಿಸ್ಥಿತಿ ನಿರ್ಮಾಣವಾಗಿದೆ. ಇಂತ ಕಡೆ ಇಂಗ್ಲಿಶಿನ ಸ್ಥಾನವೇನು ಎಂಬ ಪ್ರಶ್ನೆ ಮುಂಚೂಣಿಗೆ ಬರುತ್ತದೆ. ವಿಶ್ವವಿದ್ಯಾಲಯದ ಹಂತದಲ್ಲಿ ಅದರಲ್ಲೂ ಪದವಿ ಸ್ನಾತಕೋತ್ತರ ಹಂತದಲ್ಲಿ ಇಂಗ್ಲಿಶನ್ನು ಮಾಧ್ಯಮವನ್ನಾಗಿ ಹೊಂದಿರುವ ವಿದ್ಯಾರ್ಥಿಗಳು ಬಹಳ ಕಡೆಗಳಲ್ಲಿ ತಮ್ಮ ಉತ್ತರ ಪತ್ರಿಕೆಗಳನ್ನು ಕನ್ನಡದಲ್ಲಿಯೇ ಬರೆಯುತ್ತಿದ್ದಾರೆ. ಕೆಲವು ಪ್ರಸಂಗಗಳಲ್ಲಿ ಅಧ್ಯಾಪಕರು ಕೂಡ ತರಗತಿಗಳಲ್ಲಿ ಇಂಗ್ಲಿಶ್ ಮತ್ತು ಕನ್ನಡ ಅಥವಾ ಇನ್ನೂ ಮುಂದುವರೆದು ಇಂಗ್ಲಿಶ್ ಬಿಟ್ಟು ಕನ್ನಡ ಎಂಬ ಹಂತದವರೆಗೆ ಚಲಿಸುತ್ತಾರೆ. ಅಂದರೆ ಕನ್ನಡ ಮತ್ತು ಇಂಗ್ಲಿಶ್ ಎರಡರಲ್ಲೂ ಪಾಠ ಮಾಡುತ್ತಾರೆ ಅಥವಾ ಕನ್ನಡದಲ್ಲಷ್ಟೇ ಪಾಠ ಮಾಡುತ್ತಾರೆ.[೩೦]" ಇಂತಹ ಶಾಲೆಗಳಲ್ಲಿ ಕಲಿಯುವ ಮಕ್ಕಳು ಇತ್ತ ಇಂಗ್ಲೀಶೂ ಅಲ್ಲದ ಅತ್ತ ಕನ್ನಡವೂ ಅಲ್ಲದ ಅತಂತ್ರ ಸ್ಥಿತಿಗೆ ಸಿಲುಕಿದ್ದಾರೆ. ಈ ಪರಿಸ್ಥಿತಿ ವಿದ್ಯಾರ್ಥಿಗಳು ಉನ್ನತ ಶಿಕ್ಷಣದ ಕಡೆಗೆ ಮುಂದುವರೆದಂತೆಲ್ಲಾ ಹೆಚ್ಚಾಗಿದೆ.

ಏಕೆಂದರೆ ಭಾರತ ಸ್ವತಂತ್ರಗೊಂಡ ನಂತರ ದೇಶದ ಅನಕ್ಷರತೆಯನ್ನು ನಿರ್ಮೂಲನೆ ಮಾಡಲು ಎಲ್ಲಾ ಮಕ್ಕಳಿಗೂ ಶಿಕ್ಷಣ ಕಲಿಸುವ ಯೋಜನೆ ಮಾಡಲಾಗಿದೆ. ಹಾಗೆಯೇ ದೇಶಭಾಷೆಗಳನ್ನು ರಕ್ಷಿಸುವ ಉದ್ದೇಶದಿಂದ ಮಾತೃಭಾಷೆಗಳಲ್ಲಿ ಶಿಕ್ಷಣ ಕಲಿಸುವ ಯೋಜನೆಗಳನ್ನು ರೂಪಿಸಿವೆ.

ಇದರಿಂದ ಭಾಷಾಅಲ್ಪಸಂಖ್ಯಾತರ ಮಾತೃಭಾಷಾಮಾಧ್ಯಮದ ಕಲಿಕೆ ಮತ್ತು ಸಮಸ್ಯೆಗಳು ಎಂಬ ಭಾಗದಲ್ಲಿ ಚರ್ಚಿಸಿರುವ ಹಾಗೆ ದೇಶದ ಎಲ್ಲಾ ಭಾಷೆಗಳು ಶಿಕ್ಷಣದಲ್ಲಿ ಬೋಧನಾ ಮಾಧ್ಯಮವಾಗಿ ಬಳಕೆಯಾಗದಿದ್ದರೂ ಪ್ರಾದೇಶಿಕವಾಗಿ ಪ್ರಬಲವಾಗಿರುವ ಕೆಲವು ದೇಶೀಯ ಭಾಷೆಗಳು ಪ್ರಾಥಮಿಕ ಶಿಕ್ಷಣದಲ್ಲಿ ಬೋಧನಾಮಾಧ್ಯಮವಾಗಿ ಬಳಕೆಯಾಗಿವೆ. ಆದರೆ ಕಾಲೇಜು ಶಿಕ್ಷಣದ .ಬೋಧನೆಯಲ್ಲಿ ಯಾವುದೇ ಬದಲಾವಣೆ ಮಾಡದೇ ಇರುವುದರಿಂದ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷಾ ಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳು ಕಾಲೇಜು ಶಿಕ್ಷಣದಲ್ಲಿ ಇಂಗ್ಲಿಶ್‌ನಲ್ಲಿ ಪಾಠ ಕೇಳಿದರೂ ಉತ್ತರ ಬರೆಯುವುದು ಕನ್ನಡದಲ್ಲೇ ಆಗಿದೆ. ಇದರಿಂದಾಗಿ ಕರ್ನಾಟಕ ಏಕೀಕರಣಗೊಂಡ ನಂತರ ವಿಶ್ವವಿದ್ಯಾಲಯಗಳಲ್ಲಿ ಬೋಧನೆ ಮಾಡುವ ಉಪನ್ಯಾಸಕರು ಕನ್ನಡದಲ್ಲಿ ಬೋಧನೆ ಮಾಡುವಷ್ಟು ಭಾಷಾಸಾಮರ್ಥ್ಯ ಪಡೆದುಕೊಳ್ಳದೇ ಇದ್ದರೂ, ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡುವಷ್ಟು ಭಾಷಾಸಾಮರ್ಥ್ಯ ಪಡೆಯುವುದು ಅನಿವಾರ್ಯವಾಗಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಭಾರತದಲ್ಲಿ ಸಮಾನತೆಗಾಗಿ ಸಾರ್ವತ್ರಿಕರಣಗೊಂಡ ಇಂಗ್ಲಿಶ್ ಶಿಕ್ಷಣ ಇಂದು ಭಾಷಾಮಾಧ್ಯಮದ ಆಧಾರದಲ್ಲಿ ಅಸಮಾನತೆ ಸೃಷ್ಟಿಸಿರುವುದು ಸ್ಪಷ್ಟವಾಗುತ್ತದೆ. ಈ ರೀತಿ ಸೃಷ್ಟಿಯಾಗಿರುವ ಅಸಮಾನತೆಯ ಹಿಂದೆ, ಹಿಂದೆ ಭಾರತೀಯ ಸಮಾಜದ ಅಸಮಾನತೆಗೆ ಕಾರಣವಾಗಿದ್ದ ಅದೇ ಜಾತಿ, ಧರ್ಮ, ವರ್ಗಗಳ ಜೊತೆಗೆ ಜಾಗತಿಕ ಪ್ರಪಂಚದ ಆರ್ಥಿಕ ಶಕ್ತಿಗಳ ಕೈವಾಡವಿದೆ. ಇದು ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುವುದು ಶ್ರೇಷ್ಠ, ಉತ್ತಮ, ಶ್ರೀಮಂತರ ಮಕ್ಕಳು ಕಲಿಯುವ ಶಿಕ್ಷಣ ಮಾಧ್ಯಮ, ಕನ್ನಡ ಅಥವಾ ಮಾತೃಭಾಷಾಮಾಧ್ಯಮದಲ್ಲಿ ಕಲಿಯುವುದು ಕನಿಷ್ಟ, ಕಳಪೆ, ದಡ್ಡರು, ಬಡವರ ಮಕ್ಕಳು ಕಲಿಯುವ ಶಿಕ್ಷಣ ಮಾಧ್ಯಮ ಎಂಬಂತೆ ಬಿಂಭಿಸಿ ಮಾತೃಭಾಷೆ ಅಥವಾ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿಯುವ ಮಕ್ಕಳನ್ನು ಮಾನಸಿಕವಾಗಿ ಅಸಹಾಯಕರನ್ನಾಗಿ ದಡ್ಡರನ್ನಾಗಿ ಮಾಡಿದೆ. ಇವುಗಳನ್ನು ನಿಯಂತ್ರಿಸುವ ಶಕ್ತಿಯಿಲ್ಲದ ಸರ್ಕಾರಗಳು ಸರ್ಕಾರದ ಹಿಡಿತದಲ್ಲಿರುವ ಬಡವರ ಮಕ್ಕಳು ಕಲಿಯುವ ಸರ್ಕಾರಿ ಶಾಲೆಗಳಲ್ಲಿ ಮಾತ್ರ ಮಾತೃಭಾಷಾಮಾಧ್ಯಮ ಇಲ್ಲವೆ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಕಲಿಸಿವೆ. ಇದರಿಂದಾಗಿ ಸರ್ಕಾರಿ ಶಾಲೆಗಳು ಮತ್ತು ಖಾಸಗಿ ಶಾಲೆಗಳ ನಡುವೆ ಅಸಮಾನತೆ ಸೃಷ್ಟಿಯಾಗಿದೆ.

ಹೀಗಾಗಿ "ವಿದ್ಯೆಯ ನಿರಾಕರಣೆ ಒಂದು ಕಾಲದಲ್ಲಿ ಸಮಾಜದಲ್ಲಿನ ಅಸಮಾನತೆಯನ್ನು ಕಾಪಾಡಿಕೊಳ್ಳುವ ಸಾಮಾಜಿಕ ತಂತ್ರವಾಗಿದ್ದರೆ ಅಸಮಾನ ಶಿಕ್ಷಣ ಇಂದು ಅಸಮಾನತೆಯನ್ನು ಪೋಷಿಸುವ ಆಧುನಿಕ ವಿಧಾನವಾಗಿದೆ. ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ಮಾಡಿರುವ ಸಂವಿಧಾನವನ್ನು ಅಸಮಾನ ಶಿಕ್ಷಣ ವ್ಯವಸ್ಥೆಯನ್ನು ರೂಪಿಸುವ ಮೂಲಕ ಸೋಲಿಸಲಾಗಿದೆ. ಪ್ರಾಥಮಿಕ ಶಿಕ್ಷಣ ಎಲ್ಲರೂ ಪಡೆಯಬಹುದು. ಆದರೆ ಅವರ ಅಂತಸ್ತಿಗೆ ತಕ್ಕಂತೆ ಅದನ್ನು ಹೊಂದಬಹುದು. ಉಳ್ಳವರು 'ಉತ್ತಮ' ಶಿಕ್ಷಣವನ್ನು ಕೊಂಡು, ಉನ್ನತ ಶಿಕ್ಷಣವನ್ನು ಸಂಪಾದಿಸಿ, ಉಚ್ಚ ಹುದ್ದೆಗಳನ್ನು ಕಬಳಿಸಬಹುದು. ಇಲ್ಲದವರು 'ಕಳಪೆ' ಶಿಕ್ಷಣವನ್ನು ಭಿಕ್ಷೆ ಎಂಬಂತೆ ಪಡೆದು,

ಉನ್ನತ ಶಿಕ್ಷಣದಿಂದ ವಂಚಿತರಾಗಿ, ಅನಿವಾರ್ಯತೆಯ ಆಧಾರದ ಮೇಲೆ ಅಲ್ಲೋ ಇಲ್ಲೋ[೩೧] ನೆಲೆನಿಲ್ಲುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ.

ಇವುಗಳನ್ನು ಸರಿಪಡಿಸಬೇಕಾದ ಸರ್ಕಾರಗಳು ಮಕ್ಕಳ ಶಿಕ್ಷಣದ ಹಕ್ಕಿನ ಮೂಲಕ ಮೀಸಲಾತಿ ಕಲ್ಪಿಸಿ ಸ್ಥಳೀಯ ಭಾಷಿಕ ಮಕ್ಕಳನ್ನು ಖಾಸಗಿ ಇಂಗ್ಲಿಶ್ ಮಾಧ್ಯಮದ ಶಾಲೆಗಳಿಗೆ ಕಳುಹಿಸಿ ಹಿಂಬಾಗಲಿನ ಮೂಲಕ ಇಂಗ್ಲಿಶ್ ಮಾಧ್ಯಮದ ಶಿಕ್ಷಣವನ್ನು ಬೆಂಬಲಿಸಿವೆ. ಹೀಗಾಗಿ ಕರ್ನಾಟಕದಲ್ಲಿ ರೂಪಿತವಾಗಿರುವ ಭಾಷಾಯೋಜನೆ ಮತ್ತು ಜಾರಿಯಾಗಿರುವ ಭಾಷಾನೀತಿಗಳು ಸ್ಥಳೀಯ ಮಕ್ಕಳನ್ನು ಅತಂತ್ರವಾಗಿಸಿ, ಸರ್ಕಾರಿ ಶಾಲೆಗಳು-ಖಾಸಗಿ ಶಾಲೆಗಳು, ಮಾತೃಭಾಷಾಮಾಧ್ಯಮದ-ಇಂಗ್ಲಿಶ್‌ಭಾಷಾಮಾಧ್ಯಮದ, ಬಡವರ ಶಿಕ್ಷಣ-ಶ್ರೀಮಂತರ ಶಿಕ್ಷಣ ಎಂಬ ಅಸಮಾನತೆಗಳನ್ನು ಹುಟ್ಟುಹಾಕಿವೆ. ಈ ಅಸಮಾನತೆಗಳು ಸ್ಥಳೀಯ ಭಾಷಿಕ ಸಮುದಾಯಗಳಲ್ಲಿ ಸಮಸ್ಯೆಗಳನ್ನು ಹುಟ್ಟುಹಾಕಿ ಅಸ್ತಿತ್ವದ ನಾಶಕ್ಕೆ ಕಾರಣವಾಗುತ್ತಿವೆ. ಹೀಗಾಗಿ ಒಂದು ಪ್ರದೇಶದ ಭಾಷಾಸಮಸ್ಯೆಗಳ ಪರಿಹಾರಕ್ಕೆ ರೂಪಿಸಿರುವ ಭಾಷಾಯೋಜನೆ ಮತ್ತು ಭಾಷಾನೀತಿಗಳನ್ನು ಭಿನ್ನ ಆಯಾಮಗಳಲ್ಲಿ ನೋಡಿ ಭಾಷಾನೀತಿಗಳಿಂದಲೇ ಉದ್ಭವಿಸಿರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕಿದೆ.

**ಟಿಪ್ಪಣಿಗಳು**

೧. ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ಪುಟ ೨
೨. ವೆಂಕಟಾಚಲಶಾಸ್ತ್ರಿ ಟಿ.ವಿ, (ಪ್ರ.ಸಂ) ಶೇಷಗಿರಿರಾವ್ ಎಲ್.ಎಸ್., ಕನ್ನಡದ ಅಳಿವು ಉಳಿವು, ಪುಟ ೧೫೧
೩. ರಾಧಾಕೃಷ್ಣ ಕೆ., ಭಾಷಾ ಸಮಸ್ಯೆಯ ಕುರಿತು, ಪುಟ ೧೦
೪. ಸುದರ್ಶನ ಸ.ರ., ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೯
೫. ಜವರೇಗೌಡ ದೇ., ಕನ್ನಡ ಚಿಂತನೆ, ಪುಟ ೧೬೭
೬. ಅದೇ, ಪುಟ ೧೬೭
೭. ಅದೇ, ಪುಟ ೧೬೮
೮. ನಾರಾಯಣಘಟ್ಟ ಎ. ಆರ್., ಶಿಕ್ಷಣಮಾಧ್ಯಮ ಸಮಗ್ರ ಚಿಂತನ, ಪುಟ ೧೨
೯. ಎಚ್ಚೆಸ್ಕೆ, ಕನ್ನಡದ ಸ್ಥಿತಿಗತಿ, ಪುಟ ೯೦
೧೦. ರೋಹಿಡೇಕರ ಎಸ್.ಆರ್, (ಸಂ) ಅಶೋಕಕುಮಾರ ರಂಜೇರೆ, ಶಿಕ್ಷಣದಲ್ಲಿ ಭಾಷಾಮಾಧ್ಯಮದ ವಾಗ್ವಾದಗಳು, ಪುಟ ೯೦
೧೧. ಅದೇ, ಪುಟ ೯೦
೧೨. ಸುದರ್ಶನ ಸ.ರ., ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೧೧೭
೧೩. ಸುದರ್ಶನ ಸಾ.ರಾ., (ಸಂ) ಅಶೋಕ ಕುಮಾರ ರಂಜೇರೆ, ಶಿಕ್ಷಣದಲ್ಲಿ ಭಾಷಾಮಾಧ್ಯಮದ ವಾಗ್ವಾದಗಳು, ಪುಟ ೯೩
೧೪. ಅದೇ, ಪುಟ ೧೮೫
೧೫. ಕರ್ನಾಟಕ ಸರ್ಕಾರದ ನಡಾವಳಿಗಳು, ಅಂತರ್ಜಾಲದ ಮುದ್ರಿತ ಪ್ರತಿಯಿಂದ
೧೬. ಅದೇ
೧೭. ಆವಲಮೂರ್ತಿ ಎ.ಜಿ., (ಸಂ) ಅಶೋಕ ಕುಮಾರ ರಂಜೇರೆ, ಶಿಕ್ಷಣದಲ್ಲಿ ಭಾಷಾಮಾಧ್ಯಮದ ವಾಗ್ವಾದಗಳು, ಪುಟ ೮೮
೧೮. ಅದೇ, ಪುಟ ೧೦೭
೧೯. ಅದೇ, ಪುಟ ೧೫೭
೨೦. Report of the Commissioner for linguistic minorities (seventh report) Govt of India, page 166

೨೧. ಅದೇ, ಪುಟ ೧೬೬
೨೨. ಸುದರ್ಶನ ಸ.ರ., ಶಿಕ್ಷಣ ಮಾಧ್ಯಮ ಕನ್ನಡಪರ ಆಂದೋಲನ ಮತ್ತು ವರದಿಗಳು, ಪುಟ ೧೩
೨೩. ರಾಮಚಂದ್ರಪ್ಪ ಬರಗೂರು, ಕನ್ನಡ ಪ್ರಜ್ಞೆ, ಪುಟ ೧೦೦
೨೪. ಅದೇ, ಪುಟ ೧೦೦
೨೫. ನಾಗರಾಜ್ ಡಿ. ಆರ್, ಸಂಸ್ಕೃತಿ ಕಥನ, ಪುಟ ೯೨
೨೬. ಎಚ್ಚೆಸ್ಕೆ, ಕನ್ನಡದ ಸ್ಥಿತಿಗತಿ, ಪುಟ ೯೧
೨೭. ರಮಾಕಾಂತ್ ಅಗ್ನಿಹೋತ್ರಿ, ಡೆಖನ್ ಹೆರಾಲ್ಡ್, ಪುಟ ೧೦, ಅಕ್ಟೋಬರ್ ೧೫, ೨೦೧೪
೨೮. ಪುಟ್ಟಪ್ಪ ಕೆ.ವಿ., ಕುವೆಂಪು ಸಮಗ್ರ ಗದ್ಯ ಸಂಪುಟ ೨, ಪುಟ ೫೧೩
೨೯. ನಾಗರಾಜ್ ಡಿ. ಆರ್, (ಸಂ) ಅಗ್ರಹಾರ ಕೃಷ್ಣಮೂರ್ತಿ, ಸಂಸ್ಕೃತಿ ಕಥನ, ಪುಟ ೯೫
೩೦. ನಾರಾಯಣ ಕೆ.ವಿ., (ಸಂ) ಅಶೋಕ ಕುಮಾರ ರಂಜೇರೆ, ಶಿಕ್ಷಣದಲ್ಲಿ ಭಾಷಾಮಾಧ್ಯಮದ ವಾಗ್ವಾದಗಳು, ಪುಟ ೧೮೭
೩೧. ಜನದನಿ ಮಾಸಪತ್ರಿಕೆ, ಆಗಸ್ಟ್ ೨೦೧೧, ಪುಟ ೪

## ಅಧ್ಯಾಯ–೫

## ಆಡಳಿತ ಮತ್ತು ಭಾಷೆ

೫.೧ ಆಡಳಿತ ಭಾಷೆಯ ಸ್ವರೂಪ ಮತ್ತು ಸಮಸ್ಯೆಗಳು

೫.೨ ರಾಜತ್ವದ ಆಡಳಿತ: ಆಡಳಿತದಲ್ಲಿ ಭಾಷೆಯ ಬಳಕೆ ಮತ್ತು ಸಮಸ್ಯೆಗಳು

೫.೩ ಆಂಗ್ಲರ ಆಡಳಿತ: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು

೫.೪ ಸ್ವತಂತ್ರ ಭಾರತ: ಆಡಳಿತದಲ್ಲಿ ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು

೫.೫ ಏಕೀಕರಣ ನಂತರದ ಕರ್ನಾಟಕ: ಆಡಳಿತದಲ್ಲಿ ಕನ್ನಡದ ಬಳಕೆ ಮತ್ತು ಸಮಸ್ಯೆಗಳು

೫.೬ ಭಾಷಾಅಲ್ಪಸಂಖ್ಯಾತರು: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು

೫.೭ ಇಂಗ್ಲಿಶ್: ಬಳಕೆ ಮತ್ತು ಸಮಸ್ಯೆಗಳು

ಅಧ್ಯಾಯ-೫

# ಆಡಳಿತ ಮತ್ತು ಭಾಷೆ

## ೫.೧ ಆಡಳಿತ ಭಾಷೆಯ ಸ್ವರೂಪ ಮತ್ತು ಸಮಸ್ಯೆಗಳು

"ಸರ್ಕಾರ ತನ್ನ ನಾನಾ ಇಲಾಖೆಗಳಲ್ಲಿ ಅವುಗಳ ನಿರ್ವಹಣೆಗೆ ಸಂಬಂಧಿಸಿದಂತೆ ಹಾಗೂ ಅವುಗಳ ಮೂಲಕ ಸಾರ್ವಜನಿಕರೊಂದಿಗೆ ವ್ಯವಹರಿಸಲು ಬಳಸುವ ಭಾಷೆಯೇ ಆಡಳಿತ ಭಾಷೆ.[೧]". ಆಡಳಿತದಲ್ಲಿ ಬಳಕೆಯಾಗುವ ಭಾಷೆ ಆ ಪ್ರದೇಶದ ಜನರ ಭಾಷೆ ಅಥವಾ ಭಾಷೆಗಳಾಗಿರಬೇಕು. ಏಕೆಂದರೆ ಯಾವುದೇ ಒಂದು ಪ್ರದೇಶದಲ್ಲಿ ನಡೆಯುವ ಎಲ್ಲ ವ್ಯವಹಾರಗಳು ಅಂತಿಮರೂಪ ಪಡೆಯುವುದು ಅಂದರೆ ಅಧಿಕೃತ ದಾಖಲೆಯಾಗುವುದು ಆಡಳಿತ ಭಾಷೆ ಅಥವಾ ಭಾಷೆಗಳಲ್ಲಿ. ಹಾಗೆಯೇ ಸರ್ಕಾರದ ವ್ಯವಹಾರಗಳು ನಡೆಯುವುದು ಆ ಪ್ರದೇಶದ ಆಡಳಿತ ಭಾಷೆ ಅಥವಾ ಭಾಷೆಗಳಲ್ಲಿ. ಹೀಗಾಗಿ ಸರ್ಕಾರಗಳು ಜಾರಿಗೆ ತರುವ ಕಾನೂನುಗಳು, ಹೊರಡಿಸುವ ಆದೇಶ, ಆಜ್ಞೆ ಸುತ್ತೋಲೆಗಳು, ಆ ಪ್ರದೇಶದ ದಾಖಲೆಪತ್ರಗಳು, ಮಾಹಿತಿ, ಅರ್ಜಿ ನಮೂನೆ, ಕಡತ ಇತ್ಯಾದಿಗಳೆಲ್ಲವು ಇರುವುದು ಆಡಳಿತ ಭಾಷೆ ಅಥವಾ ಭಾಷೆಗಳಲ್ಲಿ. ಇದಕ್ಕೆ ಪೂರಕವಾಗಿ ಆ ಪ್ರದೇಶದ ಶಿಕ್ಷಣದಲ್ಲಿ ಭಾಷೆ ಅಥವಾ ಭಾಷೆಗಳನ್ನು ಕಲಿಸಲಾಗುತ್ತಿರುತ್ತದೆ. ಉದ್ಯೋಗದ ಭಾಷೆಯೂ ಇದೇ ಆಗಿರುತ್ತದೆ.

ಹೀಗಾಗಿ ಸ್ಥಳೀಯ ಭಾಷೆ ಅಥವಾ ಭಾಷೆಗಳು ಆಡಳಿತದಲ್ಲಿ ಬಳಕೆಯಾಗಬೇಕು. ಇದರಿಂದ ಜನರಿಗೆ ತಾವು ವಾಸಿಸುವ ಪ್ರದೇಶದ ಎಲ್ಲ ವ್ಯವಹಾರಗಳು ಸುಲಭವಾಗಿ ಅರ್ಥವಾಗಿ ಸರ್ಕಾರದೊಂದಿಗೆ ಸಹಕರಿಸುತ್ತಾರೆ. ಶಿಕ್ಷಣದಲ್ಲಿಯೂ ಭಾಷೆ ಅಥವಾ ಭಾಷೆಗಳನ್ನು ಕಲಿಯಲು ಆಸಕ್ತಿ ವಹಿಸುತ್ತಾರೆ. ಭಾಷೆ ಬದುಕಿನ ಭಾಗವಾಗುತ್ತದೆ. ಇದು ಪ್ರದೇಶದ ಎಲ್ಲಾ ವ್ಯವಹಾರ, ಒಪ್ಪಂದಗಳು, ದಾಖಲೆ ಪತ್ರಗಳನ್ನು ಆ ಪ್ರದೇಶದ ಭಾಷೆ ಅಥವಾ ಭಾಷೆಗಳಲ್ಲಿ ಇರುವಂತೆ ಮಾಡುತ್ತದೆ. ಇದರಿಂದ ಜನರು ಸ್ವತಂತ್ರವಾಗಿ ಎಲ್ಲಾ ದಾಖಲೆ, ಪತ್ರಗಳನ್ನು ಸಿದ್ಧಗೊಳಿಸುತ್ತಾರೆ. ಇದರಿಂದ ಸ್ಥಳೀಯ ಜನರು ಭಾಷಾಸಮಸ್ಯೆಗೆ ಒಳಗಾಗುವ ಪರಿಸ್ಥಿತಿ ಉದ್ಭವಿಸುವುದಿಲ್ಲ. ಹಾಗೂ ತಮ್ಮ ವ್ಯವಹಾರ, ಒಪ್ಪಂದಗಳ ಅಧಿಕೃತತೆಯ ಬಗೆಗೆ ಭಯ ಇರುವುದಿಲ್ಲ. ಜನರಿಗೆ ಅರ್ಥವಾಗದ ಭಾಷೆಯಲ್ಲಿ ಆಡಳಿತ ನಡೆದರೆ ಆ ಪ್ರದೇಶದ ಆಡಳಿತದಲ್ಲಿ ಅಧಿಕೃತವಾಗಿ ಏನಾಗುತ್ತಿದೆ ಎಂಬುದರ ಅರಿವು ಜನರಿಗೆ ಇಲ್ಲವಾಗುತ್ತದೆ. ಇದರಿಂದ ಜನರು ತಮ್ಮ ವೈಯಕ್ತಿಕ ವ್ಯವಹಾರಗಳ ಅಧಿಕೃತ ರೂಪಕ್ಕೆ ಭಾಷೆಯ ಕಾರಣಕ್ಕಾಗಿ ಮತ್ತೊಬ್ಬರನ್ನು ಅವಲಂಭಿಸಬೇಕಾಗುತ್ತದೆ.

ಹೀಗೆ ಭಾಷೆಯ ಕಾರಣದಿಂದಾಗಿ ತಮ್ಮ ವೈಯಕ್ತಿಕ ವ್ಯವಹಾರದ ಅಧಿಕೃತ ದಾಖಲೆಗಾಗಿ ಮತ್ತೊಬ್ಬ ವ್ಯಕ್ತಿಯನ್ನು ಅವಲಂಭಿಸುವುದು, ತಮ್ಮ ಮಾತುಕತೆ, ಒಪ್ಪಂದ, ವ್ಯವಹಾರಗಳನ್ನು ಅವರಿಗೆ ತಿಳಿಸುವುದು ವ್ಯವಹಾರದ ಹಿನ್ನೆಲೆಯಲ್ಲಿ ಉತ್ತಮವಾದುದಲ್ಲ. ಏಕೆಂದರೆ ಮಧ್ಯವರ್ತಿಗಳ ಪ್ರವೇಶ ಕೆಲವೊಮ್ಮೆ ಅವರ ವೈಯಕ್ತಿಕ ಹಿತಾಸಕ್ತಿ, ಸ್ವಾರ್ಥಗಳಿಗಾಗಿ ವ್ಯವಹಾರಗಳಲ್ಲಿ ಗೌಪ್ಯತೆ ಕಾಪಾಡದೆ ಎಲ್ಲಾ ಕಡೆ ಪ್ರಚಾರ ಮಾಡಿ ವ್ಯವಹಾರದ ಮಾತುಕತೆ, ಒಪ್ಪಂದ, ವ್ಯವಹಾರಗಳು ಮುರಿದು ಬೀಳುವಂತೆ,

ಇಲ್ಲವೆ ವಿವಾದಗಳು ಹುಟ್ಟಿಕೊಳ್ಳುವಂತೆ ಮಾಡಿದೆ. ಹಾಗೆಯೇ ಇವರು ವ್ಯವಹಾರದ ಸಂದರ್ಭದಲ್ಲಿ ನಡೆದಿರುವ ಮಾತುಕತೆ, ಒಪ್ಪಂದ, ವ್ಯವಹಾರಗಳ ಮಾಹಿತಿಯನ್ನು ಅಧಿಕೃತ ರೂಪಕ್ಕೆ ತರುವಾಗ ಅವುಗಳನ್ನು ಯಥಾವತ್ತಾಗಿ ಬರಹಕ್ಕೆ ತರುತ್ತಾರೆ ಎಂಬ ನಂಬಿಕೆ ಇಲ್ಲ. ಇದಕ್ಕೆ ಕಾರಣಗಳು ಬೇರೆಬೇರೆ ಇವೆ. ಆದರೆ ಅವು ಇಲ್ಲಿ ಅಪ್ರಸ್ತುತ. ಆದರೆ ಇಬ್ಬರು ಅಥವಾ ಅದಕ್ಕಿಂತ ಹೆಚ್ಚು ವ್ಯಕ್ತಿಗಳ ನಡುವೆ ನಡೆದ ಮಾತುಕತೆ, ಒಪ್ಪಂದ, ವ್ಯವಹಾರಗಳಲ್ಲಿ ನೈಜಮಾಹಿತಿಗಳು ಉಲ್ಲೇಖವಾಗದಿದ್ದಾಗ ವ್ಯವಹಾರನಿರತರು ಸಮಸ್ಯೆ ಎದುರಿಸಿರುವುದು, ನಷ್ಟಕ್ಕೆ ಒಳಗಾಗಿರುವುದು ಇಲ್ಲಿ ಮುಖ್ಯ ವಿಚಾರವಾಗಿದೆ.

ಇದನ್ನು ತಪ್ಪಿಸುವ ಉದ್ದೇಶದಿಂದ ಮಧ್ಯವರ್ತಿಯಾಗಿ ಕೆಲಸ ಮಾಡಿರುವ ವ್ಯಕ್ತಿ ಸಿದ್ಧಗೊಳಿಸಿರುವ ಪತ್ರದಲ್ಲಿರುವ ತಪ್ಪುಗಳನ್ನು ಓದಿ ಅರ್ಥೈಸಿ, ತಿದ್ದುವಂತೆ ತಿಳಿಹೇಳುವ ಭಾಷಾಶಕ್ತಿ ವ್ಯವಹಾರನಿರತ ವ್ಯಕ್ತಿಗಳಲ್ಲಿ ಇಲ್ಲ. ಈ ರೀತಿಯ ಭಾಷಾಶಕ್ತಿ ವ್ಯವಹಾರನಿರತರಲ್ಲಿ ಇದ್ದಿದ್ದರೆ ಮಧ್ಯವರ್ತಿಯ ಅವಶ್ಯಕತೆಯೇ ಅಲ್ಲಿ ಉಂಟಾಗುತ್ತಿರಲಿಲ್ಲ. ಹೀಗಾಗಿ ಜನರ ಭಾಷೆಗಳು ಆಡಳಿತದಲ್ಲಿ ಬಳಕೆಯಾಗದಿದ್ದಾಗ ವ್ಯವಹಾರದಲ್ಲಿ ನಿರತರಾಗಿರುವ ವ್ಯಕ್ತಿಗಳು ತಮ್ಮ ಮಾತುಕತೆ, ಒಪ್ಪಂದ, ವ್ಯವಹಾರಗಳ ನಿಜರೂಪ ಅಧಿಕೃತವಾಗಿ ಇದೆಯೋ? ಇಲ್ಲವೋ? ಇಲ್ಲದಿದ್ದರೆ ಏನು ಮಾಡುವುದು? ಇವುಗಳ ಬಗೆಗೆ ಯಾರ ಬಳಿಯಲ್ಲಿ ವಿಚಾರಿಸುವುದು? ಇವು ಮುಂದೊಂದು ದಿನ ತಮ್ಮ ವ್ಯವಹಾರಕ್ಕೆ ಮಾರಕವಾಗಿ ಪರಿಣಮಿಸಬಹುದೇ? ಎಂಬ ಭಯಕ್ಕೆ ಒಳಗಾಗಿದ್ದಾರೆ. ಈ ಭಯ ಆತಂಕಗಳ ಜೊತೆಗೆ ತಮ್ಮ ವ್ಯವಹಾರದಲ್ಲಿ ಭಾಷೆಯ ಕಾರಣಕ್ಕಾಗಿ ಮಧ್ಯವರ್ತಿಯಾಗಿ ಪ್ರವೇಶಿಸಿದ ವ್ಯಕ್ತಿಗೆ ತಮ್ಮ ಕೆಲಸವನ್ನು ಮಾಡಿಕೊಟ್ಟಿದ್ದಕ್ಕೆ ಪ್ರತಿಯಾಗಿ ಹಣ ಅಥವಾ ಇತರ ರೂಪದಲ್ಲಿ ಪ್ರತಿಫಲ ಕೊಡಬೇಕಾಗುತ್ತದೆ. ಹಾಗೂ ಅವನ ಸಮಯಕ್ಕಾಗಿ ಕಾಯಬೇಕಾಗುತ್ತದೆ. ಇಂತಹ ಸಮಸ್ಯೆಗಳ ಕಾರಣದಿಂದಾಗಿ ಜನಭಾಷೆಗಳು ಆಡಳಿತದಲ್ಲಿ ಬಳಕೆಯಾಗದಿರುವಾಗ ಸಾಕಷ್ಟು ವ್ಯವಹಾರಗಳು ಅಧಿಕೃತ ದಾಖಲೆಗಳಾಗದೆ ಹಾಗೆ ಉಳಿದಿವೆ. ಇಂತಹ ಪ್ರಕರಣಗಳಲ್ಲಿ ಪರಸ್ಪರರ ನಡುವೆ ವಿರಸಗಳು, ವಿವಾದಗಳು ಹುಟ್ಟಿಕೊಂಡಾಗ ಅಧಿಕೃತವಾಗಿ ಬಗೆಹರಿಸುವುದು ಕಷ್ಟವಾಗಿದೆ.

ಹೀಗಾಗಿ ಜನರ ಭಾಷೆಯಲ್ಲಿ ಆಡಳಿತ ನಡೆದರೆ ಇಂತಹ ಸಮಸ್ಯೆಗಳು ಇರುವುದಿಲ್ಲ. ಜನರಿಗೆ ತಾವು ವಾಸಿಸುವ ಪ್ರದೇಶದ ಎಲ್ಲಾ ವ್ಯವಹಾರಗಳು, ಸರ್ಕಾರಗಳ ಅಧಿಕೃತ ಆಡಳಿತ ವೈಖರಿ, ನಿರ್ಧಾರಗಳು, ಘೋಷಿಸುವ ಜನಪರ ಯೋಜನೆಗಳು ಸುಲಭವಾಗಿ ಅರ್ಥವಾಗುತ್ತವೆ. ಇದು ಆಡಳಿತಗಾರರು ಮತ್ತು ಜನರ ಹೊಂದಾಣಿಕೆಯನ್ನು ಉಂಟುಮಾಡಿ ಆ ಪ್ರದೇಶದ ಆಡಳಿತ ಸುಗಮವಾಗಿ, ಸುಸೂತ್ರವಾಗಿ ನಡೆಯುವಂತೆ ಮಾಡುತ್ತದೆ. ಮತ್ತು ಸರ್ಕಾರಗಳ ಜನಪರ ಯೋಜನೆಗಳ ಬಗೆಗಿನ ಮಾಹಿತಿಯನ್ನು ಜನರಿಗೆ ಸುಲಭವಾಗಿ ತಿಳಿಸಬಹುದು. ಜನರಿಗೆ ಅರ್ಥವಾಗದ ಭಾಷೆಯಲ್ಲಿ ಆಡಳಿತ ನಡೆದರೆ ಸರ್ಕಾರಗಳು ಎಂತಹ ಜನಪರ ಯೋಜನೆಗಳನ್ನು ಘೋಷಿಸಿದರೂ ಅವು ವ್ಯರ್ಥವಾಗುತ್ತವೆ. ಇವುಗಳಿಂದ ಭಾಷಿಕ ಸಮುದಾಯಗಳ ನಡುವೆ ವ್ಯತ್ಯಾಸಗಳು ಉಂಟಾಗುತ್ತವೆ. ಈ ವ್ಯತ್ಯಾಸಗಳು ಭಾಷಾಕ್ಷೇತ್ರದ ಮೇಲೆ ಮಾತ್ರ ತಮ್ಮ ಪರಿಣಾಮ

ಬೀರದೆ ಆ ಪ್ರದೇಶದ ಆಡಳಿತ, ಸಾಮಾಜಿಕ ವ್ಯವಸ್ಥೆ, ಶಿಕ್ಷಣ, ಆರ್ಥಿಕತೆ, ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ ಕ್ಷೇತ್ರಗಳ ಮೇಲೂ ಪ್ರಭಾವ ಬೀರಿ ಸಮಸ್ಯೆಗಳನ್ನು ಹುಟ್ಟುಹಾಕುತ್ತವೆ. ಇದು ಈ ಅಧ್ಯಯನದ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿರುವ ಅಂಶಗಳಿಂದ ಸ್ಪಷ್ಟವಾಗುತ್ತದೆ. ಹೀಗಾಗಿ ಭಾಷಿಕ ಸಮುದಾಯಗಳು ಆಡಳಿತ ಸೇರಿದಂತೆ ಇತರ ಕ್ಷೇತ್ರಗಳಲ್ಲಿ ಸಮಸ್ಯೆಗಳನ್ನು ಎದುರಿಸದೆ ಬಹುಮುಖವಾಗಿ ಅಭಿವೃದ್ಧಿ ಆಗಬೇಕಾದರೆ ಆಡಳಿತದಲ್ಲಿ ಜನರ ಭಾಷೆ ಅಥವಾ ಭಾಷೆಗಳು ಬಳಕೆಯಾಗಬೇಕಾದ ಅಗತ್ಯತೆ ಇದೆ. ಇವುಗಳನ್ನು ಆಡಳಿತದಲ್ಲಿ ಬಳಸದೆ ಬೇರೆಬೇರೆ ಕಾರಣಗಳನ್ನು ಕೊಟ್ಟು ಮತ್ತು ಉದ್ದೇಶಗಳಿಂದಾಗಿ ಜನರ ಭಾಷೆಗಳನ್ನು ಆಡಳಿತದಲ್ಲಿ ಬಳಸದೆ ಅನ್ಯಭಾಷೆಗಳನ್ನು ಬಳಸುವುದು ಆಡಳಿತದಲ್ಲಿ ಮಾತ್ರವಲ್ಲದೆ ಶಿಕ್ಷಣ, ಸಾಹಿತ್ಯ, ಸಂಸ್ಕೃತಿ, ಔದ್ಯೋಗಿಕ ಕ್ಷೇತ್ರಗಳಲ್ಲೂ ಸಮಸ್ಯೆಗಳನ್ನು ಹುಟ್ಟುಹಾಕುತ್ತದೆ. ಇದು ಅತಿರೇಖದ ಪರಿಸ್ಥಿತಿ ತಲುಪಿದಾಗ ಸ್ಥಳೀಯ ಭಾಷಿಕ ಸಮುದಾಯಗಳ ಅಸ್ತಿತ್ವಕ್ಕೆ ಧಕ್ಕೆಯುಂಟಾಗುವ ಪರಿಸ್ಥಿತಿ ನಿರ್ಮಾಣವಾಗಿದೆ.

ಇಂತಹ ಸಂದರ್ಭದಲ್ಲಿ ಜನರ ದಿನನಿತ್ಯದ ವ್ಯವಹಾರಗಳು ಭಯ, ಆತಂಕಗಳು ಇಲ್ಲದೆ ವೇಗ ಮತ್ತು ನಿರ್ಭಯವಾಗಿ ಪೂರ್ಣಗೊಳ್ಳಲು, ಜನರಿಗೆ ಆಡಳಿತದಲ್ಲಿ ಭಾಷಾಸಮಸ್ಯೆಗಳು ಎದುರಾಗದಿರಲು, ಜನರು ಆಡಳಿತದೊಂದಿಗೆ ಸಹಕರಿಸಲು ಮತ್ತು ಒಂದು ಪ್ರದೇಶದ ಆಡಳಿತ ಸುಗಮವಾಗಿ ನಡೆಯಲು ಆ ಪ್ರದೇಶದ ಭಾಷೆ ಅಥವಾ ಭಾಷೆಗಳು ಬಳಕೆಯಾಗಬೇಕು. ಇವು ಜನರು ಮತ್ತು ಆಡಳಿತಗಾರರು ಮಧ್ಯೆ ಸಂಬಂಧ ಉಂಟುಮಾಡಿ ಜನರನ್ನು ಭಾಷಾಸಮಸ್ಯೆಗಳಿಂದ ಮುಕ್ತಗೊಳಿಸಿ ಆಡಳಿತವನ್ನು ಸುಗಮಗೊಳಿಸಲು ಸಾಧ್ಯವಾಗಿಸುವುದನ್ನು ಇದುವರೆಗಿನ ವಿಚಾರಗಳಿಂದ ಸ್ಪಷ್ಟವಾಗುತ್ತದೆ. ಹಾಗೆಯೇ ಜನಭಾಷೆಗಳು ಆಡಳಿತದಲ್ಲಿ ಬಳಕೆಯಾಗದಿದ್ದಾಗ ಸಮಸ್ಯೆಗಳು ಉದ್ಭವಿಸುವುದು ತಿಳಿಯುತ್ತದೆ. ಈ ಸಂಬಂಧ ಮತ್ತು ಸಮಸ್ಯೆಗಳು ಆ ಪ್ರದೇಶದ ಶಿಕ್ಷಣ, ಉದ್ಯೋಗ, ವ್ಯವಹಾರ, ಸಾಹಿತ್ಯ, ಸಂಸ್ಕೃತಿಗಳ ಅಭಿವೃದ್ಧಿ ಅಥವಾ ಹಿಂದುಳಿಯುವಿಕೆಯ ಮೇಲೆ ತನ್ನದೇ ಆದ ಪರಿಣಾಮ ಬೀರಿವೆ. ಹೇಗೆಂದರೆ ಒಂದು ಪ್ರದೇಶದ ಆಡಳಿತದಲ್ಲಿ ಬಳಕೆಯಾಗಿರುವ ಭಾಷೆ ಅಥವಾ ಭಾಷೆಗಳಿಗೂ ಆ ಪ್ರದೇಶದ ಶಿಕ್ಷಣ, ಉದ್ಯೋಗ, ವ್ಯವಹಾರ, ಜನರ ಅಭಿವೃದ್ಧಿ, ಪ್ರದೇಶದ ಅಭಿವೃದ್ಧಿಗೂ ಒಂದು ರೀತಿಯ ಸರಪಳಿಯ ಸಂಬಂಧವಿದೆ. ಈ ಸಂಬಂಧ ಬೇರ್ಪಡಿಸಿ ಒಂದು ಪ್ರದೇಶದ ಶಿಕ್ಷಣ, ಉದ್ಯೋಗ, ವ್ಯವಹಾರಗಳ ಅಭಿವೃದ್ಧಿಗೆ ಪರಿಹಾರ ಹುಡುಕುವುದು ಅಸಾಧ್ಯ. ಏಕೆಂದರೆ ಒಂದು ಪ್ರದೇಶದ ಜನರ ಭಾಷೆ ಅಥವಾ ಭಾಷೆಗಳು ಆಡಳಿತದಲ್ಲಿ ಬಳಕೆಯಾಗದಿದ್ದರೆ ಜನರು ಈಗಾಗಲೇ ಚರ್ಚಿಸಿರುವ ಹಾಗೆ ಆಡಳಿತದಿಂದ ವಿಮುಖರಾಗುತ್ತಾರೆ. ಇದರಿಂದ ಆಡಳಿತಗಾರರು ಮತ್ತು ಜನರ ನಡುವೆ ಹೊಂದಾಣಿಕೆಯ ಕೊರತೆ ಉಂಟಾಗಿ ಆ ಪ್ರದೇಶ ಅಭಿವೃದ್ಧಿಯಲ್ಲಿ ಹಿಂದುಳಿಯುತ್ತದೆ. ಈ ಹಿಂದುಳಿಯುವಿಕೆ ಪ್ರದೇಶದ ಅಭಿವೃದ್ಧಿಗೆ ಮಾತ್ರ ಸೀಮಿತಗೊಳ್ಳದೆ ಆಡಳಿತ, ಭಾಷೆ, ಶಿಕ್ಷಣ, ಉದ್ಯೋಗ, ಸಾಹಿತ್ಯ, ಸಂಸ್ಕೃತಿ, ಕಲೆ, ವಿಜ್ಞಾನ, ವಾಸ್ತುಶಿಲ್ಪ ಸೇರಿದಂತೆ ಮೂಲಭೂತ ಅಗತ್ಯಗಳಾದ ನೀರು, ವಿದ್ಯುತ್, ಆಸ್ಪತ್ರೆ, ಒಳಚರಂಡಿ ವ್ಯವಸ್ಥೆಗಳ ಮೇಲೂ ತನ್ನ ಪರಿಣಾಮ ಬೀರಿದೆ.

ಹೇಗೆಂದರೆ ಒಂದು ಪ್ರದೇಶದಲ್ಲಿ ರಾಜಕೀಯ ಅಧಿಕಾರ ಪಡೆದು ಆಡಳಿತ ನಡೆಸಿರುವ ವರ್ಗ ತನ್ನ ಭಾಷಿಕರ ಅನುಕೂಲಕ್ಕಾಗಿ ಅವರು ವಾಸಿಸುವ ಗ್ರಾಮ, ಹೋಬಳಿ, ತಾಲ್ಲೂಕು, ಜಿಲ್ಲೆಗಳ ಶಾಲೆ, ನೀರು, ಚರಂಡಿ, ವಿದ್ಯುತ್, ಆಸ್ಪತ್ರೆ ಸೇರಿದಂತೆ ಅಲ್ಲಿನ ಮೂಲಭೂತ ಅಗತ್ಯಗಳ ಪೂರೈಕೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದೆ. ಹಾಗೆಯೇ ತನ್ನ ಅಧಿಕಾರದ ಅವಧಿಯಲ್ಲಿ ತನ್ನ ಸಮುದಾಯದ ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿ, ವಿಜ್ಞಾನ, ವಾಸ್ತುಶಿಲ್ಪ, ಶಿಕ್ಷಣ, ಉದ್ಯೋಗ, ಕೃಷಿಅಭಿವೃದ್ಧಿ ಇತ್ಯಾದಿಗಳಿಗೆ ಅಗತ್ಯ ಪ್ರೋತ್ಸಾಹ ನೀಡಿದೆ. ಇದೇ ರೀತಿಯ ಪ್ರೋತ್ಸಾಹವನ್ನು ತನ್ನದೇ ಆಡಳಿತ ವ್ಯಾಪ್ತಿಯಲ್ಲಿ ವಾಸಿಸುವ ಇತರ ಭಾಷಿಕರು ವಾಸಿಸುವ ಗ್ರಾಮ, ಹೋಬಳಿ, ತಾಲ್ಲೂಕು, ಜಿಲ್ಲೆಗಳಿಗೆ ಕೊಟ್ಟಿಲ್ಲ. ಹಾಗೆಯೇ ಇವರ ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಶಿಕ್ಷಣ, ಉದ್ಯೋಗ ಇತ್ಯಾದಿಗಳ ಅಭಿವೃದ್ಧಿಗೆ ಅಗತ್ಯ ನೆರವು ನೀಡಿಲ್ಲ. ಹೀಗೆ ಭಾಷೆ ಮತ್ತು ಭಾಷಿಕರ ಕಾರಣದಿಂದಾಗಿ ಒಂದು ಪ್ರದೇಶದ ಸಂಪತ್ತು ಅಸಮಾನ ಹಂಚಿಕೆಯಾಗಿ ಪ್ರದೇಶಗಳ ಅಭಿವೃದ್ಧಿಯಲ್ಲಿ ವ್ಯತ್ಯಾಸಗಳು ಉಂಟಾಗಿವೆ.

ಇಂತಹ ವ್ಯತ್ಯಾಸಗಳು ಉಂಟಾದಾಗ ಯಾವ ಭಾಷಿಕ ಸಮುದಾಯಗಳು ರಾಜಕೀಯ ಅಧಿಕಾರ ಮತ್ತು ಆರ್ಥಿಕ ಪ್ರಾಬಲ್ಯ ಪಡೆದು ಆಡಳಿತ ನಡೆಸಿವೆಯೋ ಅಂತಹ ಭಾಷಿಕ ಸಮುದಾಯಗಳ ಜನರು ವಾಸಿಸುವ ಪ್ರದೇಶಗಳಲ್ಲಿ ಆ ಭಾಷಿಕರ ಸಮಸ್ಯೆಗಳು ತೀವ್ರಸ್ವರೂಪ ಪಡೆದಿಲ್ಲ. ಆದರೆ ಯಾವ ಭಾಷಿಕ ಸಮುದಾಯಗಳು ರಾಜಕೀಯವಾಗಿ ಅಧಿಕಾರ ಪಡೆಯದೆ ಇನ್ನೊಂದು ಭಾಷಿಕ ಸಮುದಾಯದ ರಾಜಕೀಯಾಧಿಕಾರದ ಅಧೀನಕ್ಕೆ ಒಳಗಾದ ಸಂದರ್ಭದಲ್ಲಿ ಅಧೀನಕ್ಕೆ ಒಳಗಾದ ಭಾಷಿಕ ಸಮುದಾಯ ಅಥವಾ ಸಮುದಾಯಗಳು ಭಾಷಿಕ ಸೇರಿದಂತೆ ಇತರ ಸಮಸ್ಯೆಗಳಿಗೆ ಒಳಗಾಗಿವೆ. ಕರ್ನಾಟಕದ ಸಂದರ್ಭದಲ್ಲಿ ಇದರ ಸ್ವರೂಪವನ್ನು ಕುರಿತು ಅಧ್ಯಾಯ ಎರಡರಲ್ಲಿ ನಾವು ಈಗಾಗಲೇ ಸ್ಪಷ್ಟಪಡಿಸಿಕೊಳ್ಳಲಾಗಿದೆ. ಹೀಗಾಗಿ ಪ್ರಜಾಪ್ರಭುತ್ವ ವ್ಯವಸ್ಥೆ ನಿರ್ಮಾಣವಾಗುವವರೆಗು ಯಾವ ಭಾಷಿಕ ಸಮುದಾಯಗಳ ರಾಜಮನೆತನಗಳು ರಾಜಕೀಯವಾಗಿ ಪ್ರಬಲವಾಗಿವೆಯೋ ಆ ಭಾಷಿಕ ಸಮುದಾಯಗಳ ಭಾಷೆ, ಸಾಹಿತ್ಯ, ಸಂಸ್ಕೃತಿ, ಜೀವನಕ್ರಮಗಳಿಗೆ ತೊಂದರೆ ಉಂಟಾಗಿಲ್ಲ. ಆದರೆ ಪ್ರಜಾಪ್ರಭುತ್ವ ವ್ಯವಸ್ಥೆ ನಿರ್ಮಾಣವಾದ ನಂತರದಲ್ಲಿ ಇದಕ್ಕೆ ವ್ಯತಿರಿಕ್ತ ಬೆಳವಣಿಗೆಗಳು ಕಾಣಿಸಿಕೊಂಡಿವೆ. ಇವುಗಳನ್ನು ಈ ಅಧ್ಯಾಯದ ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು. ಇಲ್ಲಿ ಒಂದು ಪ್ರದೇಶದ ಅಭಿವೃದ್ಧಿ ಮತ್ತು ಅಲ್ಲಿನ ಸಮಸ್ಯೆಗಳಿಗೂ ಆಡಳಿತ ಭಾಷೆಗೂ ಇರುವ ಸಂಬಂಧವನ್ನು ಮಾತ್ರ ಮುಖ್ಯವಾಗಿಸಿಕೊಳ್ಳಲಾಗಿದೆ.

ರಾಜತ್ವದ ಆಡಳಿತದ ಸಂದರ್ಭದಲ್ಲಿ ಭಾಷಿಕ ಸಮುದಾಯಗಳು ಹಿಂದೆ ಉಳಿದುಕೊಳ್ಳಲು ಮುಖ್ಯಕಾರಣ ಆಗಿರುವುದು ರಾಜಮನೆತನಗಳು ಅನುಸರಿಸುತ್ತಿದ್ದ ಭಾಷಾಆಧಾರಿತ ತರತಮದ ನೀತಿಗಳು. ಹೀಗಾಗಿ ಕರ್ನಾಟಕದ ಸಂದರ್ಭದಲ್ಲಿ ಇಂದಿನ ಕರ್ನಾಟಕದ ಭೂಪ್ರದೇಶದಲ್ಲಿ ಕನ್ನಡ ಭಾಷಿಕ ಸಮುದಾಯ ಬಹುಸಂಖ್ಯಾತರಾಗಿದ್ದರು ಅನ್ಯಭಾಷಿಕ ಸಮುದಾಯಗಳ ಆಡಳಿತದ ಅಧೀನಕ್ಕೆ ಒಳಗಾದ ಸಂದರ್ಭದಲ್ಲಿ ಭಾಷಿಕವಾಗಿ ಸೇರಿದಂತೆ ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ

ಅಸಮಾನತೆಗಳಿಗೆ ಗುರಿಯಾಗಿದೆ. ಹೀಗಾಗಿ ಅನ್ಯಭಾಷಿಕರು ಕರ್ನಾಟಕದಲ್ಲಿ ಆಡಳಿತ ನಡೆಸುವಾಗ ಕನ್ನಡಿಗರು ವಾಸಿಸುವ ಭೂಪ್ರದೇಶಗಳು ಹಿಂದೆ ಉಳಿದುಕೊಂಡಿದ್ದುದು ಕನ್ನಡಿಗರನ್ನು ಕರ್ನಾಟಕ ಏಕೀಕರಣಕ್ಕೆ ಪ್ರೇರಿಸಿರುವುದನ್ನು ಹಿಂದಿನ ಅಧ್ಯಾಯಗಳಲ್ಲಿ ಗಮನಿಸಿದ್ದೇವೆ. ಹೀಗಾಗಿ ಕನ್ನಡಿಗರು ವಾಸಿಸುವ ಪ್ರದೇಶಗಳನ್ನು ಅಭಿವೃದ್ಧಿಗೊಳಿಸಿಕೊಳ್ಳುವ ಮತ್ತು ಕನ್ನಡಿಗರನ್ನು ಭಾಷಾಸಮಸ್ಯೆಗಳಿಂದ ಮುಕ್ತಗೊಳಿಸುವ ಉದ್ದೇಶದಿಂದ ಕರ್ನಾಟಕದ ಭೂಪ್ರದೇಶದಲ್ಲಿ ಕನ್ನಡ ಭಾಷೆಯ ಆಧಾರದಲ್ಲಿ ಕರ್ನಾಟಕ ರಾಜ್ಯ ರಚನೆಗೆ ಹೋರಾಟಗಳು ಆರಂಭಗೊಂಡಿವೆ. ಇಂತಹ ಹೋರಾಟಗಳು ದೇಶದ ನಾನಾಭಾಗಗಳಲ್ಲಿ ನಡೆದಿವೆ.

ಇದರಿಂದಾಗಿ ಭಾರತ ಸ್ವತಂತ್ರಗೊಂಡು ಕೇಂದ್ರದಲ್ಲಿ ಅಧಿಕಾರ ನಡೆಸಿರುವ ಸರ್ಕಾರಗಳು ಆಯಾಕಾಲದ ಭಾಷಿಕ ಸಮುದಾಯಗಳ ಹೋರಾಟದ ತೀವ್ರತೆಯನ್ನು ಅರಿತು ಭಾಷಾವಾರು ರಾಜ್ಯಗಳನ್ನು ರಚನೆ ಮಾಡಿವೆ. ಹೀಗೆ ಕನ್ನಡ ಭಾಷೆಯ ಆಧಾರದಲ್ಲಿ ನಡೆದ ಹೋರಾಟಗಳ ಫಲವಾಗಿ ರಚನೆಯಾಗಿರುವ ರಾಜ್ಯವೇ ಕರ್ನಾಟಕ. ಈ ರಾಜ್ಯ ರಚನೆಯಾದ ನಂತರ ಇಲ್ಲಿ ಬಹುಸಂಖ್ಯಾತರಾದ ಕನ್ನಡಿಗರಲ್ಲಿನ ಒಂದು ವರ್ಗ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿರುವ ಹಾಗೆ ಶಿಕ್ಷಣದಲ್ಲಿ ಕನ್ನಡ ಮತ್ತು ಕನ್ನಡದಲ್ಲಿ ಶಿಕ್ಷಣ ಕಲಿಸುವ ವ್ಯವಸ್ಥೆ ನಿರ್ಮಾಣ ಮಾಡುವಂತೆ ಒತ್ತಡ ಉಂಟುಮಾಡಿರುವ ಹಾಗೆ ಆಡಳಿತದಲ್ಲಿಯೂ ಕನ್ನಡವನ್ನು ಬಳಕೆಗೆ ತರಬೇಕು ಎಂದು ಒತ್ತಡ ಉಂಟುಮಾಡಿದೆ. ಇದಕ್ಕೆ ಪೂರಕವಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಹಂತಹಂತವಾಗಿ ಕನ್ನಡವನ್ನು ಆಡಳಿತದಲ್ಲಿ ಬಳಕೆಗೆ ತರುವ ಉದ್ದೇಶದಿಂದ ಹಲವು ಆದೇಶ, ಜ್ಞಾಪನ, ಸುತ್ತೋಲೆಗಳನ್ನು ಹೊರಡಿಸಿವೆ. ಆದರೂ ಕರ್ನಾಟಕದಲ್ಲಿ ಭಾಷಾಸಮಸ್ಯೆ ಬಗೆಹರಿದಿಲ್ಲ. ಕನ್ನಡಿಗರು ವಾಸಿಸುವ ಪ್ರದೇಶಗಳು ಅಭಿವೃದ್ಧಿ ಹೊಂದಿಲ್ಲ.

ಏಕೆಂದರೆ ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಕರ್ನಾಟಕ ಏಕೀಕರಣ ಹೋರಾಟದ ಮುಖ್ಯ ಆಶಯ ಕನ್ನಡ ಭಾಷೆಯ ಆಧಾರದಲ್ಲಿ ಪ್ರತ್ಯೇಕ ರಾಜ್ಯ ರಚನೆಯಾದರೆ ಆಡಳಿತದಲ್ಲಿ, ಶಿಕ್ಷಣದಲ್ಲಿ, ಉದ್ಯೋಗದಲ್ಲಿ ಎಲ್ಲ ಕಡೆಗಳಲ್ಲಿ ಕನ್ನಡ ಬಳಕೆಗೆ ಬರುತ್ತದೆ. ಕನ್ನಡದ ಮಕ್ಕಳಿಗೆ ಕನ್ನಡದಲ್ಲಿ ಶಿಕ್ಷಣ ಸಿಗುತ್ತದೆ. ಉದ್ಯೋಗ ಪಡೆದು ಅಭಿವೃದ್ಧಿಯಾಗುತ್ತಾರೆ. ಇದರಿಂದ ಪ್ರದೇಶವೂ ಅಭಿವೃದ್ಧಿಯಾಗುತ್ತದೆ. ನಾವುಗಳು ಭಾಷಿಕ ಸೇರಿದಂತೆ ಇತರ ಸಮಸ್ಯೆಗಳಿಂದ ಹೊರಬರಬಹುದು ಎಂದು ಭಾವಿಸಿ ಹೋರಾಟ ಮಾಡಿ ರಚಿಸಿಕೊಂಡ ಕರ್ನಾಟಕದಲ್ಲಿ, ಕರ್ನಾಟಕ ಏಕೀಕರಣವಾದ ನಂತರದಲ್ಲೂ ಉತ್ತರ ಕರ್ನಾಟಕ ಅಭಿವೃದ್ಧಿಯಲ್ಲಿ ಹಿಂದೆ ಉಳಿದುಕೊಂಡಿದೆ. ಇಲ್ಲಿನ ಮಕ್ಕಳು ಶಿಕ್ಷಣದಿಂದ, ಜನರು ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿದ್ದಾರೆ. ಹೀಗಾಗಿ ಅಂದು ತಮ್ಮ ಪ್ರದೇಶದ ಅಭಿವೃದ್ಧಿಗಾಗಿ ಕನ್ನಡ ಭಾಷೆಯ ಆಧಾರದಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ಮಾಡಿದ್ದ ಉತ್ತರ ಕರ್ನಾಟಕದ ಜನತೆ ಇಂದು ಅಭಿವೃದ್ಧಿಯ ಕಾರಣಕ್ಕಾಗಿ ಪ್ರತ್ಯೇಕ ರಾಜ್ಯದ ಬೇಡಿಕೆಯಿಟ್ಟು ಹೋರಾಟ ಮಾಡುತ್ತಿದ್ದಾರೆ. ಇದಕ್ಕೆ ಅಧಿಕಾರದ ದಾಹಕ್ಕೆ ಒಳಗಾಗಿರುವ ರಾಜಕಾರಣಿಗಳು ಬೆಂಬಲ ವ್ಯಕ್ತಪಡಿಸಿದ್ದಾರೆ. ಇಲ್ಲಿ ರಾಜಕಾರಣಿಗಳು ಮತ್ತು ಅವರ ಅಧಿಕಾರದ ದಾಹ ಏನೇ ಇದ್ದರೂ ತಮ್ಮ

ಪ್ರದೇಶದ ಅಭಿವೃದ್ಧಿಗಾಗಿ ಪ್ರತ್ಯೇಕ ರಾಜ್ಯ ರಚನೆ ಮಾಡಿಕೊಂಡಾಗಲು ಅಭಿವೃದ್ಧಿ ಹೊಂದಲು ಸಾಧ್ಯವಾಗದೆ ಇರುವುದು ಮುಖ್ಯ ವಿಚಾರ. ಒಂದು ಪ್ರದೇಶ ಅಭಿವೃದ್ಧಿ ಹೊಂದುವುದಕ್ಕೆ ಅಥವಾ ಹಿಂದೆ ಉಳಿದುಕೊಳ್ಳುವುದಕ್ಕೆ ಈಗಾಗಲೇ ಹೇಳಿದ ಹಾಗೆ ಒಂದು ಪ್ರದೇಶದ ಆಡಳಿತ, ಶಿಕ್ಷಣ, ಉದ್ಯೋಗಗಳಲ್ಲಿ ಬಳಕೆಯಾಗುವ ಭಾಷೆ ಕಾರಣವಾದರೂ ಅದೊಂದೇ ಕಾರಣವಲ್ಲ. ಅದರ ಹಿಂದೆ ಬೇರೆಬೇರೆ ಅಂಶಗಳು ಇರುತ್ತವೆ. ಇವುಗಳಲ್ಲಿ ಪ್ರಧಾನವಾಗಿ ಆ ಪ್ರದೇಶದಲ್ಲಿನ ಆಡಳಿತಗಾರರು ಮತ್ತು ಜನತೆಯ ನಡುವೆ ಹೊಂದಾಣಿಕೆ, ಅಲ್ಲಿನ ರಾಜಕೀಯ ನಾಯಕರ ಇಚ್ಛಾಶಕ್ತಿ, ತಮ್ಮ ಪ್ರದೇಶದ ಅಭಿವೃದ್ಧಿಯ ಬಗೆಗೆ ಅವರ ಕಾಳಜಿ, ಇದಕ್ಕೆ ಜನರ ಸ್ಪಂದನೆ ಕಾರಣವಾಗಿರುತ್ತದೆ.

ಹೀಗಿದ್ದೂ ಕರ್ನಾಟಕ ಏಕೀಕರಣವಾದ ನಂತರ ಉತ್ತರ ಕರ್ನಾಟಕದಿಂದ ಆಯ್ಕೆಯಾಗಿರುವ ಜನಪ್ರತಿನಿಧಿಗಳು ತಮ್ಮ ಭಾಗದ ಜನರ ಸಮಸ್ಯೆಗಳಿಗೆ ಸ್ಪಂದಿಸುವ, ತಮ್ಮ ಭಾಗದ ಅಭಿವೃದ್ಧಿಗೆ ಇಚ್ಛಾಶಕ್ತಿಯಿಂದ ದುಡಿಯುವ ಕೆಲಸ ಮಾಡಿಲ್ಲ. ಇವರು ಚುನಾವಣೆಯ ಸಂದರ್ಭದಲ್ಲಿ ಮತಕ್ಕಾಗಿ ಜನರ ಬಳಿ ಹೋಗಿರುವುದು ಬಿಟ್ಟರೆ ತಮ್ಮ ಅಧಿಕಾರವಧಿಯ ಹೆಚ್ಚಿನ ಸಮಯವನ್ನು ರಾಜ್ಯದ ಕೇಂದ್ರಭಾಗವಾದ ಬೆಂಗಳೂರಿನಲ್ಲಿ ಕಳೆದಿದ್ದಾರೆ. ಹೀಗಾಗಿ ಉತ್ತರ ಕರ್ನಾಟಕದ ಜನರು ತಮ್ಮದೇ ಭಾಷೆಯ ಆಡಳಿತ ಕೇಂದ್ರದೊಳಗೆ ಇದ್ದಾಗಲು ಅಭಿವೃದ್ಧಿಯಲ್ಲಿ ಹಿಂದೆ ಉಳಿದುಕೊಂಡಿದ್ದಾರೆ. ಇದಕ್ಕೆ ಕಾರಣ ಈ ಹಿಂದೆಯೇ ಹೇಳಿದ ಹಾಗೆ ಆಡಳಿತಗಾರರು ಮತ್ತು ಜನತೆಯ ನಡುವೆ ಇರುವ ಹೊಂದಾಣಿಕೆಯ ಕೊರತೆ. ಇಲ್ಲಿನ ರಾಜಕಾರಣಿಗಳ ನಿರ್ಲಕ್ಷ್ಯ, ನಿರಾಸಕ್ತಿ ಕಾರಣವಾಗಿದೆ. ಹೀಗಾಗಿ ಒಂದು ಪ್ರದೇಶದ ಅಭಿವೃದ್ಧಿ ಭಾಷಿಕವಾದದ್ದರ ಜೊತೆಗೆ ರಾಜಕೀಯವಾದ, ಆರ್ಥಿಕವಾದ, ಸಾಮಾಜಿಕವಾದ, ಶೈಕ್ಷಣಿಕವಾದ ಸಾಂಸ್ಕೃತಿಕವಾದ ಆಯಾಮಗಳನ್ನು ಒಳಗೊಂಡಿದೆ. ಇವುಗಳನ್ನು ಅರಿತು ಒಂದು ಪ್ರದೇಶದ ಆಡಳಿತದಲ್ಲಿ ಬಳಕೆಯಾಗುವ ಭಾಷೆಯನ್ನು ನಿರ್ಧರಿಸಬೇಕಾಗುತ್ತದೆ.

ಇಂತಹ ಪ್ರಯತ್ನಗಳನ್ನು ಮಾಡದೇ ಕೇವಲ ಭಾಷಾನೀತಿಯನ್ನು ಜಾರಿಗೆ ತಂದ ಮಾತ್ರಕ್ಕೆ ಆಡಳಿತದಲ್ಲಿ ಭಾಷೆಗಳು ಬಳಕೆಯಾಗುವುದಿಲ್ಲ. ಬದಲಾಗಿ ಇಂತಹ ಭಾಷಾನೀತಿಗಳೇ ಸಮಸ್ಯೆಗಳಾಗಿ ಆ ಪ್ರದೇಶದ ಜನರ ಬದುಕು, ಜೀವನಕ್ರಮಗಳಿಗೆ ಮಾರಕವಾಗುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಕರ್ನಾಟಕದ ಭೂಪ್ರದೇಶದ ಆಡಳಿತದಲ್ಲಿ ಭಾಷಾಬಳಕೆ ಸ್ವರೂಪ ಮತ್ತು ಸಮಸ್ಯೆಗಳನ್ನು ಪ್ರಮುಖವಾಗಿ ಚರ್ಚಿಸಲಾಗುತ್ತಿದೆ. ಹೀಗೆ ಚರ್ಚಿಸುವಾಗ ಕರ್ನಾಟಕದ ಆಡಳಿತವನ್ನು ಮುಖ್ಯವಾಗಿ ಮೂರು ಭಾಗಗಳಾಗಿ ವಿಂಗಡಿಸಿಕೊಳ್ಳಬಹುದು. ೧) ರಾಜರುಗಳ ಆಡಳಿತ ೨) ಬ್ರಿಟೀಷರ ಆಡಳಿತ ೩) ಭಾರತ ಸ್ವತಂತ್ರಗೊಂಡ ನಂತರ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜನರಿಂದ ಆಯ್ಕೆಯಾದ ಸರ್ಕಾರಗಳು ನಡೆಸಿರುವ ಆಡಳಿತ. ಈ ಮೂರೂ ಕಾಲಘಟ್ಟಗಳ ಆಡಳಿತದಲ್ಲಿ ಬಳಕೆಯಾಗಿರುವ ಭಾಷೆಯ ಸ್ವರೂಪ ಮತ್ತು ಉದ್ಭವವಾಗಿರುವ ಸಮಸ್ಯೆಗಳು ಬೇರೆಬೇರೆಯೇ ಆಗಿವೆ. ಈ ಎಲ್ಲವನ್ನು ತುಂಬಾ ಸೂಕ್ಷ್ಮವಾಗಿ ಗಮನಿಸಿ ಈ ಅಧ್ಯಾಯದಲ್ಲಿ ಚರ್ಚಿಸಿಲ್ಲ. ಏಕೆಂದರೆ ಈ ಅಧ್ಯಯನದ ಮುಖ್ಯ ಉದ್ದೇಶ ಏಕೀಕರಣ ನಂತರದ ಕರ್ನಾಟಕದ ಭಾಷಾಸಮಸ್ಯೆಯನ್ನು ಕುರಿತದ್ದಾಗಿದೆ. ಆದರೆ ಏಕೀಕರಣ ನಂತರದ ಕರ್ನಾಟಕದ ಭಾಷಾಸಮಸ್ಯೆಗೂ ಏಕೀಕರಣ ಪೂರ್ವ

ಕರ್ನಾಟಕದ ಆಡಳಿತದಲ್ಲಿ ಬಳಕೆಯಲ್ಲಿದ್ದ ಭಾಷಾಸ್ವರೂಪಕ್ಕೆ ಸಂಬಂಧವಿದೆ. ಈ ಹಿನ್ನೆಲೆಯಲ್ಲಿ ಅಧ್ಯಾಯವನ್ನು 'ರಾಜತ್ವದ ಆಡಳಿತ: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು', 'ಆಂಗ್ಲರ ಆಡಳಿತ: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು, ಮತ್ತು 'ಸ್ವತಂತ್ರ ಭಾರತದ ಆಡಳಿತ: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು' ಎಂದು ಒಟ್ಟು ಮೂರು ಭಾಗವಾಗಿ ವಿಂಗಡಿಸಿಕೊಳ್ಳಲಾಗಿದೆ. ಈ ಮೂರನೇ ಭಾಗದ ಆಡಳಿತದಲ್ಲಿ ಭಾರತ ತನ್ನದೇ ಆದ ಸ್ವತಂತ್ರ ಸಂವಿಧಾನವನ್ನು ಒಳಗೊಂಡ ಪ್ರಜಾಪ್ರಭುತ್ವ ದೇಶವಾಗಿದೆ. ಈ ಹಂತದ ಆಡಳಿತದಲ್ಲಿ ಭಾಷೆಗಳನ್ನು ಬಳಸುವ ಉದ್ದೇಶ, ಸ್ವರೂಪ ಮತ್ತು ಉದ್ಭವವಾಗಿರುವ ಸಮಸ್ಯೆಗಳು ಈ ಹಿಂದಿನ ಕಾಲದ ಆಡಳಿತಗಳಿಗಿಂತ ಭಿನ್ನವಾಗಿವೆ ಮತ್ತು ತೀವ್ರವಾಗಿವೆ. ಹೀಗಾಗಿ ಮೂರನೇ ಭಾಗವನ್ನು ಮತ್ತೆ 'ಏಕೀಕರಣ ನಂತರದ ಕರ್ನಾಟಕ: ಕನ್ನಡದ ಬಳಕೆ ಮತ್ತು ಸಮಸ್ಯೆಗಳು', 'ಭಾಷಾಅಲ್ಪಸಂಖ್ಯಾತರು: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು' ಹಾಗೂ 'ಇಂಗ್ಲಿಶ್: ಬಳಕೆ ಮತ್ತು ಸಮಸ್ಯೆಗಳು' ಎಂದು ವಿಂಗಡಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

**೫.೨ ರಾಜತ್ವದ ಆಡಳಿತ: ಆಡಳಿತದಲ್ಲಿ ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು**

ಇಂದಿನ ಕರ್ನಾಟಕ ರಾಜ್ಯ ರೂಪುಗೊಳ್ಳುವ ಪೂರ್ವದಿಂದ ಕರ್ನಾಟಕದ ಭೂಪ್ರದೇಶವನ್ನು ಹಲವು ರಾಜಮನೆತನಗಳು ಆಳ್ವಿಕೆ ಮಾಡಿವೆ. ಇವುಗಳಲ್ಲಿ ನಮಗೆ ಮೌರ್ಯರು ಮತ್ತು ಶಾತವಾಹನರ ಕಾಲದ ಆಡಳಿತದಿಂದ ಬಳಕೆಯಾಗಿರುವ ಭಾಷೆ ಮುಖ್ಯವಾಗುತ್ತದೆ. ಏಕೆಂದರೆ ಭಾಷಾವಿಜ್ಞಾನಿಗಳು ಗುರುತಿಸಿರುವ ಪ್ರಕಾರ ಕರ್ನಾಟಕ ರಾಜ್ಯ ರೂಪುಗೊಳ್ಳಲು ಕಾರಣವಾಗಿರುವ ಭಾಷೆಯಾದ ಕನ್ನಡದ ಆರಂಭ ಈ ಕಾಲದಲ್ಲಿಯೇ ಆಗಿದೆ. ಇವರ ಆಡಳಿತದ ಅವಧಿಯಲ್ಲಿ ಆಡಳಿತ ಭಾಷೆಯಾಗಿ ಬಳಕೆಯಾಗುತ್ತಿದ್ದ ಭಾಷೆಗಳ ಬಗೆಗೆ ಸ್ಪಷ್ಟವಾದ ದಾಖಲೆಗಳಿಲ್ಲ. ಎಚ್ಚೆಸ್ಕೆಯವರು 'ಅಶೋಕನ ಆಡಳಿತಕ್ಕೆ ಒಳಪಟ್ಟಿದ್ದ ಕಾಲದಲ್ಲಿ ಇಲ್ಲಿಯ ಪ್ರಾಂತಾಧಿಕಾರಿಗಳು ಪ್ರಾಕೃತವನ್ನು ಆಡಳಿತ ಭಾಷೆಯಾಗಿ ಬಳಸುತ್ತಿದ್ದರು. ಸಾತವಾಹನರು ಮತ್ತು ಚುಟುಗಳ ಆಳ್ವಿಕೆಯಲ್ಲಿಯೂ ಇದೇ ಪರಿಸ್ಥಿತಿ ಮುಂದುವರೆದಿತ್ತು.[೨]' ಎಂದರೆ, ಡಾ. ಸೋಮಶೇಖರಗೌಡರವರು "ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಚೋಳ, ಚಾಳುಕ್ಯ, ಹೊಯ್ಸಳ ಮತ್ತು ವಿಜಯನಗರದ ಅರಸರು ಕರ್ನಾಟಕದಲ್ಲಿ ಅಧಿಕಾರದಲ್ಲಿದ್ದಾಗ ಕನ್ನಡ ಆಡಳಿತ ಭಾಷೆಯಾಗಿತ್ತು ಎಂಬುದಕ್ಕೆ ಶಾಸನಾಧಾರಗಳಿವೆ[೩]" ಎಂದಿದ್ದಾರೆ. ಈ ಇಬ್ಬರೂ ವ್ಯಕ್ತಿಗಳ ಅಭಿಪ್ರಾಯಗಳನ್ನು ಗಮನಿಸಿದಾಗ ಮೌರ್ಯರು ಮತ್ತು ಶಾತವಾಹನರ ಕಾಲದ ಆಡಳಿತದಲ್ಲಿ ಬಳಕೆಯಾಗಿರುವ ಭಾಷೆಯ ಬಗೆಗೆ ಭಿನ್ನಾಭಿಪ್ರಾಯಗಳಿರುವುದು ಸ್ಪಷ್ಟವಾಗುತ್ತದೆ.

ಕನ್ನಡ ಭಾಷೆಯ ಉಗಮದ ಇತಿಹಾಸವನ್ನು ಗಮನಿಸಿದಾಗ ಭಾಷಾವಿದ್ವಾಂಸರು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಪ್ರಕಾರ ಕನ್ನಡ ಕ್ರಿಸ್ತಪೂರ್ವ ೫ನೇ ಅಥವಾ ನಾಲ್ಕನೇ ಶತಮಾನದಲ್ಲಿ ದ್ರಾವಿಡ ಭಾಷೆಯಿಂದ ಕವಲೊಡೆದು ಪ್ರತ್ಯೇಕ ಸ್ವತಂತ್ರ ಭಾಷೆಯಾಗಿದೆ. ಅದಕ್ಕಿಂತಲೂ ಹಿಂದೆ ಕನ್ನಡ ಭಾಷೆಯನ್ನಾಡುವವರು ದ್ರಾವಿಡ ಭಾಷೆಯನ್ನಾಡುತ್ತಿದ್ದರು. ಆಗ ಕನ್ನಡ ಭಾಷಿಕ ಸಮುದಾಯವೂ

ತನ್ನ ಭಾಷೆಗೆ ಪ್ರತ್ಯೇಕ ಸ್ವತಂತ್ರ ಲಿಪಿಯನ್ನು ರೂಪಿಸಿಕೊಳ್ಳಲು ಆರಂಭಿಸಿದೆ. ಹೀಗಾಗಿ ಕನ್ನಡ ಭಾಷೆಯ ಲಿಪಿಯು 'ಅಶೋಕಲಿಪಿಯಿಂದಲೇ ಪ್ರಾರಂಭವಾಯಿತು'' ಎನ್ನುತ್ತಾರೆ ರಾ.ಯ.ಧಾರವಾಡಕರ. ಈ ಪ್ರಕಾರವಾಗಿ ನೋಡುವುದಾದರೆ ಕನ್ನಡ ಭಾಷೆಯು ಅಶೋಕನ ಆಡಳಿತದ ಅವಧಿಯಲ್ಲಿ ಪ್ರತ್ಯೇಕ ಸ್ವತಂತ್ರ ಭಾಷೆಯಾಗಲು, ಲಿಪಿ ರೂಪಿಸಿಕೊಳ್ಳಲು ಆರಂಭಿಸಿರಬೇಕು. ಆಗ ಕನ್ನಡದ ಹಲವು ಪದಗಳು ಆಡಳಿತದಲ್ಲಿ ಬಳಕೆಯಾಗಿರಬೇಕು. ಆದರೆ ಮೌರ್ಯರ ಮತ್ತು ಶಾತವಾನರ ಕಾಲದಲ್ಲಿ ಕನ್ನಡ ಪೂರ್ತಿಯಾಗಿ ಆಡಳಿತದಲ್ಲಿ ಬಳಕೆಯಾಗಿರುವ ಸಾಧ್ಯತೆ ಕಡಿಮೆ.

ಏಕೆಂದರೆ ಒಂದು ಭಾಷೆ ಆಡಳಿತದಲ್ಲಿ ಬಳಕೆಯಾಗಬೇಕಾದರೆ ಅದು ಉಗಮವಾಗಿ ಹಲವು ವರ್ಷಗಳು ಆಗಿರಬೇಕು. ಲಿಪಿ ರೂಪಿಸಿಕೊಂಡಿರಬೇಕು. ಈ ಅವಧಿಯಲ್ಲಿ ಬಳಕೆಯಾಗಿ ಅಭಿವೃದ್ಧಿ ಹೊಂದಿರಬೇಕು. ಹಾಗೆಯೇ ಭಾಷಾಶ್ರೀಮಂತಿಕೆ ಪಡೆದು ಆ ಭಾಷೆಯನ್ನಾಡುವ ಜನರು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಪ್ರಬಲವಾಗಿರಬೇಕು. ಆಗ ಮಾತ್ರ ಒಂದು ಭಾಷೆ ಆಡಳಿತ ಭಾಷೆಯಾಗಿ ಬಳಕೆಯಾಗಲು ಸಾಧ್ಯ. ಹಾಗೆ ನೋಡಿದರೆ ಕನ್ನಡ ಭಾಷಿಕ ಸಮುದಾಯವು ಮೌರ್ಯರು, ಶಾತವಾಹನರ ಕಾಲದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಪ್ರಬಲವಾಗಿರಲಿಲ್ಲ. ಕನ್ನಡವು ಶ್ರೀಮಂತವಾಗಿರಲಿಲ್ಲ. ಭಾಷಾಸಂಶೋಧಕರು ಗುರುತಿಸುವ ಪ್ರಕಾರ ಕನ್ನಡ ಆಗ ತಾನೆ ತನ್ನ ಸ್ವತಂತ್ರ ಅಸ್ತಿತ್ವ ಕಂಡುಕೊಳ್ಳುವ ಪ್ರಕ್ರಿಯೆ ಆರಂಭಿಸಿತ್ತು. ಅಲ್ಲದೆ ಕನ್ನಡದ ಮೊಟ್ಟಮೊದಲ ಶಾಸನವೆಂದು ಕರೆಯಲ್ಪಡುವ ಹಲ್ಮಿಡಿ ಶಾಸನದಲ್ಲಿಯೇ ಪೂರ್ಣವಾಗಿ ಕನ್ನಡ ಬಳಕೆಯಾಗಿಲ್ಲ. ಹೀಗಾಗಿ ಕನ್ನಡವು ಮೌರ್ಯರು ಮತ್ತು ಶಾತವಾಹನರ ಕಾಲದ ಆಡಳಿತದಲ್ಲಿ ಪೂರ್ಣವಾಗಿ ಬಳಕೆಯಾಗಿರುವ ಸಾಧ್ಯತೆಗಳು ಕಡಿಮೆ. ಎಚ್ಚೆಸ್ಕೆಯವರು ಗುರುತಿಸುವ ಹಾಗೆ ಪ್ರಾಕೃತ ಆಡಳಿತ ಭಾಷೆಯಾಗಿ ಅದರಲ್ಲಿ ಕೆಲವು ಕನ್ನಡದ ಪದಗಳು ಸೇರಿರಬಹುದು.

ಆದರೆ ಇಂದಿನ ಕರ್ನಾಟಕ ಭೂಪ್ರದೇಶದ ಇತಿಹಾಸವನ್ನು ಗಮನಿಸಿದಾಗ ಇಲ್ಲಿ ಮೌರ್ಯರು ಮತ್ತು ಶಾತವಾಹನರು ಮಾತ್ರವಲ್ಲದೆ ಹಲವು ರಾಜಮನೆತನಗಳು ಆಡಳಿತ ನಡೆಸಿವೆ. ಇವುಗಳಲ್ಲಿ ಕದಂಬರು, ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯ ಅರಸರು, ಬಹಮನಿ ಸುಲ್ತಾನರು, ಆದಿಲ್‌ಶಾಹಿಗಳು, ಮೈಸೂರಿನ ಒಡೆಯರ್ ಮನೆತನಗಳು ಪ್ರಮುಖವಾಗಿವೆ. ಇವುಗಳ ಆಡಳಿತ ಸಂದರ್ಭದಲ್ಲಿ ಪ್ರಾಕೃತ, ಸಂಸ್ಕೃತ, ಕನ್ನಡ, ತೆಲುಗು, ತಮಿಳು, ಮರಾಠಿ, ಉರ್ದು, ಪರ್ಷಿಯನ್ ಮೊದಲಾದ ಭಾಷೆಗಳು ಆಡಳಿತ ಭಾಷೆಯಾಗಿ ಬಳಕೆಯಾಗಿವೆ. ಇವುಗಳಲ್ಲಿ ಕನ್ನಡ ಆಡಳಿತ ಭಾಷೆಯಾಗಿ ಕರ್ನಾಟಕದ ಭೂಪ್ರದೇಶದಲ್ಲಿ ಬಳಕೆಯಾಗಿರುವುದರ ಬಗ್ಗೆ ಗಮನಿಸಿದಾಗ ಲಭ್ಯವಿರುವ ದಾಖಲೆಗಳ ಪ್ರಕಾರ ಹೇಳುವುದಾದರೆ ಹಾಸನ ಜಿಲ್ಲೆಯ ಬೇಲೂರು ಹೋಬಳಿಯ ಹಲ್ಮಿಡಿಯಲ್ಲಿ ದೊರಕಿರುವ ಶಾಸನದಲ್ಲಿ ಬಳಕೆಯಾಗಿರುವ ಕನ್ನಡವನ್ನು ಆಧಾರವಾಗಿಟ್ಟುಕೊಡು ಕ್ರಿ.ಶ.ಸುಮಾರು ೪೫೦ರಿಂದ ಆಡಳಿತ ಭಾಷೆಯಾಗಿ ಬಳಕೆಯಾಗಿರಬಹುದು ಎಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ.

ಇನ್ನು ಕವಿರಾಜಮಾರ್ಗಕಾರನ ಪ್ರಕಾರವಾಗಿ ಕಾವೇರಿಯಿಂದ-ಗೋದಾವರಿ ನದಿಯವರೆಗು ಇದ್ದ ವಿಸ್ತಾರವಾದ ಪ್ರದೇಶ ಕನ್ನಡದ ಪ್ರದೇಶವಾಗಿತ್ತು. ಇಂತಹ ವಿಸ್ತಾರವಾದ ಕನ್ನಡದ ಭೂಪ್ರದೇಶದಲ್ಲಿ ಬೇರೆಬೇರೆ ಕಾಲಘಟ್ಟಗಳಲ್ಲಿ ವಿವಿಧ ರಾಜಮನೆತನಗಳು ಆಳ್ವಿಕೆ ನಡೆಸಿವೆ. ಈ ಸಂದರ್ಭಗಳಲ್ಲಿ ವಿವಿಧ ಭಾಷೆಗಳು ಆಡಳಿತದಲ್ಲಿ ಬಳಕೆಯಾಗಿವೆ. ಮುಖ್ಯವಾಗಿ, ಗುಪ್ತರ ಆಡಳಿತದಲ್ಲಿ ಸಂಸ್ಕೃತ ಆಡಳಿತ ಭಾಷೆಯಾಗಿ ಬಳಕೆಯಾಗಿದೆ. ಹಲ್ಮಿಡಿ ಶಾಸನದ ನಂತರದಲ್ಲಿ ಆಡಳಿತ ನಡೆಸಿರುವ ಬಾದಾಮಿ ಚಾಲುಕ್ಯರು ಮತ್ತು ರಾಷ್ಟ್ರಕೂಟರು ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಸಿದ್ದಾರೆ. ಕದಂಬರ ಆಳ್ವಿಕೆಯಲ್ಲಿಯೂ ಕನ್ನಡ ಆಡಳಿತ ಭಾಷೆಯಾಗಿ ಬಳಕೆಯಾಗಿದೆ. 'ವಿಜಯನಗರ ಸಾಮ್ರಾಜ್ಯದ ಪತನ ಹೊಂದಿದ ಮೇಲೆ ಕರ್ನಾಟಕದ ಹಲವು ಭಾಗಗಳು ಮುಸ್ಲಿಂರ ಆಳ್ವಿಕೆಗೆ ಒಳಪಟ್ಟವೆ. ಮರಾಠರು ಹಲವು ಭಾಗಗಳನ್ನು ವಶಪಡಿಸಿಕೊಂಡಿದ್ದಾರೆ. ಬಹಮನಿ ಸುಲ್ತಾನರ ರಾಜ್ಯಗಳಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿತ್ತು. ಬಿಜಾಪುರ ಸುಲ್ತಾನರ ಅನೇಕ ಶಾಸನಗಳು ಕನ್ನಡದಲ್ಲಿವೆ. ಆಡಳಿತದಲ್ಲಿ ಪಾರಸಿ ಮತ್ತು ಮರಾಠಿ ಭಾಷೆಗಳು ಬಳಕೆಯಾಗತೊಡಗಿದವು. ಈ ಎರಡೂ ಭಾಷೆಗಳ ಹಲವು ಶಬ್ದಗಳು ಕನ್ನಡದಲ್ಲಿ ಸೇರಿಕೊಂಡವು. ಬಹಮನಿ ಮತ್ತು ಆದಿಲ್‌ಶಾಹಿ ಸುಲ್ತಾನರ ಕಾಲದಲ್ಲಿ ಪಾರಸಿ, ಅರಬ್ಬಿ, ಮರಾಠಿ ಮತ್ತು ಕನ್ನಡಗಳು ಕೂಡಿಕೊಂಡು ರೇಖ್ತಾ ಎಂಬ ಭಾಷೆ ಉಗಮಗೊಂಡಿತು. ಇದು ಮುಂದೆ ಉರ್ದುವಿಗೆ ಎಡೆಕೊಟ್ಟಿದೆ[೫].'

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ರಾಜತ್ವದ ಆಡಳಿತದ ಕರ್ನಾಟಕದಲ್ಲಿ ವಿವಿದ ಕಾಲಘಟ್ಟ ಮತ್ತು ಹಂತಗಳನ್ನು ಆಧರಿಸಿ ಭಾಷೆಗಳ ಬಳಕೆ ಬದಲಾಗಿವೆ. ಹೀಗೆ ಆಡಳಿತದಲ್ಲಿ ಭಾಷೆಗಳು ಬದಲಾಗಿರುವುದು ಒಂದು ಭಾಷಿಕ ಸಮುದಾಯ ಇನ್ನೊಂದು ಭಾಷಿಕ ಸಮುದಾಯದ ಮೇಲೆ ತನ್ನ ಅಧಿಪತ್ಯ ಸ್ಥಾಪಿಸಲು ನಡೆಸಿರುವ ಪ್ರಯತ್ನದಿಂದಲ್ಲ. ಬದಲಾಗಿ ಅಂದಿನ ಶಿಕ್ಷಣದಲ್ಲಿ ಕಲಿಯುತ್ತಿದ್ದ ಭಾಷೆಗಳು, ರಾಜಕೀಯ ಅಧಿಕಾರದ ಬದಲಾವಣೆಗಳು, ಜನ ಮತ್ತು ಆಡಳಿತಗಾರರ ನಡುವಿನ ಭಾಷೆಗಳಲ್ಲಿ ಭಿನ್ನತೆಗಳು ಇದ್ದದ್ದು ಕಾರಣವಾಗಿದೆ. ಅಂದಿನ ಭಾರತೀಯ ಸಮಾಜದಲ್ಲಿ ಹಿಂದು ಮತ್ತು ಮುಸ್ಲಿಂ ಎರಡೂ ಜನಾಂಗದವರು ಶಿಕ್ಷಣ ಕಲಿಯುತ್ತಿದ್ದರು. ಹಿಂದೂಗಳಲ್ಲಿ ಬ್ರಾಹ್ಮಣರು ಮಾತ್ರ ಶಿಕ್ಷಣವನ್ನು ಕಲಿಯುತ್ತಿದ್ದು ಇವರು ಸಂಸ್ಕೃತದಲ್ಲಿ ಕಲಿಯುತ್ತಿದ್ದರು. ಮುಸ್ಲಿಂರು ಅರೇಬಿಕ್ ಭಾಷೆಯಲ್ಲಿ ಕಲಿಯುತ್ತಿದ್ದರು. ಇವರಲ್ಲಿ ಯುದ್ಧಗಳು ನಡೆದು ಅಧಿಕಾರಗಳು ಬದಲಾದಾಗ ಒಬ್ಬರ ಭಾಷೆಯಲ್ಲಿ ಮತ್ತೊಬ್ಬರಿಗೆ ಆಡಳಿತ ನಡೆಸಲು ಭಾಷಾಸಾಮರ್ಥ್ಯ ಇಲ್ಲದೇ ಇದ್ದುದು, ಹಿಂದೂಗಳಲ್ಲಿ ಬೇರೇ ಬೇರೆ ಭಾಷಿಕ ಸಮುದಾಯಗಳು ಆಡಳಿತ ನಡೆಸಿದ್ದು ಇವರಿಗೆ ಪರಸ್ಪರರ ಭಾಷೆಗಳ ತಿಳುವಳಿಕೆ ಇಲ್ಲದೇ ಇದ್ದುದರಿಂದ ರಾಜರುಗಳ ಕಾಲದಲ್ಲಿ ಆಡಳಿತ ಬದಲಾದಾಗ ಆಡಳಿತದ ಉನ್ನತ ಹಂತದಲ್ಲಿ ಬಳಸುವ ಭಾಷೆಗಳಲ್ಲಿ ಬದಲಾವಣೆಗಳಾಗಿವೆ.

ಆದರೆ ಈ ಬದಲಾವಣೆಗಳು ಆಡಳಿತದ ಕೆಳಹಂತಗಳಲ್ಲಿ ಆಗಿಲ್ಲ. ಏಕೆಂದರೆ ರಾಜರುಗಳು ಬದಲಾದ ಹಾಗೆ ಅವರ ಭಾಷೆಗೆ ಅನುಗುಣವಾಗಿ ಕೆಳಹಂತದ ಆಡಳಿತದಲ್ಲಿ ರಾಜರುಗಳ

ಭಾಷೆಗಳನ್ನು ಬಳಕೆಗೆ ತರಲು ಅವರ ಭಾಷೆಯ ತಿಳುವಳಿಕೆ ಇರುವ, ಅದನ್ನು ಆಡಳಿತದಲ್ಲಿ ಬಳಸುವ ಭಾಷಾಸಾಮರ್ಥ್ಯ ಇರುವ ನೌಕರರನ್ನು ನೇಮಕ ಮಾಡಿಕೊಳ್ಳುವ ಅಗತ್ಯ ಇತ್ತು. ಇಲ್ಲವೆ ಆಡಳಿತದ ಕೆಳಹಂತದಲ್ಲಿ ತಮ್ಮ ಭಾಷೆಯನ್ನು ಬಳಕೆಗೆ ತರಲು ಕೆಳಹಂತದ ಆಡಳಿತಗಾರರಿಗೆ ತಮ್ಮ ಭಾಷೆಯನ್ನು ಕಲಿಸಿ, ಆಡಳಿತದಲ್ಲಿ ಬಳಸುವುದಕ್ಕೆ ತರಬೇತಿ ನೀಡಬೇಕಿತ್ತು. ಇದು ಅಂದಿನ ಕಾಲದ ರಾಜರುಗಳಿಗೆ ಮುಖ್ಯವಾಗಿರಲಿಲ್ಲ. ಅವರಿಗೆ ತಮ್ಮ ಸಮುದಾಯದ ಭಾಷಾಸಾಮ್ರಾಜ್ಯದ ವಿಸ್ತರಣೆಗಿಂತ ರಾಜಕೀಯ ಅಧಿಕಾರ ಉಳಿಸಿಕೊಳ್ಳುವುದು, ಅದರ ವಿಸ್ತರಣೆ, ಯುದ್ಧ, ಯುದ್ಧಕ್ಕೆ ಸಿದ್ಧತೆ ಇತ್ಯಾದಿ ವಿಚಾರಗಳು ಪ್ರಧಾನವಾಗಿವೆ. ಹೀಗಾಗಿ ಆಡಳಿತದಲ್ಲಿ ಬಳಕೆಯಾಗುವ ಭಾಷೆಯ ಬಗೆಗೆ ರಾಜರುಗಳ ಕಾಲದಲ್ಲಿ ಅಷ್ಟು ಗಂಭೀರವಾಗಿ ಆಲೋಚಿಸಿಲ್ಲ. ಅಂದಿನ ಕಾಲದಲ್ಲಿ ಆಡಳಿತ ನಡೆಸಿರುವ ರಾಜರುಗಳು ತಮ್ಮ ಭಾಷಾಸಮಸ್ಯೆಯ ಪರಿಹಾರಕ್ಕಾಗಿ ಅರಮನೆಗಳಲ್ಲಿ ಬಹುಭಾಷಾ ಪಂಡಿತರನ್ನು ನೇಮಕ ಮಾಡಿಕೊಂಡು ಅವರು ನೀಡಿರುವ ಸಲಹೆ ಮತ್ತು ಮಾರ್ಗದರ್ಶನಗಳ ಆಧಾರದಲ್ಲಿ ಆಡಳಿತ ನಡೆಸಿದ್ದಾರೆ.

ಹೀಗಾಗಿ ರಾಜತ್ವದ ಆಡಳಿತದ ಕರ್ನಾಟಕದಲ್ಲಿ ಜನಸಮುದಾಯಗಳು ಭಾಷಿಕವಾಗಿ ಅಂತಹ ತೀವ್ರತರವಾದ ಭಾಷಿಕ ಬಿಕ್ಕಟ್ಟುಗಳಿಗೆ ಒಳಗಾಗಿಲ್ಲ. ಆಡಳಿತದ ಕೆಳಹಂತದ ಭಾಷಾಬಳಕೆಯಲ್ಲಿ ಬದಲಾವಣೆಗಳು ಆಗಿಲ್ಲ. ಹೀಗಾಗಿ ಕರ್ನಾಟಕದ ಭೂಪ್ರದೇಶದಲ್ಲಿ ರಾಜರುಗಳ ಕಾಲದ ಆಡಳಿತದಲ್ಲಿ ಉನ್ನತ ಹಂತದಲ್ಲಿ ಭಾಷಾಬದಲಾವಣೆ ಕಾಣಿಸಿಕೊಂಡಿವೆಯೇ ಹೊರತು ಕೆಳ ಹಂತದ ಭಾಷೆಗಳ ಬಳಕೆಯಲ್ಲಿ ಬದಲಾವಣೆಗಳು ಆಗಿಲ್ಲ. ಹೀಗಾಗಿ ಕರ್ನಾಟಕದ ಎಲ್ಲಾ ರಾಜರುಗಳ ಕೆಳಹಂತದ ಆಡಳಿತದಲ್ಲಿ ಕನ್ನಡ ಆಡಳಿತ ಭಾಷೆಯಾಗಿ ಬಳಕೆಯಾಗಿರುವುದೆ ಕಂಡುಬರುತ್ತದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ರಾಜರುಗಳ ಆಡಳಿತ ಸಂದರ್ಭದಲ್ಲಿ ಭಾಷೆಗಳನ್ನು ಕಲಿಯಬೇಕಾದ, ಬಳಸಬೇಕಾದ ಪರಿಸ್ಥಿತಿ ಇತ್ತೇ ಹೊರತು ಇಂತಹ ಭಾಷೆಗಳನ್ನು ಕಡ್ಡಾಯವಾಗಿ ಕಲಿಯಲೇ ಬೇಕು ಎಂಬ ನಿಯಮವಿರಲಿಲ್ಲ. ಹೀಗಾಗಿ ರಾಜರುಗಳ ಆಡಳಿತದ ಸಂದರ್ಭದಲ್ಲಿ ಸಂಸ್ಕೃತ, ಉರ್ದು, ಪಾರ್ಸಿ, ಅರೇಬಿಕ್, ಮರಾಠಿ, ತೆಲುಗು, ತಮಿಳು, ಇಂಗ್ಲಿಶ್ ಮುಂತಾದ ಭಾಷೆಗಳು ಆಡಳಿತದಲ್ಲಿ ಬಳಕೆಯಾಗಿದ್ದರು ಸ್ಥಳೀಯ ಸಮುದಾಯಗಳ ಭಾಷೆ, ಸಾಹಿತ್ಯ, ಸಂಸ್ಕೃತಿ, ಜೀವನಕ್ರಮಗಳಿಗೆ ವ್ಯತಿರಿಕ್ತ ಪರಿಣಾಮಗಳು ಉಂಟಾಗಿಲ್ಲ.

ಅಂದಿನ ರಾಜರುಗಳಿಗೆ ಸ್ಥಳೀಯ ಭಾಷಿಕ ಸಮುದಾಯಗಳ ಭಾಷೆ, ಸಾಹಿತ್ಯ, ಸಂಸ್ಕೃತಿ, ಜೀವನಕ್ರಮಗಳ ಮೇಲೆ ತೀವ್ರತರ ಒತ್ತಡ ಉಂಟುಮಾಡುವ ಉದ್ದೇಶವೂ ಇರಲಿಲ್ಲ. ಹೀಗಾಗಿ "ಬಹಮನಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶಗಳಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿತ್ತು. ಇದರ ಜೊತೆಯಲ್ಲಿ ಮುಸ್ಲಿಂ ಮತ್ತು ಮರಾಠಿ ಅಧಿಕಾರಿಗಳಿಗೆ ವರದಿಗಳನ್ನು ತಯಾರಿಸಬೇಕಿತ್ತು. ಹಾಗಾಗಿ ಪಾರಸಿ ಮತ್ತು ಮರಾಠಿ ಭಾಷೆಗಳು ಕನ್ನಡದ ಜೊತೆಗೆ ಆಡಳಿತ ಭಾಷೆಗಳಾಗಿದ್ದವು.[೬]"

ಒಟ್ಟಾರೆಯಾಗಿ ರಾಜರುಗಳ ಆಳ್ವಿಕೆಯ ಸಂದರ್ಭದಲ್ಲಿ ಕನ್ನಡ ಭಾಷೆಯು ಇಂದಿನ ಕರ್ನಾಟಕದಲ್ಲಿ ಮಾತ್ರ ಆಡಳಿತ ಭಾಷೆಯಾಗಿ ಬಳಕೆಯಾಗಿಲ್ಲ. ಇತರ ರಾಜ್ಯಗಳಲ್ಲಿಯೂ ಆಡಳಿತ ಭಾಷೆಯಾಗಿ ಬಳಕೆಯಾಗಿದೆ. ಹಾಗೆಯೇ ಕನ್ನಡದ ಭೂಪ್ರದೇಶದ ಒಳಗೆ ಕನ್ನಡ ಭಾಷೆಯಲ್ಲದೆ ಪ್ರಾಕೃತ, ಸಂಸ್ಕೃತ, ಪಾರ್ಸಿ, ಅರೇಬಿಕ್, ಉರ್ದು, ಮರಾಠಿ ತರಹದ ಭಾಷೆಗಳು ಆಡಳಿತ ಭಾಷೆಯಾಗಿ ಬಳಕೆಯಾಗಿವೆ. ರಾಜಮನೆತನಗಳ ಬದಲಾವಣೆಯೊಂದಿಗೆ ಆಡಳಿತ ಭಾಷೆಯಲ್ಲಿಯೂ ಬದಲಾವಣೆಯಾಗಿದೆ. ಈ ಬದಲಾವಣೆ ಆಡಳಿತದ ಉನ್ನತಕ್ಕೆ ಸೀಮಿತವಾಗಿತ್ತೇ ಹೊರತು ಸ್ಥಳೀಯ ಜನರ ಭಾಷೆ, ಸಾಹಿತ್ಯ, ಸಂಸ್ಕೃತಿ, ಬದುಕಿಗೆ ಮಾರಕವಾಗುವ ಹಂತದವರೆಗು ವ್ಯಾಪಿಸಿರಲಿಲ್ಲ. ಏಕೆಂದರೆ ರಾಜತ್ವದ ಆಡಳಿತದಲ್ಲಿ ಜನರು ಶಿಕ್ಷಣ, ಉದ್ಯೋಗ ಇತ್ಯಾದಿಗಳನ್ನು ಅರಸಿ ವಲಸೆ ಹೋಗುತ್ತಿದ್ದುದು ಕಡಿಮೆ ಇತ್ತು. ಹೆಚ್ಚಿನ ಜನರು ಒಂದು ಸೀಮಿತ ಪ್ರದೇಶದ ಒಳಗೆ ತಮ್ಮ ಬದುಕನ್ನು ಕಟ್ಟಿಕೊಂಡಿದ್ದರು. ಹೀಗಾಗಿ ರಾಜತ್ವದ ಆಡಳಿತದ ಸಂದರ್ಭದಲ್ಲಿ ಸ್ಥಳೀಯ ಭಾಷಿಕ ಸಮುದಾಯಗಳು ತೀವ್ರಸ್ವರೂಪದ ಸಮಸ್ಯೆಗಳಿಗೆ ಒಳಗಾಗಿಲ್ಲ. ಆಡಳಿತದಲ್ಲಿ ಭಾಷಾಸಮಸ್ಯೆಗಳು ಎದುರಾಗಿದ್ದರೂ ರಾಜರುಗಳು ಬಹುಭಾಷಾ ವಿದ್ವಾಂಸರುಗಳನ್ನು ನೇಮಕ ಮಾಡಿಕೊಳ್ಳುವ ಮೂಲಕ ಜನಸಮುದಾಯಗಳ ಭಾಷೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಜೀವನ ಕ್ರಮಗಳಿಗೆ, ಸಮುದಾಯಗಳ ಅಸ್ತಿತ್ವಕ್ಕೆ ಧಕ್ಕೆಯಾಗುವ ಪರಿಸ್ಥಿತಿ ನಿರ್ಮಾಣ ಮಾಡಿಲ್ಲ.

**೫.೩ ಆಂಗ್ಲರ ಆಡಳಿತ: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು**

ಭಾರತದ ಇತಿಹಾಸದಲ್ಲಿ ರಾಜಕೀಯ ಅಧಿಕಾರ ಪಡೆದು ಆಡಳಿತದಲ್ಲಿ ಪ್ರಬಲವಾಗಿ ತನ್ನ ಭಾಷೆಯನ್ನು ಬೆಳೆಸಿದ ಅನ್ಯಭಾಷಿಕ ಸಮುದಾಯಗಳಲ್ಲಿ ಆಂಗ್ಲರಿಗೆ ಅಗ್ರಸ್ಥಾನವಿದೆ. ಹಾಗೆಯೇ ಭಾರತದ ಭಾಷಿಕ ಸಮುದಾಯಗಳು ಭಾಷಿಕವಾಗಿ ಮಾತ್ರವಲ್ಲದೆ, ರಾಜಕೀಯವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಬಿಕ್ಕಟ್ಟುಗಳಿಗೆ ಒಳಗಾಗುವಲ್ಲಿ ಇವರ ಪಾತ್ರ ಪ್ರಧಾನವಾಗಿದೆ. ಏಕೆಂದರೆ ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಇವರು ಭಾರತದಲ್ಲಿನ ರಾಜಕೀಯ ಅಸ್ಥಿರತೆ, ಅರಾಜಕತೆಯ ಲಾಭ ಪಡೆದು ರಾಜಕೀಯ ಅಧಿಕಾರ ಆರಂಭಿಸಿದ್ದಾರೆ. ಇವರ ಆಡಳಿತದ ಸಂದರ್ಭದಲ್ಲಿ ಭಾರತದ ಆಡಳಿತದಲ್ಲಿ ಬಳಸಬೇಕಾದ ಭಾಷೆಯ ಬಗೆಗೆ ಬ್ರಿಟೀಷ್ ಅಧಿಕಾರಿಗಳಲ್ಲಿಯೇ ಒಮ್ಮತದ ಅಭಿಪ್ರಾಯವಿರಲಿಲ್ಲ. ಇದಕ್ಕೆ ಕಾರಣಗಳು ಬೇರೆಬೇರೆಯಾಗಿವೆ. ಇವುಗಳಲ್ಲಿ ಪ್ರಮುಖವಾಗಿ ಭಾರತದ ಆಡಳಿತದಲ್ಲಿ ಇಂಗ್ಲಿಶ್ ಬಳಸುವುದು ಉತ್ತಮ. ಇಂಗ್ಲಿಶ್ ಭಾರತದ ಜನತೆಗೆ ಅರ್ಥವಾಗದೆ ಭಾರತದ ಆಡಳಿತದಲ್ಲಿ ಏನಾಗುತ್ತಿದೆ ಎಂಬುದರ ಅರಿವು ಇಲ್ಲದೆ ನಾವು ಭಾರತೀಯರನ್ನು ಶೋಷಿಸಿದರೂ ಅವರು ಸರ್ಕಾರದ ವಿರುದ್ಧ ದಂಗೆಯೇಳುವುದಿಲ್ಲ. ಜನರಿಗೆ ಅರ್ಥವಾಗುವ ಭಾಷೆಯಲ್ಲಿ ಆಡಳಿತ ನಡೆಸಿದರೆ ಸರ್ಕಾರದ ಎಲ್ಲ ವ್ಯವಹಾರಗಳು ಜನರಿಗೆ ಅರ್ಥವಾಗಿ ಭಾರತೀಯರು ಸಂಘಟಿತರಾಗಿ ಸರ್ಕಾರದ ವಿರುದ್ಧ ಹೋರಾಟಗಳನ್ನು ಆರಂಭಿಸುತ್ತಾರೆ. ಭಾರತದಲ್ಲಿ ಈ ರೀತಿಯ ಪರಿಸ್ಥಿತಿ ನಿರ್ಮಾಣವಾದರೆ ನಾವು

ಆಡಳಿತ ನಡೆಸುವುದು ಕಷ್ಟವಾಗುತ್ತದೆ. ಇದು ಮತ್ತೂ ತೀವ್ರವಾದರೆ ನಾವು ಭಾರತದಲ್ಲಿ ರಾಜಕೀಯ ಅಧಿಕಾರ ಕಳೆದುಕೊಳ್ಳಬೇಕಾಗುತ್ತದೆ. ಭಾರತದಲ್ಲಿ ನಾವು ಅಧಿಕಾರ ಉಳಿಸಿಕೊಳ್ಳಬೇಕಾದರೆ ಭಾರತೀಯರನ್ನು ಭಯದ ನೆರಳಿನಲ್ಲಿ ಉಳಿಸಬೇಕು. ಭಾರತೀಯರನ್ನು ಮಾನಸಿಕವಾಗಿ ಭಯದ ನೆರಳಿನಲ್ಲಿಡಬೇಕಾದರೆ ಆಡಳಿತದಲ್ಲಿ ಇಂಗ್ಲಿಶ್ ಬಳಸುವುದೇ ಉತ್ತಮ ಎಂದು ನಂಬಿದ್ದರು.

ಇದಕ್ಕಾಗಿ ೧೮೫೭-೫೮ರಲ್ಲಿ ನಡೆದ ಭಾರತೀಯರ ಮೊಟ್ಟಮೊದಲಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ವಿಜಯಿಗಳಾದ ಬ್ರಿಟೀಷರು ಭಾರತದ ಸಂಪೂರ್ಣ ಒಡೆಯರಾದರು. ಅನಂತರದಲ್ಲಿ ಪ್ರಜೆಗಳ ದೃಷ್ಟಿಯಿಂದಾಗಲಿ, ಆಡಳಿತದ ಅನುಕೂಲತೆಯ ದೃಷ್ಟಿಯಿಂದಾಗಲಿ, ತರ್ಕದ ದೃಷ್ಟಿಯಿಂದಾಗಲಿ ದೇಶದ ಭಾಗಗಳನ್ನು ವಿಂಗಡಿಸದೆ ತಮ್ಮ ಮನಸ್ಸಿಗೆ ಬಂದಂತೆ ವಿಂಗಡಿಸಿ ಒಡೆದು ಆಳುವ ನೀತಿಯನ್ನು ಅನುಸರಿಸಿದ್ದಾರೆ. '೧೮೬೨ರಲ್ಲಿ ಕರ್ನಾಟಕದಲ್ಲಿಯ ಕನ್ನಡ ಜಿಲ್ಲೆಯ ಒಗ್ಗಟ್ಟನ್ನು ಒಡೆಯಬೇಕಾದಾಗ ಉತ್ತರ ಕನ್ನಡ, ದಕ್ಕಿಣ ಕನ್ನಡ ಜಿಲ್ಲೆಗಳೆಂದು ಅದನ್ನು ವಿಭಜಿಸಿ ಪ್ರದೇಶಗಳನ್ನು ಮೊದಲಿನದನ್ನು ಮುಂಬಯಿ ಪ್ರಾಂತ್ಯಕ್ಕೂ, ಎರಡನೆಯದನ್ನು ಮದರಾಸು ಪ್ರಾಂತಕ್ಕೂ ಸೇರಿಸಿದರು; ೧೯೦೫ರಲ್ಲಿ ಬಂಗಾಲವನ್ನು ಸಹ ಅದರ ಶಕ್ತಿಯನ್ನು ಕುಗ್ಗಿಸುವುದಕ್ಕಾಗಿ ಪೂರ್ವ ಮತ್ತು ಪಶ್ಚಿಮ ಬಂಗಾಲಗಳನ್ನಾಗಿ ವಿಭಜಿಸಿದರು. ಆದರೆ ಈ ಎರಡೂ ಉದಾಹರಣೆಗಳಲ್ಲಿ ಭಾಷೆ ಇತ್ಯಾದಿಗಳ ಮೂಲಕ ಜನತೆಯಲ್ಲಿ ಏಕರೂಪತೆ ಉಂಟಾಗಿ ಅವರ ಬಲ ಹೆಚ್ಚುತ್ತಿದೆ ಎಂಬುದನ್ನು ಅರಿತುಕೊಂಡು, ಹಾಗೆ ಜನತೆಯಲ್ಲಿ ಬಲಹೆಚ್ಚುವುದು ಬ್ರಿಟೀಷರಿಗೆ ಇಷ್ಟವಿಲ್ಲವಾದ್ದರಿಂದ ಅವರು ಈ ರೀತಿಯಾಗಿ ವರ್ತಿಸಿದ್ದಾರೆ'[೭]. ಇವರು ಭಾರತದ ಜನರು ಭಾಷಿಕವಾಗಿ ಒಗ್ಗಟ್ಟಿನಿಂದ ಕೂಡಿರುವುದನ್ನು ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ. ಇದಕ್ಕಾಗಿ ಭಾಷಾಆಧಾರಿತ ಪ್ರದೇಶಗಳನ್ನು ಇಬ್ಭಾಗಿಸುವ ಮೂಲಕ ಭಾರತದ ಜನರು ಸಂಘಟಿತರಾಗುವುದನ್ನು ತಡೆಯುತ್ತಿದ್ದರು. ಬ್ರಿಟೀಷರು ಅನುಸರಿಸಿದ ಈ ತಂತ್ರ ಭಾರತದ ಭಾಷಿಕ ಸಮುದಾಯಗಳಲ್ಲಿ ಭಾಷಿಕ ಬಿಕ್ಕಟ್ಟುಗಳು ಹುಟ್ಟಿಕೊಳ್ಳಲು ಕಾರಣವಾಗಿದೆ.

ಏಕೆಂದರೆ ಮೇಲೆ ಉಲ್ಲೇಖಿಸಿರುವ ಅಂಶಗಳನ್ನೇ ಗಮನಿಸಿದರೆ ಬ್ರಿಟೀಷರು ಭಾರತೀಯರು ಭಾಷಿಕವಾಗಿ ಒಗ್ಗಟ್ಟಿನಿಂದ ಕೂಡಿದ್ದರೆ ತಮ್ಮ ಅಧಿಕಾರದ ವಿರುದ್ಧ ದಂಗೆಯೇಳುತ್ತಾರೆ ಎಂಬ ಕಾರಣಕ್ಕಾಗಿ ಕನ್ನಡ ಮತ್ತು ಮರಾಠಿ ಭಾಷಿಕರನ್ನು ಒಂದು ಆಡಳಿತ ವಲಯಕ್ಕೆ ಸೇರಿಸಿದ್ದಾರೆ. ಹೀಗೆಯೇ ಹೈದ್ರಾಬಾದ್ ಕರ್ನಾಟಕದಲ್ಲಿ ಕನ್ನಡ ಮತ್ತು ತೆಲುಗರನ್ನು, ಮದ್ರಾಸ್ ಕರ್ನಾಟಕದಲ್ಲಿ ತಮಿಳು ಮತ್ತು ಕನ್ನಡಿಗರನ್ನು ಒಂದು ಆಡಳಿತ ವಲಯಕ್ಕೆ ಸೇರಿಸುವ ಮೂಲಕ ಎರಡೂ ಭಾಷಿಕರು ಆಡಳಿತ, ಶಿಕ್ಷಣ, ಉದ್ಯೋಗ, ವ್ಯವಹಾರಗಳಲ್ಲಿ ಸಮಸ್ಯೆಗಳನ್ನು ಎದುರಿಸುವಂತೆ ಮಾಡಿದ್ದಾರೆ. ಇದು ಬ್ರಿಟೀಷರು ತಮ್ಮ ಆಡಳಿತ, ಅಧಿಕಾರದ ಅನುಕೂಲಕ್ಕಾಗಿ ಮಾತ್ರ ಮಾಡಿಕೊಂಡ ತಂತ್ರವಲ್ಲ. ತಮ್ಮ ಭಾಷೆಯನ್ನು ಭಾರತದಲ್ಲಿ ಪ್ರಬಲವಾಗಿ ಬೆಳೆಸಲು ಎಚ್ಚರಿಕೆಯಿಂದ ರೂಪಿಸಿರುವ ತಂತ್ರ. ಏಕೆಂದರೆ ಈ 'ಎರಡೂ ಭಾಷಿಕರನ್ನು ಒಂದೇ ಆಡಳಿತ ಕೇಂದ್ರದ ವ್ಯಾಪ್ತಿಗೆ ಒಳಪಡಿಸಿದರೆ ಅವರುಗಳ ಭಾಷೆಯನ್ನು ಆಡಳಿತದಲ್ಲಿ ಬಳಸುವ, ಶಿಕ್ಷಣದಲ್ಲಿ ಕಲಿಸುವ ಒತ್ತಡ ಉಂಟಾಗುವುದಿಲ್ಲ. ಒಂದು ವೇಳೆ ಈ ಭಾಷಿಕ ಸಮುದಾಯಗಳು ಇಂತಹ ಒತ್ತಡಗಳನ್ನು ಉಂಟುಮಾಡಿದರೆ ಪರಸ್ಪರರ ನಡುವೆ ದ್ವೇಷ ಬಿತ್ತಿ

ಇಬ್ಬರಿಗೂ ಏಕರೂಪದಲ್ಲಿ ಇಂಗ್ಲಿಶ್ ಕಲಿಸಲು ಸಾಧ್ಯವಾಗುತ್ತದೆ. ಇದು ನಮ್ಮ ಭಾಷಾಸಾಮ್ರಾಜ್ಯದ ವಿಸ್ತರಣೆಗೆ ಸುಲಭದ ದಾರಿ ಎಂದು ಭಾವಿಸಿದ್ದಾರೆ. ದೇಶದ ಆಡಳಿತದಲ್ಲಿ ಸ್ಥಳೀಯ ಭಾಷೆಗಳನ್ನು ಬಳಸಿದರೆ, ಅವರು ಒಗ್ಗಟ್ಟಾಗಿ ಇರಲು ಬಿಟ್ಟರೆ ತಮ್ಮ ಭಾಷೆಯ ಆಧಾರದಲ್ಲಿಯೇ ಎಲ್ಲವನ್ನು ಒದಗಿಸುವಂತೆ ಬೇಡಿಕೆ ಇಡುತ್ತಾರೆ. ಇದರಿಂದ ದೇಶದ ಆಡಳಿತದಲ್ಲಿ ಇಂಗ್ಲಿಶ್‌ನ್ನು ಬಳಕೆಗೆ ತರುವುದು ಕಷ್ಟ ಎಂಬುದು ಕೂಡ ಬ್ರಿಟೀಷರು ಈ ರೀತಿ ದೇಶದ ಭಾಗಗಳನ್ನು ವಿಂಗಡಿಸುವುದರ ಹಿಂದೆ ಇದ್ದ ಆಲೋಚನೆಯಾಗಿದೆ.

ಇಂತಹ ಆಲೋಚನೆಗೆ ತದ್ವಿರುದ್ಧ ಚಿಂತನೆಗಳನ್ನು ಕೆಲವು ಆಂಗ್ಲ ಅಧಿಕಾರಿಗಳು ವ್ಯಕ್ತಪಡಿಸಿದ್ದಾರೆ. ಇವರು ಯಾವುದೇ ಒಂದು ಪ್ರದೇಶದಲ್ಲಿ ಸ್ಥಳೀಯ ಜನರ ಭಾಷೆಯನ್ನು ಆಡಳಿತದಲ್ಲಿ ಬಳಸದಿದ್ದರೆ ಆಡಳಿತದಲ್ಲಿ ಏನಾಗುತ್ತಿದೆ ಎಂಬುದರ ಅರಿವಿಲ್ಲದೆ ಜನರು ಆಡಳಿತದಿಂದ ವಿಮುಖವಾಗುತ್ತಾರೆ. ಇದರಿಂದ ಆಡಳಿತಗಾರರು ಮತ್ತು ಜನರ ನಡುವೆ ಹೊಂದಾಣಿಕೆಯ ಕೊರತೆ ಉಂಟಾಗುತ್ತದೆ. ಇದರಿಂದ ಪರಿಣಾಮಕಾರಿಯಾದ ಆಡಳಿತ ಸಾಧ್ಯವಾಗುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಜನರು ಸರ್ಕಾರಗಳ ವಿರುದ್ಧ ದಂಗೆಯೇಳುತ್ತಾರೆ. ಹೀಗಾಗಿ ಜನರು ಸರ್ಕಾರದ ವಿರುದ್ಧ ದಂಗೆಯೇಳಬಾರದು, ಭಾರತದಲ್ಲಿ ನಾವು ಪರಿಣಾಮಕಾರಿ ಆಡಳಿತ ನಡೆಸಬೇಕು ಎಂದರೆ ಸ್ಥಳೀಯ ಭಾಷೆಗಳನ್ನು ಆಡಳಿತದಲ್ಲಿ ಬಳಸಬೇಕು. ಸ್ಥಳೀಯ ಭಾಷೆಗಳನ್ನು ಆಡಳಿತದಲ್ಲಿ ಬಳಸಿದರೆ ಭಾರತದ ಜನರು ಭಾಷಿಕವಾಗಿ ಸಮಸ್ಯೆಗೆ ಒಳಗಾಗುವುದಿಲ್ಲ. ಸ್ಥಳೀಯ ಜನರು ಭಾಷಿಕ ಸಮಸ್ಯೆಗೆ ಒಳಗಾಗದಿದ್ದರೆ ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಔದ್ಯೋಗಿಕವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಸಮಸ್ಯೆಗಳು ಇರುವುದಿಲ್ಲ. ಸ್ಥಳೀಯ ಭಾಷೆಗಳನ್ನು ಆಡಳಿತದಲ್ಲಿ ಬಳಸದಿದ್ದರೆ ಜನರು ಭಾಷಿಕ ಸಮಸ್ಯೆಗಳಿಗೆ ಸಿಲುಕಿ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ, ಸಾಹಿತ್ಯಕ, ಸಾಂಸ್ಕೃತಿಕ ಸಮಸ್ಯೆಗೆ ಒಳಗಾಗುತ್ತಾರೆ.

ಇದು ಆ ಭಾಷಾಸಮುದಾಯಗಳ ಅಸ್ತಿತ್ವವನ್ನೇ ಅಲುಗಾಡಿಸುತ್ತದೆ. ಆಗ ಜನ ಸರ್ಕಾರದ ವಿರುದ್ಧ ದಂಗೆಯೇಳುತ್ತಾರೆ. ಇದರಿಂದ ನಾವು ಭಾರತದಲ್ಲಿ ಅಧಿಕಾರ ಕಳೆದುಕೊಳ್ಳಬೇಕಾಗುತ್ತದೆ. ಹೀಗಾಗಿ ಆಡಳಿತದ ಉನ್ನತ ಹಂತದಲ್ಲಿ ನಾವು ಇಂಗ್ಲಿಶ್‌ನ್ನು ಬಳಸಿದರೂ ಸ್ಥಳೀಯವಾಗಿ ಭಾರತೀಯ ಭಾಷೆಗಳನ್ನು ಬಳಸುವುದು, ಕಲಿಕೆಗೆ ವ್ಯವಸ್ಥೆ ಮಾಡುವುದು ಉತ್ತಮ. ಭಾರತೀಯ ಭಾಷೆಗಳನ್ನು ಆಡಳಿತ, ಶಿಕ್ಷಣದಲ್ಲಿ ಬಳಸದಿದ್ದರೆ ಭಾಷಿಕ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ತಲೆದೂರಿ ಸಂಘರ್ಷಕ್ಕೆ ದಾರಿಮಾಡಿಕೊಡುತ್ತವೆ. ಇದು ಭಾರತದಲ್ಲಿ ಬ್ರಿಟೀಷರ ಆಡಳಿತದ ಅನುಕೂಲದಿಂದ ಒಳ್ಳೆಯದಲ್ಲ ಎಂದು ಭಾವಿಸಿದ್ದರು. ಇದೇ ತತ್ವವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದ ಕೆಲವು ಆಂಗ್ಲ ಅಧಿಕಾರಿಗಳು ಮತ್ತು ವಿದ್ವಾಂಸರು ಕರ್ನಾಟಕದಲ್ಲಿ ಕನ್ನಡವನ್ನು ಆಡಳಿತದಲ್ಲಿ ಬಳಸಿ ಕನ್ನಡದ ಅಭಿವೃದ್ಧಿಗಾಗಿ ಶ್ರಮಿಸಿದ್ದಾರೆ. ಇಂತಹ ಕೆಲವು ಅಧಿಕಾರಿಗಳು ಮತ್ತು ವಿದ್ವಾಂಸರ ಹೆಸರುಗಳನ್ನು ಅಧ್ಯಾಯ ಎರಡರಲ್ಲಿ ಉಲ್ಲೇಖಿಸಲಾಗಿದೆ.

ಇವರು ಭಾರತದ ಆಡಳಿತ, ಶಿಕ್ಷಣ, ಉದ್ಯೋಗ ಎಲ್ಲವೂ ಪ್ರಾದೇಶಿಕ ಅಥವಾ ಸ್ಥಳೀಯ ಭಾಷೆಗಳಲ್ಲಿಯೇ ಆಗಬೇಕು ಎಂದು ಭಾವಿಸಿ ಸ್ಥಳೀಯ ಭಾಷಾಮಾಧ್ಯಮದ ಶಾಲೆಗಳ ಉತ್ತೇಜನಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಹಾಗೆಯೇ ಆಡಳಿತ, ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಸಿದ್ದಾರೆ. ಹೀಗೆ ಆಂಗ್ಲರ ಆಡಳಿತದ ಕರ್ನಾಟಕದ ಭೂಪ್ರದೇಶದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೆ ಆಂಗ್ಲ ಅಧಿಕಾರಿಗಳಲ್ಲಿ ಒಮ್ಮತದ ಅಭಿಪ್ರಾಯವಿರಲಿಲ್ಲ. ಇದಕ್ಕೆ ಭಾರತೀಯ ಚಿಂತಕರು, ವಿದ್ವಾಂಸರು ಬೆಂಬಲವಾಗಿ ನಿಂತಿದ್ದರು. ಹೀಗಾಗಿ ಕರ್ನಾಟಕದ ಭೂಪ್ರದೇಶವಾದ "ಮೈಸೂರು ಸಂಸ್ಥಾನವನ್ನು ೧೮೩೪ ರಿಂದ ಬ್ರಿಟಿಷರು ಸುಮಾರು ಒಂದೂವರೆ ಶತಮಾನಗಳ ಕಾಲ ಆಳ್ವಿಕೆ ಮಾಡಿರುವುದಕ್ಕೆ ದಾಖಲೆಗಳಿವೆ. ಜೊತೆಗೆ ಆಯಾ ಪ್ರಾಂತೀಯ ಭಾಷೆಗಳಲ್ಲೆ ಆಡಳಿತ ಮಾಡಿದರು. ಅವರು ಬದಲಾವಣೆ ತರುವ ನಿಟ್ಟಿನಲ್ಲಿ ಯೋಚನೆ ಮಾಡಲಿಲ್ಲ. ಹಳೆಯ ಮೈಸೂರು ಪ್ರಾಂತ್ಯದಲ್ಲಿ ಕನ್ನಡ, ಹಳೆಯ ಮದ್ರಾಸ್ ಪ್ರಾಂತ್ಯದಲ್ಲಿ ತಮಿಳು, ತೆಲಗು ಕನ್ನಡ, ಮತ್ತು ಮಲಯಾಳಂ ಭಾಷಿಕರು ನೆಲೆಸಿದ್ದರು. ಮುಂಬಯಿ ಪ್ರಾಂತ್ಯದಲ್ಲಿ ಮರಾಠಿಗರು ಇದ್ದರು. ಹೈದರಾಬಾದಿನ ನಿಜಾಮರ ಅಧೀನದಲ್ಲಿ ಕನ್ನಡ ಜಿಲ್ಲೆಗಳೂ ಸೇರಿದವು. ಈ ಹಿನ್ನೆಲೆಯಲ್ಲಿ ಬ್ರಿಟಿಷರ ಆಡಳಿತದ ಕಾಲದಲ್ಲಿ ಬಹುಭಾಷಾ ಪ್ರಾಂತ್ಯಗಳು ಇದ್ದವು. ಆದರೆ ಅವರು ಒಂದೇ ಭಾಷೆಯನ್ನು ಆಡಳಿತ ಭಾಷೆಯನ್ನಾಗಿ ಬಳಸುತ್ತಿರಲಿಲ್ಲ. ಉತ್ತರ ಕರ್ನಾಟಕ ಮತ್ತು ಹಳೆಯ ಮೈಸೂರು ಪ್ರಾಂತ್ಯಗಳು ಮುಸ್ಲಿಂಮರ ಆಡಳಿತಕ್ಕೆ ಒಳಪಟ್ಟಿದ್ದವು. ಆದರೂ ಆಡಳಿತ, ವ್ಯವಹಾರ, ಶಿಕ್ಷಣ, ನ್ಯಾಯಾಲಯ, ಸಾಹಿತ್ಯ, ಸಂಗೀತಶಾಸ್ತ್ರ ಮುಂತಾದ ವಲಯಗಳಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿತ್ತು.[೮]" ಎನ್ನುತ್ತಾರೆ ಪಿ. ಮಹಾದೇವಯ್ಯನವರು.

ಹಾಗಾದರೆ ಕರ್ನಾಟಕದ ಆಡಳಿತ, ಉದ್ಯೋಗಗಳಲ್ಲಿ ಇಂಗ್ಲಿಶ್‌ನ ಬಳಕೆ ಆರಂಭಗೊಂಡಿದ್ದು ಯಾವಾಗ? ಬ್ರಿಟೀಷ್ ಆಡಳಿತದಲ್ಲಿ ಕನ್ನಡ ಭಾಷಿಕ ಸಮುದಾಯ ಭಾಷಾವಾರು ರಾಜ್ಯ ರಚನೆಗೆ ಬೇಡಿಕೆಯಿಟ್ಟು ಹೋರಾಟಗಳನ್ನು ಆರಂಭಿಸಿದ್ದು ಏಕೆ? ಎನ್ನುವ ಪ್ರಶ್ನೆಗಳು ಹುಟ್ಟುತ್ತವೆ. ಈ ಪ್ರಶ್ನೆಗಳ ಬಗೆಗೆ ಗಮನಿಸಿದಾಗ ಬ್ರಿಟೀಷರ ಆಡಳಿತ ಕರ್ನಾಟಕಕ್ಕೆ ಮಾತ್ರ ಸೀಮಿತಗೊಂಡಿರಲಿಲ್ಲ. ಇಡೀ ದೇಶದ ಎಲ್ಲಾ ಭಾಗಗಳಲ್ಲಿ ಬ್ರಿಟೀಷರು ಆಡಳಿತ ನಡೆಸುತ್ತಿದ್ದರು. ಇವರ ಕಾಲದಲ್ಲಿ ಆಡಳಿತ ವಿವಿಧ ಪ್ರಾಂತ್ಯಗಳಲ್ಲಿ ಹಂಚಿಕೆಯಾಗಿದ್ದವು. ಇಂತಹ ಸಂದರ್ಭದಲ್ಲಿ ಜಾರಿಗೆ ತರುತ್ತಿದ್ದ ನಿಯಮಗಳು, ಆದೇಶಗಳಲ್ಲಿ ಕೆಲವು ಒಂದು ಪ್ರಾಂತ್ಯಕ್ಕೆ ಸೀಮಿತಗೊಂಡರೆ ಮತ್ತೆ ಕೆಲವು ಆದೇಶ, ನಿಯಮಗಳು ಇಡೀ ದೇಶಕ್ಕೆ ಅನ್ವಯವಾಗುತ್ತಿದ್ದವು. ವ್ಯವಹಾರ, ಸಂಪರ್ಕ, ಒಡನಾಟಗಳು ಕರ್ನಾಟಕಕ್ಕೆ ಮಾತ್ರ ಸೀಮಿತಗೊಳ್ಳದೆ ದೇಶದ ಇತರ ಪ್ರಾಂತ್ಯ ಮತ್ತು ಇಂಗ್ಲೆಂಡ್‌ನ ಜೊತೆಯಲ್ಲಿಯೂ ಇದ್ದವು. ಹೀಗಾಗಿ ಬ್ರಿಟೀಷರ ಕಾಲದ ಆಡಳಿತದಲ್ಲಿ ಇಂಗ್ಲಿಶ್ ಬಲ್ಲವರಿಗೆ ಹೆಚ್ಚಿನ ಉದ್ಯೋಗದ ಅವಕಾಶಗಳನ್ನು ಕಲ್ಪಿಸಲಾಗಿದೆ. ಎಲ್ಲರಿಗೂ ಹೆಚ್ಚಿನ ಉದ್ಯೋಗದ ಅವಕಾಶ ಪಡೆಯಬೇಕು ಎಂಬ ಹಂಬಲ ಇರುವುದರಿಂದ ಕರ್ನಾಟಕದಲ್ಲಿ ಇಂಗ್ಲಿಶ್ ಕಲಿತು, ಬಳಸಲು ಆರಂಭಿಸಿದ್ದಾರೆ. ಆಗ ಇಂಗ್ಲಿಶ್ ಭಾಷಾಬಳಕೆ ಕಡ್ಡಾಯವಲ್ಲದಿದ್ದರು ಕಲಿಕೆಯಿಂದ ಸಮಾಜದಲ್ಲಿ ಲಭ್ಯವಾಗುತ್ತಿದ್ದ ಗೌರವ, ಉದ್ಯೋಗದ

ಅವಕಾಶಗಳು ಇಂಗ್ಲಿಶ್‌ನ್ನು ಆಡಳಿತದಲ್ಲಿ ಬಳಸುವಂತೆ ಮಾಡಿವೆ. ಇಂಗ್ಲಿಶ್ ಅಧಿಕಾರಿಗಳು ಸರ್ಕಾರದ ಕೆಲಸಕ್ಕೆ ಅಧಿಕಾರಿಗಳನ್ನು ನೇಮಕ ಮಾಡಿಕೊಳ್ಳುವಾಗ ಇಂಗ್ಲಿಶ್ ಬಲ್ಲವರಿಗೇ ಹೆಚ್ಚಿನ ಪ್ರಾತಿನಿಧ್ಯ ಕೊಡುತ್ತಿದ್ದುದರಿಂದ ಮತ್ತು ಅದೇ ಸಂದರ್ಭದಲ್ಲಿ ಭಾರತೀಯ ಶಿಕ್ಷಣವನ್ನು ಆಧುನೀಕರಿಸಿ ಸಾರ್ವತ್ರೀಕರಣಗೊಳಿಸಿದ್ದುದರಿಂದ ಶಿಕ್ಷಣ ಕಲಿಯುವವರೆಲ್ಲರೂ ಇಂಗ್ಲಿಶ್ ಕಲಿಯುವಂತಾಗಿತ್ತು. ಹೀಗೆ ಇಂಗ್ಲಿಶ್ ಕಲಿತ ಭಾರತೀಯರು ಅದನ್ನು ಒಂದು ಭಾಷೆಯಾಗಿ ಸ್ವೀಕರಿಸದೆ ಪ್ರತಿಷ್ಠೆಯಾಗಿ ಸ್ವೀಕರಿಸಿ ಆಡಳಿತವಲ್ಲಿ ಬಳಸಲು ಆರಂಭಿಸಿದ್ದಾರೆ. ಇದೇ, ಭಾರತದಲ್ಲಿ ಇಂಗ್ಲಿಶ್‌ನ ಕಲಿಕೆ ಮತ್ತು ಬಳಕೆಯ ಸಮಸ್ಯೆಯನ್ನು ತೀವ್ರಗೊಳಿಸಲು ಕಾರಣವಾಗಿರುವುದು. ಈ ತೀವ್ರತೆ ಇಲ್ಲಿನ ಭಾಷಿಕ ಸಮುದಾಯಗಳ ಸಾಹಿತ್ಯ, ಸಂಸ್ಕೃತಿ, ಜೀವನಕ್ರಮಗಳ ಮೇಲೆ ವ್ಯತಿರಿಕ್ತ ಪರಿಣಾಮ ಉಂಟುಮಾಡಿ ತಮ್ಮ ಅಸ್ತಿತ್ವದ ಉಳಿವಿಗಾಗಿ ಪ್ರಬಲ ಪೈಪೋಟಿ ನಡೆಸಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿದೆ.

**೫.೪ ಸ್ವತಂತ್ರ ಭಾರತ: ಆಡಳಿತದಲ್ಲಿ ಭಾಷಾಗಳ ಬಳಕೆ ಮತ್ತು ಸಮಸ್ಯೆಗಳು**

ಈಗಾಗಲೇ ಚರ್ಚಿಸಿರುವ ಹಾಗೆ ಭಾರತ ಸ್ವಾತಂತ್ರ್ಯ ಹೋರಾಟ ಬ್ರಿಟೀಷರಿಂದ ರಾಜಕೀಯ ಅಧಿಕಾರ ಪಡೆದು ಭಾರತೀಯರು ಆಡಳಿತ ನಡೆಸುವುದಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಇದರ ಹಿಂದೆ ಬ್ರಿಟೀಷರು ತಮ್ಮ ರಾಜಕೀಯ ಅಧಿಕಾರದ ಮೂಲಕ ಭಾರತೀಯ ಸಮಾಜವನ್ನು ಅಭಿವೃದ್ಧಿ ಪಡಿಸುವ ಹೆಸರಿನಲ್ಲಿ ಭಾರತದ ಆಡಳಿತ, ಶಿಕ್ಷಣ, ಉದ್ಯೋಗ, ವ್ಯವಹಾರಗಳಲ್ಲಿ ಬಳಕೆಗೆ ತಂದಿದ್ದ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆ ಅಥವಾ ಭಾಷೆಗಳನ್ನು ಬಳಕೆಗೆ ತರುವ ಉದ್ದೇಶವೂ ಇತ್ತು. ಏಕೆಂದರೆ ಬ್ರಿಟೀಷರು ತಮ್ಮ ಅಧಿಕಾರದ ಅವಧಿಯಲ್ಲಿ ಭಾರತದ ಆಡಳಿತ, ಶಿಕ್ಷಣ, ಉದ್ಯೋಗ, ವ್ಯವಹಾರಗಳ ಕ್ಷೇತ್ರಗಳಲ್ಲಿ ಬಳಕೆಗೆ ತಂದಿದ್ದ ಇಂಗ್ಲಿಶ್‌ನ ಪರಿಣಾಮವಾಗಿ ಭಾರತೀಯ ಭಾಷೆ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ಆಡಳಿತ, ಕಲೆ, ವಿಜ್ಞಾನ, ಜೀವನಕ್ರಮಗಳಲ್ಲಿ ಅಮೂಲಾಗ್ರ ಬದಲಾವಣೆಯಾಗಿತ್ತು. ಈ ಬದಲಾವಣೆ ಒಂದು ಕಡೆ ಜನಸಮುದಾಯಗಳ ಅಭಿವೃದ್ಧಿಗೆ ಪೂರಕ ಎಂಬಂತೆ ಬಿಂಬಿತವಾಗಿದ್ದರೆ ಮತ್ತೊಂದು ಕಡೆ ಜನಸಮುದಾಯಗಳ ಅಸ್ತಿತ್ವಕ್ಕೆ ಪೆಟ್ಟು ಕೊಡುವ ಹಂತಕ್ಕೆ ಬೆಳವಣಿಗೆಯಾಗಿದೆ.

ಹೀಗಾಗಿ ಬ್ರಿಟೀಷರ ಕಾಲದಲ್ಲಿ ಇದುವರೆಗೆ ಚರ್ಚಿಸಿದ ಹಾಗೆ ಭಾಷಿಕ ಬಿಕ್ಕಟ್ಟು ಉದ್ಭವವಾಗಿರುವುದರ ಜೊತೆಗೆ ಆಡಳಿತಾತ್ಮಕ, ಶೈಕ್ಷಣಿಕ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಸಮಸ್ಯೆಗಳು ಆರಂಭವಾಗಿದ್ದವು. ಈ ಸಮಸ್ಯೆಗಳಿಗೆ ಪರಿಹಾರದ ರೂಪವಾಗಿ "ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ್ದ ಕಾಂಗ್ರೆಸ್ಸು ದೇಶದ ಭಾಷಾನುಗುಣ ಪ್ರಾಂತ ರಚನೆಯನ್ನು ತತ್ವಶಹಃ ಒಪ್ಪಿಕೊಂಡಿತ್ತು. ೧೯೨೦ರಲ್ಲಿ ನಾಗಪುರದಲ್ಲಿ ಸೇರಿದ್ದ ಕಾಂಗ್ರೆಸ್ ಅಧಿವೇಶನ ಈ ವಿಚಾರಕ್ಕೆ ವಿಶೇಷ ಮಾನ್ಯತೆ ನೀಡಿತು.[೯]" ಇದರಿಂದಾಗಿ ದೇಶದಲ್ಲಿ ಭಾಷಾವಾರು ರಾಜ್ಯಗಳ ರಚನೆಗೆ ಒತ್ತಾಯಿಸಿ ಹೋರಾಟ ಮಾಡುತ್ತಿದ್ದ ಜನರು, ಸಂಘ-ಸಂಸ್ಥೆಗಳು ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ ಸೂಚಿಸಿವೆ. ಇದರಿಂದ ದೇಶದಲ್ಲಿ ಸ್ವಾತಂತ್ರ್ಯ ಹೋರಾಟ ಮತ್ತಷ್ಟು ತೀವ್ರವಾಗಿದೆ.

ಈ ಹೋರಾಟಗಳ ಮುಖ್ಯ ಉದ್ದೇಶ ಭಾರತ ಸ್ವತಂತ್ರಗೊಳ್ಳಬೇಕು. ಭಾರತ ಸ್ವತಂತ್ರಗೊಂಡರೆ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಗೊಳ್ಳುತ್ತವೆ. ಭಾಷಾವಾರು ರಾಜ್ಯಗಳು ರಚನೆಗೊಂಡರೆ ರಾಜ್ಯಗಳ ಆಡಳಿತದಲ್ಲಿ ಸ್ಥಳೀಯ ಭಾಷೆ ಅಥವಾ ಭಾಷೆಗಳನ್ನು ಬಳಸಬಹುದು. ಹಾಗೆಯೇ ದೇಶದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆಯನ್ನು ಬಳಸಬಹುದು ಎಂಬುದಾಗಿತ್ತು. ಆದರೆ ಇದಕ್ಕೆ ಭಾರತ ಸ್ವತಂತ್ರಗೊಂಡ ನಂತರ ಭಾರತೀಯ ಆಡಳಿತಗಾರರು ಮತ್ತು ರಾಜಕಾರಣಿಗಳು ಒಮ್ಮತದ ಅಭಿಪ್ರಾಯ ವ್ಯಕ್ತಪಡಿಸಿಲ್ಲ. ಏಕೆಂದರೆ ಭಾರತ ಸ್ವಾತಂತ್ರ್ಯಗೊಳ್ಳುವ ಪೂರ್ವದಲ್ಲಿ ದೇಶದ ಆಡಳಿತದ ಉನ್ನತ ಹಂತದಲ್ಲಿ ಕಾರ್ಯನಿರ್ವಹಿಸುತ್ತಿದ್ದ. ಅಧಿಕಾರಿಗಳು ಸಾಧ್ಯವಾದಷ್ಟು ಮಟ್ಟಿಗೆ ಇಂಗ್ಲಿಶ್ ಭಾಷೆಗೆ ಹೊಂದಿಕೊಂಡಿದ್ದರು. ಇವರಿಗೆ ಭಾರತ ಸ್ವತಂತ್ರಗೊಂಡ ತಕ್ಷಣದಿಂದಲೇ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆಯನ್ನು ಬಳಸಲು ಹೆಚ್ಚಿನದಾಗಿ ಭಾಷೆಯನ್ನು ಕಲಿಯಬೇಕಾಗಿತ್ತು. ಇದು ಜೀವನದ ಮಧ್ಯ ವಯಸ್ಸಲ್ಲಿ, ಅಧಿಕಾರದ ಹುದ್ದೆಯಲ್ಲಿರುವಾಗ ಕಷ್ಟವಾಗಿತ್ತು. ಹೀಗಾಗಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತದ ಆಡಳಿತದಲ್ಲಿ ಭಾರತೀಯ ಭಾಷೆ ಅಥವಾ ಭಾಷೆಗಳನ್ನು ಬಳಕೆಗೆ ತರಲು ಒತ್ತಡಗಳು ಹೆಚ್ಚಾದಾಗ ಅಗತ್ಯ ಪರಿಕರಗಳು ಇರಲಿಲ್ಲ. ನಾವು ಭಾರತದ ಆಡಳಿತದಲ್ಲಿ ಭಾರತೀಯ ಭಾಷೆಗಳನ್ನು ಬಳಸಲು ಸಿದ್ಧತೆ ಮಾಡಿಕೊಂಡಿಲ್ಲ. ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತದ ಆಡಳಿತದಲ್ಲಿ ಭಾರತೀಯ ಭಾಷೆ ಅಥವಾ ಭಾಷೆಗಳನ್ನು ಬಳಕೆಗೆ ತಂದರೆ ಮತ್ತೆ ವಿದೇಶಗಳ ವ್ಯವಹಾರಕ್ಕೆ ಇಂಗ್ಲಿಶ್‌ನ್ನೇ ಬಳಸಬೇಕು. ಇಲ್ಲದಿದ್ದರೆ ಭಾರತ ಅಂತರಾಷ್ಟ್ರೀಯ ಮಟ್ಟದಲ್ಲಿ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲ ಎಂಬಂತಂಹ ನುಡಿಗಳನ್ನಾಡುವ ಮೂಲಕ ಭಾರತದ ಆಡಳಿತದಲ್ಲಿ ಇಂಗ್ಲಿಶ್‌ನ ಬಳಕೆಯನ್ನು ಮುಂದುವರಿಸಿದ್ದಾರೆ.

ಇದಕ್ಕೆ "ದೇಶದ ಸ್ವಾತಂತ್ರಕ್ಕಾಗಿ ಹೋರಾಡಿದ ಗಾಂಧಿಜೀಯವರು 'ಸ್ವದೇಶಿ' ತತ್ವದ ಪ್ರತಿಪಾದಕರಾಗಿದ್ದರು. ಹಾಗಿದ್ದರೂ ಬ್ರಿಟೀಷರು ಭಾರತ ಬಿಟ್ಟು ಹೋದ ಮೇಲೆ, ಅವರ ಭಾಷೆ, ಆಡಳಿತ ವ್ಯವಸ್ಥೆ, ಶಿಕ್ಷಣ ಪದ್ಧತಿ ಮುಂದುವರಿಯಿತು. ಆದರೆ ಅವರು ಆಡಳಿತದಲ್ಲಿ ಪ್ರಾದೇಶಿಕ ಭಾಷೆಗಳಿಗೆ ಕೊಟ್ಟಿದ್ದ ಒತ್ತು ಕ್ರಮೇಣ ಹೊರಟು ಹೋಯಿತು. 'ಸ್ವದೇಶಿ' ತತ್ವದ ಪ್ರತಿಪಾದಕರಾಗಿದ್ದ ಗಾಂಧೀಜಿ, ಸರದಾರ್ ಪಟೇಲ್‌ರಂತಹವರ ನಿರ್ಗಮನ, ಭಾರತವನ್ನು ಪಾಶ್ಚಾತ್ಯ ಮಾದರಿಯಲ್ಲಿ ಆಧುನಿಕಗೊಳಿಸಲು ಹೊರಟ ನೆಹರೂರವರ 'ದರ್ಶನ' ಭಾರತದ ಸ್ವಾತಂತ್ರ್ಯೋತ್ತರ ಇತಿಹಾಸದ ಮೇಲೆ ಬಲವಾದ ಪರಿಣಾಮ ಬೀರಿದೆ[೧೦]" ಎನ್ನುತ್ತಾರೆ ಹೇಮಲತಾ ಮಹಿಷಿಯವರು. ಈ ನಿಲುವುಗಳ ಹಿಂದಿನ ಹಿನ್ನೆಲೆ, ಉದ್ದೇಶ, ಕಾರಣ ಮತ್ತು ಪರಿಣಾಮಗಳು ಏನೇ ಇದ್ದರೂ ಆಂಗ್ಲರು ತಮ್ಮ ಅಧಿಕಾರದ ಅವಧಿಯಲ್ಲಿ ಭಾರತದ ಆಡಳಿತದಲ್ಲಿ ಭಾರತೀಯರೇ ಇಂಗ್ಲಿಶ್ ಬಳಸುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದರು. ಇದು ಈಗಾಗಲೇ ಹೇಳಿದ ಹಾಗೆ ಭಾರತೀಯರ ಜೀವನಕ್ರಮದಲ್ಲಿ ಬದಲಾವಣೆ ಮಾಡಿ ಇಲ್ಲಿನ ಜನಸಮುದಾಯಗಳ ಅಸ್ತಿತ್ವಕ್ಕೆ ಪೆಟ್ಟುಕೊಡಲು ಆರಂಭಿಸಿತ್ತು.

ಹೀಗಾಗಿ ಭಾರತ ಸ್ವತಂತ್ರಗೊಂಡ ನಂತರ ಭಾರತದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆಯನ್ನು ಬಳಕೆಗೆ ತರುವ ಉದ್ದೇಶದಿಂದ ಹಿಂದಿಯನ್ನು ದೇಶದ ಆಡಳಿತ

ಭಾಷೆಯನ್ನಾಗಿಸುವ ಪ್ರಯತ್ನ ಮಾಡಲಾಗಿದೆ. ಆದರೆ ಇದಕ್ಕೆ ದಕ್ಷಿಣ ಭಾರತದ ರಾಜ್ಯಗಳಲ್ಲಿ ಅದರಲ್ಲೂ ತಮಿಳುನಾಡು, ಕರ್ನಾಟಕಗಳಲ್ಲಿ ತೀವ್ರ ವಿರೋಧ ವ್ಯಕ್ತವಾಗಿದೆ. ಇದಕ್ಕೆ ದಕ್ಷಿಣ ಭಾರತದ ಉಳಿದ ರಾಜ್ಯಗಳು ಬೆಂಬಲ ವ್ಯಕ್ತಪಡಿಸಿವೆ. ಏಕೆಂದರೆ ಭಾರತದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿಯನ್ನು ಬಳಕೆಗೆ ತರಲು ಪ್ರಯತ್ನಿಸಿರುವುದರಿಂದ ಹಿಂದಿ ಭಾಷೆಯ ತಿಳುವಳಿಕೆ ಇಲ್ಲದ ಜನರು ಹಿಂದಿಯನ್ನು ಕಲಿಯಬೇಕಾಯಿತು. ಹಾಗೆಯೇ ಈಗಾಗಲೇ ಆಡಳಿತದಲ್ಲಿ ಕೆಲಸ ಮಾಡುತ್ತಿದ್ದ ಅಧಿಕಾರಿಗಳು, ನೌಕರರು ಹಿಂದಿಯನ್ನು ಕಲಿಯುವ ಅನಿವಾರ್ಯತೆಗೆ ಒಳಗಾಗಿದ್ದರು. ಆದರೆ ದಕ್ಷಿಣ ಭಾರತದಲ್ಲಿ ಹಿಂದಿಯನ್ನು ಕಲಿತಿದ್ದವರು, ಬಳಸುತ್ತಿದ್ದವರು ಕಡಿಮೆಯಿದ್ದರು. ಕೇಂದ್ರಸರ್ಕಾರದ ಭಾಷಾನೀತಿಗೆ ಒಳಗಾಗಿ ಹಿಂದಿ ಕಲಿತು, ಬಳಸಿದರೂ ಕೇಂದ್ರ ಮತ್ತು ರಾಜ್ಯಗಳ ಆಡಳಿತದಲ್ಲಿ ಇಂಗ್ಲಿಶ್‌ನ ಬಳಕೆ ನಿಂತಿರಲಿಲ್ಲ. ಇದರ ಬಳಕೆಗೆ ಯಾವ ನಿಯಂತ್ರಣವನ್ನು ಹೇರದೆ ಮುಂದುವರಿಯಲು ಅವಕಾಶ ಮಾಡಿಕೊಟ್ಟಿದ್ದರು. ಹೀಗಾಗಿ ಇಂಗ್ಲಿಶ್ ದೇಶ ಮತ್ತು ರಾಜ್ಯಗಳ ಆಡಳಿತದಲ್ಲಿ ಬಳಕೆಯಲ್ಲಿತ್ತು. ಕೇಂದ್ರಸರ್ಕಾರದ ಈ ಹೊಸ ಯೋಜನೆಯಿಂದಾಗಿ ದಕ್ಷಿಣ ಭಾರತದ ರಾಜ್ಯಗಳ ಜನರು ಮಾತೃಭಾಷೆ, ಪ್ರಾದೇಶಿಕ ಭಾಷೆ ಅಥವಾ ರಾಜ್ಯಭಾಷೆ, ರಾಷ್ಟ್ರೀಯ ಭಾಷೆ, ಅಂತರಾಷ್ಟ್ರೀಯ ಭಾಷೆಗಳ ಹೆಸರಿನಲ್ಲಿ ಹೆಚ್ಚು ಭಾಷೆಗಳನ್ನು ಕಲಿಯಬೇಕಾದ, ಬಳಸಬೇಕಾದ ಒತ್ತಡಕ್ಕೆ ಒಳಗಾಗಿದ್ದಾರೆ. ಆದರೆ ಶಾಲೆಗಳಲ್ಲಿ ಈ ಎಲ್ಲಾ ಭಾಷೆಗಳ ಕಲಿಕೆಗೆ ಪೂರಕ ವ್ಯವಸ್ಥೆ ಕಲ್ಪಿಸಿರಲಿಲ್ಲ. ಹೀಗಾಗಿ ಇದಕ್ಕೆ ಸಿದ್ಧತೆ ಮಾಡಿಕೊಳ್ಳಲು ಭಾರತ ಸಂವಿಧಾನ ಪ್ರಾರಂಭವಾದ ನಂತರ ಹದಿನೈದು ವರ್ಷಗಳ ಕಾಲ ಭಾರತದ ಆಡಳಿತದಲ್ಲಿ ಇಂಗ್ಲಿಶ್ ಭಾಷಾಬಳಕೆಯ ಮುಂದುವರಿಕೆಗೆ ಅವಕಾಶ ಕಲ್ಪಿಸಲಾಗಿದೆ. ಆದರೆ ಭಾರತದ ಆಡಳಿತದಲ್ಲಿ ಹಿಂದಿ ಭಾಷೆಯ ಬಳಕೆಗೆ ಈಗಾಗಲೇ ಹೇಳಿದ ಹಾಗೆ ವ್ಯಕ್ತವಾಗಿರುವ ವಿರೋಧಗಳು ಇಂಗ್ಲಿಶ್ ಭಾಷಾಬಳಕೆಯನ್ನು ಮುಂದುವರಿಸಿವೆ.

ಹೀಗೆ ದೇಶದ ಆಡಳಿತದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೆ ವಾದ ಪ್ರತಿವಾದಗಳು ನಡೆಯುತ್ತಿರುವಾಗಲೇ ದೇಶದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿಯೇ ಭಾಷಾವಾರು ರಾಜ್ಯ ರಚನೆಗಾಗಿ ಹೋರಾಟ ಮಾಡಿದ್ದ ಜನಸಮುದಾಯಗಳು ಮತ್ತೆ ಭಾಷಾವಾರು ರಾಜ್ಯ ರಚನೆಯ ಬೇಡಿಕೆಯನ್ನು ಕೇಂದ್ರದ ಮುಂದಿಟ್ಟಿದ್ದವು. ಆದರೆ ದೇಶದಲ್ಲಿ ಭಾಷಾವಾರು ರಾಜ್ಯಗಳನ್ನು ರಚನೆ ಮಾಡಿದರೆ ದೇಶದ ಏಕತೆಗೆ ಭಂಗ ಬರುತ್ತದೆ. ಹಾಗೆಯೇ ದೇಶದ ಆಡಳಿತಕ್ಕೆ ಧಕ್ಕೆಯಾಗುತ್ತದೆ. ಏಕೆಂದರೆ ಭಾಷಾವಾರು ರಾಜ್ಯ ರಚನೆ ಮಾಡಿದರೆ ರಾಜ್ಯಗಳು ಪ್ರಾದೇಶಿಕ ಭಾಷೆಗಳನ್ನು ಆಡಳಿತ ಭಾಷೆಯಾಗಿ ಮಾಡಿಕೊಳ್ಳುತ್ತವೆ. ಇದರಿಂದ ರಾಜ್ಯಗಳಲ್ಲಿ ಪ್ರಾದೇಶಿಕ ಭಾಷೆಗಳು ಪ್ರಾಬಲ್ಯ ಸಾಧಿಸಿ ಹಿಂದಿ ತನ್ನ ಪ್ರಾಮುಖ್ಯತೆ ಕಳೆದುಕೊಳ್ಳುತ್ತದೆ ಎಂದು ಅರಿತಿದ್ದರು. ಇದರಿಂದಾಗಿ ರಾಜಕೀಯ, ಆಡಳಿತಾತ್ಮಕ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ ಉದ್ಭವವಾಗುವ ಸಮಸ್ಯೆಗಳನ್ನು ಪ್ರಧಾನವಾಗಿಸಿಕೊಂಡು ದೇಶದಲ್ಲಿ ಭಾಷಾವಾರು ರಾಜ್ಯಗಳನ್ನು ರಚನೆ ಮಾಡಿಲ್ಲ. ಇದರಿಂದಾಗಿ ಭಾರತ ಆಗಸ್ಟ್ ೧೫ ೧೯೪೭ರಂದು ಸ್ವತಂತ್ರಗೊಂಡರೂ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾಗಿಲ್ಲ. ಇದರಿಂದ ಸ್ವಾತಂತ್ರ್ಯ ಪೂರ್ವದಲ್ಲಿ ಭಾಷಾವಾರು ಪ್ರಾಂತ ರಚನೆಗಾಗಿ ಹೋರಾಟ ಮಾಡುತ್ತಿದ್ದ

ಜನಸಮುದಾಯಗಳಿಗೆ ಅಸಮಾಧಾನವಾಗಿದೆ. ಈ ಅಸಮಾಧಾನ ಭಾರತದ ಸ್ವಾತಂತ್ರ್ಯಾನಂತರದಲ್ಲಿ ಇಲ್ಲಿನ ಜನಸಮುದಾಯಗಳು ಭಾಷಾವಾರು ರಾಜ್ಯರಚನೆಗೆ ಹೋರಾಟ ತೀವ್ರವಾಗಲು ಕಾರಣವಾಗಿದೆ.

ಏಕೆಂದರೆ ಭಾರತ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗಾಂಧಿ ದೇಶದಲ್ಲಿ ಮಾತೃಭಾಷೆ ಮತ್ತು ಪ್ರಾದೇಶಿಕ ಭಾಷೆಗಳಿಗೆ ಮನ್ನಣೆ ಸಿಗಬೇಕು. ಇದನ್ನು ಭಾರತ ಸ್ವಾತಂತ್ರ್ಯಗೊಂಡರೆ ಈಡೇರಿಸಲಾಗುವುದು ಎಂಬ ಆಶಯದೊಂದಿಗೆ ಜನರನ್ನು ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರೇಪಿಸಿದ್ದರು. ಆದರೂ ಭಾರತ ಸ್ವತಂತ್ರಗೊಂಡ ನಂತರದಲ್ಲಿ ಮೇಲೆ ಹೇಳಿದ ಕಾರಣಗಳನ್ನು ನೀಡಿ ಭಾಷಾವಾರು ರಚನೆಗೆ ಒಪ್ಪಿಗೆ ಸೂಚಿಸದಿದ್ದಾಗ ಜನರು ಕೇಂದ್ರಸರ್ಕಾರದ ವಿರುದ್ಧವಾಗಿ ಹೋರಾಟಗಳನ್ನು ತೀವ್ರಗೊಳಿಸಿದ್ದಾರೆ. ಇಂತಹ ಸಂದರ್ಭದಲ್ಲಿ ಜನಸಮುದಾಯಗಳ ಹೋರಾಟಗಳು ತೀವ್ರವಾದಾಗ ನಿಯಂತ್ರಣಕ್ಕೆ ತರಲು ಸಾಧ್ಯವಾಗದ ಕೇಂದ್ರ ಸರ್ಕಾರ ರಾಜ್ಯಪುನರ್ ವಿಂಗಡಣಾ ಆಯೋಗವನ್ನು ನೇಮಕ ಮಾಡಿ ಆ ಆಯೋಗ ನೀಡಿದ ವರದಿಯನ್ನು ಆಧರಿಸಿ ದೇಶದಲ್ಲಿ ಭಾಷಾವಾರು ರಾಜ್ಯಗಳನ್ನು ರಚನೆ ಮಾಡಿದೆ. ಹಾಗೆ ರಚನೆಯಾಗಿರುವ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಇದು ೧೯೫೬ ನವೆಂಬರ್ ೧ರಂದು ಕನ್ನಡ ಭಾಷೆಯ ಆಧಾರದಲ್ಲಿ ಕರ್ನಾಟಕ (೧೯೫೬ರಿಂದ ೧೯೭೩ರವರೆಗೆ ಮೈಸೂರು ರಾಜ್ಯ ಎಂದು ಕರೆಯಲಾಗುತ್ತಿದ್ದರು) ರೂಪುತಳೆದಿದೆ. ಹಾಗೆಯೇ ದೇಶದ ಆಡಳಿತ, ರಾಜ್ಯಗಳ ಆಡಳಿತ, ದೇಶದಲ್ಲಿ ಬಳಕೆಯಾಗುತ್ತಿರುವ ಭಾಷೆ, ಭಾಷಾಸಮುದಾಯಗಳು, ಅವುಗಳ ಹಿತ, ಅಸ್ಥಿತ್ವದ ಉಳಿವಿಗಾಗಿ ಕೈಗೊಳ್ಳಬಹುದಾದ ಕ್ರಮಗಳು, ಶಿಕ್ಷಣ, ಉದ್ಯೋಗ ಇತ್ಯಾದಿ ಕ್ಷೇತ್ರಗಳಲ್ಲಿ ಬಳಸಬೇಕಾದ ಭಾಷೆ, ಅವುಗಳಿಂದ ಉದ್ಭವವಾಗುವ ಸಮಸ್ಯೆಗಳು ಮತ್ತು ಅವುಗಳಿಗೆ ಪರಿಹಾರ ಸೂಚಿಸಲು ರಾಜಭಾಷಾ ಆಯೋಗವನ್ನು ನೇಮಕ ಮಾಡಿದೆ. ಈ ಆಯೋಗ ನೀಡಿರುವ ವರದಿಯನ್ನು ಆಧರಿಸಿ ದೇಶದಲ್ಲಿ ಭಾಷೆ ಮತ್ತು ಭಾಷೆಗಳನ್ನು ಕಲಿಸಬೇಕಾದ ಮತ್ತು ಬಳಸಬೇಕಾದ ನಿಯಮಗಳನ್ನು ಕೇಂದ್ರ ಸರ್ಕಾರ ಜಾರಿಗೆ ತಂದಿದೆ.

ಇದರ ಜೊತೆಗೆ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರ ಆಯಾ ರಾಜ್ಯಗಳಲ್ಲಿ ಪ್ರಾದೇಶಿಕ ಭಾಷೆಯನ್ನು ಆಡಳಿತ ಭಾಷೆಯಾಗಿ ಬಳಸಲು, ಅದಕ್ಕೆ ಸಂಬಂಧಪಟ್ಟ ಹಾಗೆ ನಿಯಮಗಳನ್ನು ರೂಪಿಸಿಕೊಳ್ಳಲು ಸಂವಿಧಾನದ ೩೪೫ನೇ ಅನುಚ್ಛೇದ ಅವಕಾಶ ಮಾಡಿಕೊಟ್ಟಿದೆ. ಹಾಗಾಗಿ ಆಯಾ ರಾಜ್ಯಗಳಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಯಾವ ಭಾಷೆಯ ಆಧಾರದಲ್ಲಿ ರಾಜ್ಯಗಳು ರಚನೆಯಾಗಿವೆಯೋ ಆ ರಾಜ್ಯಗಳಲ್ಲಿ ತಮ್ಮ ರಾಜ್ಯದ ಉದಯಕ್ಕೆ ಕಾರಣವಾದ ಭಾಷೆಯನ್ನು ರಾಜ್ಯಭಾಷೆಯೆಂದು ಘೋಷಣೆ ಮಾಡಿಕೊಂಡಿವೆ. ಕೆಲವು ರಾಜ್ಯಗಳು ಎರಡೆರಡು ಭಾಷೆಗಳನ್ನು ರಾಜ್ಯಭಾಷೆಗಳೆಂದು ಘೋಷಣೆ ಮಾಡಿಕೊಂಡಿವೆ. ಇದಕ್ಕನುಗುಣವಾಗಿ ಕರ್ನಾಟಕದಲ್ಲಿಯೂ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಆದ್ದರಿಂದ ಕರ್ನಾಟಕ ಸರ್ಕಾರ ೧೯೬೩ರಲ್ಲಿ 'ಕರ್ನಾಟಕ ರಾಜಭಾಷಾ ಅಧಿನಿಯಮ ೧೯೬೩'ನ್ನು ಜಾರಿಗೆ ತರುವ ಮೂಲಕ ಕನ್ನಡ ಕರ್ನಾಟಕದ ಅಧಿಕೃತ ಆಡಳಿತ ಭಾಷೆಯನ್ನಾಗಿ ಮಾಡಿದೆ. ಇವುಗಳ

ಜೊತೆಗೆ ಆಯಾ ರಾಜ್ಯಗಳಲ್ಲಿ ರಾಷ್ಟ್ರಪತಿಯವರು ನಿರ್ದೇಶನ ನೀಡಿದರೆ ರಾಜ್ಯಸರ್ಕಾರಗಳು ಭಾಷಾ ಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸಬೇಕು. ಹೀಗೆ ರಾಷ್ಟ್ರಮಟ್ಟದ ವ್ಯವಹಾರಕ್ಕಾಗಿ ಹಿಂದಿ ಅಥವಾ ಇಂಗ್ಲಿಶ್ ಮತ್ತು ರಾಜ್ಯದಲ್ಲಿನ ಆಡಳಿತದಲ್ಲಿ ರಾಜ್ಯಭಾಷೆ ಅಥವಾ ಭಾಷೆಗಳನ್ನು ಆಡಳಿತ ಭಾಷೆಯಾಗಿ ಬಳಸಲು ಅವಕಾಶ ಕಲ್ಪಿಸಲಾಗಿದೆ. ಇದರಿಂದಾಗಿ ಭಾರತ ಸ್ವಾತಂತ್ರ್ಯಾ ನಂತರ ಕರ್ನಾಟಕದ ಆಡಳಿತದಲ್ಲಿ ಹಿಂದಿ, ಇಂಗ್ಲಿಶ್, ಕನ್ನಡ ಮತ್ತು ಇಲ್ಲಿನ ಭಾಷಾ ಅಲ್ಪಸಂಖ್ಯಾತರ ಭಾಷೆಗಳನ್ನು ಪರಿಸ್ಥಿತಿಗೆ ಅನುಗುಣವಾಗಿ ಆಡಳಿತದಲ್ಲಿ ಬಳಸಬೇಕಾದ ಸ್ಥಿತಿ ನಿರ್ಮಾಣವಾಗಿದೆ.

ಹೀಗೆ ಭಾರತ ಸ್ವಾತಂತ್ರ್ಯಾನಂತರದಲ್ಲಿ ದೇಶ ಮತ್ತು ರಾಜ್ಯಗಳ ಆಡಳಿತದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೆ ಚರ್ಚೆಗಳು, ನಿಯಮಗಳು ರೂಪಿತವಾಗಿ ಜಾರಿಯಾಗುತ್ತಿರುವಾಗಲೇ ದೇಶದಾದ್ಯಂತ ಎಲ್ಲಾ ರಾಜ್ಯಗಳಲ್ಲೂ ಕೇಂದ್ರ ಸರ್ಕಾರ ತನ್ನ ಆಡಳಿತದ ಅನುಕೂಲಕ್ಕಾಗಿ ಆಡಳಿತ ಕೇಂದ್ರಗಳನ್ನು ಸ್ಥಾಪಿಸಿದೆ. ಹಾಗೆಯೇ ರಾಜ್ಯಗಳಲ್ಲಿನ ಸಂಪತ್ತನ್ನು ಆಧರಿಸಿ ಕೈಗಾರಿಕೆ, ಉದ್ದಿಮೆಗಳನ್ನು ಆರಂಭಿಸಿದೆ. ಇಲ್ಲಿ ಕಾರ್ಯನಿರ್ವಹಿಸಲು ಅಧಿಕಾರಿಗಳು ಮತ್ತು ನೌಕರರ ನೇಮಕಾತಿ ಪ್ರಕ್ರಿಯೆಯನ್ನು ಆಯಾ ರಾಜ್ಯಗಳಲ್ಲಿರುವ ಸ್ಥಳೀಯ ಪ್ರಾಧಿಕಾರ ನಡೆಸುವುದಿಲ್ಲ. ಬದಲಾಗಿ ಕೇಂದ್ರ ಸರ್ಕಾರದಿಂದ ರಚನೆಯಾಗಿರುವ ನೇಮಕಾತಿ ಪ್ರಾಧಿಕಾರ ಮಾಡುತ್ತದೆ. ಇದಕ್ಕೆ ದೇಶದಲ್ಲಿರುವ ಎಲ್ಲಾ ಭಾಗದ ಎಲ್ಲಾ ಭಾಷೆಯ ಜನರು ಹುದ್ದೆಗೆ ತಕ್ಕನಾದ ಅರ್ಹತೆ ಪಡೆದಿದ್ದರೆ ಸ್ಪರ್ಧಿಸಬಹುದು. ಆದರೆ ಈ ಪರೀಕ್ಷೆಗಳಲ್ಲಿ ಪ್ರತಿಯೊಬ್ಬರೂ ಇಂಗ್ಲಿಶ್ ಇಲ್ಲವೆ ಹಿಂದಿಯಲ್ಲಿ ಉತ್ತರಿಸಬೇಕು. ಅಲ್ಲದೆ ಇಂಗ್ಲಿಶ್ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣವಾಗುವುದು ಕಡ್ಡಾಯವಾಗಿದೆ. ಏಕೆಂದರೆ ಹೀಗೆ ನೇಮಕವಾದವರಲ್ಲಿ ಕೆಲವರು ತಮ್ಮ ಸೇವಾವಧಿಯನ್ನು ಒಂದೇ ರಾಜ್ಯದಲ್ಲಿ ಪೂರ್ಣಗೊಳಿಸಿದರೆ ಮತ್ತೆ ಕೆಲವರು ವಿವಿಧ ರಾಜ್ಯಗಳಿಗೆ ವರ್ಗಾವಣೆಯಾಗುತ್ತಾರೆ. ಹಾಗೆಯೇ ನೌಕರರು ಕೇಂದ್ರ ಸರ್ಕಾರದ ಉನ್ನತ ಅಧಿಕಾರಿಗಳ ಜೊತೆ ವ್ಯವಹರಿಸಬೇಕಿದೆ. ಹಾಗೆಯೇ ಕೇಂದ್ರಸರ್ಕಾರದ ಉನ್ನತ ಅಧಿಕಾರಿಗಳೂ ವಿದೇಶಗಳ ನಡುವಿನ ವ್ಯವಹಾರ ಮತ್ತು ರಾಜ್ಯಸರ್ಕಾರದ ಉನ್ನತ ಅಧಿಕಾರಿಗಳ ಜೊತೆ ವ್ಯವಹರಿಸಬೇಕಿದೆ. ಇವರುಗಳಿಗೆ ಆಯಾರಾಜ್ಯಗಳ ರಾಜ್ಯಭಾಷೆಗಳ ತಿಳುವಳಿಕೆ ಇಲ್ಲದೇ ಇದ್ದ ಸಂದರ್ಭದಲ್ಲಿ ಇಂಗ್ಲಿಶ್‌ನ್ನು ತನ್ನ ವ್ಯವಹಾರದ ಭಾಷೆಯಾಗಿ ಬಳಸಬಹುದು ಎಂಬ ಕಾರಣಕ್ಕಾಗಿ ಎಲ್ಲಾ ರಾಜ್ಯಗಳ ಜೊತೆ ವ್ಯವಹರಿಸುವುದಕ್ಕೆ ಅನುಕೂಲವಾಗಲಿ ಎಂಬ ಉದ್ದೇಶದಿಂದ ಕೇಂದ್ರ ಸರ್ಕಾರಿ ನೌಕರಿಗೆ ಸೇರುವ ನೌಕರರಿಗೆ ಇಂಗ್ಲಿಶ್ ಅಥವಾ ಹಿಂದಿ ಭಾಷೆಗಳ ಜ್ಞಾನವನ್ನು ಕಡ್ಡಾಯಗೊಳಿಸಲಾಗಿದೆ. ಇದರಿಂದಾಗಿ ಕೇಂದ್ರ ಸರ್ಕಾರದ ಹುದ್ದೆಗೆ ಸೇರಬಯಸುವ ಪ್ರತಿಯೊಬ್ಬ ಭಾರತೀಯ ಪ್ರಜೆಯು ಇಂಗ್ಲಿಶ್ ಇಲ್ಲವೆ ಹಿಂದಿ ಭಾಷಾಜ್ಞಾನ ಇರುವುದು ಕಡ್ಡಾಯವಾಗಿದೆ. ಹಾಗೆಯೇ ಈ ಭಾಷೆಗಳಲ್ಲಿ ಆಡಳಿತ ನಡೆಸುವ, ವ್ಯವಹರಿಸುವ ಸಾಮರ್ಥ್ಯ ಪಡೆದಿರಬೇಕು. ಕೇವಲ ಭಾಷಾಜ್ಞಾನವಿದ್ದು ವ್ಯವಹರಿಸುವ ಸಾಮರ್ಥ್ಯವಿಲ್ಲದಿದ್ದರೆ ಕೇಂದ್ರದ ಹುದ್ದೆಗಳನ್ನು ನಿಭಾಯಿಸುವುದು ಕಷ್ಟವಾಗುತ್ತದೆ ಎಂಬ ಕಾರಣಕ್ಕಾಗಿ ಕೇಂದ್ರ ಸರ್ಕಾರದ ಹುದ್ದೆಗಳಿಗೆ ನಡೆಯುವ ಪರೀಕ್ಷೆಗಳು, ಸಂದರ್ಶನಗಳನ್ನು ಹಿಂದಿ ಇಲ್ಲವೆ ಇಂಗ್ಲಿಶ್ ಭಾಷೆಯಲ್ಲಿ ನಡೆಸುತ್ತಿತ್ತು.

ಆದರೆ ಕೇಂದ್ರಸರ್ಕಾರದ ಈ ನಿರ್ಧಾರದಿಂದ ಇಂಗ್ಲಿಶ್ ಮತ್ತು ಹಿಂದಿ ಭಾಷೆಗಳ ಜ್ಞಾನವಿಲ್ಲದ ವಿದ್ಯಾರ್ಥಿಗಳು ಪ್ರತಿಭಾವಂತರಾಗಿದ್ದರೂ ಕೇಂದ್ರಸರ್ಕಾರದ ಹುದ್ದೆಗಳಿಂದ ವಂಚಿತರಾಗುತ್ತಿದ್ದರು. ಏಕೆಂದರೆ ಭಾರತ ಸ್ವತಂತ್ರಗೊಂಡ ನಂತರದಲ್ಲಿ ದೇಶಿಭಾಷೆಗಳನ್ನು ಉತ್ತೇಜಿಸುವ ದೃಷ್ಟಿಯಲ್ಲಿ ಮಾತೃಭಾಷಾ ಮಾಧ್ಯಮದ ಶಿಕ್ಷಣಕ್ಕೆ ಹೆಚ್ಚಿನ ಮನ್ನಣೆ ಕೊಡಲು ಆರಂಭವಾಗಿತ್ತು. ಅದಕ್ಕೆ ಪೂರಕವಾಗಿ ಭಾಷಾನೀತಿಗಳು ರಚನೆಯಾಗಿದ್ದವು. ಸರ್ಕಾರಗಳ ಈ ಭಾಷಾನೀತಿಗಳಿಂದ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷಾಮಾಧ್ಯಮದಲ್ಲಿ ಕಲಿತ ಹೆಚ್ಚಿನ ವಿದ್ಯಾರ್ಥಿಗಳು ಕೇಂದ್ರಸರ್ಕಾರದ ಹುದ್ದೆಗಳಿಂದ ವಂಚಿತರಾಗುತ್ತಿದ್ದರು. ಇದರಿಂದಾಗಿ ಕೇಂದ್ರಸರ್ಕಾರದ ಈ ಭಾಷಾನಿಯಮಗಳ ವಿರುದ್ಧವಾಗಿ ರಾಜ್ಯಗಳು ವಿರೋಧ ವ್ಯಕ್ತಪಡಿಸಿವೆ. ಅದರಲ್ಲೂ ದಕ್ಷಿಣಭಾರತದ ರಾಜ್ಯಗಳು ಇದರಲ್ಲಿ ಮುಂಚೂಣಿಯಲ್ಲಿವೆ. ಕೇಂದ್ರಸರ್ಕಾರದ ಈ ಭಾಷಾನಿಯಮ ಸಂವಿಧಾನದ ನಿಯಮಗಳಿಗೆ ವಿರೋಧವಾದದ್ದು. ಇದರಿಂದ ಸಾಕಷ್ಟು ಜನ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿ ಕಲಿತ ವಿದ್ಯಾರ್ಥಿಗಳು ಪ್ರತಿಭಾವಂತರಾಗಿದ್ದರೂ ಭಾಷೆಯ ಕಾರಣದಿಂದಾಗಿ ಕೇಂದ್ರಸರ್ಕಾರದ ಹುದ್ದೆಗಳಿಂದ ವಂಚಿರಾಗುತ್ತಿದ್ದಾರೆ ಎಂದು ಕೇಂದ್ರಸರ್ಕಾರದ ಭಾಷಾನೀತಿಗೆ ವಿರೋಧಗಳು ವ್ಯಕ್ತವಾಗಿವೆ.

ಈ ಹಿನ್ನೆಲೆಯಲ್ಲಿ ಕೇಂದ್ರಸರ್ಕಾರ ಇತ್ತೀಚಿನ ದಿನಗಳಲ್ಲಿ ಕೇಂದ್ರಸರ್ಕಾರಿ ಹುದ್ದೆಗಳಿಗೆ ನಡೆಸುವ ಪರೀಕ್ಷೆಗಳಲ್ಲಿ ಪ್ರಾದೇಶಿಕ ಭಾಷೆಗಳಿಗೆ ಮಾನ್ಯತೆ ನೀಡಿದೆ. ಅವುಗಳಲ್ಲಿಯು ಸಂದರ್ಶನ ನಡೆಸುತ್ತಿದೆ. ಆದರೆ ಇಂಗ್ಲಿಶ್ ಭಾಷಾಜ್ಞಾನ ಮಾತ್ರ ಕಡ್ಡಾಯಗೊಳಿಸಿದೆ. ಜೊತೆಗೆ ಕೇಂದ್ರಸರ್ಕಾರದಿಂದ ಹೊರಬರುವ ಅಧಿಸೂಚನೆ, ಸುತ್ತೋಲೆ, ಜ್ಞಾಪನ ಇತ್ಯಾದಿಗಳು ಇಂಗ್ಲಿಶ್ ಮತ್ತು ಹಿಂದಿ ಭಾಷೆಗಳಲ್ಲಿಯೇ ಇವೆ. ಇದರಿಂದಾಗಿ ಕೇಂದ್ರಸರ್ಕಾರಿ ನೌಕರರಿಗೆ ಇಂಗ್ಲಿಶ್ ಇಲ್ಲವೆ ಹಿಂದಿ ಭಾಷೆಯ ಜ್ಞಾನ ಕಡ್ಡಾಯವಾಗಿದೆ. ಹಾಗೆಯೇ ತಮ್ಮ ಏನೇ ಕುಂದುಕೊರತೆ, ಸಮಸ್ಯೆಗಳನ್ನು ಕೇಂದ್ರ ಕಚೇರಿಯವರಿಗೆ ತಲುಪಿಸಬೇಕಾದರೂ ಇಂಗ್ಲಿಶ್ ಇಲ್ಲವೆ ಹಿಂದಿ ಭಾಷೆಯಲ್ಲಿಯೇ ಕಳುಹಿಸಬೇಕು. ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿ ಪತ್ರವ್ಯವಹಾರ ನಡೆಸಿದರೆ ಅಲ್ಲಿನ ಅಧಿಕಾರಿ ಅಥವಾ ನೌಕರರಿಗೆ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿರುವ ಪತ್ರಗಳು ಅರ್ಥವಾಗದೆ ಅವರು ನೌಕರರ ಸಮಸ್ಯೆಗಳು, ಕುಂದುಕೊರತೆಗಳಿಗೆ ಪೂರಕವಾಗಿ ಸ್ಪಂದಿಸಿಲ್ಲ. ಇಂತಹ ಸಂದರ್ಭಗಳಲ್ಲಿ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿ ಕಳುಹಿಸಿಕೊಟ್ಟಿರುವ ಪತ್ರಗಳನ್ನು ಹಿಂದಿರುಗಿಸಿರುವ ಉದಾಹರಣೆಗಳೂ ಇವೆ. ಇದು ರಾಜ್ಯಗಳಲ್ಲಿಯೇ ಕೆಲಸ ನಿರ್ವಹಿಸುವ ಬ್ಯಾಂಕು ಮತ್ತು ಇತರ ಕೇಂದ್ರಸರ್ಕಾರದ ಇಲಾಖೆಗಳಲ್ಲಿ ನಡೆಯುತ್ತಿದೆ.

ಹೀಗಾಗಿ ಸ್ಥಳೀಯ ಜನರು ಕೇಂದ್ರಸರ್ಕಾರದ ಭಾಷಾನೀತಿಯಿಂದಾಗಿ ಸಮಸ್ಯೆಗೆ ಸಿಲುಕಿದ್ದಾರೆ. ಇದಕ್ಕೆ ಮುಖ್ಯಕಾರಣ ಕೇಂದ್ರಸರ್ಕಾರದ ಹುದ್ದೆಗಳ ನೇಮಕಾತಿಯಲ್ಲಿ ಇಂಗ್ಲಿಶ್ ಇಲ್ಲವೆ ಹಿಂದಿಯನ್ನು ಕಡ್ಡಾಯಗೊಳಿಸಿ ಪ್ರಾದೇಶಿಕ ಭಾಷೆಗಳನ್ನು ನಿರ್ಲಕ್ಷಿಸಿರುವುದು. ಮತ್ತು ರಾಜ್ಯಗಳಲ್ಲಿ ಜಾರಿಗೆ

ತಂದಿರುವ ಭಾಷಾನೀತಿಗಳನ್ನು ಅನುಷ್ಠಾನಕ್ಕೆ ತರುವಲ್ಲಿ ವಿಫಲವಾಗಿರುವುದು. ಇಲ್ಲಿ ಇಂಗ್ಲಿಶ್ ಇಲ್ಲವೆ ಹಿಂದಿ ಭಾಷೆಗಳ ಅಗತ್ಯ ಮತ್ತು ಅನಗತ್ಯದ ಪ್ರಶ್ನೆ ಏನೇ ಇರಬಹುದು. ಆದರೆ ಇಂಗ್ಲಿಶ್ ಅಥವಾ ಹಿಂದಿ ಭಾಷೆಯ ಜ್ಞಾನ ಕಡ್ಡಾಯ ಎಂಬ ಕೇಂದ್ರಸರ್ಕಾರದ ಭಾಷಾನೀತಿ ಮಾತೃಭಾಷಾ ಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳನ್ನು ಕೇಂದ್ರಸರ್ಕಾರದ ಉದ್ಯೋಗಗಳಿಂದ ವಂಚಿತವಾಗಿ ಮಾಡಿರುವುದಂತೂ ಸತ್ಯ. ಹಾಗೆಯೇ ರಾಜ್ಯದಲ್ಲಿಯೂ ಕರ್ನಾಟಕದ ಆಡಳಿತಾತ್ಮಕ ಹುದ್ದಗಳಲ್ಲಿ ಇಂಗ್ಲಿಶ್ ಭಾಷಾಜ್ಞಾನ ಕಡ್ಡಾಯವೆಂಬ ನಿಯಮ ಜಾರಿಯಲ್ಲಿರುವುದರಿಂದ ಮಾತೃಭಾಷಾ ಮಾಧ್ಯಮದ ಶಾಲೆಗಳಲ್ಲಿ ಮತ್ತು ಕೆಲವು ಇಂಗ್ಲಿಶ್ ಮಾಧ್ಯಮದಲ್ಲಿ ಕಲಿತಿರುವ ವಿದ್ಯಾರ್ಥಿಗಳು ರಾಜ್ಯಸರ್ಕಾರದ ಉನ್ನತ ಹುದ್ದೆಗಳಿಗೆ ನೇಮಕವಾಗುವುದರಿಂದ ವಂಚಿತರಾಗಿದ್ದಾರೆ. ಇವುಗಳ ನಡುವೆಯೇ ಕೇಂದ್ರಸರ್ಕಾರದಿಂದ ನೇಮಕವಾದ ನೌಕರರು ರಾಜ್ಯಗಳಲ್ಲಿ ರಾಜ್ಯಭಾಷೆಯನ್ನು ಕಲಿಯುವುದು, ಕನ್ನಡ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾಗುವುದು ಕಡ್ಡಾಯವಾಗಿದೆ. ಇದರಿಂದಾಗಿ ಇದುವರೆಗೆ ಚರ್ಚಿಸಿದ ಹಾಗೆ ಭಾರತ ಸ್ವತಂತ್ರಗೊಂಡ ನಂತರ ಭಾರತದ ಆಡಳಿತದಲ್ಲಿ ಕಾರ್ಯನಿರ್ವಹಿಸುವಾಗ ಹಲವು ಭಾಷೆಗಳನ್ನು ಕಲಿಯಬೇಕಾದ, ಬಳಸಬೇಕಾದ ಅನಿವಾರ್ಯತೆ ನಿರ್ಮಾಣವಾಗಿದೆ. ಆದರೆ ರಾಜ್ಯಭಾಷೆಯನ್ನು ದೇಶದ ಎಲ್ಲರೂ ಕಲಿಯಬೇಕಾದ ಒತ್ತಡವಿಲ್ಲ. ಯಾರು ಸರ್ಕಾರಿ ಹುದ್ದೆಗೆ ನೇಮಕವಾಗುತ್ತಾರೋ ಅವರು ಮಾತ್ರ ತಾವು ಸರ್ಕಾರಿ ಹುದ್ದೆಗೆ ನೇಮಕವಾದ ನಂತರದಲ್ಲಿ ಕನ್ನಡ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾಗಬೇಕು. ಮತ್ತು ರಾಜ್ಯದ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವವರು ಮಾತ್ರ ರಾಜ್ಯಭಾಷೆಯಾದ ಕನ್ನಡವನ್ನು ಒಂದು ಭಾಷೆಯಾಗಿ ಕಡ್ಡಾಯವಾಗಿ ಕಲಿಯುತ್ತಿದ್ದಾರೆ. ಆದರೆ ಇಂಗ್ಲಿಶ್ ಭಾಷೆಯ ವಿಚಾರ ಹುದ್ದೆಗಳು ಈ ಭಾಷೆಗಳನ್ನು ಕಲಿತ ಎಲ್ಲರಿಗೂ ಲಭ್ಯವಾಗುತ್ತಿಲ್ಲ. ಆದರೂ ಸರ್ಕಾರಿ ಹುದ್ದೆಯೆಂದರೆ ಎಲ್ಲರಿಗೂ ಆಸಕ್ತಿ. ಇದರಿಂದಾಗಿ ಈ ಹುದ್ದೆಗಳನ್ನು ಪಡೆಯಲು ಮತ್ತು ಖಾಸಗಿ ಕ್ಷೇತ್ರದಲ್ಲೂ ಇಂಗ್ಲಿಶ್ ಭಾಷೆಯ ಜ್ಞಾನವಿಲ್ಲದೆ ಉದ್ಯೋಗ ಪಡೆಯುವುದು, ವ್ಯವಹರಿಸುವುದು ಅಸಾಧ್ಯ ಎಂಬಂಥಹ ಪರಿಸ್ಥಿತಿ ನಿರ್ಮಾಣವಾಗಿದೆ. ಇದರಿಂದಾಗಿ ಇಂದು ದೇಶದಲ್ಲಿ ಎಲ್ಲಾ ಜನರು ತನ್ನ ಮಾತೃಭಾಷೆಯ ಜೊತೆಗೆ ಇತರ ಭಾಷೆಗಳನ್ನು ಕಲಿಯುವುದು ಅನಿವಾರ್ಯವಾಗಿದೆ. ಅದರಲ್ಲೂ ಭಾರತ ಸ್ವತಂತ್ರಗೊಂಡ ನಂತರದಲ್ಲಿ ಇಂಗ್ಲಿಶ್, ಹಿಂದಿ ಮತ್ತು ರಾಜ್ಯಭಾಷೆಗಳನ್ನು ಕಲಿಯುವುದು, ಬಳಸುವುದು ಅನಿವಾರ್ಯವಾಗಿದೆ. ಆದರೆ ಇದಕ್ಕೆ ಪೂರಕವಾಗಿ ಭಾಷೆಗಳನ್ನು ಕಲಿಸುವ ವಾತಾವರಣ ನಿರ್ಮಾಣ ಮಾಡುವಲ್ಲಿ ಕೇಂದ್ರ ಮತ್ತು ರಾಜ್ಯಸರ್ಕಾರಗಳು ವಿಫಲವಾಗಿವೆ. ನಮ್ಮ ಶಿಕ್ಷಣ ಕ್ರಮದಲ್ಲಿ ಭಾಷೆಗಳನ್ನು ಪರೀಕ್ಷಾದೃಷ್ಟಿಯಲ್ಲಿ ಕಲಿಸುತ್ತಿರುವುದರಿಂದ ವಿದ್ಯಾರ್ಥಿಗಳು ತರಗತಿಯಲ್ಲಿ ಹಲವು ಭಾಷೆಗಳನ್ನು ಕಲಿಯುತ್ತಿದ್ದರೂ ಭಾಷೆಗಳನ್ನು ಬಳಸುವ ಸಾಮರ್ಥ್ಯ ಪಡೆದುಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಮತ್ತೊಂದು ಕಡೆ ರಾಜ್ಯ ಮತ್ತು ಕೇಂದ್ರ ಸರ್ಕಾರದ ಭಾಷಾನೀತಿಯನ್ನು ಪಾಲನೆ ಮಾಡಬೇಕಾದ ಒತ್ತಡದಲ್ಲಿದ್ದಾರೆ. ಇದರಿಂದಾಗಿ ರಾಜ್ಯ ಮತ್ತು ಕೇಂದ್ರಸರ್ಕಾರದ ವಿವಿಧ ಇಲಾಖೆಗಳಲ್ಲಿ ಕಾರ್ಯವನ್ನು ನಿರ್ವಹಿಸುವ ಅಧಿಕಾರಿಗಳು ಮತ್ತು ನೌಕರರು ಭಾಷಿಕ ಬಿಕ್ಕಟ್ಟುಗಳಿಗೆ ಒಳಗಾಗಿದ್ದಾರೆ.

ಹೀಗಾಗಿ ಭಾರತ ಸ್ವಂತ್ರಗೊಂಡ ನಂತರ ಭಾರತದ ಸಮಸ್ಯೆಯ ಪರಿಹಾರಕ್ಕಾಗಿ ರೂಪಿಸಲಾಗಿರುವ ಭಾಷಾಯೋಜನೆಗಳು ಮತ್ತು ಜಾರಿಗೆ ತಂದಿರುವ ಭಾಷಾನೀತಿಗಳೇ ಸಮಸ್ಯೆಗಳಾಗಿ ಪರಿಣಮಿಸಿರುವುದು ಸ್ಪಷ್ಟವಾಗುತ್ತದೆ.

### ೫.೫ ಏಕೀಕರಣ ನಂತರದ ಕರ್ನಾಟಕ: ಆಡಳಿತದಲ್ಲಿ ಕನ್ನಡದ ಬಳಕೆ ಮತ್ತು ಸಮಸ್ಯೆಗಳು

ಎರಡನೇ ಅಧ್ಯಾಯದಲ್ಲಿ ಈಗಾಗಲೇ ಚರ್ಚಿಸಿರುವ ಹಾಗೆ ಕರ್ನಾಟಕ ಏಕೀಕರಣ ಪೂರ್ವದಲ್ಲಿ ಕನ್ನಡ ಭಾಷಿಕರು ಇಪ್ಪತ್ತೆರಡು ಆಡಳಿತ ವಲಯಗಳಿಗೆ ಒಳಪಟ್ಟಿದ್ದರು. ಆಗ ಹಲವು ರಾಜಮನೆತನಗಳು ಮತ್ತು ಬ್ರಿಟೀಷರು ಆಡಳಿತ ನಡೆಸಿದ್ದಾರೆ. ಈ ಅವಧಿಯಲ್ಲಿ ಈ ಅಧ್ಯಾಯದಲ್ಲಿ ಇದುವರೆಗೆ ಚರ್ಚಿಸಿದ ಹಾಗೆ ಕನ್ನಡದ ರಾಜಮನೆತನಗಳು ಮತ್ತು ಕೆಲವು ಇಂಗ್ಲಿಶ್ ಅಧಿಕಾರಿಗಳನ್ನು ಹೊರತುಪಡಿಸಿದರೆ ಉಳಿದ ರಾಜಮನೆತನದವರು ಮತ್ತು ಬ್ರಿಟೀಷರು ಆಡಳಿತದ ಉನ್ನತ ಹಂತದಲ್ಲಿ ತಮ್ಮ ಭಾಷೆಗಳನ್ನು ಬಳಸಿ ಕೆಳಹಂತದ ಆಡಳಿತದಲ್ಲಿ ಕನ್ನಡವನ್ನು ಬಳಸಿದ್ದಾರೆ. ಹೀಗಾಗಿ ಇಂದಿನ ಕರ್ನಾಟಕದ ಭೂಪ್ರದೇಶದಲ್ಲಿ ಕನ್ನಡದ ಜೊತೆಗೆ ಸಂಸ್ಕೃತ, ಉರ್ದು, ಮರಾಠಿ, ಅರೇಬಿಕ್, ಪಾರ್ಸಿ, ಇಂಗ್ಲಿಶ್‌ನಂತಹ ಭಾಷೆಗಳು ಆಡಳಿತ ಭಾಷೆಯಾಗಿ ಬಳಕೆಯಾಗಿವೆ. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಈ ಅನ್ಯಭಾಷಿಕ ರಾಜಮನೆತನಗಳು ಆಡಳಿತದಲ್ಲಿ ಕನ್ನಡವನ್ನು ಬಳಸುವ ಅವಕಾಶಕೊಟ್ಟಂತೆ ಭಾಷೆ, ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಶಿಕ್ಷಣಗಳ ಬೆಳವಣಿಗೆಗೆ ಅಗತ್ಯ ಪ್ರೋತ್ಸಾಹ, ಆರ್ಥಿಕ ನೆರವು ನೀಡಿ ಉಳಿದ ಸಮುದಾಯಗಳ ಭಾಷೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಶಿಕ್ಷಣ ಇತ್ಯಾದಿಗಳ ಬೆಳವಣಿಗೆಗೆ ಅಗತ್ಯ ನೆರವು, ಆರ್ಥಿಕ ಸಹಾಯ ನೀಡದೆ ವಂಚಿಸಿವೆ. ಹೀಗಾಗಿ ರಾಜರು ಮತ್ತು ಬ್ರಿಟೀಷರ ಆಡಳಿತಗಳಲ್ಲಿ ಸ್ಥಳೀಯ ಭಾಷಿಕ ಸಮುದಾಯಗಳು ಭಾಷಿಕವಾಗಿ ಮಾತ್ರವಲ್ಲದೆ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ ಅಸಮಾನತೆಗೆ ಗುರಿಯಾಗಿವೆ.

ಈ ರೀತಿ ಅಸಮಾನತೆಗೆ ಗುರಿಯಾಗಿದ್ದ ಭಾಷಾಸಮುದಾಯಗಳಲ್ಲಿ ಇಂದಿನ ಕರ್ನಾಟಕದ ಭೂಪ್ರದೇಶದಲ್ಲಿ ಸುದೀರ್ಘ ಇತಿಹಾಸ ಹೊಂದಿ ಬಹುಸಂಖ್ಯಾತರಾಗಿರುವ ಕನ್ನಡ ಭಾಷಿಕ ಸಮುದಾಯವು ಒಂದು. ಇದು ಇಂದಿನ ಕರ್ನಾಟಕದ ಭೂಪ್ರದೇಶದಲ್ಲಿಯೇ ತನ್ನ ಅಸ್ತಿತ್ವ ಕಂಡುಕೊಂಡಿದ್ದರೂ ಅನ್ಯಭಾಷಿಕ ಸಮುದಾಯಗಳ ಆಡಳಿತದ ಅಧೀನಕ್ಕೆ ಒಳಗಾದ ಸಂದರ್ಭಗಳಲ್ಲಿ ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ಸಮಸ್ಯೆಗಳಿಗೆ ಒಳಗಾಗಿ ಅಭಿವೃದ್ಧಿಯಲ್ಲಿ ಹಿಂದೆ ಉಳಿದುಕೊಂಡಿದ್ದರು. ಇದಕ್ಕೆ ಮುಖ್ಯ ಕಾರಣ ತಮ್ಮ ಭಾಷೆ ಆಡಳಿತ, ಶಿಕ್ಷಣ, ಉದ್ಯೋಗಗಳಲ್ಲಿ ಬಳಕೆ ಆಗದೇ ಇರುವುದು. ತಮ್ಮ ಭಾಷೆ ಆಡಳಿತ, ಶಿಕ್ಷಣ, ಉದ್ಯೋಗಗಳಲ್ಲಿ ಬಳಕೆಯಾಗಬೇಕಾದರೆ ನಾವು ನಮ್ಮದೇ ಆದ ಪ್ರತ್ಯೇಕ ರಾಜ್ಯರಚನೆ ಮಾಡಿಕೊಳ್ಳಬೇಕು, ರಾಜಕೀಯವಾಗಿ ಪ್ರಬಲರಾಗಬೇಕು. ರಾಜಕೀಯವಾಗಿ ಪ್ರಬಲರಾಗದೆ ಕನ್ನಡವನ್ನು ಆಡಳಿತ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ ಬಳಕೆಗೆ ತರಲು ಸಾಧ್ಯವಿಲ್ಲವೆಂದು ಕರ್ನಾಟಕ ಏಕೀಕರಣ ಹೋರಾಟ ಆರಂಭಿಸಿದೆ. ಹೀಗಾಗಿ ಕರ್ನಾಟಕ

ಏಕೀಕರಣ ಹೋರಾಟ ಎನ್ನುವುದು ಒಂದು ಕಡೆ ಕನ್ನಡಿಗರ ರಾಜಕೀಯಾರ್ಥಿಕವಾಗಿ ಪ್ರಬಲವಾಗುವುದಾದರೆ ಮತ್ತೊಂದು ಕಡೆ ಕನ್ನಡವನ್ನು ಆಡಳಿತದಲ್ಲಿ ಬಳಕೆಗೆ ತರುವುದಾಗಿತ್ತು.

ಆದುದರಿಂದ ಕರ್ನಾಟಕ ಏಕೀಕರಣವಾದ ನಂತರದಲ್ಲಿ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಇಲ್ಲಿನ ಎಲ್ಲಾ ಆಡಳಿತ, ವ್ಯವಹಾರಗಳು ಕನ್ನಡದಲ್ಲಿಯೇ ನಡೆಯಬೇಕು. ಅದಕ್ಕೆ ಪೂರಕವಾಗಿ ಸರ್ಕಾರ ಭಾಷಾನೀತಿಯನ್ನು ಜಾರಿಗೆ ತರಬೇಕು ಎಂದು ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರು ಹೋರಾಟ ಮಾಡುತ್ತಾ ಬಂದಿದ್ದಾರೆ. ಇದರ ಪರಿಣಾಮವಾಗಿ ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರ ಈ ರೀತಿಯ ಒತ್ತಡಗಳಿಗೆ ಮಣಿದು ಕರ್ನಾಟಕ ಸರ್ಕಾರ ಭಾರತ ಸಂವಿಧಾನದ ಚೌಕಟ್ಟು ಮತ್ತು ಕೇಂದ್ರ ಸರ್ಕಾರದ ಭಾಷಾನೀತಿಗೆ ಅಧೀನವಾಗಿ ೧೯೬೩ರಲ್ಲಿ **'ಕರ್ನಾಟಕ ರಾಜಭಾಷಾ ಅಧಿನಿಯಮ ೧೯೬೩'**ನ್ನು ಜಾರಿಗೊಳಿಸಿದೆ. ಇದನ್ನು ಅಧ್ಯಾಯ ಎರಡರಲ್ಲಿ ಉಲ್ಲೇಖಿಸಲಾಗಿದೆ. ಇದು ಸಂವಿಧಾನದ ೩೪೫ನೇ ವಿಧಿಯು ೩೪೬ ಮತ್ತು ೩೪೭ನೇ ಅನುಚ್ಛೇದಗಳಿಗೆ ಒಳಪಟ್ಟು ರಾಜ್ಯಗಳಿಗೆ ಒದಗಿಸಿಕೊಟ್ಟಿರುವ ಭಾಷಾಸ್ವಾತಂತ್ರ್ಯ ಮತ್ತು ಕನ್ನಡ ಭಾಷಿಕ ಸಮುದಾಯದ ಒತ್ತಾಯದ ಮೇರೆಗೆ ಕನ್ನಡವನ್ನು ಕರ್ನಾಟಕ ರಾಜ್ಯದ ಆಡಳಿತ ಭಾಷೆಯಾಗಿಸುವ ಉದ್ದೇಶದಿಂದ ಜಾರಿಗೆ ತಂದ ಭಾಷಾನೀತಿಯಾಗಿದೆ. ಇದು ಈಗಾಗಲೆ ಆಡಳಿತದಲ್ಲಿ ಬಳಕೆಯಲ್ಲಿದ್ದ ಇಂಗ್ಲಿಶ್ ಭಾಷೆಯ ಬಳಕೆಗೆ ತೊಂದರೆಯಾಗದಂತೆ ಕನ್ನಡವನ್ನು ಆಡಳಿತದಲ್ಲಿ ಬಳಕೆಗೆ ತರುವ ಪ್ರಯತ್ನವಾಗಿದೆ.

ಇದು ಕನ್ನಡಿಗರ ಇಂಗ್ಲಿಶ್‌ಗೆ ಪರ್ಯಾಯವಾಗಿ ಕನ್ನಡವನ್ನು ಬಳಕೆಗೆ ತರಬೇಕೆಂಬ ಬೇಡಿಕೆಗೆ ವಿರುದ್ಧವಾಗಿತ್ತು. ಆದರೂ ಕೇಂದ್ರಸರ್ಕಾರ ಭಾಷಾನೀತಿಗೆ ಅಧೀನವಾಗಿ ಮತ್ತು ಏಕಕಾಲದಲ್ಲಿ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಕನ್ನಡವನ್ನು ಬಳಕೆಗೆ ತರಲು ಪ್ರಯತ್ನಿಸುತ್ತಿದ್ದುದರಿಂದ ಉದ್ಭವಿಸುವ ಸಮಸ್ಯೆಗಳನ್ನು ಅರಿತು ಕರ್ನಾಟಕ ಸರ್ಕಾರ ತನ್ನ ಭಾಷಾನೀತಿಯಲ್ಲಿ ಇಂಗ್ಲಿಶ್ ಭಾಷಾಬಳಕೆಯ ಮುಂದುವರಿಕೆಗೆ ಅವಕಾಶ ಕಲ್ಪಿಸಿದೆ. ಹೀಗಾಗಿ ಕರ್ನಾಟಕ ಏಕೀಕರಣಗೊಂಡ ನಂತರದಲ್ಲಿಯೂ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್ ಮುಂದುವರೆದಿದೆ. ಇದು ಕರ್ನಾಟಕದ ಆಡಳಿತದಲ್ಲಿ ಕನ್ನಡದ ಬಳಕೆಗೆ ತೊಂದರೆ ಉಂಟುಮಾಡುತ್ತಿದೆ. ಹೀಗಾಗಿ ಸರ್ಕಾರ ಕನ್ನಡವನ್ನು ಕರ್ನಾಟಕದ ಆಡಳಿತ ಭಾಷೆಯನ್ನಾಗಿಸುವ ಉದ್ದೇಶದಿಂದ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತಂದಿದ್ದರೂ ಕರ್ನಾಟಕದ ಆಡಳಿತದಲ್ಲಿ ಕನ್ನಡ ಸರಿಯಾಗಿ ಬಳಕೆಯಾಗುತ್ತಿಲ್ಲ. ಕನ್ನಡಿಗರ ಭಾಷಿಕ ಸಮಸ್ಯೆಗಳು ಬಗೆಹರಿದಿಲ್ಲ. ಇದು ಕರ್ನಾಟಕ ಏಕೀಕರಣ ಚಳವಳಿಯ ಹೋರಾಟಕ್ಕೆ ವಿರುದ್ಧವಾದುದು ಎಂದು ರಾಜ್ಯದ ಆಡಳಿತದಲ್ಲಿ ಕನ್ನಡವನ್ನು ಕಡ್ಡಾಯವಾಗಿ ಬಳಕೆಗೆ ತರುವಂತೆ ಸರ್ಕಾರ ನಿಯಮವನ್ನು ಮಾಡಬೇಕು ಎಂದು ಕನ್ನಡದ ಪರವಾಗಿ ಮತ್ತೆ ಮತ್ತೆ ಚಳವಳಿಗಳು ಕಾಣಿಸಿಕೊಂಡಿವೆ. ಇದಕ್ಕನುಗುಣವಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ರಾಜಭಾಷಾ ಅಧಿನಿಯಮದ ನಾಲ್ಕನೇ ಕಂಡಿಕೆಯಲ್ಲಿ ಉಕ್ತವಾಗಿರುವ ಅಧಿಕಾರವನ್ನು ಬಳಸಿಕೊಂಡು ಕಾಲಕಾಲಕ್ಕೆ ಬದಲಾದಂತೆ ಭಾಷಾನೀತಿಗಳಲ್ಲಿ

ಬದಲಾವಣೆಗಳನ್ನು ತಂದಿವೆ. ಇವುಗಳಲ್ಲಿ No.GAD 32 OSM 68 ದಿನಾಂಕ ೨೭ನೇ ಜುಲೈ ೧೯೬೮ರಲ್ಲಿ ಸರ್ಕಾರದ ಬಿಲ್ಲುಗಳು, ನಡಾವಳಿಗಳು, ನಿಯಮಗಳು, ಪ್ರಕಟಣೆ ಇತ್ಯಾದಿಗಳನ್ನು ಏಕಕಾಲದಲ್ಲಿ ಕನ್ನಡ ಮತ್ತು ಇಂಗ್ಲಿಶ್ ಎರಡೂ ಭಾಷೆಯಲ್ಲಿ ಪ್ರಕಟಿಸುವುದಕ್ಕೆ ಸಂಬಂಧಿಸಿದ ಹಾಗೆ ಹೊರಡಿಸಿರುವ ಅಧಿಕೃತ ಜ್ಞಾಪನಪತ್ರ, ದಿನಾಂಕ ೧.೪.೧೯೬೮ರಿಂದ ತಾಲ್ಲೂಕು ಮಟ್ಟದ ಆಡಳಿತದಲ್ಲಿ ಕನ್ನಡವನ್ನು ಬಳಸುವುದು, No.GAD 13 POL 70 ದಿನಾಂಕ ೨೪ನೇ ಜುಲೈ ೧೯೭೦ರಲ್ಲಿ ಆಡಳಿದಲ್ಲಿ ಎಲ್ಲಾ ಪತ್ರಗಳನ್ನು ಕನ್ನಡದಲ್ಲಿ ಸ್ವೀಕರಿಸುವುದು ಮತ್ತು ಉತ್ತರಿಸುವುದಕ್ಕೆ ಸಂಬಂಧಿಸಿದ ಹಾಗೆ ಹೊರಡಿಸಿರುವ ಅಧಿಕೃತ ಜ್ಞಾಪನಪತ್ರಗಳು ಸೇರಿವೆ.

ಹಾಗೆಯೇ No.GAD 58 POL 71 ದಿನಾಂಕ ೮ನೇ ಡಿಸೆಂಬರ್ ೧೯೭೧ರಲ್ಲಿ ಸರ್ಕಾರಿ ಕಚೇರಿಗಳ ನಾಮಫಲಕಗಳು ಕನ್ನಡದಲ್ಲಿರುವಂತೆ ಹೊರಡಿಸಿರುವ ಸುತ್ತೋಲೆ, No.GAD 47 POL (KCL) ೭೨ ದಿನಾಂಕ ೨೯.೬.೧೯೭೨ರಲ್ಲಿ ಮುದ್ರೆ, ಮೊಹರು, ಎಲ್ಲಾ ಕಾಗದಪತ್ರಗಳ ತಲೆಬರಹಗಳು (ಲೆಟರ್‌ಹೆಡ್) ಮುಂತಾದವುಗಳು ಕನ್ನಡದಲ್ಲಿರುವುದಕ್ಕೆ ಸಂಬಂಧಿಸಿದ ಹಾಗೆ ಹೊರಡಿಸಿರುವ ಸುತ್ತೋಲೆ, No.GAD 47 POL (KCL) 72 ದಿನಾಂಕ ៩ನೇ ಜುಲೈ ೧೯೭೨ರಲ್ಲಿ ನೇಮಕಾತಿ ಆದೇಶ, ರಜೆ ಮಂಜೂರಾತಿ ಪತ್ರ, ವರ್ಗಾವಣೆ ಆದೇಶ ಮುಂತಾದವುಗಳು ಕನ್ನಡದಲ್ಲಿರುವುದಕ್ಕೆ ಸಂಬಂಧಿಸಿದ ಆಗಿನ ಸುತ್ತೋಲೆ, No.GAD 60 POL (KCL) 72 ದಿನಾಂಕ ೧೭.೮.೧೯೭೨ರಲ್ಲಿ ಜಿಲ್ಲಾಮಟ್ಟದ ಆಡಳಿತದಲ್ಲಿ ಕನ್ನಡ ಭಾಷಾಬಳಕೆ ಸಂಬಂಧಿಸಿದ ಹಾಗೆ ಇರುವ ಸುತ್ತೋಲೆ, ಕ್ರಮಾಂಕ ಜಿಎಡಿ ೨೮ ಪಿಒಎಲ್ ೭೬, ದಿನಾಂಕ ೧៩ನೇ ಮೇ ೧೯೭೬ರಲ್ಲಿ ಆಡಳಿತ ವ್ಯವಹಾರಗಳಲ್ಲಿ ಕನ್ನಡದ ಬಳಕೆಗೆ ಸಂಬಂಧಿಸಿದ ಹಾಗೆ ಹೊರಡಿಸಿರುವ ಸುತ್ತೋಲೆ, ಕ್ರಮಾಂಕ ಜಿಎಡಿ ೨೮ ಪಿಒಎಲ್ ೭೬, ದಿನಾಂಕ ೧៩ನೇ ಮೇ ೧೯೭೬ರಲ್ಲಿ ಎಲ್ಲಾ ಸರ್ಕಾರಿ ಕಛೇರಿಗಳಲ್ಲಿ ಕನ್ನಡ ಬಳಕೆ–ರೆವಿನ್ಯೂ ಅಥವಾ ಇತರ ಉಪವಿಭಾಗಕ್ಕೆ ಮೀರಿ ವಿಸ್ತರಿಸುವ, ಆದರೆ ರೆವಿನ್ಯೂ ಜಿಲ್ಲೆಗೆ ಮೀರದ ಅಧಿಕಾರ ವ್ಯಾಪ್ತಿಯಿರುವ ಎಲ್ಲಾ ಸರ್ಕಾರಿ ಕಛೇರಿಗಳಿಗೆ ವಿಸ್ತರಣೆ–ಇಂಗ್ಲಿಷ್ ಭಾಷೆಯ ಬಳಕೆಯನ್ನು ನಿಲ್ಲಿಸಿಬಿಡುವುದಕ್ಕೆ ಸಂಬಂಧಿಸಿದ ಹಾಗೆ ಹೊರಡಿಸಿರುವ ಅಧಿಕೃತ ಜ್ಞಾಪನಪತ್ರಗಳು ಇವೆ.

ಇವುಗಳ ಜೊತೆಯಲ್ಲಿ ದಿನಾಂಕ ೧ನೇ ನವೆಂಬರ್ ೧೯೭೯ರಿಂದ ಬಳಕೆಯಾಗುವಂತೆ ಜಾರಿಗೆ ತಂದಿರುವ ರಾಜ್ಯದ ಆಡಳಿತ ಭಾಷೆಯಾಗಿ ಕನ್ನಡ ಭಾಷಾಬಳಕೆ, ಕ್ರಮಾಂಕ: ಡಿಪಿಎಆರ್ ೩೬ ಪಿಒಎಲ್ ೮೦, ದಿನಾಂಕ ೯ನೇ ಸೆಪ್ಟೆಂಬರ್ ೧೯೮೦ರಲ್ಲಿ ಕರ್ನಾಟಕ ಶಾಸನ ಸಭೆಗಳಿಗೆ ಒದಗಿಸುವ/ಮಂಡಿಸುವ ಎಲ್ಲಾ ಬಿಲ್ಲುಗಳು, ಮಸೂದೆಗಳು, ಇಲಾಖಾ ವಾರ್ಷಿಕ ಆಡಳಿತ ವರದಿಗಳು, ಇಲಾಖಾ ವಾರ್ಷಿಕ ವರದಿಗಳು, ಆಯವ್ಯಯ ದಾಖಲೆಗಳು ಮುಂತಾದವುಗಳನ್ನು ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಪ್ರಕಟಿಸಲು ಹೊಡಿರಡಿಸಿರುವ ಅಧಿಕೃತ ಜ್ಞಾಪನಪತ್ರ, ಕ್ರಮಾಂಕ: ಡಿಪಿಎಆರ್ ೨೪ ಪಿಒಎಲ್ ೭೬, ದಿನಾಂಕ ៩ನೇ ಜನವರಿ ೧೯೮೨ರಲ್ಲಿ ಆಡಳಿತ ಭಾಷೆಯಾಗಿ ಕನ್ನಡ ಬಳಕೆ–ಇಲಾಖಾ ತನಿಖಾ ವರದಿಯಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ

ಬಳಸುತ್ತಿರುವ ಬಗ್ಗೆ ವರದಿ ಮಾಡಲು ಆದೇಶ ಎಂಬ ಸುತ್ತೋಲೆ, ಕ್ರಮಾಂಕ: ಡಿಪಿಎಆರ್ ೮ ಪಿಎಲ್ ೮೨, ದಿನಾಂಕ ೧೧ನೇ ಫೆಬ್ರವರಿ ೧೯೮೩ರಲ್ಲಿ ದಿನಾಂಕ ೧೫ನೇ ಫೆಬ್ರವರಿ ೧೯೮೩ರಿಂದ ಕನ್ನಡವನ್ನು ರಾಜ್ಯದಾದ್ಯಂತ ಆಡಳಿತ ಭಾಷೆಯಾಗಿ ಕಡ್ಡಾಯವಾಗಿ ಎಲ್ಲಾ ಹಂತದಲ್ಲೂ ತರುವ ಬಗ್ಗೆ ಸುತ್ತೋಲೆಯನ್ನು ಹೊರಡಿಸಿ ಈ ಸುತ್ತೋಲೆಯಲ್ಲಿ (ಅ) ಕಡತಗಳ ಮೇಲೆ ಬರೆಯುವ ಟಿಪ್ಪಣಿಗಳು, (ಆ) ಪತ್ರವ್ಯವಹಾರಗಳು (ಇ) ಸಭೆಯ ನಡವಳಿಕೆಗಳು (ಈ) ಪ್ರಕಟಣೆಗಳು, ಫಾರಂಗಳು, ಜಾಹಿರಾತುಗಳು, ನೋಟೀಸ್‌ಗಳು, ಲೈಸೆನ್ಸ್‌ಗಳು, ಬಿಲ್ಲುಗಳು, ಸರ್ಟಿಫಿಕೇಟ್‌ಗಳು, ಎಲ್ಲಾ ಕಾಗದದ ತಲೆಬರಹಗಳು (ಲೆಟರ್‌ಹೆಡ್ಸ್) ಕಛೇರಿ ಹಾಗೂ ಬೀದಿ ಫಲಕಗಳು ಇತ್ಯಾದಿ (ಉ) ಲೆಕ್ಕಪತ್ರಗಳು, ರಿಜಿಸ್ಟರ್‌ಗಳು (ಊ) ಭಾಷಣಗಳು, ಅವಶ್ಯಕತೆ ಇದ್ದಲ್ಲಿ ಕನ್ನಡದ ಜೊತೆಗೆ (ಆದರೆ ಕನ್ನಡವನ್ನು ಬಿಡದೆ) ಇಂಗ್ಲಿಷ್‌ನ್ನು ಉಪಯೋಗಿಸಬಹುದು ಎಂಬುವು ಸೇರಿವೆ.

ಇವಿಷ್ಟೇ ಅಲ್ಲದೆ ೧೯೮೩ರಲ್ಲಿ ಸಿದ್ಧರಾಮಯ್ಯ ನೇತೃತ್ವದಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಪ್ರಯೋಗದಲ್ಲಿ ತರುವಲ್ಲಿ ಕಂಡುಬರಬಹುದಾದ ನ್ಯೂನತೆಗಳನ್ನು ಪರಿಶೀಲಿಸಿ ಪರಿಹಾರ ಸೂಚಿಸುವ ಬಗ್ಗೆ ಸಮಿತಿ ರಚನೆ, ೧೯೮೪ರಲ್ಲಿ ಸರ್ಕಾರದಿಂದ ಹೊರಡಿಸಲಿಚ್ಚಿಸಿರುವ ಶಾಸನಗಳು, ವಿಧೇಯಕಗಳು, ನಿಯಮಾವಳಿಗಳು, ನಿಬಂಧನೆಗಳು ಮುಂತಾದವುಗಳನ್ನು ಕನ್ನಡದಲ್ಲಿ ರಚಿಸಿ ಮಂಡಿಸುವಂತೆಯೂ ಮತ್ತು ಈಗಾಗಲೇ ಪ್ರಚಲಿತದಲ್ಲಿರುವ ಆಂಗ್ಲಭಾಷೆಯ ರಾಜ್ಯದ ಎಲ್ಲಾ ಶಾಸನ, ವಿಧೇಯಕ, ನಿಯಮಾವಳಿಗಳು, ನಿಬಂಧನೆ ಇತ್ಯಾದಿಗಳನ್ನು ೧೯೮೪ರ ಅಂತ್ಯದೊಳಗೆ ಕನ್ನಡಕ್ಕೆ ಭಾಷಾಂತರಿಸಿ ಈ ವಿಧೇಯಕ ಮತ್ತು ನಿಯಮಗಳಿಗೆ ತರುವ ತಿದ್ದುಪಡಿಗಳನ್ನು ೧೯೮೫ರ ಜನವರಿಯಿಂದ ಕಡ್ಡಾಯವಾಗಿ ಕನ್ನಡದಲ್ಲೇ ಮಂಡಿಸಲು ಹೊಡಿಸಿರುವ ಆದೇಶ, ದಿನಾಂಕ ೧೬ನೇ ಜುಲೈ ೧೯೮೫ರಂದು ಕರ್ನಾಟಕ ಸರ್ಕಾರಿ ಸೇವೆಗಳ ನಿಯಮಾವಳಿಗಳಿಗೆ ಸಂಬಂಧಿಸಿದ ಹಾಗೆ ಹೊರಡಿಸಿರುವ ಕನ್ನಡ ಭಾಷಾ ಪರೀಕ್ಷೆ ಕಡ್ಡಾಯ ಅಧಿಸೂಚನೆ, ದಿನಾಂಕ ೨೭ನೇ ಜುಲೈ ೧೯೯೦ರಂದು ಕಛೇರಿಗಳಲ್ಲಿ ಕನ್ನಡವನ್ನು ಪೂರ್ಣ ಜಾರಿಗೊಳಿಸುವ ಬಗ್ಗೆ ಹೊರಡಿಸಿರುವ ಅಧಿಕೃತ ಜ್ಞಾಪನಪತ್ರ, ದಿನಾಂಕ೨೮/೨೯ನೇ ನವೆಂಬರ್ ೧೯೯೧ರಂದು ಕನ್ನಡ ಬಳಕೆ ಮಾಡದ ಅಧಿಕಾರಿಗಳ/ನೌಕರರಿಂದ ಸಮಜಾಯಿಷಿ ಪಡೆಯುವ ಬಗ್ಗೆ ಹೊರಡಿಸಿರುವ ಸುತ್ತೋಲೆಗಳು ಇವೆ.

ದಿನಾಂಕ ೨ನೇ ಡಿಸೆಂಬರ್ ೧೯೯೧ರಂದು ಸಚಿವಾಲಯ ಇಲಾಖೆಗಳ ಎಲ್ಲಾ ಆದೇಶಗಳು, ಸುತ್ತೋಲೆಗಳು ಅಧಿಕೃತ-ಜ್ಞಾಪನ ಇತ್ಯಾದಿಗಳನ್ನು ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಹೊರಡಿಸುವ ಬಗೆಗಿನ ಸೂಚನೆಗಳನ್ನು ಅನೂರ್ಜಿತಗೊಳಿಸುವ ಬಗೆಗೆ ಹೊರಡಿಸಿರುವ ಸುತ್ತೋಲೆ, ದಿನಾಂಕ ೦೪.೦೮.೧೯೯೩ರಲ್ಲಿ ಟಿಪ್ಪಣಿ, ಪತ್ರ ವ್ಯವಹಾರ ಕನ್ನಡದಲ್ಲಿರದಿದ್ದರೆ ಕಡತಗಳನ್ನು ಹಿಂದಿರುಗಿಸುವ ಬಗ್ಗೆ ಹೊರಡಿಸಿರುವ ಸುತ್ತೋಲೆ, ದಿನಾಂಕ ೧೯.೧೧.೧೯೯೮ರಂದು ಕನ್ನಡ ದೈನಿಕಗಳಲ್ಲಿ ಜಾಹಿರಾತುಗಳನ್ನು ಕನ್ನಡದಲ್ಲಿಯೇ ನೀಡುವ ಕುರಿತು ಹೊರಡಿಸಿರುವ ಸುತ್ತೋಲೆ, ದಿನಾಂಕ ೧೧.೦೪.೨೦೦೦ದಲ್ಲಿ ಸರ್ಕಾರದ ಎಲ್ಲಾ ಇಲಾಖೆಗಳು ಆಡಳಿತದಲ್ಲಿ ಕನ್ನಡವನ್ನು ಪೂರ್ಣ

ಪ್ರಮಾಣದಲ್ಲಿ ಬಳಸುವ ಬಗ್ಗೆ ಹೊರಡಿಸಿರುವ ಸುತ್ತೋಲೆ, ದಿನಾಂಕ ೧೮.೦೮.೨೦೦೦ದಂದು ಸರ್ಕಾರಿ ವಾಹನಗಳ ಮೇಲೆ ಕನ್ನಡ ಸಂಖ್ಯೆಯನ್ನು ಅಳವಡಿಸುವ ಬಗ್ಗೆ ಹೊರಡಿಸಿರುವ ಸುತ್ತೋಲೆ, ದಿನಾಂಕ ೧೩.೦೮.೨೦೦೨ರಂದು ಆಡಳಿತದಲ್ಲಿ ಕನ್ನಡ ಬಳಕೆ ಮಾಡದೆ ಇರುವ ನೌಕರರ ವಿರುದ್ಧ ಶಿಸ್ತು ಕ್ರಮವನ್ನು ಜಾರಿಗೊಳಿಸುವ ಬಗ್ಗೆ ಹೊರಡಿಸಿರುವ ಸುತ್ತೋಲೆ, ಸರ್ಕಾರ, ಸರ್ಕಾರಿ ಅಂಗ ಸಂಸ್ಥೆಗಳ ಸಮಾರಂಭದ ಬ್ಯಾನರ್‌ಗಳಲ್ಲಿ ಕನ್ನಡ ಬಳಸುವ ಬಗ್ಗೆ, ತಾಲ್ಲೂಕು, ಜಿಲ್ಲಾ ಮಟ್ಟದ ಕೆಡಿಪಿ ಸಭೆಗಳಲ್ಲಿ ಕನ್ನಡ ಅನುಷ್ಠಾನದ ಪ್ರಗತಿಯನ್ನು ಒಂದು ಅಂಶವಾಗಿ ತೆಗೆದುಕೊಂಡು ಪರಿಶೀಲಿಸುವ ಬಗ್ಗೆ ಹೊರಡಿಸಿರುವ ಸುತ್ತೋಲೆಗಳು, ಕರ್ನಾಟಕದ ಅಂಗಡಿಗಳು ಮತ್ತು ವಾಣಿಜ್ಯ ಕಾರ್ಯಸಂಸ್ಥೆಗಳ ಅಧಿನಿಯಮ ೧೯೬೧ಕ್ಕೆ ತಿದ್ದುಪಡಿ ತಂದು ನಾಮಫಲಕಗಳನ್ನು ಕನ್ನಡದಲ್ಲಿ ಬರೆಸುವಂತೆ ಹೊರಡಿಸಿರುವ ಅಧಿಸೂಚನೆಗಳು ಸೇರಿವೆ.

ಹೀಗೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ವಿವಿಧ ಕಾಲಗಳಲ್ಲಿ ಹೊರಡಿಸಿರುವ ಅಧಿಕೃತ ಜ್ಞಾಪನ, ಸುತ್ತೋಲೆ, ಆದೇಶಗಳು ಕರ್ನಾಟಕದ ಆಡಳಿತದಲ್ಲಿ ಕನ್ನಡದ ಬಳಕೆಗೆ ಅವಕಾಶ ಒದಗಿಸಿವೆ. ಆದರೆ ಅವುಗಳು ಸಂಪೂರ್ಣವಾಗಿ ಅನುಷ್ಠಾನವಾಗಿಲ್ಲ. ಕನ್ನಡಿಗರ ಭಾಷಾಸಮಸ್ಯೆಗಳು, ಭಾಷಿಕ ಅಭಿವೃದ್ಧಿ, ಕರ್ನಾಟಕ ಏಕೀಕರಣ ಉದ್ದೇಶ ಈಡೇರಿಲ್ಲ. ಏಕೆಂದರೆ ಯಾವುದೇ ಒಂದು ಭಾಷೆಯನ್ನು ಆಡಳಿತದಲ್ಲಿ ಬಳಸಬೇಕಾದರೆ ಅದಕ್ಕೆ ಅದರದೇ ಸಿದ್ಧತೆಗಳು ಅಗತ್ಯವಿರುತ್ತದೆ. ಇವುಗಳಲ್ಲಿ ನೌಕರರ ನೇಮಕಾತಿ ನಿಯಮಗಳಲ್ಲಿ ಬದಲಾವಣೆ, ಶಿಕ್ಷಣದಲ್ಲಿ ಭಾಷೆಯ ಕಲಿಸುವಿಕೆ, ಉದ್ಯೋಗಗಳಲ್ಲಿ ಬಳಕೆ, ಕಡತಗಳ ನಿರ್ವಹಣೆ, ಅರ್ಜಿ ನಮೂನೆ, ಸೀಲ್ ಇತ್ಯಾದಿ ಆಡಳಿತದಲ್ಲಿ ಸರ್ಕಾರದ ಭಾಷಾನೀತಿಯ ಪ್ರಕಾರ ಭಾಷೆ ಅಥವಾ ಭಾಷೆಗಳನ್ನು ಬಳಸುವುದಕ್ಕೆ ಪೂರಕ ವ್ಯವಸ್ಥೆ ಮಾಡಬೇಕಾಗುತ್ತದೆ. ಆದರೆ ಕರ್ನಾಟಕದಲ್ಲಿ ಈ ಯಾವ ಪ್ರಯತ್ನಗಳನ್ನು ಮಾಡದೇ ಕರ್ನಾಟಕದಲ್ಲಿನ ಬಹುಸಂಖ್ಯಾತರಾದ ಕನ್ನಡಿಗರ ಒತ್ತಡ ಮತ್ತು ಕನ್ನಡಿಗರ ಮತಗಳನ್ನು ಸೆಳೆಯುವ ಉದ್ದೇಶದಿಂದ ಭಾಷಾನೀತಿಗಳನ್ನು ಜಾರಿಗೆ ತರುವುದು ಹಲವು ಸಮಸ್ಯೆಗಳ ಉದ್ಭವಕ್ಕೆ ಕಾರಣವಾಗುತ್ತವೆಯೇ ಹೊರತು ಭಾಷಿಕ ಸಮುದಾಯಗಳ ಸಮಸ್ಯೆಗಳು ಬಗೆಹರಿಯುವುದಿಲ್ಲ.

ಕರ್ನಾಟಕದಲ್ಲಿ ಆಗಿರುವುದು ಇದೇ. ಏಕೆಂದರೆ ಕರ್ನಾಟಕ ಸರ್ಕಾರ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತಂದಾಗ ಶಿಕ್ಷಣದಲ್ಲಿ ಕನ್ನಡವನ್ನು ಕಲಿಯದೆಯೇ ಶಿಕ್ಷಣ ಪೂರ್ಣಗೊಳಿಸಲು ಸಾಧ್ಯವಿತ್ತು. ಸರ್ಕಾರದ ಉನ್ನತ ಹುದ್ದೆಗಳ ನೇಮಕಾತಿಗಾಗಿ ಇಂಗ್ಲಿಶ್ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾಗುವುದು ಕಡ್ಡಾಯವಾಗಿತ್ತು. ಇಂಗ್ಲಿಶ್ ಭಾಷಾಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡವರು ಉದ್ಯೋಗದಿಂದ ವಂಚಿತರಾಗುತ್ತಿದ್ದರು. ಹೀಗಾಗಿ ಶಿಕ್ಷಣದಲ್ಲಿ ಇಂಗ್ಲಿಶ್ ಕಲಿಯುವುದು ಅನಿವಾರ್ಯವಾಗಿತ್ತು. ಹೀಗೆ ಕಲಿತು ಆಡಳಿತಕ್ಕೆ ನೇಮಕವಾಗುತ್ತಿದ್ದ ಅಧಿಕಾರಿಗಳು ಈಗಾಗಲೇ ಚರ್ಚಿಸಲಾಗಿರುವ ಹಾಗೆ ಆಡಳಿತದಲ್ಲಿ ಇಂಗ್ಲಿಶ್ ಬಳಸುವುದರಿಂದ ಸಮಾಜದಲ್ಲಿ ಲಭ್ಯವಾಗುತ್ತಿದ್ದ ಗೌರವ, ಉದ್ಯೋಗದ ಅವಕಾಶಗಳಿಂದಾಗಿ ಕನ್ನಡವನ್ನು ಬಳಸುವ ಬದಲಾಗಿ ಇಂಗ್ಲಿಶ್‌ನ್ನೇ ಬಳಸಿದ್ದಾರೆ. ಇದಕ್ಕಾಗಿ ಹಲವು ಕಾರಣಗಳನ್ನು ಕೊಟ್ಟಿದ್ದಾರೆ. ಇವುಗಳಲ್ಲಿ ಪ್ರಮುಖವಾಗಿ

ರಾಜ್ಯದ ಎಲ್ಲಾ ಹಂತದ ಆಡಳಿತದಲ್ಲಿ ಏಕರೂಪದ ಭಾಷೆ ಆಡಳಿದಲ್ಲಿ ಬಳಕೆಯಾಗದೆ ಇದ್ದುದು. ಅಂದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಗ್ರಾಮ, ಹೋಬಳಿ, ತಾಲ್ಲೂಕು, ಜಿಲ್ಲೆ ಮತ್ತು ರಾಜ್ಯಮಟ್ಟದ ಆಡಳಿತದಲ್ಲಿ ಏಕಕಾಲದಲ್ಲಿ ಕನ್ನಡವನ್ನು ಬಳಕೆಗೆ ತರುವ ನಿರ್ಧಾರ ಮಾಡದೆ ಹಂತಹಂತವಾಗಿ ಕನ್ನಡವನ್ನು ಕರ್ನಾಟಕದ ಆಡಳಿತದಲ್ಲಿ ಬಳಕೆಗೆ ತರುವ ಪ್ರಯತ್ನ ಮಾಡಿವೆ. ಇದರಿಂದಾಗಿ ರಾಜ್ಯದ ಸಚಿವಾಲಯದಲ್ಲಿ ತೆಗೆದುಕೊಳ್ಳುತ್ತಿದ್ದ ನಿರ್ಧಾರಗಳು, ಆದೇಶ ಪ್ರತಿಗಳು ಇಂಗ್ಲಿಶ್‌ನಲ್ಲಿ ಮುದ್ರಣವಾಗಿ ಜಿಲ್ಲೆ, ತಾಲ್ಲೂಕು, ಹೋಬಳಿ, ಗ್ರಾಮ ಹಂತಕ್ಕೆ ರವಾನಿಸಬೇಕಾದ ಸಂದರ್ಭಗಳಲ್ಲಿ ಅವುಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಬೇಕಿತ್ತು. ಆದರೆ ರಾಜ್ಯದ ಈ ಹಂತಗಳಲ್ಲಿ ಕೆಲಸ ಮಾಡುತ್ತಿದ್ದ ನೌಕರರಿಗೆ ಇಂಗ್ಲಿಶ್‌ನಲ್ಲಿ ಮುದ್ರಣವಾಗಿದ್ದ ಎಲ್ಲಾ ನಿಯಮ, ಮಾಹಿತಿಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಸಾಮರ್ಥ್ಯ ಇರಲಿಲ್ಲ.

ಇಂತಹ ಸಮಸ್ಯೆಗಳನ್ನು ಪರಿಹರಿಸಿ ಕರ್ನಾಟಕದ ಆಡಳಿತದಲ್ಲಿ ಕನ್ನಡದ ಬಳಕೆಯನ್ನು ಹೆಚ್ಚಿಸಬೇಕಾದ ಸರ್ಕಾರಗಳು ಕರ್ನಾಟಕ ಸರ್ಕಾರ ೧೯೬೩ರಲ್ಲಿ ಜಾರಿಗೆ ತಂದಿರುವ ಭಾಷಾನೀತಿಯ ಪ್ರಕಾರ ಕರ್ನಾಟಕದ ಆಡಳಿತದಲ್ಲಿ ಕನ್ನಡ ಬಳಕೆಯಾಗುತ್ತಿಲ್ಲ ಎಂದು ಕನ್ನಡಿಗರು ಸರ್ಕಾರದ ಮೇಲೆ ಮತ್ತೆ ಒತ್ತಡ ಉಂಟುಮಾಡಿದ್ದಾರೆ. ಇಂತಹ ಒತ್ತಡ ಹೆಚ್ಚಾಗಿರುವಾಗ ಕರ್ನಾಟಕ ಸರ್ಕಾರ "ದಿನಾಂಕ ೦೧.೧೧.೧೯೭೦ರಿಂದ ರಾಜ್ಯದ ಉಪವಿಭಾಗ (ಸಬ್‌ಡಿವಿಜನ್) ಮಟ್ಟದ ಎಲ್ಲಾ ಕಾರ್ಯಾಲಯಗಳಲ್ಲಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಬಳಸಲು ಹಾಗೂ ಮುಂದೆ ಕನ್ನಡವನ್ನು ಆಡಳಿತದ ಎಲ್ಲ ಹಂತಗಳಲ್ಲಿ ಜಾರಿಗೆ ತರಲು ಕೈಗೊಳ್ಳಬೇಕಾದ ಕ್ರಮಗಳನ್ನು ಸೂಚಿಸಲು ಸರ್ಕಾರವು ತಮ್ಮ ಆಜ್ಞೆ ಸಂಖ್ಯೆ ಜಿ.ಎ.ಡಿ.೬ ಪಿ.ಓ.ಎಲ್, ೦೫.೦೮.೧೯೭೦ರ ಮೂಲಕ ಕೆ. ನಾರಾಯಣಸ್ವಾಮಿಯವರ ನೇತೃತ್ವದಲ್ಲಿ ಕನ್ನಡ ಭಾಷಾಸಮಿತಿಯನ್ನು ನೇಮಿಸಿತು. ಈ ಸಮಿತಿಯು ಅಧಿಕಾರಿವರ್ಗದಿಂದ ಮತ್ತು ಸಾರ್ವಜನಿಕರಿಂದ ಬಂದ ಸಲಹೆಗಳನ್ನು ಸ್ವೀಕರಿಸಿ ೧೯೭೧ರಂದು ತನ್ನ ವರದಿಯನ್ನು ಸಲ್ಲಿಸಿದೆ. ಈ ವರದಿಯಲ್ಲಿ ೧೯೬೩ರಲ್ಲಿ ಕನ್ನಡವನ್ನು ಆಡಳಿತ ಭಾಷೆಯೆಂದು ಘೋಷಣೆ ಮಾಡಿದ್ದರೂ ಆ ಪ್ರಕಾರವಾಗಿ ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಬಳಕೆಯಾಗದೇ ಇರುವುದಕ್ಕೆ ಕಾರಣಗಳನ್ನು ಕೊಡುತ್ತಾ ಅಲ್ಲಿನ ಸಮಸ್ಯೆಗಳನ್ನು ಉಲ್ಲೇಖಿಸಿದ್ದಾರೆ. ಹಾಗೆಯೇ ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಸುವುದಕ್ಕೆ ಸಂಬಂಧಿಸಿದ ಹಾಗೆ ಕೆಲವು ಶಿಫಾರಸುಗಳನ್ನು ಮಾಡಿದ್ದಾರೆ. ಆ ಶಿಫಾರಸುಗಳಲ್ಲಿ ಪ್ರಮುಖವಾದವು ಈ ಕೆಳಕಂಡಂತೆ ಇವೆ.

ದಿನಾಂಕ ೧ನೇ ನವಂಬರ್ ೧೯೭೦ರಿಂದ ರಾಜ್ಯದ ಉಪವಿಭಾಗ ಮಟ್ಟದಲ್ಲಿರುವ ಎಲ್ಲ ಕಾರ್ಯಾಲಯಗಳಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರಬೇಕೆಂಬ ಸರ್ಕಾರದ ನಿರ್ಣಯಕ್ಕನುಸಾರವಾಗಿ ಸಮಿತಿಯು ದಿನಾಂಕ ೨೬ನೇ ಅಕ್ಟೋಬರ್ ೧೯೭೦ರಂದು ಸರ್ಕಾರಕ್ಕೆ 'ತಾತ್ಪೂರ್ತಿಕ ವರದಿಯನ್ನು ಸಲ್ಲಿಸಿದೆ. ಆ ವರದಿಯಲ್ಲಿ ಸೂಚಿಸಿರುವ ಸಲಹೆಗಳ ಮುಖ್ಯಾಂಶಗಳನ್ನು ಈ ಅಂತಿಮ ವರದಿಯಲ್ಲಿ ಸೇರಿಸಲಾಗಿದೆ. ಸರ್ಕಾರ ಆಡಳಿತ ನಡೆಸುವುದು ಸಾರ್ವಜನಿಕರ ಹಿತಕ್ಕಾಗಿ. ಶೇಕಡಾ ೯೮ರಷ್ಟು ಜನರಿಗೆ ಇಂಗ್ಲೀಷು ಭಾಷೆಯ ಪರಿಚಯವೇ ಇಲ್ಲ. ಹೀಗಿರುವಾಗ ಸರ್ಕಾರದ

ಪ್ರತಿಯೊಂದು ವ್ಯವಹಾರದಲ್ಲಿಯೂ ಜನಸಾಮಾನ್ಯರು ಅನಿವಾರ್ಯವಾಗಿ ಇಂಗ್ಲೀಷು ಬಲ್ಲ ಕೆಲವೇ ಜನರ ಮರೆಹೊಕ್ಕು ತಮ್ಮ ಕೆಲಸ ಕಾರ್ಯಗಳನ್ನು ಮಾಡಿಕೊಳ್ಳುವಂತಾಗಿದೆ. ಈ ದುಸ್ಥಿತಿಯ ನಿವಾರಣೆಯ ದೃಷ್ಟಿಯಿಂದಲೂ ಆಡಳಿತದ ಎಲ್ಲಾ ಹಂತಗಳಲ್ಲಿ ಕನ್ನಡವನ್ನು ಪರಿಣಾಮಕಾರಿಯಾದ ರೀತಿಯಲ್ಲಿ ಜಾರಿಗೆ ತರಬೇಕೆಂಬ ಸರ್ಕಾರದ ಉದ್ದೇಶವನ್ನು ಗಮನಿಸಿಯೂ ಸಮಿತಿಯು ಈ ಕೆಳಕಂಡ ಶಿಫಾರಸುಗಳನ್ನು ಮಾಡುತ್ತದೆ.

೧. ಆಡಳಿತ ಅನುಕೂಲ ದೃಷ್ಟಿಯಿಂದ ಕನ್ನಡವನ್ನು ಉಪವಿಭಾಗ ಮಟ್ಟದಲ್ಲಿ ಜಾರಿಗೆ ತರುವುದರ ಜೊತೆಗೆ ಕೂಡಲೆ ಜಿಲ್ಲಾ ಮಟ್ಟದಲ್ಲಿಯೂ ಹಾಗೂ ರಾಜ್ಯಮಟ್ಟದಲ್ಲಿಯೂ ಜಾರಿಗೆ ತರಬೇಕು.

೨. ಅ) ಆಡಳಿತ ಶಬ್ದಕೋಶ (ಗ್ಲಾಸರಿ ಆಫ್ ಅಡ್ಮಿನಿಸ್ಟ್ರೇಟಿವ್ ಟರ್ಮ್ಸ್), ಕಾರ್ಯಾಲಯ ಕೈಪಿಡಿ (ಮ್ಯಾನ್ಯುಯಲ್ ಆಫ್ ಆಫೀಸ್ ಪ್ರೊಸೀಜರ್) ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಮಾದರಿ ಪತ್ರಗಳು ಈ ಪುಸ್ತಕಗಳನ್ನು ರಾಜ್ಯದ ಪ್ರತಿಯೊಂದು ಕಚೇರಿಯ ಎಲ್ಲ ಉದ್ಯೋಗಿಗಳಿಗೂ ಒದಗಿಸಬೇಕು. ಮತ್ತು ಈ ಪ್ರತಿಗಳು ಸಾರ್ವಜನಿಕರಿಗೆ ರಿಯಾಯಿತಿ ದರದಲ್ಲಿ ದೊರೆಯುವಂತೆ ಏರ್ಪಾಟು ಮಾಡಬೇಕು.

ಆ) ಆಡಳಿತದ ನಿತ್ಯವ್ಯವಹಾರದಲ್ಲಿ ಪದೇಪದೇ ಉಪಯೋಗಕ್ಕೆ ಬೀಳುವ ಅಧಿನಿಯಮಗಳು (ಆಕ್ಟ್ಸ್); ನಿಯಮಾವಳಿಗಳು (ರೂಲ್ಸ್) ಹಾಗೂ ಎಂ.ಸಿ.ಎಸ್.ಆರ್., ಎಂ.ಎಫ್.ಸಿ. ಟ್ರೆಜರಿ ಕೋಡ್ ಮುಂತಾದ ಆಡಳಿತಕ್ಕೆ ಆಧಾರಭೂತವಾದ ಪುಸ್ತಕಗಳನ್ನು ಕ್ರಮೇಣ ಕನ್ನಡಕ್ಕೆ ಅನುವಾದ ಮಾಡಿ ಒಂದು ಕಡೆ ಇಂಗ್ಲೀಷಿನಲ್ಲೂ ಮತ್ತೊಂದು ಕಡೆ ಕನ್ನಡದಲ್ಲೂ (ಡಿಗಲಾಟ್) ಮುದ್ರಿಸಿ ಎಲ್ಲ ಕಚೇರಿಗಳಿಗೂ ಸರಬರಾಜು ಮಾಡಬೇಕು.

ಇ) ಎಲ್ಲ ಇಲಾಖೆಗಳಿಗೆ ಸಂಬಂಧಪಟ್ಟ ವಹಿ (ರಿಜಿಸ್ಟರುಗಳು) ನಮೂನೆಗಳು (ಫಾರ್ಮುಗಳು) ಮತ್ತು ತಿಳಿವಳಿಕೆ ಪತ್ರಗಳು (ನೋಟೀಸುಗಳು) ಮುಂತಾದುವುಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಅವುಗಳನ್ನು ಎಲ್ಲ ಕಚೇರಿಗಳಿಗೂ ಸಾಕಷ್ಟು ಸಂಖ್ಯೆಯಲ್ಲಿ ಹಂಚಬೇಕು. ಅಗತ್ಯ ಕಂಡಲ್ಲಿ ಮಾದರಿ ಕಡತವನ್ನು (ಮಾಡಲ್ ಫೈಲ್) ಕನ್ನಡಕ್ಕೆ ತರ್ಜುಮೆ ಮಾಡಿ ಪ್ರತಿಯೊಬ್ಬ ಅಧಿಕಾರಿಗೂ ಒದಗಿಸಬೇಕು.
ಅಂತೆಯೇ ಸರ್ಕಾರಿ ಇಲಾಖೆಗಳಿಂದ ಸಾರ್ವಜನಿಕರಿಗೆ ಕೊಡುವ ವಿವಿಧ ನಮೂನೆ (ಫಾರ್ಮುಗಳು), ಬಿಲ್ಲುಗಳು, ನೋಟೀಸುಗಳು ಇತ್ಯಾದಿ ಪ್ರಕಟಣೆಗಳು ಕನ್ನಡದಲ್ಲಿಯೇ ಇರಬೇಕು.

ಈ) ಸಚಿವಾಲಯದಿಂದಲೂ ಇಲಾಖಾ ಮುಖ್ಯಾಧಿಕಾರಿಗಳಿಂದಲೂ ಹೊರಡಿಸಲಾಗುವ ಸರ್ಕಾರಿ ಆಜ್ಞೆ, ಆದೇಶಗಳೆಲ್ಲವೂ ಕನ್ನಡದಲ್ಲಿರಬೇಕು. ಹೀಗಾದರೆ ಮಾತ್ರ ಅವು ಕಾನೂನು ದೃಷ್ಟಿಯಲ್ಲಿ ಅಧಿಕೃತವೆಂದು ತಿಳಿಯಲು ಬರುವುದಲ್ಲದೆ ಕೆಳಗಿನ ಅಧಿಕಾರಿಗಳು ತರ್ಜುಮೆ ಸಂಬಂಧವಾಗಿ ಎದುರಿಸಬೇಕಾಗಿ ಬರುವ ತೊಂದರೆಯೂ ತಪ್ಪುತ್ತದೆ.

೩. ಅ) ತಾಲ್ಲೂಕು ಮಟ್ಟದಿಂದ ಸಚಿವಾಲಯ ಮಟ್ಟದವರೆಗಿನ ಸರ್ಕಾರದ ಎಲ್ಲಾ ಇಲಾಖೆಯ ಕಚೇರಿಗಳಿಗೂ ಕನ್ನಡ ಬೆರಳಚ್ಚು ಯಂತ್ರಗಳನ್ನು ಕೂಡಲೇ ಸರಬರಾಜು ಮಾಡಬೇಕು.

ಆ) ಈಗ ಅನೇಕ ತಾಲ್ಲೂಕು ಕಾರ್ಯಾಲಯಗಳಲ್ಲಿ ಇಂಗ್ಲೀಷು ಬೆರಳಚ್ಚುಗಾರರೂ ಇಲ್ಲ. ಅಂಥ ಕಡೆ ಪ್ರತ್ಯೇಕ ಬೆರಳಚ್ಚುಗಾರರ ಹುದ್ದೆಯನ್ನು ಕೂಡಲೇ ಮಂಜೂರು ಮಾಡಿ ಆ ಸ್ಥಳಗಳಿಗೆ ಕನ್ನಡ ಬೆರಳಚ್ಚುಗಾರರನ್ನು (ಟೈಪಿಸ್ಟ್‌ರನ್ನು) ನೇಮಿಸಬೇಕು.

ಇ) ತಾಲ್ಲೂಕು, ಉಪವಿಭಾಗ ಹಾಗೂ ಅದಕ್ಕೂ ಮೇಲಿನ ಎಲ್ಲ ಹಂತಗಳಲ್ಲಿ ಈಗಿರುವ ಬೆರಳಚ್ಚುಗಾರರಿಗೆ ಕೂಡಲೇ ಕನ್ನಡ ಬೆರಳಚ್ಚು ಕಲಿಯುವಂತೆ ಆದೇಶ ನೀಡಬೇಕು. ಮತ್ತು ಅವರು ಕಚೇರಿಯ ವೇಳೆಯನ್ನು ಬಿಟ್ಟು ಬೇರೆ ವೇಳೇಯಲ್ಲಿ ಸ್ಥಳೀಯ ಖಾಸಗಿ ತರಬೇತಿ ಸಂಸ್ಥೆಗಳಲ್ಲಿ ಇಲ್ಲವೆ ಇಂಥ ಸಂಸ್ಥೆಗಳಿರುವ ಬೇರೆ ಸ್ಥಳಗಳಲ್ಲಿ ಕನ್ನಡ ಬೆರಳಚ್ಚನ್ನು ಕಲಿಯುವಂತೆ ಏರ್ಪಾಟು ಮಾಡಬೇಕು. ಮತ್ತು ಹಾಗೆ ತರಬೇತಿ ಪಡೆದು ಮನ್ನಣೆ ಪಡೆದ ತರಬೇತಿ ಸಂಸ್ಥೆಗಳಿಂದ ಯೋಗ್ಯತಾ ಪತ್ರವನ್ನು ಹೊಂದಿದವರಿಗೆ ಈಗ ಕೊಡುತ್ತಿರುವ ಸಂಭಾವನೆಯ ಜೊತೆಗೆ ತಿಂಗಳಿಗೆ ೨೦ರೂ.ಗಳಂತೆ ಹೆಚ್ಚಿನ ಸಂಭಾವನೆಯನ್ನು ನೀಡಬೇಕು. ಇಂಥವರು ಒಂದು ವರ್ಷದೊಳಗಾಗಿ ಕನ್ನಡ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕು.

ಋ) ಇನ್ನು ಮುಂದೆ ಕನ್ನಡ ಬೆರಳಚ್ಚುಗಾರರ ಹುದ್ದೆಗಳನ್ನು ಮಾತ್ರ ಮಂಜೂರು ಮಾಡಬೇಕು. ಮತ್ತು ಮುಂದೆ ಖಾಲಿಬೀಳುವ ಬೆರಳಚ್ಚುಗಾರರ ಮತ್ತು ಶೀಘ್ರಲಿಪಿಗಾರರ ಹುದ್ದೆಗಳಿಗೆ ಕನ್ನಡ ಬೆರಳಚ್ಚುಗಾರರು ಮತ್ತು ಕನ್ನಡ ಶೀಘ್ರಲಿಪಿಗಾರರನ್ನೇ ನೇಮಿಸಬೇಕು.

ೠ) ಈಗ ಇಂಗ್ಲೀಷ್ ಬೆರಳಚ್ಚುಗಾರರು ಕನ್ನಡ ಬೆರಳಚ್ಚು ಕಲಿತರೆ ವಿಶೇಷ ಸಂಭಾವನೆಯನ್ನು ಕೊಡಲಾಗುತ್ತಿದೆ. ಕನ್ನಡದಲ್ಲಿಯೇ ಬೆರಳಚ್ಚುಗಾರಿಕೆ ಹಾಗೂ ಶೀಘ್ರಲಿಪಿಗಾರಿಕೆ ಕಲಿತವರಿಗೆ ಕೊಡಲಾಗುವ ಇಂಥ ವಿಶೇಷ ಸಂಭಾವನೆಯನ್ನು ೪೦ರೂ ಗಳಿಗೆ ಹೆಚ್ಚಿಸಬೇಕು.

ಈ) ರಾಯಚೂರು, ಗುಲ್ಬರ್ಗ ಹಾಗೂ ಬೀದರ್ ಜಿಲ್ಲೆಗಳ ಕೆಲವು ಸಬ್‌ರಿಜಿಸ್ಟ್ರಾರ್ ಕಚೇರಿಗಳಲ್ಲಿ ಅನೇಕ ದಸ್ತಾವೇಜುಗಳು ಉರ್ದುವಿನಲ್ಲಿವೆ. ಈ ಸ್ಥಳಗಳಲ್ಲಿ ಕನ್ನಡದಲ್ಲಿ ದಸ್ತಾವೇಜುಗಳನ್ನು ಬರೆಯಲು ಸೂಕ್ತ ಪ್ರೋತ್ಸಾಹ ನೀಡಬೇಕು.

ಉ) ರಾಜ್ಯದಲ್ಲಿ ಭೂಸುಧಾರಣೆ (ಲ್ಯಾಂಡ್ ರಿಫಾರ್ಮ್ಸ್) ಸಂಬಂಧಪಟ್ಟ ವ್ಯವಹಾರಗಳು ಹೆಚ್ಚುತ್ತಿವೆ. ಕೆಲವು ಕೋರ್ಟುಗಳಲ್ಲಿ ಇದಕ್ಕೆ ಸಂಬಂಧಪಟ್ಟ ಮೊಕದ್ದಮೆಗಳು ಸಾವಿರಾರು ಸಂಖ್ಯೆಯಲ್ಲಿ ದಾಖಲಾಗಿವೆ. ಈಗ ಆ ವ್ಯವಹಾರಗಳೆಲ್ಲ ಇಂಗ್ಲೀಷಿನಲ್ಲಿದ್ದು ರೈತರಿಗೆ ತುಂಬಾ ತೊಂದರೆಯಾಗಿದೆ. ಆದ್ದರಿಂದ ಇವುಗಳಿಗೆ ಸಂಬಂಧಪಟ್ಟ ನಮೂನೆ, ದಾಖಲೆ ಹಾಗೂ ಇನ್ನಿತರ ವ್ಯವಹಾರಗಳು ಕನ್ನಡದಲ್ಲಿರಬೇಕು.

ಊ) ಆಡಳಿತಕ್ಕೆ ಸಂಬಂಧಪಟ್ಟ ಎಲ್ಲ ಪುಸ್ತಕಗಳೂ ಇಂಗ್ಲೀಷ್ ಭಾಷೆಯಲ್ಲಿರುವುದರಿಂದ ಇವುಗಳೆಲ್ಲವನ್ನೂ ಕನ್ನಡಕ್ಕೆ ಭಾಷಾಂತರಿಸುವ ಕೆಲಸವು ಅಷ್ಟು ಸುಲಭವಲ್ಲ. ಆದ್ದರಿಂದ ಈ ಕೆಲಸಕ್ಕೆ ಸೂಕ್ತ ಸಿಬ್ಬಂದಿಯ ಕೊರತೆ ಎನಿಸಿದಲ್ಲಿ ಈ ಕೆಲಸದಲ್ಲಿ ನುರಿತ ನಿವೃತ್ತರಾದಂತಹ ಅಧಿಕಾರಗಳ ಸೇವೆಯನ್ನು ರಿಕ್ರೂಟ್‌ಮೆಂಟ್ ನಿಯಮಗಳಲ್ಲಿ ತಕ್ಕ ತಿದ್ದುಪಾಟು ಮಾಡಿ ಕಂಟ್ರಾಕ್ಟ್ ಆಧಾರದ ಮೇಲೆ ಉಪಯೋಗಿಸಿಕೊಳ್ಳಬಹುದು.

ಅ) ಕನ್ನಡದಲ್ಲಿ ಬಂದ ಅರ್ಜಿಗಳಿಗೆ ಆದ್ಯ ಗಮನ ನೀಡಲಾಗುವುದೆಬ್ಬುಂದು ಸರ್ಕಾರದ ಆಜ್ಞೆಯಾಗಬೇಕು.

ಇ) ಕೇಂದ್ರ ಹಾಗೂ ರಾಜ್ಯ ಮಟ್ಟದ ಸರ್ಕಾರಿ ಕಚೇರಿಗಳಲ್ಲಿ, ಕಾರ್ಖಾನೆಗಳಲ್ಲಿ ಹಾಗೂ ಇನ್ನಿತರ ಸಂಸ್ಥೆಗಳಲ್ಲಿ ಹಾಕುವ ನಾಮಫಲಕಗಳು ಕನ್ನಡದಲ್ಲಿರಬೇಕು. ಹಾಗೆಯೇ ಕಚೇರಿಯ ಒಳಗಡೆ ಹುದ್ದೆಗಳನ್ನು ಸೂಚಿಸುವ ನಾಮಫಲಕಗಳೂ ಕನ್ನಡದಲ್ಲಿರಬೇಕು. ತೀರಾ ಅಗತ್ಯ ಕಂಡ ಕೆಲವು ಕಡೆಗಳಲ್ಲಿ ಮಾತ್ರ ಕನ್ನಡದ ಜೊತೆಗೆ ಕೆಳಗೆ ಇಂಗ್ಲೀಷಿನಲ್ಲಿಯೂ ಬರೆಸಬಹುದು. ಇದೇ ರೀತಿ ಊರುಗಳು, ಜೊತೆಗೆ ರಸ್ತೆಗಳು, ಮಾರ್ಗಸೂಚಕ ಫಲಕಗಳನ್ನು ಹಾಗೂ ಮೈಲಿಗಲ್ಲುಗಳೂ ಕನ್ನಡದಲ್ಲಿರಬೇಕು.

ಈ) ಕಚೇರಿಗಳಲ್ಲಿ ಉಪಯೋಗಿಸುವ ಅಧಿಕಾರ ಮುದ್ರೆ (ಸೀಲ್ ಆಫ್ ಆಫೀಸ್), ರಬ್ಬರ್ ಸ್ಟಾಂಪು ಮತ್ತು ಲೆಟರ್‌ಹೆಡ್‌ಗಳೂ ಕನ್ನಡದಲ್ಲಿರಬೇಕು.

ಉ) ಲೋಕಸೇವಾ ಆಯೋಗದ ಅರ್ಜಿಫಾರ್ಮುಗಳೆಲ್ಲವೂ ಕನ್ನಡದಲ್ಲಿರಬೇಕು ಎಂದು ತನ್ನ ವರದಿಯಲ್ಲಿ ಸೂಚಿಸಿದೆ[೧೧].

ಹೀಗೆ ಕೆ.ನಾರಾರಣಸ್ವಾಮಿ ಸಮಿತಿಯು ಆಡಳಿತದಲ್ಲಿ ಕನ್ನಡ ಬಳಕೆಯಾಗದೇ ಇರುವುದಕ್ಕೆ ಕಾರಣಗಳು ಮತ್ತು ರಾಜ್ಯದ ಎಲ್ಲಾ ಹಂತದ ಆಡಳಿತದಲ್ಲಿ ಕನ್ನಡ ಬಳಕೆಯಾಗುವುದಕ್ಕೆ ಸಂಬಂಧಿಸಿದಂತೆ ಕೈಗೊಳ್ಳಬೇಕಾದ ಕ್ರಮಗಳನ್ನು ಶಿಫಾರಸಿನ ರೂಪದಲ್ಲಿ ನೀಡಿದೆ. ಇದರಲ್ಲಿ ಮುಖ್ಯವಾಗಿ ರಾಜ್ಯದ ಎಲ್ಲಾ ಸರ್ಕಾರಿ ಇಲಾಖೆಗಳಿಗೂ ಕನ್ನಡದ ಬೆರಳಚ್ಚು ಯಂತ್ರಗಳನ್ನು ಒದಗಿಸುವುದು, ಕನ್ನಡದಲ್ಲಿ ತರಬೇತಿ ಪಡೆದಿರುವ ಬೆರಳಚ್ಚುಗಾರರು ಮತ್ತು ಶೀಘ್ರಲಿಪಿಗಾರರನ್ನು ನೇಮಕ ಮಾಡುವುದು, ಈಗಾಗಲೇ ಇಂಗ್ಲಿಶ್‌ನ ಬೆರಳಚ್ಚುಗಾರರಾಗಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ಕನ್ನಡದಲ್ಲಿ ಕಾರ್ಯನಿರ್ವಹಿಸುವ ಹಾಗೆ ತರಬೇತಿ ನೀಡುವ ವ್ಯವಸ್ಥೆ ಮಾಡುವ ಅಂಶಗಳು ಪ್ರಧಾನವಾಗಿವೆ.

ಏಕೆಂದರೆ ರಾಜ್ಯದ ಕೆಳಹಂತದ ಆಡಳಿತದಲ್ಲಿ ಕನ್ನಡವನ್ನು ಬಳಕೆಗೆ ತಂದು ಆಡಳಿತದ ಉನ್ನತ ಹಂತದಲ್ಲಿ ಕನ್ನಡವನ್ನು ಬಳಕೆ ಮಾಡದೆ ಇಂಗ್ಲಿಶ್‌ನ್ನು ಮುಂದುವರೆಸಿದರೆ ಸಚಿವಾಲಯದಲ್ಲಿ ತೆಗೆದುಕೊಳ್ಳುವ ಪ್ರತಿಯೊಂದು ನಿರ್ಧಾರಗಳು ಇಂಗ್ಲಿಶ್‌ನಲ್ಲಿದ್ದು ಮತ್ತೆ ಅವುಗಳನ್ನು ಕನ್ನಡಕ್ಕೆ ಅನುವಾದಿಸಬೇಕಾಗುತ್ತದೆ. ಹೀಗೆ ಇಂಗ್ಲಿಶ್‌ನಿಂದ ಕನ್ನಡಕ್ಕೆ ಅನುವಾದಿಸುವ ಕೆಲಸಗಳನ್ನು ಅಧಿಕಾರಿಗಳು ಮತ್ತು ನೌಕರರು ಮಾಡದೆ ಯಾವುದೇ ಆದೇಶ, ಪತ್ರಗಳು, ಯೋಜನೆಗಳ ಬಗೆಗೆ ಮಾಹಿತಿಗಳನ್ನು ಇಂಗ್ಲಿಶ್‌ನಲ್ಲಿಯೇ ಪ್ರಕಟಿಸಲಾಗುತ್ತಿದ್ದವು. ಇದರಿಂದಾಗಿ ಸರ್ಕಾರದ ಆಡಳಿತದ ಕೆಳಹಂತದಲ್ಲಿ ಕನ್ನಡವನ್ನು ಬಳಕೆಗೆ ತರಬೇಕು ಎಂದು ಭಾಷಾನೀತಿಯನ್ನು ಹೊರಡಿಸಿದ್ದರು ಅದು ಸಮರ್ಪಕವಾಗಿ ಅನುಷ್ಠಾನಗೊಂಡಿರಲಿಲ್ಲ. ಇದನ್ನು ಸರಿಯಾಗಿ ಅರ್ಥೈಸಿರುವ ಕೆ.ನಾರಾಯಣಸ್ವಾಮಿ ಸಮಿತಿಯು ಆಡಳಿತದ ಕೆಳಹಂತದಲ್ಲಿ ಕನ್ನಡ ಆಡಳಿತ ಭಾಷೆಯಾಗಿ ಬಳಕೆಯಾಗಬೇಕಾದರೆ ಆಡಳಿತದ ಉನ್ನತ ಹಂತದಲ್ಲಿಯೂ ಕನ್ನಡ ಆಡಳಿತ ಭಾಷೆಯಾಗಿ ಬಳಕೆಯಾಗುವಂತೆ ಸರ್ಕಾರ ಭಾಷಾನೀತಿಯನ್ನು ಜಾರಿಗೆ ತರಬೇಕಾದ ಅನಿವಾರ್ಯತೆ ಇದೆ ಎಂಬಂತಹ ಸಲಹೆ ನೀಡಿದೆ.

ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಬಳಕೆಗೆ ತರುವುದಕ್ಕೆ ಸಂಬಂಧಿಸಿದ ಹಾಗೆ ಕೆ.ನಾರಾಯಣಸ್ವಾಮಿ ಸಮಿತಿ ನೀಡಿರುವ ಸಲಹೆಗಳನ್ನು ಗಂಭೀರವಾಗಿ ಪರಿಗಣಿಸಿ ಸಮಸ್ಯೆಗಳನ್ನು ಪರಿಹರಿಸಬೇಕಾದ ಸರ್ಕಾರಗಳು ನಿರ್ಲಕ್ಷ್ಯ ಮಾಡಿ ಕರ್ನಾಟಕದ ಆಡಳಿತದಲ್ಲಿ ಕನ್ನಡ ಬಳಕೆಯಾಗುತ್ತಿಲ್ಲ ಎಂಬ ಕಾರಣಕ್ಕಾಗಿ ಕನ್ನಡಿರು ಸರ್ಕಾರಗಳ ಮೇಲೆ ಒತ್ತಡಗಳನ್ನು ಉಂಟುಮಾಡಿರುವಾಗ ಮೇಲೆ ಉಲ್ಲೇಖಿಸಿರುವ ಹಾಗೆ ಕಾಲದಿಂದ ಕಾಲಕ್ಕೆ ಬದಲಾದ ಹಾಗೆ ವಿವಿಧ ಇಲಾಖೆ ಮತ್ತು ಹಂತಗಳಲ್ಲಿ ಬಳಸಬೇಕಾದ ಭಾಷೆಗೆ ಸಂಬಂಧಿಸಿದಂತೆ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಅದಕ್ಕನುಗುಣವಾಗಿ ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಬಳಕೆಗೆ ತರುವುದಕ್ಕೆ ಸಂಬಂಧಿಸಿದ ಹಾಗೆ ಮೂಲಭೂತ ಪರಿಕರಗಳನ್ನು ಒದಗಿಸುವ ಕೆಲಸ ಮಾಡಿವೆ. ಹೀಗೆ ಹೊಸಹೊಸ ನಿಯಮಗಳನ್ನು ತಂದು ಅದಕ್ಕೆ ಪೂರಕ ವ್ಯವಸ್ಥೆ ಮಾಡುತ್ತಿರುವಾಗಲೇ ವೈಜ್ಞಾನಿಕವಾಗಿ ಆಡಳಿತದಲ್ಲಿ ಬಳಸುವ ಯಾಂತ್ರಿಕ ಉಪಕರಣಗಳಲ್ಲಿ ಹೊಸಹೊಸ ಆವಿಷ್ಕಾರಗಳಾಗಿ ಕರ್ನಾಟಕ ಸರ್ಕಾರಗಳ ಯೋಜನೆಗಳು ಆಡಳಿತದಲ್ಲಿ ಯಶಸ್ವಿಯಾಗಿ ಅನುಷ್ಠಾನಕ್ಕೆ ಬರುವುದನ್ನು ವಿಫಲಗೊಳಿಸಿವೆ.

ಇದಕ್ಕೆ ಸಂಬಂಧಿಸಿದ ಹಾಗೆ ಕೆಲವೊಂದು ವಿಚಾರಗಳನ್ನು ಗಮನಿಸುವುದಾದರೆ ಕರ್ನಾಟಕ ಏಕೀಕರಣಗೊಂಡಾಗ ಆಡಳಿತದಲ್ಲಿ ಪತ್ರವ್ಯವಹಾರ, ಮುದ್ರಣ ಇತ್ಯಾದಿಗಳಿಗೆ ಇಂಗ್ಲಿಶ್‌ನ ಬೆರಳಚ್ಚು ಯಂತ್ರಗಳನ್ನು ಬಳಸಲಾಗುತ್ತಿತ್ತು. ಇವುಗಳನ್ನು ಬದಲಾಯಿಸಿ ಕನ್ನಡದ ಬೆರಳಚ್ಚು ಯಂತ್ರಗಳನ್ನು ಒದಗಿಸಿ ಆಡಳಿತದಲ್ಲಿ ಕನ್ನಡಕ್ಕೆ ಅನುಕೂಲ ಮಾಡಿಕೊಳ್ಳುವ ಹೊತ್ತಿಗೆ ಕಂಪ್ಯೂಟರ್‌ನ ಆವಿಷ್ಕಾರವಾಗಿದೆ. ಆಗಿನಿಂದ ಕರ್ನಾಟಕದ ಆಡಳಿತವನ್ನು ವೇಗಗೊಳಿಸಿ ಪಾರದರ್ಶಕವಾಗಿಸಲು ಮತ್ತು ಆಡಳಿತವನ್ನು ಸುಲಭಗೊಳಿಸಲು ಕಂಪ್ಯೂಟರ್‌ನ ಬಳಕೆ ಆರಂಭಿಸಲಾಗಿದೆ. ಕಂಪ್ಯೂಟರ್‌ನ ಬಳಕೆ ಆರಂಭವಾದಾಗ ಕಂಪ್ಯೂಟರ್‌ನಲ್ಲಿ ಕನ್ನಡವನ್ನು ಬಳಸಲು ಸಾಫ್ಟ್‌ವೇರ್ ತಯಾರಿಸಿರಲಿಲ್ಲ. ಹೀಗಾಗಿ ಕರ್ನಾಟಕ ಸರ್ಕಾರಗಳ ಎಲ್ಲಾ ಭಾಷಾನೀತಿಗಳನ್ನು ಉಲ್ಲಂಘಿಸಿ ಆಡಳಿತದಲ್ಲಿ ಇಂಗ್ಲಿಶ್ ಬಳಸುವುದು ಅನಿವಾರ್ಯವಾಗಿದೆ. ಇಂತಹ ಸಂದರ್ಭದಲ್ಲಿ ಇದಕ್ಕು ವ್ಯವಸ್ಥೆ ಕಲ್ಪಿಸಿ ಕನ್ನಡವನ್ನು ಆಡಳಿತದಲ್ಲಿ ಬಳಸುವುದಕ್ಕೆ ಸಿದ್ಧತೆ ಮಾಡಿಕೊಳ್ಳುವಷ್ಟರಲ್ಲಿ ಅಂತರ್ಜಾಲದ (ಇಂಟರ್‌ನೆಟ್) ಬಳಕೆ ಉಗಮವಾಗಿದ್ದು ಸರ್ಕಾರದ ಆಡಳಿತ ಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲಾ ಕಡತಗಳು, ದಾಖಲೆಗಳನ್ನು ಕಂಪ್ಯೂಟರೀಕರಿಸುವ ಕೆಲಸ ಮಾಡಲಾಗಿದೆ ಮತ್ತು ಸುದ್ದಿ, ದಾಖಲೆ, ಮಾಹಿತಿ ಇತ್ಯಾದಿಗಳನ್ನು ವೇಗವಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ರವಾನಿಸಲು ಅಂತರ್ಜಾಲವನ್ನು ಬಳಸಿಕೊಳ್ಳಲಾಗಿದೆ. ಹೀಗೆ ಕರ್ನಾಟಕದಲ್ಲಿ ಆಡಳಿತವನ್ನು ಆಧುನೀಕರಿಸುವ ನೆಪದಲ್ಲಿ ಆರಂಭವಾದ ಕಂಪ್ಯೂಟರ್, ಅಂತರ್ಜಾಲ ಇತ್ಯಾದಿಗಳ ಪರಿಣಾಮ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್ ಮರುಜೀವ ಪಡೆದುಕೊಂಡಿದೆ. ಇದು ಕರ್ನಾಟಕದ ಆಡಳಿತದಲ್ಲಿ ಕನ್ನಡದ ಬಳಕೆಯ ವ್ಯಾಪ್ತಿಯನ್ನು ಕುಗ್ಗಿಸಿದೆ.

ಹೀಗಾಗಿ "ಪ್ರಾರಂಭದಲ್ಲಿ ಕನ್ನಡ ಬಳಕೆಗೆ ಇಂಗ್ಲೀಷ್ ಬೆರಳಚ್ಚು ಯಂತ್ರಗಳು ತೊಡಕಾಗಿದ್ದವು. ಇವುಗಳ ಬದಲಿಗೆ ಕನ್ನಡ ಬೆರಳಚ್ಚು ಯಂತ್ರಗಳನ್ನು ಸರಬರಾಜು ಮಾಡಿ, ಕ್ರಮೇಣ ಇಂಗ್ಲೀಷ್ ಬೆರಳಚ್ಚು ಯಂತ್ರಗಳನ್ನು ಹಿಂದೆ ಪಡೆಯುವ ಮೂಲಕ ಹಾಗೂ ಇಂಗ್ಲೀಷ್ ಬೆರಳಚ್ಚುಗಾರರಿಗೆ ಕನ್ನಡ ಬೆರಳಚ್ಚು ತರಬೇತಿ ನೀಡಿ, ಕೆಲವು ಪ್ರೋತ್ಸಾಹಗಳನ್ನು ನೀಡುವ ಮೂಲಕ ಈ ಸಮಸ್ಯೆಗೆ ಪರಿಹಾರ ದೊರಕಿಸಲಾಯಿತು. ಈ ಕಾರಣಗಳಿಂದ ಕನ್ನಡ ಬಳಕೆಯ ಸ್ಥಿತಿ ಸುಧಾರಿಸುತ್ತಿದೆಯೆನ್ನುವಾಗ 'ಹೋದೆಯಾ ಪಿಶಾಚಿ ಎಂದರೆ ಬಂದೆ ಗವಾಕ್ಷೀ' ಎಂಬಂತೆ ಕಂಪ್ಯೂಟರ್‌ಗಳ ಯುಗ ಪ್ರಾರಂಭವಾಗಿ ಕನ್ನಡಕ್ಕೆ ಮಾರಕವಾಯಿತು.[೨೨]" ಎಂದಿದ್ದಾರೆ ಡಾ.ಎ.ವಿ.ಪ್ರಸನ್ನ. ಹೀಗೆ ಕಂಪ್ಯೂಟರ್‌ನ ಆಗಮನ ಕರ್ನಾಟಕ ಸರ್ಕಾರ ಆಡಳಿತದಲ್ಲಿ ಕನ್ನಡವನ್ನು ಬಳಕೆಗೆ ತರಲು ಜಾರಿಗೆ ತಂದಿದ್ದ ಭಾಷಾನೀತಿಗಳು, ಅವುಗಳ ಅನುಷ್ಠಾನಕ್ಕೆ ಒದಗಿಸಿದ್ದ ಬೆರಳಚ್ಚು ಯಂತ್ರಗಳು, ನೇಮಕ ಮಾಡಿದ್ದ ಬೆರಳಚ್ಚುಗಾರರು, ಇದಕ್ಕೆ ನೀಡಿದ್ದ ಪ್ರೋತ್ಸಾಹ, ಇಂಗ್ಲಿಷ್ ಬೆರಳಚ್ಚುಗಾರರಿಗೆ ನೀಡಿದ್ದ ತರಬೇತಿ ಎಲ್ಲವೂ ವಿಫಲವಾಗುವಂತೆ ಮಾಡಿದೆ.

"ಇದನ್ನು ಮನಗೊಂಡು ಸರ್ಕಾರ ಕಂಪ್ಯೂಟರ್‌ನಲ್ಲಿ ಕನ್ನಡ ಬಳಕೆ ಸುಗಮವಾಗುವಂತೆ, ಮೊದಲು ಕನ್ನಡ ಲಿಪಿಯ ಅಚ್ಚುಮಣೆ ತಂತ್ರಾಂಶವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮತ್ತು ಕರ್ನಾಟಕ ಗಣಕ ಪರಿಷತ್‌ಗಳ ಸಹಕಾರದೊಂದಿಗೆ 'ನುಡಿ'ಯೆಂಬ ಹೆಸರಿನಲ್ಲಿ ತಯಾರಿಸಿ, ಅದನ್ನು ಉಚಿತವಾಗಿ ಯಾರು ಬೇಕಾದರು ಪಡೆದು, ಬಳಸಲು ಅವಕಾಶ ಮಾಡಿಕೊಟ್ಟಿತು. ಆ ನಂತರ ಎಲ್ಲ ಇಲಾಖೆಗಳೂ ತಮ್ಮ ತಮ್ಮ ಇಲಾಖೆಗಳಿಗೆ ಸಂಬಂಧಿಸಿದ ಸಂಪೂರ್ಣ ಮಾಹಿತಿಗಳನ್ನು, ಅಂತರ್ಜಾಲಕ್ಕೆ ಅಳವಡಿಸುವ ಕೆಲಸ ಪ್ರಾರಂಭವಾದಾಗ, ಮೊದಲು ಇಂಗ್ಲೀಷ್‌ನಲ್ಲಿ ಈ ಕೆಲಸ ನಿರ್ವಹಿಸಲಾಯಿತು. ಈ ಬಗ್ಗೆ ವಿರೋಧಗಳನ್ನು ಗಮನಿಸಿದ ಸರ್ಕಾರವು ಎಲ್ಲಾ ಇಲಾಖೆಗಳೂ ಕನ್ನಡದಲ್ಲಿಯೂ ಸಹ ಅಂತರ್ಜಾಲದಲ್ಲಿಯೂ ವಿವರಗಳನ್ನು ಪ್ರಕಟಿಸಬೇಕಾಗಿ ಆದೇಶಿಸಿತು[೨೩]." ಹೀಗೆ ಸರ್ಕಾರ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮತ್ತು ಕರ್ನಾಟಕ ಗಣಕ ಪರಿಷತ್‌ಗಳ ಪ್ರಯತ್ನದ ಫಲವಾಗಿ ಕನ್ನಡವು ಕಂಪ್ಯೂಟರ್‌ಗಳಲ್ಲಿ ಬಳಕೆಯಾಗಲು ಸಾಧ್ಯವಾಗಿದೆ. ಹೀಗಾಗಿ ಯಾಂತ್ರಿಕ ಕಾರಣಗಳಿಂದ ಕನ್ನಡ ಬಳಸಲು ಸಾಧ್ಯವಾಗದಿದ್ದ ಅಧಿಕಾರಿಗಳು ಮತ್ತು ನೌಕರರು ಕನ್ನಡವನ್ನು ಆಡಳಿತದಲ್ಲಿ ಬಳಸಲು ಸಾಧ್ಯವಾಗಿದೆ. ಹಾಗೆಯೇ ಯಾಂತ್ರಿಕ ಕಾರಣಗಳನ್ನು ಕೊಟ್ಟು ಆಡಳಿತದಲ್ಲಿ ಕನ್ನಡವನ್ನು ಬಳಸದಿದ್ದ ಅಧಿಕಾರಿಗಳು ಕನ್ನಡವನ್ನು ಬಳಸುವುದು ಅನಿವಾರ್ಯವಾಗಿದೆ.

ಇಷ್ಟೆಲ್ಲಾ ಪ್ರಯತ್ನಗಳು ಸಾಗಿದಾಗಲು ಕರ್ನಾಟಕದ ಆಡಳಿತದಲ್ಲಿ ಕನ್ನಡ ಸರ್ಕಾರದ ಭಾಷಾನೀತಿಯ ಪ್ರಕಾರ ಆಡಳಿತದಲ್ಲಿ ಬಳಕೆಯಾಗುವುದು ಕಷ್ಟಕರವಾಗಿಯೇ ಪರಿಣಮಿಸಿದೆ. ಏಕೆಂದರೆ ರಾಜ್ಯದಲ್ಲಿ ಕೇಂದ್ರ ಸರ್ಕಾರದ ಅಧೀನದಲ್ಲಿರುವ ಇಲಾಖೆಗಳು, ಸಂಸ್ಥೆಗಳು, ಉದ್ದಿಮೆಗಳಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳು, ನೌಕರರು ಇದ್ದಾರೆ. ಇವರ ನೇಮಕಾತಿ ಪ್ರಕ್ರಿಯೆ ಕೇಂದ್ರ ಲೋಕಸೇವಾ ಆಯೋಗದಿಂದ ನಡೆಯುತ್ತಿದ್ದು, ಕನ್ನಡ ಭಾಷೆಯ ತಿಳುವಳಿಕೆ ಇಲ್ಲದವರು ಕರ್ನಾಟಕದಲ್ಲಿರುವ ಕೇಂದ್ರಸರ್ಕಾರದ ಇಲಾಖೆಗಳು, ಸಂಸ್ಥೆಗಳು ಮತ್ತು ಉದ್ದಿಮೆಗಳಲ್ಲಿ

ಕೆಲಸಮಾಡುತ್ತಿದ್ದಾರೆ. ಇವರುಗಳಿಗೆ ಕನ್ನಡದಲ್ಲಿ ವ್ಯವಹರಿಸುವ ಸಾಮರ್ಥ್ಯ ಇಲ್ಲವಾಗಿತ್ತು. ಇದರಿಂದಾಗಿ ಕರ್ನಾಟಕ ಸರ್ಕಾರ ೧೯೭೭ರಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗೆ ಬದಲಾವಣೆ ತಂದು ಕರ್ನಾಟಕದಲ್ಲಿ ಸರ್ಕಾರಿ ಸೇವೆ ಮಾಡುವ ಅಧಿಕಾರಿಗಳು ಮತ್ತು ನೌಕರರು ಕನ್ನಡ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾಗುವುದು ಕಡ್ಡಾಯವೆಂಬ ನಿಯಮವನ್ನು ಅಳವಡಿಸಿದೆ. ಈ ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಧಿಕಾರಿಗಳು ಮತ್ತು ನೌಕರರು ಕೂಡ ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಬಳಸುವಲ್ಲಿ ವಿಫಲರಾಗಿದ್ದಾರೆ. ಏಕೆಂದರೆ ಈ ಪರೀಕ್ಷೆಯ ಗುಣಮಟ್ಟ, ಇಲ್ಲಿ ಕೇಳಲಾಗುವ ಪ್ರಶ್ನೆಗಳು ಮತ್ತು ಆಡಳಿತದಲ್ಲಿ ಬಳಸುವ ಕನ್ನಡಕ್ಕೂ ವ್ಯತ್ಯಾಸವಿದೆ. ಈ ಭಾಷಾಪರೀಕ್ಷೆಯಲ್ಲಿ ಸಾಮಾನ್ಯವಾಗಿ ಎಸ್.ಎಸ್.ಎಲ್.ಸಿ ಮಟ್ಟದ ಕನ್ನಡ ಭಾಷಾಜ್ಞಾನದ ಪ್ರಶ್ನೆಗಳನ್ನು ಕೇಳಲಾಗುತ್ತದೆ. ಹಾಗೆಯೇ ಈ ಪರೀಕ್ಷೆಗಳು ಶಿಸ್ತುಬದ್ಧವಾಗಿ ನಡೆಯದೆ ನಾಮಕಾವಸ್ತೆಗೆಂಬಂತೆ ನಡೆಯುತ್ತಿವೆ. ಇಲ್ಲಿ ಅಧಿಕಾರಿಗಳ ಖಾಯಂಪೂರ್ವ ಸೇವಾವಧಿ ಪೂರ್ಣಗೊಳ್ಳಲು ಈ ಪರೀಕ್ಷೆಯಲ್ಲಿ ಉತೀರ್ಣವಾಗುವುದು ಕಡ್ಡಾಯವಾಗಿರುವುದರಿಂದ ಕೆಲವು ಅಧಿಕಾರಿಗಳು ಕನ್ನಡ ಭಾಷಾಜ್ಞಾನ ಇಲ್ಲದಿದ್ದರೂ ತಮ್ಮ ಅಧಿಕಾರ ಬಳಸಿಕೊಂಡು ಕನ್ನಡ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾದ ಪ್ರಮಾಣಪತ್ರ ಪಡೆದಿದ್ದಾರೆ.

ಕರ್ನಾಟಕ ಲೋಕಸೇವಾ ಆಯೋಗ ನಡೆಸುವ ಈ ಕನ್ನಡ ಭಾಷಾಪರೀಕ್ಷೆ ಶಿಸ್ತುಬದ್ಧವಾಗಿ ನಡೆಯುವುದಿಲ್ಲ. ಪರೀಕ್ಷಾ ಕೊಠಡಿಗಳಲ್ಲಿ ಸಾಕಷ್ಟು ಅವ್ಯವಹಾರಗಳು ನಡೆದು ಕೇಂದ್ರಸರ್ಕಾರದಿಂದ ನೇಮಕವಾಗಿರುವ ಅಧಿಕಾರಿಗಳು ಮತ್ತು ನೌಕರರು ಭಾಷಾಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಹೀಗಾಗಿ ಕನ್ನಡ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾಗಿರುವ ಎಲ್ಲಾ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರಿಗೆ ಕನ್ನಡವನ್ನು ಆಡಳಿತದಲ್ಲಿ ಬಳಸುವ ಸಾಮರ್ಥ್ಯ ಇಲ್ಲ. ಇಂತಹ ಸಮಸ್ಯೆಗಳ ನಡುವೆಯೇ ಕೇಂದ್ರ ಸರ್ಕಾರದ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರು ಕರ್ನಾಟಕದಲ್ಲಿಯೇ ಇದ್ದರೂ ತಮ್ಮ ಕೇಂದ್ರ ಕಚೇರಿ ಮತ್ತು ಹಿರಿಯ ಅಧಿಕಾರಿಗಳ ಜೊತೆ ವ್ಯವಹರಿಸುವಾಗ ಹಿಂದಿ ಅಥವಾ ಇಂಗ್ಲಿಶ್‌ನಲ್ಲಿ ವ್ಯವಹರಿಸಬೇಕಿದೆ. ಅದೇ ಪ್ರಕಾರ ದಾಖಲೆಗಳನ್ನು ಸಿದ್ಧಗೊಳಿಸಬೇಕಿದೆ. ಇಲ್ಲಿ ಕನ್ನಡದಲ್ಲಿ ವ್ಯವಹರಿಸಿದರೆ ಅಲ್ಲಿನ ಅಧಿಕಾರಿಗಳಿಗೆ ಪತ್ರವ್ಯವಹಾರ ಅರ್ಥವಾಗದೆ ಜನರ ಮತ್ತು ನೌಕರರ ಬೇಡಿಕೆ, ಸಮಸ್ಯೆಗಳಿಗೆ ಸ್ಪಂದಿಸುವುದಿಲ್ಲ. ಇಲ್ಲವೇ ಆ ಅಧಿಕಾರಿಗಳು ಕನ್ನಡ ಬಲ್ಲವರ ಸಹಾಯವನ್ನು ಪಡೆಯಬೇಕಾಗುತ್ತದೆ. ಹೀಗೆ ತಾವು ಉನ್ನತ ಹುದ್ದೆಯಲ್ಲಿದ್ದು ಭಾಷೆಯ ಕಾರಣಕ್ಕಾಗಿ ಇನ್ನೊಬ್ಬರ ನೆರವನ್ನು ಪಡೆಯುವುದು ತನ್ನ ಘನತೆಗೆ ಕುಂದು ಎಂದು ಭಾವಿಸಿ ಈ ಅಧಿಕಾರಿಗಳು ತಮ್ಮ ಭಾಷೆಯಲ್ಲಿಯೇ ಪತ್ರವ್ಯವಹಾರ ನಡೆಸುವಂತೆ ಒತ್ತಾಯ ಮಾಡಿದ್ದಾರೆ. ಇದರೊಂದಿಗೆ ರಾಜ್ಯದ ಕೇಂದ್ರ ಸರ್ಕಾರಿ ಸಂಸ್ಥೆಗಳ ಉನ್ನತ ಹಂತದ ಹುದ್ದೆಗಳನ್ನು ಪಡೆದು ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ತಮಗಿಂತ ಕೆಳಗಿನ ಅಧಿಕಾರಿಗಳು ಇಂಗ್ಲಿಶ್ ಇಲ್ಲವೆ ಹಿಂದಿ ಬಳಸದೆ ಕನ್ನಡದಲ್ಲಿ ವ್ಯವಹರಿಸಿದರೆ ಅಂತಹ ಪತ್ರಗಳನ್ನು ಹಿಂತಿರುಗಿಸುವುದು ಅಥವಾ ನಿರ್ಲಕ್ಷಿಸುವ ಕೆಲಸ ಮಾಡಿದ್ದಾರೆ. ಹೀಗಾಗಿ ಕರ್ನಾಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ

ಅಧಿಕಾರಿಗಳು, ನೌಕರರು ಮತ್ತು ಜನತೆ ಕೇಂದ್ರದ ಜೊತೆ ಹಿಂದಿ ಇಲ್ಲವೆ ಇಂಗ್ಲಿಶ್‌ನಲ್ಲೂ, ರಾಜ್ಯದೊಳಗೆ ಕನ್ನಡದಲ್ಲೂ ವ್ಯವಹರಿಸಬೇಕಾದ ಅನಿವಾರ್ಯತೆಗೆ ಒಳಗಾಗಿದ್ದಾರೆ.

ಏಕಕಾಲದಲ್ಲಿ ಎರಡು ಅಥವಾ ಮೂರು ಭಾಷೆಗಳನ್ನು ಆಡಳಿತದಲ್ಲಿ ಬಳಸುವುದು ಅಧಿಕಾರಿಗಳಿಗೆ, ನೌಕರರಿಗೆ ಮತ್ತು ಜನತೆಗೆ ಕಷ್ಟವಾಗಿ ಪರಿಣಮಿಸಿದೆ. ಏಕೆಂದರೆ ಕರ್ನಾಟಕದಲ್ಲಿರುವ ಎಲ್ಲರಿಗೂ ಹೀಗೆ ಸಂದರ್ಭಗಳಿಗೆ ಅನುಗುಣವಾಗಿ ತಮ್ಮ ಪತ್ರವ್ಯವಹಾರದಲ್ಲಿ ಎರಡು, ಮೂರು ಭಾಷೆಗಳನ್ನು ಬಳಸುವ ಸಾಮರ್ಥ್ಯ ಇಲ್ಲ. ಹೀಗಾಗಿ ರಾಜ್ಯದೊಳಗೆ ವ್ಯವಹರಿಸುವಾಗ ಅಧಿಕಾರಿಗಳು, ನೌಕರರು ಮತ್ತು ಜನರು ತಮಗೆ ಅನುಕೂಲವಾದ ಭಾಷೆಗಳಲ್ಲಿ ಪತ್ರವ್ಯವಹಾರ ಮಾಡುತ್ತಿದ್ದಾರೆ. ಆದರೆ ಕೇಂದ್ರ ಮತ್ತು ಹೊರರಾಜ್ಯಗಳ ಜೊತೆ ವ್ಯವಹರಿಸುವಾಗ ಮಾತ್ರ ಇಂಗ್ಲಿಶ್ ಅಥವಾ ಹಿಂದಿಯನ್ನು ಬಳಸುತ್ತಿದ್ದಾರೆ. ತಮಗೆ ಈ ಎರಡೂ ಭಾಷೆಗಳ ತಿಳುವಳಿಕೆ ಇಲ್ಲದಿದ್ದರೆ ಈ ಭಾಷೆಗಳ ಜ್ಞಾನವಿರುವವರ ಸಹಾಯ ಪಡೆದು ವ್ಯವಹರಿಸುತ್ತಿದ್ದಾರೆ. ಹೀಗಾಗಿ ಕೇಂದ್ರಸರ್ಕಾರದ ಅಧೀನದಲ್ಲಿ ಬರುವ ಇಲಾಖೆಗಳು, ಸಂಸ್ಥೆಗಳು, ಉದ್ದಿಮೆಗಳಲ್ಲಿ ಕನ್ನಡವನ್ನು ಬಳಸುವುದು ಅಪರೂಪವಾಗಿತ್ತು. ಇದರಿಂದಾಗಿ ಕೇಂದ್ರಸರ್ಕಾರ ಪ್ರಾದೇಶಿಕ ಭಾಷೆಗಳಿಗೆ ಪ್ರಾಧಾನ್ಯತೆ ನೀಡುತ್ತಿಲ್ಲ, ಇದರಿಂದ ಪ್ರಾದೇಶಿಕ ಭಾಷೆಯ ಅಭಿವೃದ್ಧಿ ಹೇಗೆ ಎಂದು ತಮಿಳುನಾಡು, ಕರ್ನಾಟಕ ಸೇರಿದಂತೆ ಭಾರತದ ರಾಜ್ಯಗಳು ಆಯಾ ರಾಜ್ಯಗಳಲ್ಲಿರುವ ಕೇಂದ್ರಸರ್ಕಾರದ ಅಧೀನ ಇಲಾಖೆ, ಸಂಸ್ಥೆ, ಉದ್ದಿಮೆಗಳಲ್ಲಿ ಪ್ರಾದೇಶಿಕ ಭಾಷೆಯನ್ನು ಬಳಕೆಗೆ ತರಬೇಕು ಎಂಬ ತೀವ್ರತರವಾದ ಹೋರಾಟ ಪರಿಣಾಮವಾಗಿ ಇಂದು ಕರ್ನಾಟಕದಲ್ಲಿರುವ ರೈಲ್ವೆ, ಅಂಚೆ ಕಚೇರಿ, ಬ್ಯಾಂಕುಗಳು ಸೇರಿದಂತೆ ಕೇಂದ್ರಸರ್ಕಾರದ ಅಧೀನ ಸಂಸ್ಥೆಗಳಲ್ಲಿ ಕನ್ನಡ ಬಳಸಲು ಅವಕಾಶ ಕಲ್ಪಿಸಲಾಗಿದೆ.

ಆದರೂ ಕರ್ನಾಟಕದಲ್ಲಿರುವ ಕೇಂದ್ರಸರ್ಕಾರದ ಇಲಾಖೆಗಳಲ್ಲಿ, ಸಂಸ್ಥೆಗಳಲ್ಲಿ, ಉದ್ದಿಮೆಗಳಲ್ಲಿ ಕನ್ನಡ ಸಮರ್ಪಕವಾಗಿ ಆಡಳಿತದಲ್ಲಿ ಬಳಕೆಯಾಗುತ್ತಿಲ್ಲ. ಏಕೆಂದರೆ ಕೇಂದ್ರಸರ್ಕಾರಿ ಇಲಾಖೆಗಳು, ಸಂಸ್ಥೆಗಳು, ಉದ್ದಿಮೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರನ್ನು ಕೇಂದ್ರ ಲೋಕಸೇವಾ ಆಯೋಗ ನೇಮಕ ಮಾಡಿದೆ. ಇದರಲ್ಲಿ ಕರ್ನಾಟಕಕ್ಕೆ ಸೇರಿದವರು, ಕನ್ನಡ ಭಾಷೆಬಲ್ಲವರಿಗಿಂತ ಹೊರರಾಜ್ಯದವರು ಹೆಚ್ಚಾಗಿದ್ದಾರೆ. ಇವರಿಗೆ ಕನ್ನಡವನ್ನು ಆಡಳಿತದಲ್ಲಿ ಬಳಸುವ ಭಾಷಾಸಾಮರ್ಥ್ಯ ಇಲ್ಲ. ಇನ್ನು ರಾಜ್ಯದಿಂದ ಆಯ್ಕೆಯಾಗಿ ಕೇಂದ್ರಸರ್ಕಾರಿ ಸಂಸ್ಥೆ, ಉದ್ದಿಮೆ, ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳು ಮತ್ತು ನೌಕರರು ಹೆಚ್ಚಿನದಾಗಿ ಇಂಗ್ಲಿಶ್ ಮಾಧ್ಯಮದಲ್ಲಿ ಕಲಿತವರು. ಇವರು ಈಗಾಗಲೇ ಚರ್ಚಿಸಿದ ಹಾಗೆ ಕರ್ನಾಟಕದಲ್ಲಿರುವ ಕೇಂದ್ರಸರ್ಕಾರದ ಕಚೇರಿ, ಸಂಸ್ಥೆಗಳ ಅಧಿಕಾರಿಗಳು ಮತ್ತು ನೌಕರರು ಹೊರರಾಜ್ಯದಲ್ಲಿರುವ ತಮ್ಮದೇ ಇಲಾಖೆಯ ಅಧಿಕಾರಿಗಳು ಮತ್ತು ನೌಕರರ ಜೊತೆ ವ್ಯವಹರಿಸುವಾಗ, ತಮ್ಮ ಮುಖ್ಯಕಚೇರಿಯೊಂದಿಗೆ ವ್ಯವಹರಿಸುವಾಗ, ಪತ್ರಗಳು, ಕಡತಗಳು ಮತ್ತು ಇತರ ದಾಖಲೆಗಳನ್ನು ಕನ್ನಡದಲ್ಲಿ ವರ್ಗಾಹಿಸಲು ಸಾಧ್ಯವಿಲ್ಲ. ಏಕೆಂದರೆ ಈ ರೀತಿಯ ವ್ಯವಹಾರದಲ್ಲಿ ಕನ್ನಡ ಬಳಸಿದರೆ ಇವು ಹೊರರಾಜ್ಯದ ಅಧಿಕಾರಿಗಳಿಗೆ ಅರ್ಥವಾಗದೆ ಇಲ್ಲಿನ ಬೇಡಿಕೆ ಅಥವಾ ಸಮಸ್ಯೆಗಳಿಗೆ

ಸಕಾರಾತ್ಮಕವಾಗಿ ಸ್ಪಂದಿಸದೇ ಇರಬಹುದು. ಇಲ್ಲವೆ ಅದಕ್ಕೆ ಹೆಚ್ಚಿನ ಸಮಯಾವಕಾಶವನ್ನು ತೆಗೆದುಕೊಳ್ಳಬಹುದು. ಏಕೆಂದರೆ ಇಂತಹ ವ್ಯವಹಾರದಲ್ಲಿ ಅವರು ಸಕಾರಾತ್ಮಕವಾಗಿ ಸ್ಪಂದಿಸಲು ಕನ್ನಡ ಕಲಿಯಬೇಕು ಇಲ್ಲವೆ ಕನ್ನಡ ಬಲ್ಲವರ ಸಹಾಯವನ್ನು ಪಡೆಯಬೇಕು. ಈ ಹಿನ್ನೆಲೆಯಲ್ಲಿ ಹೊರರಾಜ್ಯದ ಮತ್ತು ಕೇಂದ್ರಸರ್ಕಾರದ ಸಂಸ್ಥೆಗಳಲ್ಲಿ ವ್ಯವಹರಿಸುವವರು ಇಂಗ್ಲಿಶ್ ಇಲ್ಲವೇ ಹಿಂದಿಯನ್ನು ತಮ್ಮ ಪತ್ರವ್ಯವಹಾರದ, ಆಡಳಿತದ ಭಾಷೆಯಾಗಿ ಬಳಸುತ್ತಿದ್ದಾರೆ. ಜನತೆಯು ಈ ಭಾಷೆಗಳನ್ನೇ ಬಳಸಬೇಕೆಂದು ಒತ್ತಾಯಿಸಿದ್ದಾರೆ. ಇದರಿಂದಾಗಿ ಈ ಸಂಸ್ಥೆಗಳು ಕರ್ನಾಟಕ ಸರ್ಕಾರ ಭಾಷಾನೀತಿಯ ಪ್ರಕಾರ ರಾಜ್ಯದೊಳಗಿನ ಆಡಳಿತದಲ್ಲಿ ಕನ್ನಡವನ್ನು ಬಳಸಿದರೆ ಹೊರರಾಜ್ಯಗಳ ಜೊತೆ ವ್ಯವಹರಿಸುವಾಗ ಇಂಗ್ಲಿಶ್ ಅಥವಾ ಹಿಂದಿಯನ್ನು ಬಳಸಬೇಕಿದೆ.

ಹೀಗೆ ರಾಜ್ಯದೊಳಗಿನ ಆಡಳಿತದಲ್ಲಿ ಒಂದು ಭಾಷೆ, ಹೊರರಾಜ್ಯ ಮತ್ತು ಕೇಂದ್ರದ ಜೊತೆ ವ್ಯವಹರಿಸುವಾಗ ಮತ್ತೊಂದು ಭಾಷೆಯನ್ನು ಬಳಸಬೇಕಿದೆ. ಹೀಗೆ ರಾಜ್ಯದೊಳಗೆ ಮತ್ತು ರಾಜ್ಯದ ಹೊರಗಿನ ವ್ಯವಹಾರಕ್ಕೆ ಪ್ರತ್ಯೇಕ ಭಾಷೆಯನ್ನು ಆಡಳಿತದಲ್ಲಿ ಬಳಸುವಾಗ ರಾಜ್ಯದಲ್ಲಿ ನಡೆದ ವ್ಯವಹಾರ ಪತ್ರ, ದಾಖಲೆ ಕಡತಗಳನ್ನು ಹೊರರಾಜ್ಯ ಮತ್ತು ಕೇಂದ್ರಸರ್ಕಾರಕ್ಕೆ ಸಲ್ಲಿಸುವಾಗ ಅವುಗಳನ್ನು ಅಲ್ಲಿಯ ಭಾಷೆ ಅಥವಾ ಭಾಷೆಗಳಿಗೆ ಅನುವಾದಿಸಿ ಸಲ್ಲಿಸಬೇಕಾಗುತ್ತದೆ. ಇದರಿಂದಾಗಿ ಆಡಳಿತಗಾರರು ಮತ್ತು ನೌಕರರಿಗೆ ಕೆಲಸ ಹೆಚ್ಚು ಶ್ರಮದಾಯಕವಾಗಿ ಪರಿಣಮಿಸಿದೆ. ಇದರಿಂದ ಪಾರಾಗಲು ಕರ್ನಾಟಕದಲ್ಲಿನ ಅಧಿಕಾರಿಗಳು ಇಂಗ್ಲಿಶ್‌ನ್ನು ಕರ್ನಾಟಕದ ಆಡಳಿತದಲ್ಲಿ ಆಡಳಿತ ಭಾಷೆಯಾಗಿ ಬಳಸುತ್ತಿದ್ದಾರೆ. ಹೀಗೆ ಕರ್ನಾಟಕದ ಆಡಳಿತದಲ್ಲಿ ಕನ್ನಡ, ಇಂಗ್ಲಿಶ್ ಮತ್ತು ಹಿಂದಿಗಳ ಬಳಕೆ ಸಮಸ್ಯೆಯಾಗಿ ಪರಿಣಮಿಸಿದೆ. ಇಂತಹ ಸಮಸ್ಯೆಗಳ ನಡುವೆಯೇ ಕರ್ನಾಟಕದಲ್ಲಿರುವ ಎಲ್ಲಾ ಸರ್ಕಾರಿ ಕಚೇರಿಗಳಲ್ಲಿ ಅಂದರೆ ರಾಜ್ಯ ಮತ್ತು ಕೇಂದ್ರಸರ್ಕಾರದ ಹಿಡಿತದಲ್ಲಿರುವ ಕಚೇರಿಯ ವ್ಯವಹಾರಗಳು ಕನ್ನಡದಲ್ಲಿ ಇರಬೇಕು. ಈ ಸಂಸ್ಥೆ, ಇಲಾಖೆಗಳ ಕಚೇರಿಗಳು ಕೇಂದ್ರ ಅಥವಾ ಹೊರರಾಜ್ಯಗಳ ವ್ಯವಹಾರದಲ್ಲಿ ಅಗತ್ಯವಾದರೆ ಇಂಗ್ಲಿಶ್ ಮತ್ತು ಹಿಂದಿಗಳನ್ನು ಬಳಸಬಹುದು. ಆದರೆ ರಾಜ್ಯದೊಳಗಿನ ವ್ಯವಹಾರದಲ್ಲಿ ಎಲ್ಲಾ ಇಲಾಖೆಗಳೊಂದಿಗೆ ಮತ್ತು ಜನರೊಂದಿಗೆ ಕನ್ನಡದಲ್ಲಿಯೇ ವ್ಯವಹರಿಸಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತರಲಾಗಿದೆ. ಆದರೆ ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಮಾತ್ರ ಆಡಳಿತ ಭಾಷೆಯಾಗಿ ಬಳಸಿ ಎಲ್ಲಾ ದಾಖಲೆ ಪತ್ರಗಳು, ಕಡತಗಳು ಕನ್ನಡದಲ್ಲಿರುವಂತೆ ಮಾಡಿದರೆ ಕರ್ನಾಟಕದಲ್ಲಿನ ಜನರು ವಿವಿಧ ಕಾರಣಗಳಿಂದ ಹೊರರಾಜ್ಯಗಳಿಗೆ ವಲಸೆ ಹೋಗುತ್ತಾರೆ, ಹಾಗೆಯೇ ಇಲ್ಲಿನ ವ್ಯವಹಾರಗಳ ಬಗೆಗೆ ಹೊರರಾಜ್ಯ ಮತ್ತು ಕೇಂದ್ರಸರ್ಕಾರಕ್ಕೆ ದಾಖಲೆಗಳನ್ನು, ಮಾಹಿತಿಯನ್ನು ಒದಗಿಸುವಾಗ, ಕನ್ನಡದಲ್ಲಿ ಸಲ್ಲಿಸಿದರೆ ಆ ದಾಖಲೆಗಳು ಪತ್ರಗಳು ಅಲ್ಲಿನ ಜನತೆಗೆ ಅರ್ಥವಾಗದೆ ವ್ಯವಹಾರಗಳು ಸುಲಭವಾಗಿ ನಡೆಯುವುದಿಲ್ಲ.

ಇದರಿಂದಾಗಿ ರಾಜ್ಯದಲ್ಲಿನ ಗುರುತಿನ ಚೀಟಿ, ದಾಖಲೆಪತ್ರಗಳು, ವ್ಯವಹಾರ ಪತ್ರಗಳನ್ನು ಕನ್ನಡ ಮತ್ತು ಇಂಗ್ಲಿಶ್ ಎರಡೂ ಭಾಷೆಯಲ್ಲಿರುವಂತೆ ನಿರೀಕ್ಷಿಸಲಾಗುತ್ತಿದೆ. ಅದರಲ್ಲೂ ಹೊರರಾಜ್ಯ ಮತ್ತು ಕೇಂದ್ರ ಸರ್ಕಾರಕ್ಕೆ ಮಾಹಿತಿಯನ್ನು ಸಲ್ಲಿಸುವಾಗ ಇಂಗ್ಲಿಶ್‌ನ್ನು ಕಡ್ಡಾಯವಾಗಿ ನಿರೀಕ್ಷಿಸಲಾಗುತ್ತದೆ.

ಏಕೆಂದರೆ ತಮ್ಮ ದಾಖಲೆ ಪತ್ರಗಳು ಕನ್ನಡದಲ್ಲಿ ಮಾತ್ರ ಇದ್ದರೆ ಇವು ಹೊರರಾಜ್ಯ ಮತ್ತು ದೇಶದವರಿಗೆ ಅರ್ಥವಾಗದೆ ಅಲ್ಲಿನ ಅಧಿಕಾರಿಗಳು, ನೌಕರರು, ಜನರು ಭಾಷಾಸಮಸ್ಯೆಗೆ ಒಳಗಾಗುತ್ತಾರೆ. ಈ ಸಮಸ್ಯೆಯ ಕಾರಣದಿಂದಾಗಿ ಅಲ್ಲಿನ ಜನರು ತಮ್ಮ ಅಗತ್ಯ ಅಥವಾ ಬೇಡಿಕೆಗೆ ಸ್ಪಂದಿಸದಿದ್ದರೆ ತಾವು ಸಮಸ್ಯೆಗೆ ಸಿಲುಕಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಗುರುತಿನ ಚೀಟಿ, ದಾಖಲೆಪತ್ರ ಇತ್ಯಾದಿಗಳು ಕನ್ನಡದ ಜೊತೆಗೆ ಇಂಗ್ಲಿಶ್ ಇಲ್ಲವೆ ಹಿಂದಿಯಲ್ಲಿದ್ದರೆ ಕರ್ನಾಟಕದ ಹೊರಗೆ ಹೋದಾಗ ಇಂತಹ ಸಮಸ್ಯೆಗಳು ಇರುವುದಿಲ್ಲ ಎಂಬ ಕಾರಣಕ್ಕಾಗಿ ಸರ್ಕಾರಿ ಕಚೇರಿಗಳಲ್ಲಿ ಅಧಿಕೃತ ದಾಖಲೆಪತ್ರಗಳನ್ನು ಕನ್ನಡ ಮತ್ತು ಇಂಗ್ಲಿಶ್ ಎರಡೂ ಭಾಷೆಗಳಲ್ಲಿ ನಿರೀಕ್ಷಿಸಲಾಗುತ್ತಿದೆ. ಇನ್ನು ರಾಜ್ಯದೊಳಗಿನ ವ್ಯವಹಾರದಲ್ಲಿ ಉನ್ನತ ಹುದ್ದೆಯಲ್ಲಿರುವ ಕನ್ನಡದ ಸರಿಯಾದ ತಿಳುವಳಿಕೆಯಿಲ್ಲದ ಅಧಿಕಾರಿಗಳು ತಮ್ಮ ವ್ಯವಹಾರವನ್ನು ಇಂಗ್ಲಿಶ್‌ನಲ್ಲಿಯೇ ಮುಂದುವರೆಸಿದ್ದಾರೆ. ಇವರಿಗೆ ರಾಜ್ಯಸರ್ಕಾರದ ಭಾಷಾನೀತಿಯ ಪ್ರಕಾರ ಕನ್ನಡದಲ್ಲಿ ಪತ್ರಗಳು, ಇತರ ದಾಖಲೆಗಳು ಕನ್ನಡದಲ್ಲಿ ರವಾನೆಯಾದಾಗ ಅವುಗಳನ್ನು ಅರ್ಥೈಸುವುದು, ಅವುಗಳಿಗೆ ಕನ್ನಡದಲ್ಲಿ ಉತ್ತರಿಸುವುದು ಕಷ್ಟವಾಗಿದೆ.

ಹಾಗೆಯೇ ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿ ಯಾವುದೇ ವಿಷಯಕ್ಕೆ ಸಂಬಂಧಿಸಿದ ಹಾಗೆ ಮಾಹಿತಿ ಸಂಗ್ರಹಿಸುವಾಗ, ಅವುಗಳನ್ನು ಪರಿಶೀಲನೆ ಮಾಡುವಾಗ ಆ ದಾಖಲೆಪತ್ರಗಳು ಕನ್ನಡದಲ್ಲಿದ್ದರೆ ಅವುಗಳನ್ನು ಸರಿಯಾಗಿ ಅರ್ಥೈಸಲು ಸಾಧ್ಯವಾಗದೆ ಬೇರೆಯವರ ನೆರವನ್ನು ಪಡೆಯಬೇಕಾದ ಅನಿವಾರ್ಯತೆಗೆ ಸಿಲುಕಿದ್ದಾರೆ. ಇದರಿಂದಾಗಿ ಈ ಅಧಿಕಾರಿಗಳು ಏಕಕಾಲದಲ್ಲಿ ಹಲವು ಭಾಷೆಗಳನ್ನು ಆಡಳಿತ ಭಾಷೆಯಾಗಿ ಬಳಸಬೇಕಾದ ಅನಿವಾರ್ಯತೆಗೆ ಸಿಲುಕಿದ್ದಾರೆ. ಇದು ಅಧಿಕಾರಿಗಳು ಮತ್ತು ನೌಕರರಿಗೆ ಮಾನಸಿಕ ಒತ್ತಡ ಉಂಟುಮಾಡುತ್ತದೆ, ಇದರಿಂದ ಆಡಳಿತದಲ್ಲೂ ವ್ಯತ್ಯಾಸಗಳು ಉಂಟಾಗುವ ಸಾಧ್ಯತೆ ಇದೆ ಎಂಬ ಕಾರಣಕ್ಕಾಗಿ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್ ಭಾಷಾಬಳಕೆಯನ್ನು ಮುಂದುರೆಸಲಾಗುತ್ತಿದೆ. ಇಂತಹ ಕಾರಣಗಳಿಂದಾಗಿ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್‌ನ್ನು ಬಳಸುತ್ತಿರುವುದರಿಂದ ಕರ್ನಾಟಕದಲ್ಲಿ ಅವಿದ್ಯಾವಂತರು ಮಾತ್ರವಲ್ಲ ವಿದ್ಯಾವಂತರು ಭಾಷಾಸಮಸ್ಯೆಗೆ ಒಳಗಾಗಿದ್ದಾರೆ. ಏಕೆಂದರೆ ಕರ್ನಾಟಕದಲ್ಲಿರುವ ವಿದ್ಯಾವಂತ ಸಮೂಹದಲ್ಲಿಯೇ ಬಹುಸಂಖ್ಯೆಯ ಜನರಿಗೆ ಇಂಗ್ಲಿಶ್ ಭಾಷೆಯ ಸಂಪೂರ್ಣ ಅರಿವು ಇಲ್ಲ. ಅದನ್ನು ಬಳಕೆ ಮಾಡುವ ಸಾಮರ್ಥ್ಯವೂ ಇಲ್ಲ. ಇವರಲ್ಲಿ ಇಂಗ್ಲಿಶ್ ಭಾಷೆಯಲ್ಲಿರುವ ನಾಮಫಲಕಗಳು, ವಿಳಾಸ ಇತ್ಯಾದಿಗಳನ್ನು ಓದಿ ಅರ್ಥೈಸಬಲ್ಲರೇ ಹೊರತು ಇಂಗ್ಲಿಶ್‌ನಲ್ಲಿರುವ ಪತ್ರ, ದಾಖಲೆ, ಕಡತಗಳನ್ನು ಓದಿ ಅವುಗಳಿಗೆ ಸ್ವತಂತ್ರವಾಗಿ ಇಂಗ್ಲಿಶ್‌ನಲ್ಲಿಯೇ ಉತ್ತರಿಸುವ ಭಾಷಾಶಕ್ತಿ ಇಲ್ಲ. ಇದರಿಂದಾಗಿ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್ ಆಡಳಿತ ಭಾಷೆಯಾಗಿ ಬಳಕೆಯಾಗಿರುವಾಗ ಸಾಮಾನ್ಯ ಜನರು ಮಾತ್ರವಲ್ಲ, ಅಧಿಕಾರಿಗಳು, ನೌಕರರು ಮತ್ತು ಕಾರ್ಮಿಕರು ಭಾಷಾಸಮಸ್ಯೆಗೆ ಒಳಗಾಗಿದ್ದಾರೆ.

ಇಂಗ್ಲಿಶ್‌ನಲ್ಲಿ ಮುದ್ರಣವಾಗಿರುವ ಜಾಹಿರಾತು, ಮಾಹಿತಿಪತ್ರ, ವ್ಯವಹಾರಪತ್ರ, ದಾಖಲೆ, ಕಡತ ಇತ್ಯಾದಿಗಳಲ್ಲಿ ಏನಿದೆ ಎಂಬುದನ್ನು ಸ್ವತಂತ್ರವಾಗಿ ಅರ್ಥೈಸಲು ಸಾಧ್ಯವಾಗದೆ ವಿದ್ಯಾವಂತರೂ

ಅಜ್ಞಾನಕ್ಕೆ ಒಳಗಾಗಿದ್ದಾರೆ. ಇಂತಹ ಸಂದರ್ಭಗಳಲ್ಲಿ ಜನರು. ಅವುಗಳ ಬಗೆಗೆ ಅಂತಹ ಆಸಕ್ತಿ ವಹಿಸಿಲ್ಲ. ಆದರೆ ಮಾಹಿತಿ. ಓದು. ಅರ್ಥೈಸುವಿಕೆ. ಅವುಗಳಿಗೆ ನೆರವನ್ನು ಪಡೆದುಕೊಳ್ಳುವುದು ಮತ್ತು ಅವುಗಳಲ್ಲಿ ಮಾಹಿತಿಗಳನ್ನು, ಪತ್ರಗಳನ್ನು ಸಲ್ಲಿಸುವುದು ಅನಿವಾರ್ಯವಾದ ಪರಿಸ್ಥಿತಿ ನಿರ್ಮಾಣ ಆಗಿರುವಾಗ ಇಂಗ್ಲಿಶ್ ಬಲ್ಲವರ ಸಹಾಯದೊಂದಿಗೆ ಅರ್ಥ ತಿಳಿದು ಅವುಗಳ ಲಾಭ ಪಡೆಯಬೇಕಿದೆ. ಹಾಗೆಯೇ ಅವುಗಳಿಗೇನಾದರೂ ಉತ್ತರಿಸಬೇಕಾದರೆ, ಮಾಹಿತಿಗಳನ್ನು ಸಲ್ಲಿಸಬೇಕಾದರೆ ಅವರ ಸಹಾಯದೊಂದಿಗೆ ಸಲ್ಲಿಸಬೇಕಾಗಿದೆ. ಹೀಗೆ ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಬಳಸುವುದಕ್ಕೆ ಸಂಬಂಧಿಸಿದ ಹಾಗೆ ಇಲ್ಲಿನ ಸರ್ಕಾರಗಳು ಭಾಷಾನೀತಿಯನ್ನು ಜಾರಿಗೆ ತಂದಿದ್ದರೂ ಅವು ಅನುಷ್ಠಾನಗೊಳ್ಳದೆ ಇರುವುದರ ಪರಿಣಾಮವಾಗಿ ಕನ್ನಡಿಗರ ಭಾಷಾಸಮಸ್ಯೆಗಳು ಕರ್ನಾಟಕ ಏಕೀಕರಣದ ನಂತರದಲ್ಲಿಯೂ ಮುಂದುವರೆಯುತ್ತಿವೆ. ಇದರಿಂದಾಗಿ ಕರ್ನಾಟಕ ಸರ್ಕಾರ ೧೯೬೩ರಲ್ಲಿಯೇ ಕರ್ನಾಟಕ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತಂದು ಅನಂತರದಲ್ಲಿ ಈ ಹಿಂದೆ ಉಲ್ಲೇಖಿಸಿರುವ ಹಾಗೆ ಕಾಲಕಾಲಕ್ಕೆ ಬದಲಾದಂತೆ ಕನ್ನಡ ಭಾಷಾಬಳಕೆಗೆ ಸಂಬಂಧಿಸಿದಂತೆ ಭಾಷಾನೀತಿಗಳನ್ನು ಜಾರಿಗೆ ತಂದಿದ್ದರೂ ಇಲ್ಲಿನ ಅಧಿಕಾರಿಗಳು ಮತ್ತು ನೌಕರರು ಕನ್ನಡ ಆಡಳಿತ ಭಾಷೆಯಾಗಿ ಬಳಸುತ್ತಿಲ್ಲ. ಇಂತಹ ನೌಕರರನ್ನು ಗುರುತಿಸಿ ಅವರ ವಿರುದ್ಧ ಕ್ರಮಕೈಗೊಳ್ಳುವಂತೆ ಭಾಷಾನೀತಿಯನ್ನು ಜಾರಿಗೆ ತರಬೇಕು ಎಂಬ ಒತ್ತಾಯಗಳು ಆರಂಭಗೊಂಡಿವೆ. ಇಂತಹ ಸಂದರ್ಭದಲ್ಲಿ ಕರ್ನಾಟಕ ಸರ್ಕಾರ ಸಂಖ್ಯೆ: ಸಂಕಇ ೩೯ ಕೆಒಎಲ್ ೨೦೦೨ ದಿನಾಂಕ: ೧೩.೦೬.೨೦೦೨ರಂದು ಒಂದು ಸುತ್ತೋಲೆ ಹೊರಡಿಸಿ ಅದರಲ್ಲಿ ಆಡಳಿತದಲ್ಲಿ ಕನ್ನಡವನ್ನು ಬಳಕೆ ಮಾಡದೇ ಇರುವ ಅಧಿಕಾರಿಗಳು ಮತ್ತು ನೌಕರರ ಮೇಲೆ ಈ ಕೆಳಕಂಡ ದಂಡನೆಗಳ ಪೈಕಿ ದಂಡನೆಯೊಂದನ್ನು ವಿಧಿಸಬಹುದು:–

೧. ವಾಗ್ದಂಡನೆ; ಅಥವಾ

೨. ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವುದು; ಅಥವಾ

೩. ಪದೋನ್ನತಿಯನ್ನು ತಡೆಹಿಡಿಯುವುದು; ಅಥವಾ

೪. ಕಾಲವೇತನ ಶ್ರೇಣಿಯಲ್ಲಿ ಕೆಳಗಿನ ಹಂತಕ್ಕೆ ಇಳಿಸುವುದು

ಎಂದು ಹೇಳಿ ಆಡಳಿತದಲ್ಲಿ ಕನ್ನಡ ಬಳಸದೇ ಇರುವ ನೌಕರರನ್ನು ಗುರುತಿಸಿ ಅವರ ಮೇಲೆ ಶಿಸ್ತು ಕ್ರಮ ಜರುಗಿಸುವಂತೆ ನೇಮಕಾತಿ ಪ್ರಾಧಿಕಾರಗಳಿಗೆ ಸೂಚಿಸುವ ಜವಾಬ್ದಾರಿಯನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ನೀಡಲಾಗಿದೆ. ಆದರೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದಲ್ಲಿ ರಾಜ್ಯದಲ್ಲಿರುವ ಎಲ್ಲಾ ಇಲಾಖೆಗಳ ನೌಕರರು ಕನ್ನಡ ಭಾಷೆಯನ್ನು ಬಳಸುತ್ತಾರೆಯೇ? ಇಲ್ಲವೇ? ಎಂದು ಪರೀಕ್ಷಿಸಿ ಕನ್ನಡ ಬಳಸದೇ ಇರುವ ನೌಕರರನ್ನು ಗುರುತಿಸಿ ನೇಮಕಾತಿ ಪ್ರಾಧಿಕಾರಗಳಿಗೆ ಸೂಚಿಸಲು ಬೇಕಾದಷ್ಟು ಸಿಬ್ಬಂದಿ ಇಲ್ಲ. ಇದರಿಂದಾಗಿ ಪ್ರಾಧಿಕಾರವು ಸರ್ಕಾರದ ಎಲ್ಲಾ ಇಲಾಖೆಗಳಿಗೆ ಭೇಟಿಕೊಟ್ಟು ಕನ್ನಡ ಬಳಸದೇ ಇರುವ ನೌಕರರನ್ನು ಗುರುತಿಸಿ ಅವರ ವಿರುದ್ಧ ಕ್ರಮಕೈಗೊಳ್ಳುವಂತೆ ನೇಮಕಾತಿ ಪ್ರಾಧಿಕಾರಿಗಳಿಗೆ ಸೂಚಿಸಿಲ್ಲ.

ಈ ಎಲ್ಲವನ್ನು ಸೂಕ್ಷ್ಮವಾಗಿ ಗಮನಿಸಿರುವ ಮಹದೇವ ಬಣಕಾರರು "ಆಡಳಿತಾಂಗದಲ್ಲಿ ಜನರ ಭಾಷೆ ಪರಿಕ್ರಮಿಸಬೇಕಾದರೆ ಅದೇ ಭಾಷೆ ಪ್ರಥಮತಃ ಶಿಕ್ಷಣ ಮಾಧ್ಯಮವಾಗಲೇಬೇಕು. ಸರ್ಕಾರಿ ಸೇವೆಗಳಲ್ಲಿ ಸೇರಬಯಸುವವರಿಗೆ ಆ ಪ್ರದೇಶದ ಭಾಷೆಯ ಕಡ್ಡಾಯ ಪರಿಚಯವಿರಬೇಕು. ನೇಮಕಾತಿ ಪರೀಕ್ಷೆಗಳು, ಸಂದರ್ಶನಗಳು ಪ್ರಾದೇಶಿಕ ಭಾಷೆಯಲ್ಲಿ ನಡೆಯಬೇಕು. ನೇಮಕಾತಿಯ ಸಮಯದಲ್ಲಿ ಪ್ರಾದೇಶಿಕ ಭಾಷೆಯ ಪ್ರಾವೀಣ್ಯತೆ ಅವಶ್ಯವೆಂಬ ನಿಯಮವಿದ್ದರೆ ಆಡಳಿತ ಭಾಷಾಸಮಸ್ಯೆಯೇ ಇರುವುದಿಲ್ಲ[೧೪]" ಎಂದಿದ್ದಾರೆ. ಕನ್ನಡ ಕಾವಲು ಸಮಿತಿಯ ಅಧ್ಯಕ್ಷರಾಗಿದ್ದ ಪಾಟೀಲ ಪುಟ್ಟಪ್ಪನವರು ಅಂದಿನ ಮುಖ್ಯಮಂತ್ರಿಯಾಗಿದ್ದ ಶ್ರೀ ರಾಮಕೃಷ್ಣ ಹೆಗಡೆಯವರಿಗೆ ದಿನಾಂಕ ಜನವರಿ.೦೭.೧೯೮೭ ಒಂದು ಪತ್ರ ಬರೆಯುತ್ತ "ಆಡಳಿತದಲ್ಲಿ ೧೦೦ಕ್ಕೆ ೧೦೦ರಷ್ಟು ಕನ್ನಡವು ಜಾರಿಗೆ ಬರಬೇಕೆಂದು ಒಂದು ಕಡೆ ಆದೇಶ ಹೊರಡಿಸಿ ಇನ್ನೊಂದು ಕಡೆ ಕನ್ನಡ ಬರದೇ ಇರುವ ಜನರು ಸರ್ಕಾರಿ ನೌಕರಿಗಳಲ್ಲಿ ಬರುವಂತೆ ಬಾಗಿಲನ್ನು ತೆರೆದಿರುವುದು ಸರ್ವಥಾ ಸರಿಯಿಲ್ಲ. ಲೋಕಸೇವಾ ಆಯೋಗವು ಪ್ರಥಮದರ್ಜೆ ಸಹಾಯಕರ ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಸಾಮಾನ್ಯ ಇಂಗ್ಲೀಷ್ ಅಥವ ಸಾಮಾನ್ಯ ಕನ್ನಡ ಎಂದು ಇದೆ. ಈ ಅಥವ ಎನ್ನುವುದು ಭಾರೀ ಗಂಡಾಂತರಕಾರಿಯಾಗಿದೆ. ಸಾಮಾನ್ಯ ಕನ್ನಡ ಎನ್ನುವುದನ್ನು ಇರಿಸಿದರೆ ಮಾತ್ರ ಸರಿಹೋಗುತ್ತದೆ[೧೫]" ಎಂದಿದ್ದಾರೆ.

ಹೀಗಾಗಿ 'ಕರ್ನಾಟಕದಲ್ಲಿ ಕನ್ನಡ ಭಾಷೆಯನ್ನು ಆಡಳಿತ ಭಾಷೆಯಾಗಿ, ಶಿಕ್ಷಣ ಮಾಧ್ಯಮವಾಗಿ, ನ್ಯಾಯಾಲಯಗಳ ಭಾಷೆಯಾಗಿ ಕನ್ನಡವನ್ನು ಜಾರಿಗೆ ತರಲು ಅಧಿಕಾರಶಾಹಿಯಲ್ಲಿ ಇಚ್ಛಾಶಕ್ತಿಯಿಲ್ಲದ ಕಾರಣ ಸಾಧ್ಯವಾಗಿಲ್ಲ ಎನ್ನಲಾಗುತ್ತಿದೆ. ಸರ್ಕಾರಕ್ಕೆ 'ಕನ್ನಡಪರ ಕಾಳಜಿ'ಯಿದ್ದರು ಕನ್ನಡವನ್ನು ಜಾರಿಗೆ ತರಲು ಅಧಿಕಾರಶಾಹಿಯೇ ದೊಡ್ಡ ಅಡ್ಡಿ ಎಂಬಂತೆ ಚಿತ್ರಿಸಲಾಗುತ್ತಿದೆ. ಅನೇಕ ಕನ್ನಡಪರ ಚಿಂತಕರು, ಹೋರಾಟಗಾರರು ಇದನ್ನು ನಂಬಿದ್ದಾರೆ. ಇಂತಹ ನಂಬಿಕೆಗಳಿಂದಲೇ ಸದಾ ಗೊಣಗಾಡುತ್ತಿದ್ದಾರೆ. ವಾಸ್ತವ ಸಂಗತಿಯನ್ನು ಅರಿಯದೆ ಹೀಗೆ ಗೊಣಗಾಡುತ್ತಲೇ ಕರ್ನಾಟಕ ರಾಜ್ಯ ಬಂದಾದ ನಂತರ ೫೩ ವರ್ಷಗಳನ್ನು ಪೂರೈಸಿದೆ. ಕನ್ನಡದ ಜಾರಿ ಮೂಲೆಗುಂಪಾಗಿದೆ. ಆದರೆ ಅಧಿಕಾರಶಾಹಿ ಮಾತ್ರವೇ ಕನ್ನಡ ವಿರೋಧಿಯೇ? ಇದು ಪೂರ್ಣ ಸತ್ಯವಲ್ಲ. ಅಧಿಕಾರಶಾಹಿಯನ್ನು ಆರೋಪಿ ಸ್ಥಾನದಲ್ಲಿ ನಿಲ್ಲಿಸಿ ನಿಜವಾದ ಕನ್ನಡ ವಿರೋಧಿ ಶಕ್ತಿಗಳನ್ನು ಮುಚ್ಚಿಡುವ ಪ್ರಯತ್ನವನ್ನು ಮಾಡಲಾಗುತ್ತಿದೆ, ಅಥವ ಸಮಸ್ಯೆಯ ಆಳವನ್ನು ಅರ್ಥಮಾಡಿಕೊಳ್ಳಲು ಮುಂದಾಗಿಲ್ಲ. ಸರಳವಾದ ಚಿಂತನೆಗಳ ನೆರಳಿನಲ್ಲಿ ಸಾಗಿಬರಲಾಗುತ್ತಿದೆ. ಕನ್ನಡವನ್ನು ಜಾರಿಗೆ ತರದಿರಲು ಅಡ್ಡಿಯಾಗಿರುವ ಶಕ್ತಿಗಳಲ್ಲಿ ಅಥವಾ ತಡೆಗಳಲ್ಲಿ ಅಧಿಕಾರಶಾಹಿ ಒಂದು ಸಣ್ಣ ಶಕ್ತಿ ಅಷ್ಟೇ. ನಿಜದ ಹಲವು ಶಕ್ತಿಗಳು ಕ್ರಿಯಾಶೀಲವಾಗಿವೆ[೧೬]" ಎಂದು ರಂಗನಾಥ ಕಂಟನಕುಂಟೆಯವರು ಸರಿಯಾಗಿಯೇ ಗುರುತಿಸಿದ್ದಾರೆ.

ಇವುಗಳನ್ನು ನಿಯಂತ್ರಿಸದ ಹೊರತು ಕರ್ನಾಟಕದ ಆಡಳಿತದಲ್ಲಿ ಸಮರ್ಪಕವಾಗಿ ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಕೆಗೆ ತರುವುದು, ಜನರ ಭಾಷೆಯಲ್ಲಿ ಆಡಳಿತ ನಡೆಸುವುದು ಅಸಾಧ್ಯದ

ಕೆಲಸ. ಹೀಗಿದ್ದೂ ಕರ್ನಾಟಕದಲ್ಲಿ ಇದುವರೆಗೆ ಆಡಳಿತ ನಡೆಸಿರುವ ಸರ್ಕಾರಗಳು ಮತ್ತು ಸರ್ಕಾರಗಳಿಗೆ ಸಲಹೆ ಮಾರ್ಗದರ್ಶನ ನೀಡಿರುವ ಚಿಂತಕರು, ಸಮಿತಿಗಳು ಹಾಗೂ ತಮ್ಮ ಭಾಷಾಪರವಾಗಿ ಹೋರಾಟ ಮಾಡಿರುವ ಹೋರಾಟಗಾರರು ಇಂತಹ ವಿಷಯಗಳ ಬಗೆಗೆ ಸೂಕ್ಷ್ಮವಾಗಿ ಗಮನಿಸಿಲ್ಲ. ಇಲ್ಲೇನಿದ್ದರು ಭಾಷೆಯನ್ನು ಅಭಿಮಾನದ ನೆಲೆಯಲ್ಲಿ ಮಾತ್ರ ನೋಡಲಾಗಿದೆ. ಆದರೆ ಭಾಷಾನೀತಿಯನ್ನು ಜಾರಿಗೆ ತರುವಾಗ, ಅವುಗಳನ್ನು ಅನುಷ್ಠಾನಗೊಳಿಸುವಾಗ ಇದುವರೆಗೆ ಚರ್ಚಿಸಿದ ಹಾಗೆ ವೈರುಧ್ಯಗಳು ಇವೆ. ಇವುಗಳನ್ನು ಕಂಡುಕೊಂಡು ಪರಿಹರಿಸದೆ ಭಾಷಾಸಮಸ್ಯೆಗೆ ಪರಿಹಾರ ಹುಡುಕುವುದು ಸೂಕ್ತವಾದ ಕ್ರಮವಲ್ಲ. ಇಂತಹ ಕ್ರಮಗಳನ್ನು ಅನುಸರಿಸದೆ ಭಾಷಾನೀತಿಯನ್ನು ತಂದು ಸರ್ಕಾರದ ಭಾಷಾನೀತಿಯ ಪ್ರಕಾರ ಆಡಳಿತದಲ್ಲಿ ಬಳಸಬೇಕು ಎಂದು ಹೇಳಿದರೆ ಭಾಷಾಸಮಸ್ಯೆಗಳು ಬಗೆಹರಿಯುವುದಿಲ್ಲ. ಬದಲಾಗಿ ಹೊಸ ಸಮಸ್ಯೆಗಳನ್ನು ಹುಟ್ಟುಹಾಕುತ್ತವೆ.

ಕರ್ನಾಟಕದಲ್ಲಿ ಆಗಿರುವ ಸಮಸ್ಯೆ ಇದೇ ಆಗಿದೆ. ಏಕೆಂದರೆ ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯ. ಇಲ್ಲಿನ ಆಡಳಿತದಲ್ಲಿ ಕನ್ನಡವೇ ಪ್ರಧಾನವಾಗಿ ಬಳಕೆಯಾಗಬೇಕು. ಅನಂತರದ ಸ್ಥಾನವೇನಿದ್ದರೂ ಇತರ ಭಾಷೆಗಳದ್ದು ಎಂಬ ಅಭಿಪ್ರಾಯದಲ್ಲಿ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರು ಹೋರಾಟ ಮಾಡಿ ಸರ್ಕಾರಗಳ ಮೇಲೆ ಒತ್ತಡ ಉಂಟುಮಾಡಿದ್ದಾರೆ. ಈ ಒತ್ತಡಗಳು ಇಲ್ಲಿನ ಬಹುಸಂಖ್ಯಾತರ ಭಾಷಾಅನುಕೂಲ, ಸಮುದಾಯದ ಹಿತದ ಹಿನ್ನೆಲೆಯಲ್ಲಿ ಉತ್ತಮವಾದವು. ಆದರೆ ಸರ್ಕಾರಗಳ ಆಡಳಿತ, ಆ ಪ್ರದೇಶದ ಇತರ ಭಾಷಿಕ ಸಮುದಾಯಗಳಿಗೆ ಸಮಸ್ಯೆಗಳಾಗಿ ಪರಿಣಮಿಸಿ ಇವು ಭಾಷಾನೀತಿಗಳ ಅನುಷ್ಠಾನಕ್ಕೆ ಇದುವರೆಗೆ ಚರ್ಚಿಸಿದ ಹಾಗೆ ತಡೆಗಳಾಗಿವೆ. ಅದರಲ್ಲೂ ಭಾರತದಂತಹ ಸಂಯುಕ್ತ ರಾಷ್ಟ್ರದಲ್ಲಿ ರಾಜ್ಯವಾಗಿರುವ ಕರ್ನಾಟಕದ ಬಹುಭಾಷಿಕ ಪ್ರದೇಶದಲ್ಲಿ ಭಾಷಾನೀತಿಗಳನ್ನು ಜಾರಿಗೆ ತರುವಂತೆ ಸರ್ಕಾರಗಳ ಮೇಲೆ ಒತ್ತಡ ಹೇರುವುದು, ಒತ್ತಡಗಳಿಗೆ ಒಳಗಾಗಿ ಸರ್ಕಾರಗಳು ಭಾಷಾನೀತಿಯನ್ನು ಜಾರಿಗೆ ತಂದು ಅವುಗಳನ್ನು ಬಳಸುವಂತೆ ಹೇಳುವುದು ಹಲವು ಸಮಸ್ಯೆಗಳ ಹುಟ್ಟಿಗೆ ಕಾರಣವಾಗುತ್ತದೆ. ಆದರೂ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರ ಒತ್ತಡಕ್ಕೆ ಮಣಿದು ಕನ್ನಡಪರ ಭಾಷಾನೀತಿಗಳನ್ನು ಜಾರಿಗೆ ತಂದು ಅವುಗಳ ಅನುಷ್ಠಾನಕ್ಕೆ ಅಗತ್ಯ ಪರಿಕರಗಳನ್ನು ತಕ್ಷಣದಿಂದಲೇ ಒದಗಿಸದೆ ಸಮಸ್ಯೆಗಳನ್ನು ಸೃಷ್ಟಿಸಿವೆ. ಹೀಗಾಗಿ ಕರ್ನಾಟಕ ಏಕೀಕರಣಗೊಂಡ ನಂತರ ಇಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಬಹುಸಂಖ್ಯಾತರ ಬೇಡಿಕೆಗೆ ಅನುಗುಣವಾಗಿ ಭಾಷಾನೀತಿಗಳನ್ನು ಜಾರಿಗೆ ತಂದಿದ್ದರು ಅವು ಕನ್ನಡಿಗರ ಭಾಷಾಸಮಸ್ಯೆಯನ್ನು ಬಗೆಹರಿಸದೆ ಆಡಳಿತದಲ್ಲಿ ಭಾಷಿಕ ಸಮಸ್ಯೆಗಳನ್ನು ಜೀವಂತವಾಗಿ ಉಳಿಸಿವೆ.

### ೫.೬ ಭಾಷಾಅಲ್ಪಸಂಖ್ಯಾತರು: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು

ಈ ಅಧ್ಯಾಯದ ಪ್ರಾರಂಭದಲ್ಲಿ ಅಂದರೆ ಆಡಳಿತ ಭಾಷೆಯ ಸ್ವರೂಪ ಮತ್ತು ಸಮಸ್ಯೆಗಳು ಭಾಗದಲ್ಲಿ ಚರ್ಚಿಸಿರುವ ಹಾಗೆ ಯಾವುದೇ ಒಂದು ಪ್ರದೇಶದ ಆಡಳಿತ ಆ ಪ್ರದೇಶದ ಜನರ ಭಾಷೆ

ಅಥವಾ ಭಾಷೆಗಳಲ್ಲಿ ನಡೆಯಬೇಕು. ಇದು ಆಡಳಿತಗಾರರು ಮತ್ತು ಜನರ ನಡುವೆ ಹೊಂದಾಣಿಕೆ ಏರ್ಪಡಿಸಿ ಆಡಳಿತ ಸುಲಭಗೊಳಿಸುತ್ತದೆ. ಜನಭಾಷೆಗಳು ಆಡಳಿತದಲ್ಲಿ ಬಳಕೆಗೊಳ್ಳದಿದ್ದರೆ ಆಡಳಿತ ಯಂತ್ರ ಕುಸಿದು ಶಿಕ್ಷಣ, ಉದ್ಯೋಗ, ಜೀವನಕ್ರಮಗಳಲ್ಲಿ ಸಮಸ್ಯೆಗಳನ್ನು ಉದ್ಭವಿಸುತ್ತವೆ. ಇವು ಭಾಷಿಕ ವಿಚಾರಕ್ಕೆ ಮಾತ್ರ ಸೀಮಿತವಾಗದೆ ಆ ಸಮುದಾಯದ ಭಾಷೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನಗಳ ಮೇಲೂ ವ್ಯತಿರಿಕ್ತ ಪರಿಣಾಮ ಉಂಟುಮಾಡುತ್ತದೆ. ಇದನ್ನು ನಾವು ಹಿಂದಿನ ಅಧ್ಯಾಯಗಳಲ್ಲಿ ಗಮನಿಸಿದ್ದೇವೆ. ಈ ಕಾರಣಕ್ಕಾಗಿ ಸಾಧ್ಯವಾದಷ್ಟು ಜನಭಾಷೆಗಳನ್ನು ಆಡಳಿತದಲ್ಲಿ ಬಳಸುವುದು ಉತ್ತಮ. ಆದರೆ ಭಾರತ ಬಹುಭಾಷಿಕರನ್ನು ಒಳಗೊಂಡಿರುವ ದೇಶ. ಇಲ್ಲಿ ಎಲ್ಲಾ ಭಾಷಿಕರು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಂಖಿಕವಾಗಿ, ಭಾಷಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ಸಮಾನ ಸ್ಥಾನವನ್ನು ಹೊಂದಿಲ್ಲ. ಕೆಲವು ಭಾಷಿಕ ಸಮುದಾಯಗಳು ಈ ಎಲ್ಲಾ ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದಿ ಪ್ರಬಲವಾಗಿದ್ದರೆ, ಮತ್ತೆ ಕೆಲವು ಭಾಷಿಕ ಸಮುದಾಯಗಳು ಈ ಎಲ್ಲವುಗಳಿಂದ ಹಿಂದೆ ಉಳಿದುಕೊಂಡಿವೆ.

ಇಲ್ಲಿ ಪ್ರಬಲವಾಗಿದ್ದ ಭಾಷಿಕ ಸಮುದಾಯಗಳು ಆಂಗ್ಲರ ಆಡಳಿತದ ಅಧೀನಕ್ಕೆ ಒಳಗಾಗಿ ಇಂಗ್ಲಿಶ್‌ನ ಕಲಿಕೆ ಮತ್ತು ಬಳಕೆಯಿಂದಾಗಿ ತಮ್ಮ ಭಾಷೆ, ಸಾಹಿತ್ಯ, ಸಂಸ್ಕೃತಿ ಇತ್ಯಾದಿಗಳನ್ನು ಕಳೆದುಕೊಳ್ಳುತ್ತೇವೆ ಎಂಬ ಭಯಕ್ಕೆ ಒಳಗಾಗಿವೆ. ಈ ಭಯ ಪ್ರಬಲ ಭಾಷಿಕ ಸಮುದಾಯಗಳಲ್ಲಿ ಎಚ್ಚರಿಕೆಯನ್ನು ಉಂಟುಮಾಡಿ ಸ್ವಾತಂತ್ರ್ಯಪೂರ್ವದಲ್ಲಿಯೇ ತಮ್ಮ ಅಸ್ತಿತ್ವದ ಉಳಿವಿಗಾಗಿ ಭಾಷಾವಾರು ರಾಜ್ಯಗಳ ಹೋರಾಟಕ್ಕೆ ಪ್ರೇರಣೆ ನೀಡಿದೆ. ಈ ಪ್ರೇರಣೆಯ ಹೋರಾಟಗಳ ಫಲವಾಗಿ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದರೆ ಆಯಾ ರಾಜ್ಯದಲ್ಲಿ ಬಹುಸಂಖ್ಯಾತರು ರಾಜಕೀಯವಾಗಿ, ಆರ್ಥಿಕವಾಗಿ ಪ್ರಬಲರಾಗಿ ಉಳಿದ ಭಾಷಿಕರ ಮೇಲೆ ತಮ್ಮ ಅಧಿಪತ್ಯ ಸ್ಥಾಪಿಸುತ್ತಾರೆ. ದೇಶದಲ್ಲಿ ಇಂತಹ ಪರಿಸ್ಥಿತಿ ನಿರ್ಮಾಣವಾದರೆ ಬೆರಳೆಣಿಕೆಯಷ್ಟು ಭಾಷೆಗಳು ಮಾತ್ರ ತಮ್ಮ ಅಸ್ತಿತ್ವ ಉಳಿಸಿಕೊಂಡು ದೇಶದ ಹೆಚ್ಚಿನ ಭಾಷೆಗಳು ನಾಶ ಹೊಂದುತ್ತವೆ. ಈ ಭಾಷೆಯನ್ನಾಡುವ ಜನರು ತಮ್ಮ ವಿಶೇಷತೆಗಳನ್ನು ಕಳೆದುಕೊಂಡು ಪರಕೀಯತೆಗೆ ಒಳಗಾಗಿ ಅನಾಥರಾಗುತ್ತಾರೆ. ಇದು ಪ್ರಜಾತಂತ್ರ ವ್ಯವಸ್ಥೆಗೆ ಮಾರಕವಾದುದು. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಎಲ್ಲಾ ಭಾಷಿಕ ಸಮುದಾಯಗಳಿಗೂ ತಮ್ಮ ಭಾಷೆ, ಸಾಹಿತ್ಯ, ಸಂಸ್ಕೃತಿ, ಜೀವನಕ್ರಮಗಳನ್ನು ಕಲಿಯಲು, ಬಳಸಲು ಸ್ವತಂತ್ರವಿರಬೇಕು. ಭಾಷೆಗಳು ನಾಶವಾದರೆ ಪ್ರಸ್ತಾವನೆಯಲ್ಲಿ ಚರ್ಚಿಸಿರುವ ಹಾಗೆ ಅದು ಆ ಭಾಷಿಕ ಜನಾಂಗಕ್ಕೆ ಮಾತ್ರ ಆದ ನಷ್ಟವಲ್ಲ. ಇಡೀ ಮಾನವ ಜನಾಂಗಕ್ಕೆ ಆದ ನಷ್ಟ. ಹೀಗಾಗಿ ದೇಶದ ಎಲ್ಲಾ ಭಾಷಿಕ ಸಮುದಾಯಗಳ ಭಾಷೆ, ಸಾಹಿತ್ಯ, ಸಂಸ್ಕೃತಿ, ಜೀವನ ವಿಧಾನಗಳು ಉಳಿಯಬೇಕು. ಇಲ್ಲಿ ಒಂದು ಭಾಷಿಕ ಸಮುದಾಯದ ಇನ್ನೊಂದು ಭಾಷಿಕ ಸಮುದಾಯದ ಮೇಲೆ ತನ್ನ ಅಧಿಪತ್ಯ ಸ್ಥಾಪಿಸುವ ಅವಕಾಶ ಇರಬಾರದು ಎಂಬ ಕಾರಣಕ್ಕಾಗಿ ಸಂವಿಧಾನ ರಚನಾಕಾರರು ಸಂವಿಧಾನದಲ್ಲಿ ಕೆಲವು ನಿಯಮಗಳನ್ನು ಅಳವಡಿಸಿದ್ದಾರೆ.

ಇವುಗಳಲ್ಲಿ ಭಾರತದ ರಾಜ್ಯಗಳ ಆಡಳಿತದಲ್ಲಿ ಅಲ್ಪಸಂಖ್ಯಾತರ ಭಾಷಾಬಳಕೆಗೆ ಸಂಬಂಧಿಸಿದಂತೆ ಸಂವಿಧಾನದ ೩೪೭ನೇ ಅನುಚ್ಛೇದದಲ್ಲಿ ರೂಪಿಸಿರುವ "ಒಂದು ರಾಜ್ಯದ ಜನಸಮುದಾಯದ ಪೈಕಿ ಗಣ್ಯವಾದ ಅನುಪಾತದಷ್ಟು ಜನ ಅವರು ಮಾತನಾಡತಕ್ಕ ಯಾವುದಾದರೂ ಭಾಷೆಯನ್ನು ಉಪಯೋಗಿಸುವುದು ಆ ರಾಜ್ಯದಿಂದ ಅಂಗೀಕೃತವಾಗಬೇಕೆಂದು ಅಪೇಕ್ಷಿಸುತ್ತಾರೆಂದು ತತ್ಸಂಬಂಧವಾಗಿ ಕೋರಿಕೆಯನ್ನು ಮಾಡಿಕೊಂಡಿದ್ದ ಮೇಲೆ ರಾಷ್ಟ್ರಪತಿಗೆ ಮನವರಿಕೆಯಾದರೆ, ರಾಷ್ಟ್ರಪತಿಯೂ ಆ ಭಾಷೆಯೂ ಸಹ ಅವರು ನಿರ್ದೇಶಿಸಬಹುದಾತಂತಹ ಉದ್ದೇಶಕ್ಕಾಗಿ, ಆ ರಾಜ್ಯದಲ್ಲೆಲ್ಲ ಅಥವಾ ಆ ರಾಜ್ಯದ ಯಾವುದಾದರು ಭಾಗದಲ್ಲಿ ರಾಜ್ಯಭಾಷೆಯಾಗಿ ಅಂಗೀಕೃತವಾಗತಕ್ಕದ್ದೆಂದು ನಿರ್ದೇಶಿಸಬಹುದು[೧೭]" ಎಂಬ ನಿಯಮ ಮುಖ್ಯವಾಗಿದೆ. ಇದರ ಉದ್ದೇಶ ಈಗಾಗಲೇ ಚರ್ಚಿಸಿರುವ ಹಾಗೆ ಭಾರತ ಸ್ವತಂತ್ರಗೊಂಡ ನಂತರ ಕೇಂದ್ರ ಮತ್ತು ರಾಜ್ಯಗಳ ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸುವ ಭಾಷಿಕ ಸಮುದಾಯಗಳು ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಪ್ರಬಲವಾಗಿ ತಮ್ಮ ಭಾಷೆಯ ಕಲಿಕೆ ಮತ್ತು ಬಳಕೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡುತ್ತವೆ. ಇದರಿಂದ ಆಯಾ ಪ್ರದೇಶಗಳ ಉಳಿದ ಭಾಷೆಗಳ ಕಲಿಕೆ ಮತ್ತು ಬಳಕೆ ಕಡಿಮೆಯಾಗುತ್ತದೆ. ಈ ಬದಲಾವಣೆ ಭಾಷಾಅಲ್ಪಸಂಖ್ಯಾತರು ತಮ್ಮ ಬೇಡಿಕೆಗಳ ಈಡೇರಿಕೆ, ಬದುಕಿಗಾಗಿ ಆಯಾ ಪ್ರದೇಶಗಳ ಪ್ರಬಲ ಭಾಷಿಕ ಸಮುದಾಯಗಳ ಭಾಷೆ ಅಥವಾ ಭಾಷೆಗಳನ್ನು ಕಲಿಯುವುದು, ಬಳಸುವುದು ಅನಿವಾರ್ಯವಾಗುತ್ತದೆ.

ಹೀಗೆ ಒಂದು ಪ್ರದೇಶದ ಪ್ರಬಲವಲ್ಲದ ಸಮುದಾಯಗಳು ಆ ಪ್ರದೇಶಗಳ ಪ್ರಬಲ ಭಾಷೆ ಅಥವಾ ಭಾಷೆಗಳನ್ನು ಕಲಿತು, ಬಳಸುವುದರಿಂದ ತಮ್ಮ ಭಾಷೆ, ಸಾಹಿತ್ಯ, ಸಂಸ್ಕೃತಿ, ಅಸ್ತಿತ್ವ ಕಳೆದುಕೊಳ್ಳುವ ಭಯಕ್ಕೆ ಒಳಗಾಗುತ್ತವೆ. ಇಂತಹ ಪರಿಸ್ಥಿತಿ ಭಾಷಾಅಲ್ಪಸಂಖ್ಯಾತ ಸಮುದಾಯಗಳಿಗೆ ಬರಬಾರದು ಎಂಬ ಕಾರಣಕ್ಕಾಗಿ ಭಾರತ ಸಂವಿಧಾನದಲ್ಲಿ ಮೇಲೆ ಹೇಳಿದ ನಿಯಮವನ್ನು ಅಳವಡಿಸಲಾಗಿದೆ. ಇದನ್ನು ಪಾಲಿಸುವುದು ಕೇಂದ್ರ ಮತ್ತು ದೇಶದೊಳಗಿನ ಎಲ್ಲಾ ರಾಜ್ಯಸರ್ಕಾರಗಳ ಕರ್ತವ್ಯವಾಗಿದೆ. ಹೀಗಾಗಿ ಕರ್ನಾಟಕ ಸರ್ಕಾರವು ಕ್ರಮಾಂಕ: ಡಿ.ಪಿ.ಎ.ಆರ್೧ ಪಿ.ಒ.ಎಲ್ ೭೯ ಬೆಂಗಳೂರು, ದಿನಾಂಕ ೬ನೇ ಸೆಪ್ಟೆಂಬರ್ ೧೯೭೯ರಂದು ಹೊರಡಿಸಿದ ಅಧಿಸೂಚನೆಯ 'ಬಿ' ಕಂಡಿಕೆಯಲ್ಲಿ ಈ ರೀತಿಯಲ್ಲಿ ಹೇಳಿದೆ. ಯಾವುದೇ ತಾಲೂಕಿನಲ್ಲಿ ಭಾಷಾ ಅಲ್ಪಸಂಖ್ಯಾತರ ಜನಸಂಖ್ಯೆಯು ಶೇಕಡಾ ಹದಿನೈದಕ್ಕೆ ಕಡಿಮೆ ಇಲ್ಲದಿದ್ದರೆ: ೧) ಸಂಬಂಧಪಟ್ಟ ಅಲ್ಪಸಂಖ್ಯಾತ ಭಾಷೆಯಲ್ಲಿ ಮನವಿಗಳನ್ನು ಸಲ್ಲಿಸಿದರೆ ಅವುಗಳನ್ನು ಸ್ವೀಕರಿಸತಕ್ಕದ್ದು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಆ ಭಾಷೆಯಲ್ಲಿ ಉತ್ತರಗಳನ್ನು ಕೊಡತಕ್ಕುದು. ೨) ಅಂಥಹ ಅಲ್ಪಸಂಖ್ಯಾತ ಭಾಷೆಯಲ್ಲಿ ಕರಪತ್ರಗಳನ್ನು ಮತ್ತು ಪ್ರಚಾರ ಸಾಮಗ್ರಿಗಳನ್ನು ಕೊಡುವುದನ್ನು ಮುಂದುವರಿಸತಕ್ಕದ್ದು ಎಂದು ಹೇಳಿದೆ.

ಈ ನಿಯಮವನ್ನು ಗಮನಿಸಿದಾಗ ಕರ್ನಾಟಕ ಆಡಳಿತದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಕಡ್ಡಾಯವಾಗಿ ಬಳಸಲೇಬೇಕಾದ ಅನಿವಾರ್ಯತೆ ಇಲ್ಲದಿರುವುದು ಸ್ಪಷ್ಟವಾಗುತ್ತದೆ.

ಇದರ ಹಿಂದಿನ ಉದ್ದೇಶಗಳು ಏನೇ ಇರಬಹುದು. ಆದರೆ ಬಹುಭಾಷಿಕ ಪ್ರದೇಶದಲ್ಲಿ ಬಹುಸಂಖ್ಯಾತರ ಭಾಷಾಬಳಕೆಯ ಅನಿವಾರ್ಯತೆ, ಅವಕಾಶಗಳು ಭಾಷಾಅಲ್ಪಸಂಖ್ಯಾತರ ಭಾಷೆಗಳಿಗೆ ಇರುವುದಿಲ್ಲ ಎನ್ನುವುದು ಸತ್ಯ. ಹಾಗೆಯೇ ಇವು ಸಮಸ್ಯೆಗಳ ಹುಟ್ಟಿಗೂ ಕಾರಣವಾಗುತ್ತವೆ. ಹೇಗೆಂದರೆ ಸರ್ಕಾರಗಳಿಗೆ ಭಾಷಾಅಲ್ಪಸಂಖ್ಯಾತರ ಬಗೆಗೆ ನಿಜವಾದ ಕಾಳಜಿ ಇದ್ದರೆ ಹೀಗೆ ಭಾಷಾನೀತಿಯನ್ನು ಜಾರಿಗೆ ತಂದ ನಂತರದಲ್ಲಿ ಅವುಗಳ ಅನುಷ್ಠಾನಕ್ಕೆ ಪೂರಕವಾಗಿ ವ್ಯವಸ್ಥೆ ಮಾಡಬೇಕು. ಅಂದರೆ ಸರ್ಕಾರದ ಈ ಭಾಷಾನೀತಿಯ ಅನ್ವಯವೇ ಕರ್ನಾಟಕದ ಆಡಳಿತದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಬಳಸಲು ಪ್ರತಿಯೊಂದು ತಾಲ್ಲೂಕಿನಲ್ಲೂ ಭಾಷಾವಾರು ಜನಗಣತಿಯನ್ನು ಮಾಡಿಸಬೇಕು. ಈ ಜನಗಣತಿಯಲ್ಲಿ ಲಭ್ಯವಾದ ಅಂಕಿಅಂಶಗಳ ಪ್ರಕಾರವಾಗಿ ಆ ಪ್ರದೇಶಗಳಿಗೆ ಆ ಭಾಷೆ ಅಥವಾ ಭಾಷೆಗಳನ್ನು ಬಲ್ಲಂತಹ ಅಧಿಕಾರಿಗಳನ್ನು ಮತ್ತು ನೌಕರರನ್ನು ನೇಮಕ ಮಾಡಬೇಕು. ಇಲ್ಲವೆ ವರ್ಗಾವಣೆ ಮಾಡಬೇಕು. ಹಾಗೆಯೇ ಈ ಅಧಿಕಾರಿಗಳು ಮತ್ತು ನೌಕರರಿಗೆ ಆ ಭಾಷೆಗಳನ್ನು ಆಡಳಿತದಲ್ಲಿ ಬಳಸಲು ತರಬೇತಿ ನೀಡಬೇಕು. ಮತ್ತು ಅಲ್ಪಸಂಖ್ಯಾತರ ಭಾಷೆಯಲ್ಲಿ ಕರಪತ್ರ, ಪ್ರಚಾರ ಸಾಮಗ್ರಿ ಇತ್ಯಾದಿಗಳನ್ನು ವಿತರಿಸಲು ಅಗತ್ಯ ಉಪಕರಣಗಳು, ಆರ್ಥಿಕ ನೆರವು ಒದಗಿಸಬೇಕಾಗುತ್ತದೆ.

ಈ ಪ್ರಯತ್ನಗಳನ್ನು ಮಾಡದೇ ಸಚಿವಾಲಯದಲ್ಲಿ ಕುಳಿತು ಆದೇಶಗಳನ್ನು ಹೊರಡಿಸಿದ ಮಾತ್ರಕ್ಕೆ ಒಂದು ಪ್ರದೇಶದ ಅಥವಾ ರಾಜ್ಯದಲ್ಲಿನ ಜನಸಮುದಾಯಗಳ ಭಾಷಾಸಮಸ್ಯೆಗಳು ಬಗೆಹರಿಯುವುದಿಲ್ಲ. ಸರ್ಕಾರಗಳಿಗೆ ಇಂತಹ ಸಮಸ್ಯೆಗಳನ್ನು ಪರಿಹರಿಸುವ ನಿಜವಾದ ಕಾಳಜಿ ಇದ್ದರೆ ಭಾಷಾಆಧಾರಿತವಾಗಿ ಸರ್ಕಾರಿ ನೌಕರರನ್ನು ನೇಮಕ ಮಾಡಿ ಸ್ಥಳನಿಯುಕ್ತಿ, ವರ್ಗಾಹಿಸುವ ಕೆಲಸಗಳನ್ನು ಮಾಡಬೇಕು. ಇದಕ್ಕನುಗುಣವಾಗಿ ನೌಕರರಿಗೆ ತರಬೇತಿ ನೀಡಬೇಕು. ಇದಕ್ಕೆ ಅಗತ್ಯ ಪರಿಕರಗಳನ್ನು ಒದಗಿಸಬೇಕು. ಆಗ ಸರ್ಕಾರಗಳು ಜಾರಿಗೆ ತಂದ ಭಾಷಾನೀತಿಯ ಪ್ರಕಾರ ಭಾಷಾಅಲ್ಪಸಂಖ್ಯಾತರ ಭಾಷೆಗಳು ಆಡಳಿತದಲ್ಲಿ ಬಳಕೆಯಾಗುತ್ತವೆ. ಆದರೆ ಕರ್ನಾಟಕದಲ್ಲಿ ಸರ್ಕಾರಿ ನೌಕರರ ನೇಮಕಾತಿ, ಸ್ಥಳನಿಯುಕ್ತಿ, ವರ್ಗಾವಣೆ, ನಿಯೋಜನೆ, ಆಡಳಿತಕ್ಕೆ ಸಂಬಂಧಸಿದ ಉಪಕರಣ ಹಂಚಿಕೆ, ಆರ್ಥಿಕ ನೆರವು ಭಾಷಾಆಧಾರಿತವಾಗಿ ಹಂಚಿಕೆಯಾಗದೆ ಇಡೀ ರಾಜ್ಯಕ್ಕೆ ಏಕರೂಪದಲ್ಲಿ ಆಗುತ್ತದೆ. ಹೀಗಾಗಿ ಕರ್ನಾಟಕದಲ್ಲಿ ಸಂವಿಧಾನದ ನಿಯಮ ಮತ್ತು ಕರ್ನಾಟಕ ಸರ್ಕಾರಗಳ ಭಾಷಾನೀತಿಯ ಪ್ರಕಾರವಾಗಿ ಕರ್ನಾಟಕದ ಆಡಳಿತದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಬಳಸಲು ಸಾಧ್ಯವಾಗಿಲ್ಲ.

ಬದಲಾಗಿ ಸರ್ಕಾರಗಳ ಈ ಭಾಷಾನೀತಿಗಳು ಆಡಳಿತದಲ್ಲಿ ಕೆಲಸ ಮಾಡುವ ಅಧಿಕಾರಿಗಳು ಮತ್ತು ನೌಕರರು ಸಮಸ್ಯೆಗೆ ಒಳಗು ಮಾಡಿದೆ. ಹೇಗೆಂದರೆ ಕರ್ನಾಟಕ ಸರ್ಕಾರ ಈ ಭಾಷಾನೀತಿಯಿಂದಾಗಿ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರು ಅಲ್ಪಸಂಖ್ಯಾತರ ಭಾಷೆಯಲ್ಲಿನ ಪತ್ರಗಳನ್ನು ಸ್ವೀಕರಿಸಿ, ಸಾಧ್ಯವಾದಷ್ಟು ಅವರದೇ ಭಾಷೆಯಲ್ಲಿ ಉತ್ತರಿಸಬೇಕಾದ ಪರಿಸ್ಥಿತಿಗೆ ಒಳಗಾಗಿದ್ದಾರೆ. ಆದರೆ ರಾಜ್ಯದಲ್ಲಿ ಈಗಾಗಲೇ ಹೇಳಿರುವ ಹಾಗೆ ನೌಕರರ ನೇಮಕಾತಿ, ವರ್ಗಾವಣೆ

ಪ್ರಕ್ರಿಯೆ ಇಡೀ ರಾಜ್ಯಕ್ಕೆ ಏಕರೂಪದಲ್ಲಿ ಇದ್ದು ಇಲ್ಲಿನ ಅಧಿಕಾರಿಗಳು ಮತ್ತು ನೌಕರರಿಗೆ ರಾಜ್ಯದಲ್ಲಿರುವ ಎಲ್ಲಾ ಭಾಷಾಅಲ್ಪಸಂಖ್ಯಾತರ ಭಾಷೆಗಳ ಅರಿವು ಇಲ್ಲ. ಹೀಗಾಗಿ ಕರ್ನಾಟಕದ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರು ಭಾಷಾಅಲ್ಪಸಂಖ್ಯಾತರಿಗೆ ಅವರದೇ ಭಾಷೆಯಲ್ಲಿ ಮಾಹಿತಿಗಳನ್ನು ಒದಗಿಸಲು ಸಾಧ್ಯವಾಗಿಲ್ಲ. ಮತ್ತು ಭಾಷಾಅಲ್ಪಸಂಖ್ಯಾತರು ತಮ್ಮ ಭಾಷೆಯಲ್ಲಿ ನೀಡಿರುವ ಪತ್ರಗಳನ್ನು ತಕ್ಷಣದಲ್ಲಿ ಓದಿ, ಅರ್ಥೈಸಿ ಅವರ ಬೇಡಿಕೆಗಳನ್ನು ಈಡೇರಿಸಲು, ಸಮಸ್ಯೆಗಳನ್ನು ಪರಿಹರಿಸಲು ಆಗಿಲ್ಲ. ಇಂತಹ ಸಂದರ್ಭಗಳಲ್ಲಿ ಇವರು ಆ ಭಾಷೆಯ ಅರಿವು ಇರುವ ಇತರ ಅಧಿಕಾರಿಗಳು ಅಥವಾ ನೌಕರರ ನೆರವನ್ನು ಪಡೆದು ಪರಿಶೀಲಿಸಿ ಅನಂತರದಲ್ಲಿ ಇವುಗಳ ಬಗೆಗೆ ಕ್ರಮ ತೆಗೆದುಕೊಳ್ಳುವ ಕೆಲಸ ಮಾಡಿದ್ದಾರೆ. ಇದರಿಂದಾಗಿ ಭಾಷಾಅಲ್ಪಸಂಖ್ಯಾತರು ತಮ್ಮ ಕೆಲಸಗಳಿಗಾಗಿ ಇತರರಿಗಿಂತ ಹೆಚ್ಚಿನ ಸಮಯ ಖರ್ಚು ಮಾಡಬೇಕಿದೆ. ಹೀಗಾಗಿ ರಾಜ್ಯದ ಗಡಿಭಾಗಗಳು ಸೇರಿದಂತೆ ಇತರ ಭಾಗಗಳಲ್ಲಿ ಹೆಚ್ಚಿನ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರು ಭಾಷಾಅಲ್ಪಸಂಖ್ಯಾತರ ಭಾಷೆಯಲ್ಲಿ ಬರೆದಿರುವ ಪತ್ರಗಳನ್ನು, ದಾಖಲೆಗಳನ್ನು ಸ್ವೀಕರಿಸದೆ ಅದನ್ನು ಕನ್ನಡ ಇಲ್ಲವೆ ಇಂಗ್ಲಿಶ್‌ಗೆ ಭಾಷಾಂತರ ಮಾಡಿಕೊಂಡು ಬರುವಂತೆ ತಿಳಿಸಿ ಹಿಂತಿರುಗಿಸಿದ್ದಾರೆ.

ಇದರಿಂದಾಗಿ ಕರ್ನಾಟಕ ಸರ್ಕಾರ ಭಾಷಾಅಲ್ಪಸಂಖ್ಯಾತರ ಅನುಕೂಲಕ್ಕಾಗಿ ಎಂದು ಕರ್ನಾಟಕದ ಆಡಳಿತದಲ್ಲಿ ಅವರ ಭಾಷೆಗಳನ್ನು ಬಳಸುವುದಕ್ಕೆ ಸಂಬಂಧಿಸಿದಂತೆ ಭಾಷಾನೀತಿಯನ್ನು ಜಾರಿಗೆ ತಂದ ನಂತರದಲ್ಲಿಯೂ ಭಾಷಾಅಲ್ಪಸಂಖ್ಯಾತರ ಭಾಷಾಸಮಸ್ಯೆಗಳು ಬಗೆಹರಿದಿಲ್ಲ. ಕರ್ನಾಟಕದಲ್ಲಿ ಆಡಳಿತ ನಡೆಸುವ ಸರ್ಕಾರಗಳಿಗೆ ಭಾಷಾಅಲ್ಪಸಂಖ್ಯಾತ ಸಮುದಾಯಗಳ ಸಮಸ್ಯೆಗಳನ್ನು ಬಗೆಹರಿಸುವ ನಿಜವಾದ ಕಾಳಜಿ ಇದ್ದರೆ ಸರ್ಕಾರಿ ನೌಕರಿಗೆ ನೇಮಕ ಮಾಡಿಕೊಳ್ಳುವಾಗ ರಾಜ್ಯಭಾಷೆ ಮತ್ತು ಭಾಷಾಅಲ್ಪಸಂಖ್ಯಾತರ ಭಾಷೆ ಎರಡನ್ನು ತಿಳಿದಿರುವ ಅಧಿಕಾರಿಗಳು ಮತ್ತು ನೌಕರರನ್ನು ನೇಮಕ ಮಾಡಿಕೊಳ್ಳಬೇಕು. ಇಲ್ಲವೆ ಆ ಭಾಷೆಗಳನ್ನು ಅರಿತು ಸರ್ಕಾರಿ ನೌಕರರಾಗಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರನ್ನು ಭಾಷಾಆಧಾರಿತವಾಗಿ ವರ್ಗಾವಣೆ, ನಿಯೋಜನೆ ಮಾಡಿ ಅವರನ್ನು ಮತ್ತೆ ವರ್ಗಾವಣೆ ಅಥವಾ ನಿಯೋಜನೆ ಮಾಡುವಾಗ ಭಾಷಾಆಧಾರಿತವಾಗಿಯೇ ವರ್ಗಾಯಿಸಬೇಕು. ಆಗ ರಾಜ್ಯಭಾಷೆ ಮತ್ತು ಭಾಷಾಅಲ್ಪಸಂಖ್ಯಾತರ ಹಿತ ಎರಡನ್ನು ಉಳಿಸಿದ ಹಾಗೆ ಆಗುತ್ತದೆ. ಆದರೆ ಸರ್ಕಾರಗಳು ಇಂತಹ ಪ್ರಯತ್ನಗಳನ್ನು ಮಾಡದೇ ಇರುವುದು ಕರ್ನಾಟಕದ ಆಡಳಿತದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸಲು ಸಾಧ್ಯವಾಗದೇ ಇರುವುದಕ್ಕೆ ಕಾರಣವಾಗಿದೆ.

ಇದನ್ನು ಅರ್ಥಮಾಡಿಕೊಳ್ಳದೆ ಈ ಭಾಷಾನೀತಿಯನ್ನು ಜಾರಿಗೆ ತರುವ ಪೂರ್ವದಲ್ಲಿ ಆಡಳಿತ, ಶಿಕ್ಷಣ, ಉದ್ಯೋಗಗಳಲ್ಲಿ ಯಾವ ನಿಯಮಗಳನ್ನು ಪಾಲಿಸಲಾಗುತ್ತಿತ್ತೊ ಆ ಎಲ್ಲವನ್ನು ಹಾಗೇ ಉಳಿಸಿಕೊಳ್ಳಲಾಗಿದೆ. ಅಂದರೆ ಸರ್ಕಾರದ ಈ ಭಾಷಾನೀತಿಯನ್ವಯ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸಲು ಅವುಗಳನ್ನು ಶಿಕ್ಷಣದಲ್ಲಿ ಕಡ್ಡಾಯವಾಗಿ ಕಲಿಯುವಂತಹ ನಿಯಮಗಳು ಇರಬೇಕು. ಆದರೆ ಕರ್ನಾಟಕದಲ್ಲಿ ಮೂರು ಮತ್ತು ನಾಲ್ಕನೇ ಅಧ್ಯಾಯಗಳಲ್ಲಿ

ಚರ್ಚಿಸಿರುವ ಹಾಗೆ ಭಾಷಾಅಲ್ಪಸಂಖ್ಯಾತ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಒಂದು ಭಾಷೆಯಾಗಿ ಮತ್ತು ಭಾಷಾಮಾಧ್ಯಮದಲ್ಲಿ ಕಲಿಯಲು ಸಾಧ್ಯವಾಗದೆ ಇರುವುದು ಹಾಗೂ ಸಾಧ್ಯವಿರುವ ಕಡೆಗಳಲ್ಲೂ ಕಲಿಯಲು ಹಿಂದೆ ಸರಿದಿರುವುದು ಅದಕ್ಕೆ ಕಾರಣಗಳನ್ನು ಸ್ಪಷ್ಟ ಪಡಿಸಿಕೊಳ್ಳಲಾಗಿದೆ. ಹೀಗಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಕರ್ತವ್ಯ ನಿರ್ವಹಿಸಿರುವ ಎಲ್ಲಾ ಅಧಿಕಾರಿಗಳು ಮತ್ತು ನೌಕರರಿಗೆ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸುವ ಸಾಮರ್ಥ್ಯ ಇರಲಿಲ್ಲ. ಹೀಗಾಗಿ ಕರ್ನಾಟಕ ಸರ್ಕಾರ ಸಂವಿಧಾನದ ಚೌಕಟ್ಟು ಮತ್ತು ಕೇಂದ್ರಸರ್ಕಾರದ ಭಾಷಾನೀತಿಯ ಅಧೀನಕ್ಕೆ ಒಳಗಾಗಿ ಈ ಭಾಷಾನೀತಿಯನ್ನು ತಂದಿರುವುದು ಸಮಸ್ಯೆಯಾಗಿ ಪರಿಣಮಿಸಿದೆ. ಅದರಲ್ಲೂ ಕರ್ನಾಟಕದ ಗಡಿಭಾಗದ ಜಿಲ್ಲೆಗಳಾದ ಬೆಳಗಾವಿ, ಬೀದರ್, ಕಲಬುರ್ಗಿ, ಬಳ್ಳಾರಿ, ರಾಯಚೂರು, ಚಾಮರಾಜನಗರ, ಕೋಲಾರ, ಚಿಕ್ಕಬಳ್ಳಾಪುರದಂತಹ ಗಡಿಭಾಗ ಸೇರಿದಂತೆ ಬೆಂಗಳೂರಿನಲ್ಲಿ ಇಂತಹ ಸಮಸ್ಯೆಗಳು ಹೆಚ್ಚು.

ಏಕೆಂದರೆ ಈ ಜಿಲ್ಲೆಗಳಲ್ಲಿ ಮರಾಠಿ, ತೆಲುಗು, ತಮಿಳು, ಉರ್ದು ಭಾಷೆಗಳನ್ನಾಡುವ ಜನರು ಹೆಚ್ಚಾಗಿ ಇದ್ದಾರೆ. ಇನ್ನು ಬೆಂಗಳೂರಿನಲ್ಲಿ ಈ ಎಲ್ಲಾ ಭಾಷೆಗಳನ್ನು ತಿಳಿದಿರುವವರ ಜೊತೆಗೆ ಇಂಗ್ಲಿಶ್ ಹಿಂದಿ ಮಾತನಾಡುವವರು ಇದ್ದಾರೆ. ಇನ್ನು ಕೊಡಗು, ಮಂಗಳೂರು, ಉತ್ತರ ಕನ್ನಡದ ಭಾಗಗಳಲ್ಲಿ ಕೊಡವ, ತುಳು, ಕೊಂಕಣಿ ಭಾಷೆಗಳನ್ನು ಮಾತನಾಡುವವರಿದ್ದಾರೆ. ಈ ಭಾಗಗಳಿಗೆ ನೇಮಕವಾಗುವ ಸರ್ಕಾರಿ ಅಧಿಕಾರಿಗಳಿಗೆ ಈ ಭಾಗಗಳ ಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸಲು ಆ ಭಾಷೆಗಳನ್ನು ಕಲಿಯಬೇಕು. ಹೀಗೆ ಒಂದೊಂದು ಪ್ರದೇಶಕ್ಕೆ ವರ್ಗಾವಣೆ ಆದಾಗಲು ಅಲ್ಲಿನ ಸ್ಥಳೀಯ ಭಾಷಾಅಲ್ಪಸಂಖ್ಯಾತರ ಭಾಷೆ ಕಲಿತು, ಆಡಳಿತದಲ್ಲಿ ಬಳಸುವುದು ಸರ್ಕಾರಿ ಅಧಿಕಾರಿಗಳು ಮತ್ತು ನೌಕರರಿಗೆ ಸುಲಭದ ಕೆಲಸವಲ್ಲ. ಏಕೆಂದರೆ ಅಧಿಕಾರಿಗಳು ಮತ್ತು ನೌಕರರು ಅವರದೇ ಆದ ಆಡಳಿತಾತ್ಮಕ ಕಾರ್ಯಭಾರದ ಒತ್ತಡದಲ್ಲಿ ಇರುತ್ತಾರೆ. ಇಂತಹ ಸಂದರ್ಭದಲ್ಲಿ ಸರ್ಕಾರಗಳು ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಕಲಿಸುವುದಕ್ಕೆ ವ್ಯವಸ್ಥೆ ಮಾಡದೆ, ಅದರ ಸಾಧಕ-ಬಾಧಕಗಳನ್ನು ಪರಿಶೀಲಿಸದೆ ಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸಿ ಎಂದು ಭಾಷಾನೀತಿಯನ್ನು ಹೊರಡಿಸಿದರೆ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸುವುದು ಹೇಗೆ? ಇದನ್ನು ಅರ್ಥ ಮಾಡಿಕೊಳ್ಳದೆ ಸರ್ಕಾರಗಳು ಭಾಷಾನೀತಿಗಳನ್ನು ಜಾರಿಗೆ ತಂದು ಸರ್ಕಾರಿ ಅಧಿಕಾರಿಗಳು ಮತ್ತು ನೌಕರರು ಇದನ್ನು ಪಾಲಿಸಬೇಕು ಎಂದು ಹೇಳಿದರೆ ಭಾಷಾಅಲ್ಪಸಂಖ್ಯಾತರ ಯಾವ ಭಾಷೆಗಳು ಬಗೆಹರಿಯುವುದಿಲ್ಲ. ಬದಲಾಗಿ ಸರ್ಕಾರಿ ನೌಕರರು ಒತ್ತಡಕ್ಕೆ ಒಳಗಾಗುತ್ತಾರೆ ಅಷ್ಟೆ.

ಕರ್ನಾಟಕದ ಸಂದರ್ಭದಲ್ಲಿ ಆಗಿರುವುದು ಇದೇ. ಇಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಸಂವಿಧಾನದ ಚೌಕಟ್ಟು ಮತ್ತು ಕೇಂದ್ರಸರ್ಕಾರದ ಭಾಷಾನೀತಿ ಒತ್ತಡಕ್ಕೆ ಒಳಗಾಗಿ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಆದರೆ ಅವುಗಳ ಅನುಷ್ಠಾನಕ್ಕೆ ಇದುವರೆಗೆ ಚರ್ಚಿಸಿದ ಕ್ರಮಗಳನ್ನು ಕೈಗೊಂಡಿಲ್ಲ. ಹೀಗಾಗಿ ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಭಾಷಾಅಲ್ಪಸಂಖ್ಯಾತರ ಪರವಾದ ಭಾಷಾನೀತಿಗಳು ಕರ್ನಾಟಕದ ಆಡಳಿತದಲ್ಲಿ ಅಧಿಕಾರಿಗಳು ಮತ್ತು ನೌಕರರಿಗೆ ಸಮಸ್ಯೆಯನ್ನು

ತಂದೊಡ್ಡಿವೆ. ಭಾಷಾನೀತಿ ಕರ್ನಾಟಕದ ಆಡಳಿತದಲ್ಲಿ ಅನುಷ್ಠಾನಕ್ಕೆ ಬಂದು ಭಾಷಾಅಲ್ಪಸಂಖ್ಯಾತರ ಭಾಷಾಸಮಸ್ಯೆಗಳನ್ನು ಬಗೆಹರಿಸುವಲ್ಲಿ ವಿಫಲವಾಗಿವೆ. ಅಧಿಕಾರಿಗಳು ಮತ್ತು ನೌಕರರ ಮೇಲೆ ಈ ರೀತಿಯ ಒತ್ತಡ ಉಂಟುಮಾಡಿದರೆ ಅದು ಆಡಳಿತದ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವ ಸಾಧ್ಯತೆ ಇದೆ. ಹೀಗಾಗಿ ಸಂವಿಧಾನದ ನಿಯಮ ಮತ್ತು ಕರ್ನಾಟಕ ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಕರ್ನಾಟಕದ ಆಡಳಿತದಲ್ಲಿ ಆಯಾ ಪ್ರದೇಶಗಳ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಕಲಿಯಲು, ಬಳಸಲು ಇನ್ನೊಂದು ಸಮಸ್ಯೆ ಇರುವುದನ್ನು ನಾವಿಲ್ಲಿ ಗಮನಿಸಬಹುದಿದೆ. ಅದೇನೆಂದರೆ ಬೆಳಗಾವಿ, ಬೀದರ್, ಬಳ್ಳಾರಿ, ರಾಯಚೂರು, ಚಾಮರಾಜನಗರ, ಕೋಲಾರ ತರದ ಗಡಿಭಾಗದ ಜಿಲ್ಲೆಗಳಲ್ಲಿ, ಈ ಜಿಲ್ಲೆ ಮತ್ತು ಈ ಜಿಲ್ಲೆಗಳ ತಾಲ್ಲೂಕು ಕೇಂದ್ರಗಳಲ್ಲಿ ಆ ತಾಲ್ಲೂಕಿನ ಒಟ್ಟು ಜನಸಂಖ್ಯೆಯ ಶೇಕಡಾ ಹದಿನೈದಕ್ಕಿಂತ ಹೆಚ್ಚಾಗಿ ಒಂದೇ ಭಾಷೆಯನ್ನಾಡುವ ಭಾಷಾಅಲ್ಪಸಂಖ್ಯಾತರು ಇದ್ದಾರೆ. ಮತ್ತು ಕೊಡಗಿನಲ್ಲಿರುವ ಕೊಡವ ಮತ್ತು ಮಂಗಳೂರಿನಲ್ಲಿ ತುಳು, ಕೊಂಕಣಿ ಭಾಷೆಗಳನ್ನು ಮಾತನಾಡುವ ಜನರಿದ್ದಾರೆ. ಇಲ್ಲಿ ತುಳು, ಕೊಡವ ಭಾಷೆಗಳನ್ನು ಆಡಳಿತದಲ್ಲಿ ಬಳಸಲು ಸ್ವತಂತ್ರ ಲಿಪಿ ಇಲ್ಲ. ಕನ್ನಡದ ಲಿಪಿಯಲ್ಲಿಯೇ ಬಳಸಬೇಕು. ಇನ್ನು ಬೀದರ್, ಗುಲ್ಬರ್ಗ, ಯಾದಗಿರಿ, ಬೆಳಗಾವಿ, ಬಳ್ಳಾರಿ, ಕೋಲಾರ, ಚಾಮರಾಜನಗರ ಭಾಗಗಳಲ್ಲಿ ಮರಾಠಿ, ತೆಲುಗು, ತಮಿಳು, ಉರ್ದು ಭಾಷಿಕರು ಹೆಚ್ಚಾಗಿ ಇದ್ದಾರೆ. ಈ ಭಾಗಗಳಿಗೆ ಸ್ಥಳನಿಯುಕ್ತಿಗೊಂಡ ಸರ್ಕಾರಿ ನೌಕರರಾಗಿ ಕೆಲಸ ಮಾಡಿರುವ ಮತ್ತು ಮಾಡುತ್ತಿರುವ ಎಲ್ಲಾ ಅಧಿಕಾರಿಗಳು ಮತ್ತು ನೌಕರರಿಗೆ ಅಲ್ಲಿನ ಸ್ಥಳೀಯ ಭಾಷಾಅಲ್ಪಸಂಖ್ಯಾತರ ಭಾಷೆಗಳ ತಿಳುವಳಿಕೆ ಇಲ್ಲ.

ಇಂತಹ ಸಂದರ್ಭದಲ್ಲಿ ಇವರಿಗೆ ಆಡಳಿತದಲ್ಲಿ ಇಂತಹ ಭಾಷೆಯನ್ನು ಬಳಸಬೇಕು, ಹೀಗೇ ಬಳಸಬೇಕು ಎಂದು ಹೇಳುವುದು ಸರ್ಕಾರಿ ನೌಕರರಿಗೆ ಭಾಷಿಕ ಒತ್ತಡವನ್ನು ಉಂಟು ಮಾಡಿದಂತಾಗುತ್ತದೆ. ಅಧಿಕಾರಿಗಳು ಮತ್ತು ನೌಕರರ ಮೇಲೆ ಈ ರೀತಿ ಒತ್ತಡ ಉಂಟುಮಾಡಿದರೆ ಅದು ಆಡಳಿತದ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವ ಸಾಧ್ಯತೆ ಇದೆ. ಏಕೆಂದರೆ ಆಡಳಿತದಲ್ಲಿ ಆ ಭಾಷೆಗಳನ್ನು ಬಳಸಬೇಕೆಂದರೆ ಶಿಕ್ಷಣದಲ್ಲಿ ಕಲಿಸಬೇಕು. ಆದರೆ ಕರ್ನಾಟಕದ ಶಿಕ್ಷಣದಲ್ಲಿ ಅಲ್ಪಸಂಖ್ಯಾತರ ಭಾಷೆಗಳನ್ನು ಮತ್ತು ಭಾಷೆಗಳಲ್ಲಿ ಕಲಿಯುವವರ ಸಂಖ್ಯೆಯೇ ಕಡಿಮೆಯಾಗುತ್ತಿದೆ. ಇಂತಹ ಸಂದರ್ಭಗಳಲ್ಲಿ ಅವರ ಭಾಷೆಗಳನ್ನು ಆಡಳಿತದಲ್ಲಿ ಬಳಸುವುದು ಹೇಗೆ ಸಾಧ್ಯ? ಇವುಗಳನ್ನು ಅರ್ಥ ಮಾಡಿಕೊಂಡು ಆಡಳಿತ, ಶಿಕ್ಷಣ, ಉದ್ಯೋಗಗಳ ನಡುವೆ ಹೊಂದಾಣಿಕೆ ತಂದು ಇಂತಹ ಭಾಷಾನೀತಿಗಳನ್ನು ಜಾರಿಗೆ ತರಬೇಕು. ಆದರೆ ಇವುಗಳ ನಡುವೆ ಹೊಂದಾಣಿಕೆಯನ್ನೇ ತರದೇ ಬೇರೆಬೇರೆ ಒತ್ತಡಗಳಿಗೆ ಒಳಗಾಗಿ ಇಂತಹ ಭಾಷಾನೀತಿಗಳನ್ನು ಜಾರಿಗೆ ತರುವುದರಿಂದ ಭಾಷಾಅಲ್ಪಸಂಖ್ಯಾತ ಸಮುದಾಯಗಳಿಗೆ ಯಾವ ಪ್ರಯೋಜನವೂ ಆಗುವುದಿಲ್ಲ. ಇಂತಹ ಭಾಷಾನೀತಿಗಳನ್ನು ಯಶಸ್ವಿಯಾಗಿ ಅನುಷ್ಠಾನಕ್ಕೆ ತರಬೇಕಾದರೆ ಭಾಷಾಅಲ್ಪಸಂಖ್ಯಾತರ ಮಾತೃಭಾಷಾಮಾಧ್ಯಮದ ಶಾಲೆಗಳನ್ನು ಅಭಿವೃದ್ಧಿಪಡಿಸುವ ಮೂಲಕವೇ ಜಾರಿಗೆ ತರಬೇಕಾಗುತ್ತದೆ.

ಇಲ್ಲದಿದ್ದರೆ ಆಡಳಿತ ಕ್ಷೇತ್ರದಲ್ಲಿ ಕೆಲಸ ಮಾಡುವ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರು ಭಾಷಿಕ ಬಿಕ್ಕಟ್ಟುಗಳಿಗೆ ಸಿಲುಕಿಸಿದಂತಾಗುತ್ತದೆ.

ಹೀಗಿದ್ದರೂ ಕೆಲವು ಸರ್ಕಾರಿ ಅಧಿಕಾರಿಗಳು ಕರ್ನಾಟಕದ ಆಡಳಿತದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಬಳಸಲು ಪ್ರಯತ್ನಿಸಿದ್ದಾರೆ. ಇದಕ್ಕೆ ಕರ್ನಾಟಕ ಸರ್ಕಾರವು ಭಾಷಾ ಅಲ್ಪಸಂಖ್ಯಾತರಿಗೆ ತಿಳಿಯಲೆಂದು ಚುನಾವಣೆಯ ವಿಷಯವನ್ನು ಅವರ ಭಾಷೆಯಲ್ಲಿಯೇ ತಿಳಿಸಿದೆ. ಸರಕಾರವು ಮಾಡಿರುವ ಈ ಕೆಲಸ ಅನವಶ್ಯಕವೂ, ಅಪ್ರಯೋಜಕವು ಆಗಿದೆ. ಯಾವ ರಾಜ್ಯದಲ್ಲಿ ಯಾವ ಭಾಷೆ ಇದೆಯೋ ಆ ಭಾಷೆಯಲ್ಲಿ ಮಾತ್ರ ಜನರಿಗೆ ತಿಳುವಳಿಕೆ ಕೊಡುವ ಸೂಚನೆಗಳು, ಸುತ್ತೋಲೆಗಳು ಬರಬೇಕು. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ಇಲ್ಲಿ ಭಾಷಾ ಅಲ್ಪಸಂಖ್ಯಾತರು ಇರುವುದು ನಿಜ. ಅವರು ಈ ರಾಜ್ಯದಲ್ಲಿ ಈ ಮೊದಲೂ ಇದ್ದರು. ಅನಂತರವೂ ಇದ್ದಾರೆ. ಇನ್ನು ಕೆಲವರು ಇತ್ತೀಚಿಗೆ ಬಂದಿರಬಹುದು. ಜನರು ಯಾವ ರಾಜ್ಯದಲ್ಲಿರುವರೋ ಆ ರಾಜ್ಯದ ಭಾಷೆಯಲ್ಲಿ ಅವರು ಜನರೊಂದಿಗೆ ವ್ಯವಹರಿಸಬೇಕು. ಸರಕಾರವೂ ಕೂಡ ಅವರ ಭಾಷೆಯಲ್ಲಿಯೇ ವ್ಯವಹರಿಸಬೇಕು. ರಾಜ್ಯದ ಭಾಷೆಯಲ್ಲಿ ವ್ಯವಹರಿಸುವುದು, ಅವರು ಆ ಭಾಷೆಗೆ ಅವರು ಮಾಡಿದ ಉಪಕಾರವೇನೂ ಅಲ್ಲ. ಆ ಭಾಷೆಯಲ್ಲಿ ವ್ಯವಹರಿಸುವುದು ಅವರ ಕರ್ತವ್ಯವೇ ಆಗಿದೆ[೧೮] ಎಂದು ಕನ್ನಡಪರ ಚಿಂತಕರಾದ ಪಾಟೀಲ ಪುಟ್ಟಪ್ಪನವರು ವಿರೋಧ ವ್ಯಕ್ತಪಡಿಸಿದ್ದಾರೆ. ಇದು ಕೇವಲ ಪಾಟೀಲ ಪುಟ್ಟಪ್ಪನವರೊಬ್ಬರ ಅಭಿಪ್ರಾಯವಲ್ಲ. ಕನ್ನಡಪರ ಹೋರಾಟಗಾರರ, ಚಿಂತಕರ ಒಟ್ಟು ಅಭಿಪ್ರಾಯವಾಗಿದೆ.

ಇಂತಹ ಕನ್ನಡಪರ ಮಾತುಗಳು ಭಾಷಾಅಲ್ಪಸಂಖ್ಯಾತರ ಭಾಷಾಬಳಕೆಗೆ ವ್ಯಕ್ತವಾಗಿರುವ ವಿರೋಧಗಳಾಗಿವೆ. ಈ ವಿರೋಧಗಳು ಭಾಷಾಅಲ್ಪಸಂಖ್ಯಾತರನ್ನು ಭಾಷಿಕವಾಗಿ ವಿರೋಧಿಸುವ ನೆಲೆಗಟ್ಟಿನಲ್ಲಿ ಹುಟ್ಟಿರುವಂತಹವಲ್ಲ. ಕನ್ನಡದ ಮೇಲಿನ ಅಭಿಮಾನ ರಾಜ್ಯ ರಾಜ್ಯಗಳ ನಡುವೆ ಇರುವ ಗಡಿವಿವಾದ, ಜಲವಿವಾದ, ಧರ್ಮಾಂಧತೆ ಇತ್ಯಾದಿ ಚಟುವಟಿಕೆಗಳ ಪ್ರೇರಕ ಶಕ್ತಿಗಳಾಗಿವೆ. ಏಕೆಂದರೆ ಕರ್ನಾಟಕದಲ್ಲಿರುವ ಅಲ್ಪಸಂಖ್ಯಾತರ ಭಾಷೆಗಳನ್ನು ಕಲಿಸುವಾಗ, ಬಳಸುವಾಗ ವ್ಯಕ್ತವಾಗದ ವಿರೋಧಗಳು ರಾಜ್ಯರಾಜ್ಯಗಳ ನಡುವೆ ಗಡಿವಿವಾದ, ಜಲವಿವಾದ ತೀವ್ರವಾದಾಗ, ಕೋಮುಸಂಘರ್ಷಗಳು ತೀವ್ರವಾದಾಗ ಅವುಗಳ ನೇರ ಪರಿಣಾಮ ಬೀರುವುದು ಆ ಭಾಷೆಯನ್ನಾಡುವ ಜನರ ಮೇಲೆ. ಹೀಗಾಗಿಯೇ "ಉರ್ದು ವಾರ್ತಾಪ್ರಸಾರ ಮಾಡಲು ಬೆಂಗಳೂರು ದೂರದರ್ಶನ ತೀರ್ಮಾನಿಸಿದಾಗ ನಡೆದ ಪ್ರತಿಭಟನೆ ಮತ್ತು ಹಿಂಸಾತ್ಮಕ ಘಟನೆಗಳ ಸ್ವರೂಪವನ್ನು ಗಮನಿಸಬಹುದು. ಉರ್ದು ವಾರ್ತಾಪ್ರಸಾರವು ಕನ್ನಡ ಕಾರ್ಯಕ್ರಮಗಳಿಗೆ ನಿಗದಿಯಾದ ಕಾಲಾವಧಿಯನ್ನು ಕಿತ್ತುಕೊಳ್ಳುವುದು ಸರಿಯಲ್ಲ. ಆದರೆ ಉರ್ದು ವಾರ್ತಾಪ್ರಸಾರವನ್ನು ವಿರೋಧಿಸುವಾಗ ಕನ್ನಡಪ್ರೇಮ ಕೆಲಸ ಮಾಡಿತೆ ಅಥವಾ ಉರ್ದು-ಮುಸ್ಲಿಂ ವಿರೋಧಿ ಮನೋಧರ್ಮ ಕೆಲಸ ಮಾಡಿತೆ ಎಂಬ ಅಂಶ ಬಹುಮುಖ್ಯ. ಬೆಂಗಳೂರು ಆಕಾಶವಾಣಿಯಲ್ಲಿ ಸಂಸ್ಕೃತ ವಾರ್ತಾಪ್ರಸಾರವಿದ್ದರೂ ವಿರೋಧಿಸದವರು ದೂರದರ್ಶನದ ಉರ್ದು ವಾರ್ತಾಪ್ರಸಾರವನ್ನು

‘ಉಗ್ರವಾಗಿ’ ವಿರೋಧಿಸಿದ್ದು ಒಂದು ವಿರೋಧಭಾಸ.[೧೯]” ಎಂದಿದ್ದಾರೆ ನಾಡಿನ ಪ್ರಸಿದ್ಧ ಚಿಂತಕರಾದ ಬರಗೂರು ರಾಮಚಂದ್ರಪ್ಪನವರು.

ಇದೇ ರೀತಿಯ ಭಾಷಾವಿರೋಧಿ ಘಟನೆಗಳು ಬೆಳಗಾವಿಯ ವಿಚಾರದಲ್ಲಿ ಕನ್ನಡಿಗರು ಮತ್ತು ಮರಾಠಿಗರ ನಡುವೆ ಇದೆ. ಇದು ಕರ್ನಾಟಕದಲ್ಲಿ ಮರಾಠಿ ಭಾಷಿಕರ ಅನುಕೂಲಕ್ಕಾಗಿ ಮರಾಠಿಯನ್ನು ಕಲಿಸಲು, ಬಳಸಲು ಪ್ರಯತ್ನಿಸಿರುವಾಗ ಕನ್ನಡಿಗರಿಂದ ತೀವ್ರವಿರೋಧಗಳು ವ್ಯಕ್ತವಾಗಿವೆ. ಇದೇ ಸಂದರ್ಭದಲ್ಲಿ ಮಹಾರಾಷ್ಟ್ರದಲ್ಲಿಯೂ ಕನ್ನಡದ ಬಗೆಗೆ ಇಂತಹದೇ ವಿರೋಧ ವ್ಯಕ್ತವಾಗಿದೆ ಎನ್ನುವುದು ಬೇರೆಯದೇ ಆದ ಮಾತು. ಆದರೆ ಬೇರೆಬೇರೆ ಸಮಸ್ಯೆಗಳು ಭಾಷಿಕ ಸಂಘರ್ಷಕ್ಕೆ ಕಾರಣವಾಗಿ ಭಾಷಿಕ ಸಮಸ್ಯೆಗಳನ್ನು ತೀವ್ರಗೊಳಿಸಿರುವುದು ಇಲ್ಲಿ ಮುಖ್ಯ ವಿಚಾರ. ಈ ವಿರೋಧ ಭಾಷಿಕ ನೆಲೆಯಿಂದ ಹುಟ್ಟಿರುವುದಲ್ಲ. ಇದು ಬೆಳಗಾವಿ ಪ್ರದೇಶದ ಮೇಲೆ ಕನ್ನಡಿಗರು ಮತ್ತು ಮರಾಠಿ ಭಾಷಿಕರು ಹಿಡಿತ ಸ್ಥಾಪಿಸಲು ನಡೆಸಿರುವ ಪೈಪೋಟಿಯ ಪರಿಣಾಮವಾಗಿ ಹುಟ್ಟಿರುವಂತಹದ್ದು. ಕರ್ನಾಟಕದಲ್ಲಿ ಮರಾಠಿಗರು ಅಲ್ಪಸಂಖ್ಯಾತರಾದರು ಬೆಳಗಾವಿ ಜಿಲ್ಲೆಯಲ್ಲಿ ಎರಡೂ ಭಾಷಿಕರು ಪ್ರಬಲರಾಗಿದ್ದಾರೆ. ಸರ್ಕಾರದ ನಿಯಮಗಳ ಪ್ರಕಾರ ಕರ್ನಾಟಕದಲ್ಲಿ ಮರಾಠಿಗರು ಭಾಷಾ ಅಲ್ಪಸಂಖ್ಯಾತರಾಗಿದ್ದು ಈ ಭಾಗದ ಆಡಳಿತದಲ್ಲಿ ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳು ಆಡಳಿತ ಭಾಷೆಯಾಗಿ ಬಳಕೆಯಾಗಬೇಕು. ಆದರೆ ಮೇಲೆ ಹೇಳಿದ ಹಾಗೆ ಈ ಪ್ರದೇಶದ ಮೇಲೆ ಎರಡೂ ಭಾಷಿಕ ಸಮುದಾಯಗಳ ಹಿಡಿತ ಸ್ಥಾಪಿಸಲು ನಡೆಸಿರುವ ಹೋರಾಟ ಸರ್ಕಾರದ ಭಾಷಾನೀತಿಯ ಪ್ರಕಾರ ಮರಾಠಿ ಆಡಳಿತ ಭಾಷೆಯಾಗಿ ಬಳಕೆಯಾಗುವುದನ್ನು ತಡೆದಿದೆ. ಇಂತಹ ವಿರೋಧಗಳು ವ್ಯಕ್ತವಾದಾಗ ಸರ್ಕಾರಗಳು ಇಲ್ಲಿನ ಬಹುಸಂಖ್ಯಾತರನ್ನು ಓಲೈಸುವುದಕ್ಕಾಗಿ ಮತ್ತು ಕರ್ನಾಟಕ ಕನ್ನಡ ಭಾಷೆಯ ಆಧಾರದಲ್ಲಿ ರಚನೆಯಾಗಿರುವ ರಾಜ್ಯವಾಗಿರುವುದರಿಂದ ಇಲ್ಲಿನ ಆಡಳಿತದಲ್ಲಿ ಕನ್ನಡವೇ ಬಳಕೆಯಾಗಬೇಕು ಎಂಬ ಹಿನ್ನೆಲೆಯಲ್ಲಿ ಕನ್ನಡದ ಪರವಾಗಿ ತನ್ನ ತೀರ್ಮಾನಗಳನ್ನು ಕೈಗೊಂಡಿದೆ.

ಇಂತಹ ತೀರ್ಮಾನಗಳು ಕರ್ನಾಟಕ ಏಕೀಕರಣದ ಉದ್ದೇಶದ ಈಡೇರಿಕೆ ಮತ್ತು ಬಹುಸಂಖ್ಯಾತರ ಅನುಕೂಲಕ್ಕಾಗಿ ಉತ್ತಮವಾದರೂ ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಭಾಷಾಅಲ್ಪಸಂಖ್ಯಾತರು ಮತ್ತು ಅವರ ಭಾಷೆಗಳನ್ನು ಕಡೆಗಣಿಸಬಾರದು. ಏಕೆಂದರೆ ಪ್ರಸ್ತಾವನೆಯಲ್ಲಿ ಚರ್ಚಿಸಿರುವ ಹಾಗೆ ಎಲ್ಲಾ ಭಾಷೆ ಮತ್ತು ಭಾಷಿಕ ಸಮುದಾಯಗಳ ಹಿತ ಬಹಳ ಮುಖ್ಯ. ಇಲ್ಲಿ ಬೆಳಗಾವಿ ಪ್ರದೇಶದ ಕನ್ನಡಿಗರ ಹಿತಕ್ಕಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ತೆಗೆದುಕೊಂಡಿರುವ ತೀರ್ಮಾನಗಳು ಸರಿಯಾಗಿದ್ದರೂ ಇಲ್ಲಿನ ಬಹುಸಂಖ್ಯಾತರ ಒತ್ತಡಕ್ಕೆ ಮಣಿದು ಭಾಷಾಅಲ್ಪಸಂಖ್ಯಾತರ ಭಾಷೆಯ ಬಳಕೆಗೆ ಅನುಕೂಲ ಮಾಡಿಕೊಡದೇ ಇರುವುದು ಸರಿಯಾದ ಕ್ರಮವಲ್ಲ. ಅದೇ ರೀತಿಯಲ್ಲಿ ಆ ಭಾಗದ ಮರಾಠಿಗರೂ ಆ ಪ್ರದೇಶದ ಎಲ್ಲಾ ಕಡೆಗಳಲ್ಲಿ ಮರಾಠಿ ಭಾಷೆಯೇ ಬಳಕೆಯಾಗುವಂತೆ ಒತ್ತಾಯ ಮಾಡುವುದು, ಕನ್ನಡದ ನಾಮಫಲಕಗಳಿಗೆ ಮಸಿಬಳಿಯುವುದು, ಕನ್ನಡ ನಾಮಫಲಕಗಳನ್ನು ಕಿತ್ತುಹಾಕುವುದು, ಧ್ವಂಸಗೊಳಿಸುವುದು

ಕಾನೂನುಬಾಹಿರ ಕೆಲಸವೇ ಆಗುತ್ತದೆ. ಆದರೂ ಬೆಳಗಾವಿ ಭಾಗದಲ್ಲಿ ಕರ್ನಾಟಕ ಏಕೀಕರಣದ ಆದ ನಂತರ ಇಲ್ಲಿನ ಭೂಪ್ರದೇಶದ ವಿಚಾರಕ್ಕೆ ಸಂಬಂಧಿಸಿದ ಹಾಗೆ ಕನ್ನಡ ಮತ್ತು ಮರಾಠಿ ಭಾಷಿಕ ಸಮುದಾಯಗಳ ನಡುವೆ ನಡೆಯುತ್ತಿರುವ ತೀವ್ರಮಟ್ಟದ ಸಂಘರ್ಷ ಭಾಷಾಸಮಸ್ಯೆಯ ಉದ್ಭವಕ್ಕೆ ಕಾರಣವಾಗಿದೆ. ಇಂತಹ ವಿವಾದಗಳು ತೀವ್ರಸ್ವರೂಪ ಪಡೆದಾಗ ಸರ್ಕಾರಗಳು ಇಲ್ಲಿನ ಬಹುಸಂಖ್ಯಾತರ ಒತ್ತಡಕ್ಕೆ ಮಣಿದು ಭಾಷಾಅಲ್ಪಸಂಖ್ಯಾತರ ಭಾಷಾಕಲಿಕೆ ಮತ್ತು ಬಳಕಗೆ ಅನುಕೂಲವಾಗುವಂತಹ ಕ್ರಮಗಳನ್ನು ಕೈಗೊಳ್ಳುವುದಿಲ್ಲ. ಏಕೆಂದರೆ ಬಹುಸಂಖ್ಯಾತರ ವಿರೋಧಿ ನಿಲುವನ್ನು ಸರ್ಕಾರಗಳು ಕೈಗೊಂಡರೆ ರಾಜ್ಯದಾದ್ಯಂತ ಪ್ರತಿಭಟನೆ, ಹೋರಾಟಗಳ ಕಾವು ಹೆಚ್ಚಾಗುತ್ತದೆ. ಇದರಿಂದ ಆಡಳಿತ ನಡೆಸುವುದು ಕಷ್ಟವಾಗುತ್ತದೆ. ಜೊತೆಗೆ ಕರ್ನಾಟಕ ಏಕೀಕರಣದ ಉದ್ದೇಶ ಈಡೇರುವುದಿಲ್ಲ. ಇದರಿಂದಾಗಿ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರಗಳು ಇಂತಹ ವಿವಾದಗಳು ಎದ್ದಂತಹ ಸಂದರ್ಭದಲ್ಲಿ ಕನ್ನಡಪರ ನಿಲುವನ್ನೇ ತಳೆದಿವೆ.

ಹೀಗೆ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರದಲ್ಲಿ ಹುಟ್ಟಿಕೊಂಡ ಧರ್ಮ, ನದಿ, ಗಡಿ ವಿವಾದಗಳು ಕರ್ನಾಟಕದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷಾಬಳಕೆಗೆ ತಡೆಗೋಡೆಗಳಾಗಿವೆ. ಇಂತಹ ವಿವಾದಗಳನ್ನು ಮೀರಿ ಸಂವಿಧಾನ ನಿಯಮ ಮತ್ತು ತಾನೇ ಜಾರಿಗೆ ತಂದ ಭಾಷಾಅನುಷ್ಠಾನಕ್ಕೆ ಸರ್ಕಾರಗಳು ಆಸಕ್ತಿ ವಹಿಸಿಲ್ಲ. ಏಕೆಂದರೆ ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರ ವಿರೋಧ ಕಟ್ಟಿಕೊಳ್ಳಬೇಕಾಗುತ್ತದೆ ಎಂಬ ಭಯ ಸರ್ಕಾರಗಳದ್ದು. ಇಲ್ಲಿ ಸರ್ಕಾರಗಳು ಸಂವಿಧಾನದ ನಿಯಮಗಳನ್ನು ಪಾಲನೆ ಮಾಡಬೇಕು ಎಂಬ ಉದ್ದೇಶದಿಂದ ಅಲ್ಪಸಂಖ್ಯಾತರ ಭಾಷಾಬಳಕೆಗೆ ಭಾಷಾನೀತಿಗಳನ್ನು ಜಾರಿಗೆ ತಂದಿವೆಯೇ ಹೊರತು ಭಾಷಾಅಲ್ಪಸಂಖ್ಯಾತರ ಭಾಷಾಸಮಸ್ಯೆಗಳನ್ನು ಬಗೆಹರಿಸಬೇಕು ಎಂಬ ನಿಜವಾದ ಉದ್ದೇಶದಿಂದಲ್ಲ. ಇಂತಹ ಸಮಸ್ಯೆಗಳು ನ್ಯಾಯಾಲಯಗಳಲ್ಲಿ ಇರುವುದರಿಂದ ಮತ್ತು ದೇಶದ ನ್ಯಾಯಾಲಯಗಳಲ್ಲಿ ಇಂತಹ ಸಮಸ್ಯೆಗಳು ಇತ್ಯರ್ಥಗೊಳ್ಳದೇ ಇರುವುದರಿಂದ ಭಾಷಾಸಮಸ್ಯೆಗಳು ಮುಂದುವರಿದಿವೆ. ಹೀಗಾಗಿ ಕರ್ನಾಟಕದಲ್ಲಿ ಸರ್ಕಾರಗಳು ಅಲ್ಪಸಂಖ್ಯಾತರ ಪರವಾಗಿ ಭಾಷಾಯೋಜನೆಗಳನ್ನು ರೂಪಿಸಿ, ನೀತಿಗಳನ್ನು ಹೊರಡಿಸಿದ್ದರೂ ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರ ವಿರೋಧ ಮತ್ತು ಪ್ರಬಲಭಾಷೆಗಳ ಒಡಿತದ ಕಾರಣ ಸರ್ಕಾರದ ಉದ್ದೇಶಿತ ಮತ್ತು ಭಾಷಾಅಲ್ಪಸಂಖ್ಯಾತರ ಅನುಕೂಲಕ್ಕೆ ಪೂರಕವಾಗಿ ಬಳಕೆಯಾಗಿಲ್ಲ.

ಹೀಗಾಗಿ ಕರ್ನಾಟಕದಲ್ಲಿ ಭಾಷಾಅಲ್ಪಸಂಖ್ಯಾತರ ಪರವಾಗಿ ೦೫.೧೧.೧೯೬೬ರಿಂದ ಭಾಷಾನೀತಿಗಳು ಹೊರಬಂದಿದ್ದರೂ ಕರ್ನಾಟಕ ಸರ್ಕಾರದಿಂದ "೧೯೯೯ರಲ್ಲಿ ೨೮, ೨೦೦೦ದಲ್ಲಿ ೧೧, ೨೦೦೧ರಲ್ಲಿ ೧೦, ೨೦೦೨ರಲ್ಲಿ ೨ ಮತ್ತು ೨೦೦೩ರಲ್ಲಿ ೩ ಆದೇಶಗಳು ಉರ್ದುಭಾಷೆಯಲ್ಲಿ ಪ್ರಕಟಗೊಂಡಿವೆ. ೧೯೯೯ರಲ್ಲಿ ೨೮, ೨೦೦೦ದಲ್ಲಿ ೧೧, ೨೦೦೧ರಲ್ಲಿ ೧೦, ಆದೇಶಗಳು ಮರಾಠಿಯಲ್ಲಿ ಪ್ರಕಟಗೊಂಡಿವೆ. ೨೦೦೨ ಮತ್ತು ೨೦೦೩ರಲ್ಲಿ ಯಾವುದೇ ಆದೇಶವು ಮರಾಠಿಯಲ್ಲಿ ಪ್ರಕಟಗೊಂಡಿಲ್ಲ. ಅಂದರೆ ಇತ್ತೀಚಿನ ಐದು ವರ್ಷಗಳ ಅವಧಿಯಲ್ಲಿ ೫೪ ಉರ್ದು ಮತ್ತು ೪೯ ಮರಾಠಿಭಾಷೆಯ ಆದೇಶಗಳು ಕರ್ನಾಟಕ ಸರ್ಕಾರದಿಂದ ಪ್ರಕಟವಾಗಿವೆ.[೨೦]" ಈ ಅಂಕಿಅಂಶ

ಹಾಗೂ ಇದುವರೆಗೆ ಚರ್ಚಿಸಿರುವ ಅಂಶಗಳನ್ನು ಗಮನಿಸಿದಾಗ ಕರ್ನಾಟಕ ಸರ್ಕಾರಗಳು ಸಂವಿಧಾನದ ಚೌಕಟ್ಟಿಗೆ ಒಳಗಾಗಿ ಭಾಷಾಅಲ್ಪಸಂಖ್ಯಾತರ ಪರವಾಗಿ ಭಾಷಾನೀತಿಗಳನ್ನು ಜಾರಿಗೊಳಿಸಿವೆ. ಆದರೆ ಇವುಗಳ ಅನುಷ್ಠಾನಕ್ಕೆ ಪೂರಕ ವ್ಯವಸ್ಥೆ ಕಲ್ಪಿಸದೆ ನಿರ್ಲಕ್ಷ್ಯ ಮಾಡಿರುವುದರಿಂದ ಭಾಷಾಅಲ್ಪಸಂಖ್ಯಾತರ ಭಾಷೆಗಳು ಕರ್ನಾಟಕದ ಆಡಳಿತದಲ್ಲಿ ಆ ಸಮುದಾಯಗಳಿಗೆ ಪೂರಕವಾಗಿ ಬಳಕೆಯಾಗದೆ ಭಾಷಾಸಮಸ್ಯೆಗೆ ಹೊಸ ರೂಪ ಕೊಟ್ಟಿವೆ.

### ೫.೭ ಇಂಗ್ಲಿಶ್: ಬಳಕೆ ಮತ್ತು ಸಮಸ್ಯೆಗಳು

ಭಾರತ ಸ್ವತಂತ್ರವಾದ ನಂತರದ ದೇಶ ಮತ್ತು ರಾಜ್ಯಗಳ ಆಡಳಿತದಲ್ಲಿ ಬಳಸಬೇಕಾದ ಭಾಷೆ ಅಥವಾ ಭಾಷೆಗಳ ಬಗೆಗೆ ಸುದೀರ್ಘವಾದ ಚರ್ಚೆಗಳು ನಡೆದಿವೆ. ಇವುಗಳಲ್ಲಿ ದೇಶ ಮತ್ತು ರಾಜ್ಯಗಳ ಆಡಳಿತದಲ್ಲಿ ಇಂಗ್ಲಿಶ್‌ನ್ನು ಮುಂದುವರೆಸಬೇಕೆ? ಅಥವಾ ಬೇಡವೇ? ಎಂಬ ಅಂಶ ಪ್ರಮುಖವಾಗಿದೆ. ಏಕೆಂದರೆ ಈಗಾಗಲೆ ಚರ್ಚಿಸಿರುವ ಹಾಗೆ ಆಂಗ್ಲರ ಆಡಳಿತದಲ್ಲಿ ಭಾರತದ ಶಿಕ್ಷಣ, ಆಡಳಿತ. ಉದ್ಯೋಗ ಕ್ಷೇತ್ರಗಳಲ್ಲಿ ಪ್ರಮುಖ ಸ್ಥಾನ ಪಡೆದ ಇಂಗ್ಲಿಶ್ ಭಾರತೀಯರ ಬದುಕಿನ ಕ್ರಮ, ಅಸ್ತಿತ್ವದ ಮೇಲೆ ವ್ಯತಿರಿಕ್ತ ಪರಿಣಾಮ ಬೀರಲು ಆರಂಭಿಸಿತ್ತು. ಇದು ಆಂಗ್ಲರ ಆಡಳಿತದಲ್ಲಿಯೇ ಭಾರತದ ಸ್ವಾತಂತ್ರ್ಯ ಹೋರಾಟದ ಜೊತೆಜೊತೆಯಲ್ಲೇ ದೇಶದ ಆಡಳಿತ, ಶಿಕ್ಷಣ, ಉದ್ಯೋಗಗಳಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆ ಅಥವಾ ಭಾಷೆಗಳನ್ನು ಬಳಕೆಗೆ ತರಬೇಕು ಎಂಬ ಬೇಡಿಕೆಗಳನ್ನು ಹುಟ್ಟುಹಾಕಿತ್ತು. ಈ ಬೇಡಿಕೆಗಳ ಈಡೇರಿಕೆಗಾಗಿ ಆಂಗ್ಲರ ಆಡಳಿತದಲ್ಲಿಯೇ ಹೋರಾಟಗಳು ಆರಂಭವಾಗಿದ್ದವು. ಹೀಗಾಗಿ ಭಾರತ ಸ್ವಾತಂತ್ರ್ಯಗೊಂಡ ದೇಶ ಮತ್ತು ರಾಜ್ಯಗಳ ಆಡಳಿತದಲ್ಲಿ ಬಳಸಬೇಕಾದ ಭಾಷೆಯ ಬಗೆಗೆ ತೀವ್ರ ಚರ್ಚೆಗಳಾಗಿವೆ. ಈ ಚರ್ಚೆಗಳಲ್ಲಿ ಪ್ರಮುಖವಾಗಿ ದೇಶದ ಆಡಳಿತದಲ್ಲಿ ಇಂಗ್ಲಿಶ್‌ನ ಬಳಕೆಯನ್ನು ನಿಯಂತ್ರಿಸುವುದು ಮತ್ತು ರಾಜ್ಯಗಳ ಆಡಳಿತದಲ್ಲಿ ದೇಶೀಯ ಅಥವಾ ಪ್ರಾದೇಶಿಕ ಭಾಷೆಗಳನ್ನು ಅಭಿವೃದ್ಧಿಪಡಿಸುವ ವಿಚಾರಗಳು ಸೇರಿವೆ.

ಇದಕ್ಕೆ ಸಂಬಂಧಸಿದಂತೆ ಸಾಕಷ್ಟು ಚರ್ಚೆಗಳು ಆಗಿ ಅಂತಿಮವಾಗಿ ದೇಶದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿಯನ್ನು ಮತ್ತು ರಾಜ್ಯಗಳ ಆಡಳಿತದಲ್ಲಿ ಪ್ರಾದೇಶಿಕ ಭಾಷೆ ಅಥವಾ ಸ್ಥಳೀಯ ಭಾಷೆಗಳನ್ನು ಆಡಳಿತ ಭಾಷೆಯಾಗಿ ಬಳಸುವ ತೀರ್ಮಾನಕ್ಕೆ ಬರಲಾಗಿದೆ. ಇದಕ್ಕೆ ಸಂಬಂಧಿಸಿದ ಹಾಗೆ ಸಂವಿಧಾನದಲ್ಲಿ ನಿಯಮಗಳನ್ನು ಅಳವಡಿಸಲಾಗಿದೆ. ಹಾಗೆಯೇ ಕೇಂದ್ರ ಮತ್ತು ರಾಜ್ಯಸರ್ಕಾರಗಳು ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಇವುಗಳ ಅನುಷ್ಠಾನಕ್ಕಾಗಿ ಪ್ರಯತ್ನಗಳನ್ನು ಮಾಡಿವೆ. ಇದರಿಂದ ದೇಶದ ಆಡಳಿತ ಮಾತ್ರವಲ್ಲದೆ ಶೈಕ್ಷಣಿಕ, ಔದ್ಯೋಗಿಕ ಕ್ಷೇತ್ರ ಸೇರಿದಂತೆ ಇತರ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಗಳು ಆಗಿವೆ. ಹಾಗೆಯೇ ಸಮಸ್ಯೆಗಳನ್ನು ಹುಟ್ಟುಹಾಕಿವೆ. ಏಕೆಂದರೆ ದೇಶದ ಆಡಳಿತದಲ್ಲಿ ಇಂತಿಂತಹ ಭಾಷೆಗಳನ್ನು, ಹೀಗೀಗೆ ಬಳಸಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತರಬೇಕೆಂದರೆ ಅದಕ್ಕೆ ಅನುಗುಣವಾಗಿ ಮಕ್ಕಳಿಗೆ ಶಾಲೆಗಳಲ್ಲಿ ಭಾಷೆಗಳನ್ನು ಕಲಿಸಬೇಕು. ಹಾಗೆಯೇ ಆ ಭಾಷೆ ಅಥವಾ ಭಾಷೆಗಳನ್ನು ಆಡಳಿತದಲ್ಲಿ

ಬಳಸಲು ಸಿದ್ಧತೆ ಮಾಡಿಕೊಳ್ಳಬೇಕು ಮತ್ತು ಅಗತ್ಯ ಪರಿಕರಗಳನ್ನು ಒದಗಿಸುವ ಮೂಲಕ ಪೂರಕ ವ್ಯವಸ್ಥೆ ನಿರ್ಮಾಣ ಮಾಡಬೇಕು. ಈ ಸಿದ್ಧತೆಗಳನ್ನು ಮಾಡದೆ ಸರ್ಕಾರಗಳು ಕೇವಲ ಭಾಷಾನೀತಿಯನ್ನು ಜಾರಿಗೆ ತಂದರೆ ಅದರಿಂದ ಸಮಸ್ಯೆಗಳು ಉದ್ಭವಿಸುತ್ತವೆ.

ಇವುಗಳನ್ನು ಗಮನದಲ್ಲಿಟ್ಟುಕೊಂಡು ಭಾರತ ಸಂವಿಧಾನ ರಚನಾಕಾರರು ಸಂವಿಧಾನದ ೩೪೩ನೇ ಅನುಚ್ಛೇದದಿಂದ ೩೫೧ನೇ ಅನುಚ್ಛೇದಗಳವರೆಗೆ ಕೆಲವು ನಿಯಮಗಳನ್ನು ಅಳವಡಿಸಿದ್ದಾರೆ. ಇವುಗಳಲ್ಲಿ ದೇಶದ ಮತ್ತು ರಾಜ್ಯಗಳ ಆಡಳಿತದಲ್ಲಿ ಬಳಕೆಯಾಗಬೇಕಾದ ಭಾಷೆ, ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿಯನ್ನು ಬಳಕೆಗೆ ತರುವ ವಿಚಾರ, ರಾಜ್ಯಗಳ ಆಡಳಿತದಲ್ಲಿ ಪ್ರಾದೇಶಿಕ ಭಾಷೆಗಳ ಬಳಕೆ, ಆಡಳಿತದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷೆಗಳ ಬಳಕೆಗೆ ಕಲ್ಪಿಸಬೇಕಾದ ಅವಕಾಶ, ಈ ಭಾಷೆಗಳ ಬಳಕೆಗೆ ಸಂಬಂಧಿಸಿದ ಹಾಗೆ ಸರ್ಕಾರಗಳು ಕೈಗೊಳ್ಳಬೇಕಾದ ಕ್ರಮದ ವಿಚಾರಗಳು ಮುಖ್ಯವಾಗಿವೆ. ಈ ನಿಯಮಗಳ ಪ್ರಕಾರ ದೇಶ ಮತ್ತು ರಾಜ್ಯಗಳ ಆಡಳಿತದಲ್ಲಿ ಭಾಷೆಗಳನ್ನು ಅನುಷ್ಠಾನಕ್ಕೆಗೊಳಿಸಲು ಸೂಕ್ತಸಲಹೆ ನೀಡಲು ಭಾರತ ಸರ್ಕಾರ ಸಂವಿಧಾನದ ೩೪೪ನೇ ಅನುಚ್ಛೇದದ ನಿಯಮಗಳನ್ನು ಅನುಸರಿಸಿ, ಭಾರತ ಸರ್ಕಾರದ ಒಳಾಡಳಿತ ಶಾಖೆಯ ಮಿನಿಷ್ಟ್ರಿಯವರಿಂದ ಸಾದರವಾದ ೪೩-೯-೫೫- ಪಬ್ಲಿಕ್‌೧ (ಅನುಬಂಧ ೨)ನೆಯ ನಂಬರಿನ ಅಧಿಸೂಚನೆಯಲ್ಲಿ (ಇಸ್ತಿ ಹಾರ್ನಾಮೆಯಲ್ಲಿ) ಅಡಕವಾಗಿರುವ ತಮ್ಮ ಆದೇಶದ ಮೇರೆಗೆ ರಾಷ್ಟ್ರಪತಿಯವರು ೧೯೫೫ನೇ ಇಸವಿ ಜೂನ್ ೭ನೆಯ ತಾರೀಖಿನಂದು ರಾಜಭಾಷಾ ಆಯೋಗವನ್ನು ನೇಮಕ ಮಾಡಿದ್ದಾರೆ. ಈ ಆಯೋಗಕ್ಕೆ ಕೇಳಿರುವ ಸಲಹೆಗಳನ್ನು ಪ್ರಸ್ತಾವನೆಯಲ್ಲಿ ಉಲ್ಲೇಖಿಸಲಾಗಿದೆ. ಇವುಗಳನ್ನು ಗಮನಿಸಿದಾಗ ಭಾರತ ಸ್ವತಂತ್ರಗೊಂಡ ನಂತರದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆಯನ್ನು ಬಳಕೆಗೆ ತರುವುದು ಅಂದರೆ ಹಿಂದಿ ಭಾಷೆಯನ್ನು ಭಾರತದ ಆಡಳಿತ ಭಾಷೆಯಾಗಿ ಬಳಕೆಗೆ ತರುವ ಉದ್ದೇಶ ಇದ್ದದ್ದು ಸ್ಪಷ್ಟವಾಗುತ್ತದೆ. ಹಾಗೆಯೇ ಇದಕ್ಕೆ ಸಂಬಂಧಿಸಿದಂತೆ ರಾಜಭಾಷಾ ಆಯೋಗದ ವರದಿ ತಯಾರಿಸಲು ನೇಮಕಗೊಂಡ ಸಮಿತಿಯವರು 'ರಾಷ್ಟ್ರದ ಪ್ರಜಾಸಂಖ್ಯೆಯಲ್ಲಿ ಸೇಕಡ ೯೯ರಷ್ಟು ಜನರಿಗೆ ಗೊತ್ತಿಲ್ಲದಿರುವ ಭಾಷೆಯಲ್ಲಿ ರಾಷ್ಟ್ರದ ಆಡಳಿತ ಯಂತ್ರವು ನಡೆದುಕೊಂಡು ಬರಬೇಕೆ? ಗ್ರಾಮಪಂಚಾಯಿತಿಯಿಂದ ಹಿಡಿದು ಭಾರತದ ಸಂಸತ್ತಿನವರೆಗೆ ಇಡೀ ರಾಷ್ಟ್ರದ ಎಲ್ಲಾ ಹಂತಗಳ ರಾಜಕೀಯ ಜೀವನದಲ್ಲಿ ಪ್ರಜಾಸತ್ತಾತ್ಮಕ ಕಾರ್ಯವಿಧಾನವು ಆಚರಣೆಯಲ್ಲಿರುವುದು ಸರಿಯಷ್ಟೇ; ಆ ಪ್ರಜಾಸತ್ತಾತ್ಮಕ ಕಾರ್ಯವಿಧಾನವು ಸುಸೂತ್ರವಾಗಿಯೂ ಮತ್ತು ಶಾಂತಿಯಿಂದಲೂ ನಡೆಯಬೇಕಾದರೆ ಅಧಿಕ ಸಂಖ್ಯೆಯ ಜನರಿಗೆ ಗೊತ್ತಿಲ್ಲದಿರುವ ಭಾಷೆಯಿಂದ ಆಡಳಿತ ಯಂತ್ರವನ್ನು ನಡೆಯಿಸುವುದಾದರೆ ಅದರಿಂದ ದಾರುಣ ಅಪಾಯ ಸಂಭವಿಸುವುದಿಲ್ಲವೇ? ಎಂಬ ಪ್ರಶ್ನೆಗಳನ್ನು ಕೇಳಿಕೊಂಡಿದ್ದಾರೆ.

ಇದಕ್ಕೆ ಸಂಬಂಧಿಸಿದಂತೆ 'ರಾಜಕೀಯ ಪಂಗಡಗಳವರು ಸ್ಥಳೀಯ ಉದ್ದೇಶಗಳ ಸಂಬಂಧದಲ್ಲಿ ಜನರೊಡನೆ ವ್ಯವಹರಿಸುವಾಗ ಇಂಗ್ಲಿಷ್ ಭಾಷೆಯ ಬದಲು ಆ ಪ್ರದೇಶದಲ್ಲಿ ರೂಢಿಯಲ್ಲಿರುವ ಪ್ರಾದೇಶಿಕ ಭಾಷೆಯನ್ನು ಮತ್ತು ಇಡೀ ಭಾರತಕ್ಕೆ ಸಂಬಂಧಪಟ್ಟ ಉದ್ದೇಶಗಳ ಸಂಬಂಧದಲ್ಲಿ

ವ್ಯವಹರಿಸುವಾಗ ಹಿಂದೀ ಅಥವಾ ಹಿಂದುಸ್ತಾನಿ ಭಾಷೆಯನ್ನು ಅತ್ಯಗತ್ಯವಾಗಿ ಉಪಯೋಗಿಸಬೇಕಾಗಿರುವುದರಿಂದ ಪರಿಸ್ಥಿತಿಯು ವಾಸ್ತವವಾಗಿ ಸ್ಪಷ್ಟಪಡುತ್ತದೆ. ಈ ಕಾರಣದಿಂದಾಗಿ ೧೯೫೨ನೆಯ ಇಸವಿಯಲ್ಲಿ ಜರುಗಿದ ಕಾನ್‌ಪುರ ಅಧಿವೇಶನದಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನವರೂ (ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ ಸಂಸ್ಥೆಯವರು) ಕಾಂಗ್ರೆಸ್ ಪ್ರಾಂತೀಯ ಸಮಿತಿಗಳವರೂ ತಮ್ಮೆಲ್ಲಾ ಕಾರ್ಯಕಲಾಪಗಳಿಗೂ ಆಯಾ ಪ್ರಾದೇಶಿಕ ಭಾಷೆಗಳನ್ನೂ ಅಥವಾ ಹಿಂದಿಯನ್ನೂ ಮತ್ತು ಕಾಂಗ್ರೆಸ್ ಸಂಸ್ಥೆ ಮತ್ತು ಅದಕ್ಕೆ ಸಂಬಂಧಪಟ್ಟ ಎಲ್ಲಾ ಸಮಿತಿಗಳು ಇಡೀ ಭಾರತಕ್ಕೆ ಸಂಬಂಧಪಟ್ಟಂತೆ ವ್ಯವಹಾರ ಮಾಡುವಾಗ ಸಾಮಾನ್ಯವಾಗಿ ಹಿಂದೂಸ್ತಾನಿ ಭಾಷೆಯನ್ನೂ ಉಪಯೋಗಿಸಬೇಕೆಂದು ನಿರ್ಣಯವನ್ನು ಮಾಡಿದರು'[೨೧]. ಅಂದರೆ ದೇಶದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿ ಅಥವಾ ಹಿಂದೂಸ್ತಾನಿಯನ್ನು ಬಳಕೆಗೆ ತರುವ ಅಭಿಪ್ರಾಯಗಳು ಅಂದಿನ ಕಾಂಗ್ರೆಸ್ ಸರ್ಕಾರದಲ್ಲಿ ಇದ್ದದ್ದು ಸ್ಪಷ್ಟ. ಹೀಗಾಗಿ ದೇಶ ಸ್ವತಂತ್ರಗೊಂಡ ನಂತರದಲ್ಲಿ ಇದಕ್ಕೆ ಸಿದ್ಧತೆ ಮಾಡಲು ಅಗತ್ಯ ನೆರವನ್ನು ಕೊಡಲು ಕಾಂಗ್ರೆಸ್ ಆಲೋಚಿಸಿದೆ.

ಹೀಗೆ ಭಾರತ ಸ್ವತಂತ್ರಗೊಂಡ ನಂತರ ದೇಶದ ಆಡಳಿತದಲ್ಲಿ ಬಳಕೆಯಾಗುತ್ತಿದ್ದ ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿಯನ್ನು ಬಳಕೆಗೆ ತರುವ ಯೋಚನೆಗಳು ನಡೆಯುತ್ತಿರುವಾಗಲೇ 'ಇಂಗ್ಲಿಷ್ ಇಂದು ಪ್ರಪಂಚದಲ್ಲಿ ಅತ್ಯಂತ ಪ್ರಸಿದ್ಧ ಭಾಷೆಗಳ ಪೈಕಿ ಒಂದಾಗಿದೆ. ಕಳೆದ ಹತ್ತು ವರ್ಷಗಳಿಂದಲೂ ಅಂತರಾಷ್ಟ್ರೀಯ ಸಂಸ್ಥೆಗಳಲ್ಲಿಯೂ ಮತ್ತು ಸಮ್ಮೇಳನಗಳಲ್ಲಿಯೂ ಇಂಗ್ಲಿಷ್ ಭಾಷೆಯು ಇತರ ಭಾಷೆಗಳನ್ನು ಹಿಂದಕ್ಕೆ ಹಾಕಿ ಮುನ್ನುಗ್ಗಿದೆ. ಇದಕ್ಕೆ ಮೊದಲು ಈ ಇತರ ಭಾಷೆಗಳು ಇಂಗ್ಲಿಷ್ ಭಾಷೆಯೊಂದಿಗೆ ಅಗ್ರಸ್ಥಾನವನ್ನು ಪಡೆದಿದ್ದವು. ಆದರೆ ಈಗಲಾದರೋ ಇಂಗ್ಲಿಷ್ ಭಾಷೆಯು ಅಂತರಾಷ್ಟ್ರೀಯ ವ್ಯವಹಾರದಲ್ಲಿ ಸಹಜವಾಗಿಯೂ ಅತ್ಯಂತ ಪ್ರಮುಖ ಭಾಷಾಮಾಧ್ಯಮವಾಗಿದೆ.[೨೨]' ಹಾಗೆಯೇ 'ಭಾರತದಲ್ಲಿರುವ ನಾವು ಎರಡು ಶತಮಾನಗಳವರೆಗೆ ನಡೆದ ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಈಗಾಗಲೇ ಗಣನೀಯವಾದಷ್ಟು ಮಟ್ಟಿಗೆ ಪ್ರೌಢಿಮೆಯನ್ನು ಗಳಿಸಿರುತ್ತೇವೆ. ಹೀಗಿದ್ದೂ ಇದರ ಅನುಕೂಲತೆಯನ್ನು ಹೋಗಲಾಡಿಸಿಕೊಳ್ಳುವುದೆಂದರೆ ಕೇವಲ ಅವಿವೇಕತನವೇ ಸರಿ. ಇಂದು ಇಂಗ್ಲಿಷ್ ಭಾಷೆಯು ಭಾರತದ ಸರ್ಕಾರಿ ಭಾಷೆಯಾಗಿರುವುದು ಮಾತ್ರವಲ್ಲದೆ ದೇಶದ ಪ್ರೌಢವ್ಯಾಸಂಗ ಕ್ರಮದ ಭಾಷೆಯೂ ಆಗಿದೆ. ಅಷ್ಟೇ ಅಲ್ಲದೆ ಇಂಗ್ಲೀಷ ಭಾಷೆಯು, ಭಾರತದ ಭಾಷಾವಾರಿನ ಎಲ್ಲಾ ತಂಡಗಳವರಲ್ಲಿಯೂ ('ಗ್ರೂಪ್ಸ್') ಖಾಸಗಿ ಉದ್ದೇಶಗಳಿಗಾಗಿ ಉನ್ನತ ಮಟ್ಟಗಳಲ್ಲಿ ನಡೆಯತಕ್ಕ ವ್ಯವಹಾರದ ಒಂದೇ ಒಂದು ಭಾಷೆಯೂ ಆಗಿದೆ. ನಿಜವಾಗಿಯೂ, ಇಂಗ್ಲಿಷ್ ಭಾಷೆಯನ್ನು ಬಿಟ್ಟರೆ ಈಗ ಸರ್ವಸಾಮಾನ್ಯವಾದ ಯಾವ ಅಭಿವ್ಯಕ್ತಿ ಮಾಧ್ಯಮವೂ ಇರುವುದಿಲ್ಲ; ಮತ್ತು ಯಾವುದಾದರೂ ಒಂದು ಆಶ್ಚರ್ಯಕರವಾದ ಘಟನೆಯಿಂದ ನಾವೆಲ್ಲರೂ ಇದ್ದಕ್ಕಿದ್ದಂತೆಯೇ ಇಂಗ್ಲಿಷ್ ಭಾಷೆಯನ್ನು ಮರೆಯುವಂತಾದರೆ, ಈ ದೇಶದಲ್ಲಿರತಕ್ಕ ಬೇರೆಬೇರೆ ಭಾಷಾವಾರಿನ ತಂಡಗಳವರಲ್ಲಿ ('ಗ್ರೂಪ್ಸ್') ಪರಸ್ಪರ ವ್ಯವಹಾರ ನಡೆಯಲು ಅಸಾಧ್ಯವಾದುದು[೨೩]' ಎಂದು ಇಂಗ್ಲಿಶ್ ಭಾಷೆಯ ಪರವಾದ ಅಭಿಪ್ರಾಯ ವ್ಯಕ್ತವಾಗಿದೆ.

ಇದರ ಜೊತೆಗೆ ಭಾರತ ಸ್ವತಂತ್ರಗೊಂಡ ನಂತರ 'ರಾಷ್ಟ್ರಾಭಿವೃದ್ಧಿಗೆ ಸಂಬಂಧಪಟ್ಟ ಕಾರ್ಯಗಳನ್ನು ನಾವು ಕೈಗೆತ್ತಿಕೊಳ್ಳುತ್ತಿದ್ದೇವೆ; ಆ ಕಾರ್ಯಗಳು ಚೆನ್ನಾಗಿ ಮುಂದುವರೆಯುತ್ತಿವೆ; ಈ ಹಂತದಲ್ಲಿ ಭಾಷಾಮಾಧ್ಯಮವನ್ನು ಬದಲಾಯಿಸಬೇಕೆಂಬ ಮತ್ತೊಂದು ಸಮಸ್ಯೆಯನ್ನು ತಂದೊಡ್ಡಿ ನಮ್ಮ ಆಡಳಿತ ಯಂತ್ರಕ್ಕೆ ಹೆಚ್ಚಿನ ಹೊರೆಯನ್ನು ನಾವು ಏತಕ್ಕೆ ಹೊರಿಸಬೇಕು; ನಾವು ಆಡಳಿತ ಯಂತ್ರಕ್ಕೆ ಅನೇಕ ಕರ್ತವ್ಯಗಳ ನಿರ್ವಹಣೆಯನ್ನು ಹೊರಿಸಿದರೆ ಆಡಳಿತ ಯಂತ್ರದ ಕಾರ್ಯಕ್ಷೇತ್ರವು ವಿಸ್ತಾರವಾಗುವುದು ಮತ್ತು ಆಡಳಿತ ಯಂತ್ರಕ್ಕೆ ಅಧಿಕ ಶ್ರಮವನ್ನು ಕೊಟ್ಟಂತಾಗುವುದು; ಭಾಷಾಮಾಧ್ಯಮವನ್ನು ಕಾರ್ಯರೂಪಕ್ಕೆ ತರುವ ಹೊಣೆಗಾರಿಕೆಯನ್ನು ಆಡಳಿತ ಯಂತ್ರವೇ ನಿರ್ವಹಿಸಬೇಕಾಗಿರುವುದರಿಂದ ಅದಕ್ಕೆ ಅಧಿಕ ಶ್ರಮವಾಗುತ್ತದೆ. ಇಂಥ ಸನ್ನಿವೇಶದಲ್ಲಿ ಆಡಳಿತ ಯಂತ್ರವನ್ನು ನಡೆಸುತ್ತಿರುವ ಭಾಷಾಮಾಧ್ಯಮವನ್ನು ಬದಲಾಯಿಸಿ ಬೇರೊಂದು ಭಾಷೆಯನ್ನು ಆ ಸ್ಥಾನಕ್ಕೆ ತರುವುದು ವಿವೇಕಯುಕ್ತವೇ? ಭಾಷಾಮಾಧ್ಯಮವನ್ನು ಬದಲಾಯಿಸುವ ಕೆಲಸ ಒಂದಲ್ಲ ಒಂದು ದಿನ ನಡೆಯಲೇಬೇಕಾಗಿದೆ. ಆದರೆ ಈಗಿನ ಸನ್ನಿವೇಶದಲ್ಲಿ ಅದನ್ನು ಬದಲಾಯಿಸುವುದರಿಂದ ಆಡಳಿತ ಕಾರ್ಯಗಳು ಅಸ್ತವ್ಯಸ್ತವಾಗುವುದಿಲ್ಲವೇ; ಮತ್ತು ರಾಷ್ಟ್ರದ ಪ್ರಗತಿಗೆ ಧಕ್ಕೆ ತಗಲುವುದಿಲ್ಲವೇ[೨೪]' ಎಂಬಂತಹ ಪ್ರಶ್ನೆಗಳೂ ಹುಟ್ಟಿಕೊಂಡಿವೆ.

ಇದರ ಜೊತೆಗೆ ಇಂಗ್ಲಿಶ್‌ನ್ನು ದೇಶದ ಆಡಳಿತ ಭಾಷೆಯಾಗಿ ಮುಂದುವರೆಸುವುದರಿಂದ ದೇಶದ ಆಡಳಿತ ಮತ್ತು ಅಂತರಾಷ್ಟ್ರಮಟ್ಟದ ವ್ಯವಹಾರ, ಒಪ್ಪಂದಗಳಿಗೆ ಒಂದೇ ಭಾಷೆಯ ಬಳಕೆ ಸಾಕಾಗುತ್ತದೆ. ಹಿಂದಿಯನ್ನು ದೇಶದ ಆಡಳಿತ ಭಾಷೆಯಾಗಿಸಿದರೆ ಮತ್ತೆ ಅಂತರಾಷ್ಟ್ರೀಯ ಮಟ್ಟದ ವ್ಯವಹಾರ, ಒಪ್ಪಂದಗಳಿಗೆ ಇಂಗ್ಲಿಶ್‌ನ ಅಗತ್ಯತೆ ಉಂಟಾಗಲಿದೆ. ಇಂಗ್ಲಿಶ್ ಈಗಾಗಲೇ ದೇಶ, ವಿದೇಶ, ಖಾಸಗಿ ಕ್ಷೇತ್ರಗಳ ಆಡಳಿತದ, ವ್ಯವಹಾರದ, ಉದ್ಯೋಗದ, ಶಿಕ್ಷಣದ ಭಾಷೆಯಾಗಿ ಬಳಕೆಯಾಗುತ್ತಿವುದರಿಂದ ದೇಶದ ಆಡಳಿತದಲ್ಲಿ ಇಂಗ್ಲಿಶ್‌ನ್ನು ಮುಂದುವರೆಸುವುದೇ ಒಳಿತು. ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿಯನ್ನು ದೇಶದ ಆಡಳಿತ ಭಾಷೆಯಾಗಿಸಿದರೆ ದೇಶದಲ್ಲಿ ಮಕ್ಕಳು ಮಾತೃಭಾಷೆ, ರಾಜ್ಯಭಾಷೆ, ರಾಷ್ಟ್ರಭಾಷೆ, ಅಂತರಾಷ್ಟ್ರೀಯ ಭಾಷೆ ಎಂಬ ಹೆಸರಿನಲ್ಲಿ ಹಲವು ಭಾಷೆಗಳನ್ನು ಕಲಿಯಬೇಕಾಗುತ್ತದೆ. ಇದಕ್ಕೆ ಸರ್ಕಾರಗಳು ವ್ಯವಸ್ಥೆ ಮಾಡಬೇಕಾಗುತ್ತದೆ. ಇದರಿಂದ ಸರ್ಕಾರಗಳಿಗೆ ಆರ್ಥಿಕ ಹೊರೆಯಾಗುತ್ತದೆ. ಜೊತೆಗೆ ಮಕ್ಕಳು ಶಾಲೆಗಳಲ್ಲಿ ಹೆಚ್ಚಿನ ಸಮಯವನ್ನು ವಿಷಯಗಳ ಕಲಿಕೆಗಿಂತ ಭಾಷಾಕಲಿಕೆಗೆ ಮೀಸಲಿಡಬೇಕಾಗುತ್ತದೆ. ಮಕ್ಕಳಿಗೆ ಶಾಲೆಗಳಲ್ಲಿ ಹೆಚ್ಚು ಭಾಷೆಗಳನ್ನು ಕಲಿಸುವ ಒತ್ತಡವನ್ನು ತಪ್ಪಿಸಲು ದೇಶದ ಆಡಳಿತದಲ್ಲಿ ಇಂಗ್ಲಿಶ್ ಮುಂದುವರೆಸುವುದೇ ಒಳಿತು ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ.

ಈ ಎಲ್ಲಾ ಅಂಶಗಳನ್ನು ಈ ಮೊದಲೇ ಭಾರತ ಸಂವಿಧಾನ ರಚನಾಕಾರರು ಮನಗಂಡಿದ್ದು ಸಂವಿಧಾನದಲ್ಲಿ ಭಾರತ ಸಂವಿಧಾನ ಅಂಗೀಕೃತವಾದ ನಂತರ ಹದಿನೈದು ವರ್ಷಗಳ ಕಾಲ ದೇಶದ ಆಡಳಿತ ಮತ್ತು ರಾಜ್ಯರಾಜ್ಯಗಳ ನಡುವಿನ ವ್ಯವಹಾರದಲ್ಲಿ ಇಂಗ್ಲಿಶ್‌ನ ಬಳಕೆ ಮುಂದುವರಿಸುವುದಕ್ಕೆ

ಅವಕಾಶ ಕಲ್ಪಿಸಿದ್ದಾರೆ. ಇದು ದೇಶದ ಆಡಳಿತದಲ್ಲಿ ಇಂಗ್ಲಿಶ್‌ನ್ನು ಶಾಶ್ವತವಾಗಿ ಮುಂದುವರೆಸುವ ಉದ್ದೇಶದಿಂದ ರೂಪಿಸಿರುವ ನಿಯಮವಲ್ಲ. ಬದಲಾಗಿ ದೇಶದ ಆಡಳಿತದಲ್ಲಿ ದೇಶೀಯ ಭಾಷೆಗಳನ್ನು ಆಡಳಿತ ಭಾಷೆಯಾಗಿ ಬಳಸಲು ಸಿದ್ಧತೆ ಮಾಡಿಕೊಳ್ಳುವ ಉದ್ದೇಶದಿಂದ ರೂಪಿಸಿರುವ ನಿಯಮ. ಆದರೆ ಇದು ಭಾರತ ಸ್ವತಂತ್ರಗೊಂಡು ಹದಿನೈದು ವರ್ಷಗಳು ಮುಕ್ತಾಯವಾದ ನಂತರವಲ್ಲೂ ಮುಂದುವರೆದಿದೆ. ಏಕೆಂದರೆ ಇದುವರೆಗೆ ಚರ್ಚಿಸಿದ ಹಾಗೆ ದೇಶದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಹಿಂದಿಯನ್ನು ಬಳಕೆಗೆ ತರಲು ವ್ಯಕ್ತವಾಗಿರುವ ವಿರೋಧ ಹಾಗೂ ದೇಶದ ಆಡಳಿತದಲ್ಲಿ ಇಂಗ್ಲಿಶ್‌ಗೆ ಪರ್ಯಾಯವಾಗಿ ಭಾರತೀಯ ಭಾಷೆಯನ್ನು ಬಳಕೆಗೆ ತರಲು ಸಿದ್ಧತೆ ಮಾಡಿಕೊಳ್ಳುವಲ್ಲಿ ವಿಫಲವಾಗಿರುವುದು ಕಾರಣವಾಗಿದೆ. ಇದರ ಜೊತೆಗೆ ಖಾಸಗಿ ಉದ್ಯಮ ಕ್ಷೇತ್ರ ಭಾರತ ಸ್ವಾತಂತ್ರ್ಯಾನಂತರದಲ್ಲಿ ಪ್ರಬಲವಾಗಿದ್ದು ತನ್ನೆಲ್ಲಾ ವ್ಯವಹಾರ ವಹಿವಾಟಿಗೆ ಇಂಗ್ಲಿಶ್‌ನ್ನು ಬಳಸಿದೆ. ಹೀಗಾಗಿ ದೇಶದ ಆಡಳಿತದಲ್ಲಿ ಭಾರತ ಸಂವಿಧಾನ ಅಂಗೀಕೃತವಾದ ಹದಿನೈದು ವರ್ಷಗಳ ನಂತರವೂ ದೇಶದ ಆಡಳಿತದಲ್ಲಿ ಇಂಗ್ಲಿಶ್ ಬಳಕೆ ಮುಂದುವರೆದಿದೆ.

ಏಕೆಂದರೆ ದೇಶದ ಆಡಳಿತ, ವ್ಯವಹಾರದಲ್ಲಿ ಇಂಗ್ಲಿಶ್‌ಗೆ ಬದಲಾಗಿ ಹಿಂದಿಯನ್ನು ಬಳಸಿದರೂ ಅಂತರಾಷ್ಟ್ರೀಯ ವ್ಯವಹಾರ, ಒಪ್ಪಂದಗಳಿಗೆ, ಖಾಸಗಿ ಕ್ಷೇತ್ರದ ಜೊತೆಗಿನ ಒಡನಾಟದಲ್ಲಿ ಇಂಗ್ಲಿಶ್ ಬಳಸುವ ಅನಿವಾರ್ಯತೆ ಇದ್ದೇ ಇತ್ತು. ಏಕೆಂದರೆ ಅಂತರಾಷ್ಟ್ರೀಯ ಮಟ್ಟದ ವ್ಯವಹಾರ ಮತ್ತು ಖಾಸಗಿ ಕ್ಷೇತ್ರಗಳ ಆಡಳಿತ ಮತ್ತು ವ್ಯವಹಾರದ ಭಾಷೆ ಇಂಗ್ಲಿಶ್ ಆಗಿದೆ. ಅಂತರಾಷ್ಟ್ರೀಯ ಮಟ್ಟದ ವ್ಯವಹಾರದಲ್ಲಿ ಹಿಂದಿ ಭಾಷೆಗೆ ಅಂತಹ ಪ್ರಾತಿನಿಧ್ಯವಿಲ್ಲ. ಇದರ ಜೊತೆಗೆ ಜಾಗತೀಕರಣದ ಪರಿಣಾಮವಾಗಿ ಆರಂಭವಾಗಿರುವ ಬಹುರಾಷ್ಟ್ರಿಯ ಕಂಪನಿಗಳು, ಕೈಗಾರಿಕೆಗಳು, ಉದ್ದಿಮೆಗಳು, ಹೋಟೆಲ್‌ಗಳು, ಸಾಫ್ಟ್‌ವೇರ್ ಇಂಜಿನಿಯರಿಂಗ್ ಕ್ಷೇತ್ರಗಳ ವ್ಯವಹಾರ, ಒಡನಾಟ ಒಂದು ಪ್ರದೇಶಕ್ಕೆ ಸೀಮಿತವಾಗದೆ ದೇಶ-ವಿದೇಶಗಳಲ್ಲಿ ವಿಶಾಲವಾಗಿ ವ್ಯಾಪಿಸಿಕೊಂಡಿದೆ. ಹೀಗಾಗಿ ಇವುಗಳ ಉತ್ಪಾದನೆ, ಆಡಳಿತ ಮತ್ತು ವ್ಯಾಪಾರ ಕೇಂದ್ರಗಳು ದೇಶ-ವಿದೇಶದಲ್ಲಿ ಇರುವುದರಿಂದ ಎಲ್ಲಾ ಪ್ರದೇಶಗಳ ಆಡಳಿತ ವ್ಯವಹಾರದ ಅನುಕೂಲಕ್ಕಾಗಿ ಇಂಗ್ಲಿಶ್‌ನ್ನು ತಮ್ಮ ಆಡಳಿತ, ವ್ಯವಹಾರದ ಭಾಷೆಯಾಗಿ ಬಳಸುತ್ತಿವೆ.

ಇದರ ಜೊತೆಗೆ ಈ ಖಾಸಗಿ ಕ್ಷೇತ್ರಗಳಲ್ಲಿ ಉತ್ಪಾದನೆಯಾಗುವ ವಸ್ತುಗಳ ಗ್ರಾಹಕವರ್ಗ ದೇಶ-ವಿದೇಶಗಳಲ್ಲಿನ ಶ್ರೀಮಂತ ಮತ್ತು ಮಧ್ಯಮವರ್ಗ. ಇದನ್ನು ಖಾಸಗಿ ಕಂಪನಿಗಳು ತಮ್ಮತ್ತ ಆಕರ್ಷಿಸಲು ಅವರ ಭಾಷೆ ಬಳಸುವುದು, ಅವರ ಭಾಷೆಯಲ್ಲಿ ಮಾಹಿತಿ ಒದಗಿಸುವುದು ಮುಖ್ಯ. ಇಲ್ಲದಿದ್ದರೆ ತಮ್ಮ ಉತ್ಪನ್ನ, ಅವುಗಳ ಬಳಕೆಯ ವಿಧಾನಗಳ ಬಗೆಗೆ ಮಾಹಿತಿಯ ಕೊರತೆ ಉಂಟಾಗಿ ಉತ್ಪನ್ನಗಳನ್ನು ಬಳಸುವುದಕ್ಕೆ ಹಿಂದೆ ಸರಿಯುತ್ತಾರೆ. ಇದರಿಂದಾಗಿ ಈ ಕಂಪನಿಗಳು ಲಾಭದಿಂದ ವಂಚಿತವಾಗುತ್ತವೆ. ಇಲ್ಲವೆ ನಷ್ಟವನ್ನು ಅನುಭವಿಸುತ್ತವೆ. ಈ ಹಿನ್ನೆಲೆಯಲ್ಲಿ ಖಾಸಗಿ ಕ್ಷೇತ್ರದಲ್ಲಿ ಉತ್ಪಾದನೆಯಾಗುತ್ತಿರುವ ಎಲ್ಲಾ ಉತ್ಪನ್ನ, ಅವುಗಳ ಬಳಕೆಯ ವಿಧಾನಗಳ ಬಗೆಗೆ ಮಾಹಿತಿಗಳನ್ನು ಇಂಗ್ಲಿಶ್‌ನಲ್ಲಿ ಮುದ್ರಿಸಲಾಗಿದೆ. ಏಕೆಂದರೆ ಈಗಾಗಲೇ ಹೇಳಿದ ಹಾಗೆ ಖಾಸಗಿ ಕಂಪನಿಗಳು

ವ್ಯವಹಾರ, ಕೈಗಾರಿಕೆಗಳಲ್ಲಿ ಉತ್ಪಾದನೆಯಾಗುವ ವಸ್ತುಗಳ ಮಾರಾಟ ಒಂದು ಪ್ರದೇಶಕ್ಕೆ ಸೀಮಿತವಾಗದೆ ದೇಶದೊಳಗಿನ ಎಲ್ಲಾ ರಾಜ್ಯಗಳು ಮತ್ತು ವಿದೇಶಗಳ ಜೊತೆ ವ್ಯಾಪಿಸಿಕೊಂಡಿರುವುದರಿಂದ ಎಲ್ಲಾ ಪ್ರದೇಶಕ್ಕೆ ಸಮಾನವಾಗಿ ಅನ್ವಯವಾಗುವ ಹಾಗೆ ಭಾಷಾಬಳಕೆ ಅನಿವಾರ್ಯವಾಗಿರುವುದರಿಂದ ಅವುಗಳು ತಮ್ಮ ವ್ಯವಹಾರ, ಉತ್ಪನ್ನಗಳಿಗೆ ಸಂಬಂಧಿಸಿದ ಹಾಗೆ ನೀಡುವ ಜಾಹಿರಾತು, ಮಾಹಿತಿಗಳಲ್ಲಿ ಇಂಗ್ಲಿಶ್‌ನ್ನು ಬಳಸಿವೆ. ಹಾಗೆಯೇ ಈ ಖಾಸಗಿ ಕಂಪನಿಗಳ ಆಡಳಿತ ವ್ಯವಹಾರ ದೇಶ-ವಿದೇಶಗಳಲ್ಲಿ ನಡೆಯುವುದರಿಂದ ಆಡಳಿತ, ವ್ಯವಹಾರಗಳಲ್ಲಿಯೂ ಇಂಗ್ಲಿಶ್‌ನ್ನು ತಮ್ಮ ಆಡಳಿತದ, ವ್ಯವಹಾರದ ಭಾಷೆಯಾಗಿ ಬಳಸುತ್ತಿವೆ.

ಇವುಗಳು ಸ್ಥಳೀಯ ಪ್ರದೇಶಗಳ ಭಾಷಾನೀತಿಗಳ ಪ್ರಕಾರ ತಮ್ಮ ಆಡಳಿತ, ವ್ಯವಹಾರದಲ್ಲಿ ಉತ್ಪಾದನೆಯಾದ ವಸ್ತು, ಅವುಗಳನ್ನು ಬಳಸುವ ವಿಧಾನಗಳ ಬಗೆಗೆ ಮಾಹಿತಿಯನ್ನು ಸ್ಥಳೀಯ ಭಾಷೆಯಲ್ಲಿ ಮುದ್ರಿಸುವುದರಿಂದ ಹಾಗೆಯೇ ದಾಖಲೆಪತ್ರಗಳನ್ನು ಸಿದ್ಧಗೊಳಿಸುವುದರಿಂದ ವಿಶ್ವದ ನಾನಾ ಭಾಗಗಳಲ್ಲಿರುವ ಜನತೆಗೆ ಅರ್ಥವಾಗದೆ, ಆ ಉತ್ಪನ್ನಗಳ ಬಗೆಗೆ ಮಾಹಿತಿ, ಬಳಕೆಯ ವಿಧಾನಗಳು ತಿಳಿಯದೆ ತಮ್ಮ ಉತ್ಪನ್ನಗಳ ಮಾರಾಟ ಕುಂಠಿತಗೊಳ್ಳಬಹುದು, ಇಲ್ಲವೆ ವಿಶ್ವವ್ಯಾಪಿಯಾಗಿ ತಮ್ಮ ವ್ಯವಹಾರ ಹರಡದಿರಬಹುದು. ತಮ್ಮ ವ್ಯವಹಾರ ದೇಶ-ವಿದೇಶಗಳಿಗೆ ವ್ಯಾಪಿಸದಿದ್ದರೆ ಹೆಚ್ಚು ಲಾಭ ಗಳಿಸಲು ಸಾಧ್ಯವಿಲ್ಲ. ತಾವು ಹೆಚ್ಚು ಲಾಭ ಗಳಿಸಬೇಕಾದರೆ, ತಾವು ಉತ್ಪಾದಿಸಿದ ವಸ್ತು, ಅವುಗಳ ಬಳಕೆಯ ಬಗೆಗೆ ಮಾಹಿತಿ ದೇಶ ಮತ್ತು ವಿದೇಶಗಳಲ್ಲಿರುವ ಹೆಚ್ಚಿನ ಗ್ರಾಹಕರಿಗೆ ಅನುಕೂಲವಾಗುವ ಭಾಷೆಯಲ್ಲಿ ಮುದ್ರಿಸುವುದು ಅನಿವಾರ್ಯ ಎಂಬ ಕಾರಣಕ್ಕೆ ಖಾಸಗಿ ಕೈಗಾರಿಕೆಗಳು, ಉದ್ದಿಮೆಗಳು ತಾವು ಉತ್ಪಾದಿಸಿದ ವಸ್ತುಗಳ ಬಗೆಗೆ ಮಾಹಿತಿ, ಬಳಸುವ ವಿಧಾನಗಳನ್ನು ಇಂಗ್ಲಿಶ್‌ನಲ್ಲಿ ಮುದ್ರಿಸುತ್ತಿವೆ. ಹಾಗೆಯೇ ತಮ್ಮ ವ್ಯಾಪಾರ ವಹಿವಾಟಿನಲ್ಲಿ ಇಂಗ್ಲಿಶ್‌ನ್ನು ಬಳಸುತ್ತಿವೆ. ಏಕೆಂದರೆ ಬಹುರಾಷ್ಟ್ರೀಯ ಕಂಪನಿಗಳ ಉಗಮ, ಅವುಗಳಲ್ಲಿ ಉತ್ಪಾದನೆಯಾದ ವಸ್ತುಗಳ ಮಾರಾಟಕ್ಕೆ ಗ್ರಾಹಕ ವರ್ಗ ಎನಿಸಿಕೊಂಡಿರುವುದು ದೇಶ ಮತ್ತು ವಿದೇಶಗಳ ಶ್ರೀಮಂತ ಮತ್ತು ಮಧ್ಯಮ ವರ್ಗ. ಇದರ ನಡುವೆಯೇ ಭಾರತ ಸ್ವತಂತ್ರಗೊಂಡ ನಂತರ ದೇಶದಲ್ಲಿ ಶಿಕ್ಷಿತರ ಸಂಖ್ಯೆ ಹೆಚ್ಚಾಗಿರುವುದರಿಂದ ಮತ್ತು ಆರ್ಥಿಕವಾಗಿ ಪ್ರಬಲವಾಗಿರುವುದರಿಂದ ದೇಶೀಯ ಗ್ರಾಹಕ ವರ್ಗ ಇಮ್ಮಡಿಸಿದೆ. ಇವರನ್ನು ತಮ್ಮತ್ತ ಸೆಳೆಯಲು ಪ್ರಾದೇಶಿಕ ಭಾಷೆಗಳ ಸುದ್ದಿ ಮತು ದೃಶ್ಯ ಮಾಧ್ಯಮಗಳಲ್ಲಿ ಈ ಖಾಸಗಿ ಕ್ಷೇತ್ರದಲ್ಲಿ ಉತ್ಪಾದನೆಯಾದ ವಸ್ತುಗಳ ಬಗೆಗೆ ಮಾಹಿತಿ, ಬಳಕೆಯ ವಿಧಾನಗಳ ಬಗೆಗೆ ಜಾಹಿರಾತುಗಳನ್ನು ನೀಡುವುದು ಮಾಡುತ್ತಿವೆ. ಆದರೆ ಇಂಗ್ಲಿಶ್‌ನಲ್ಲಿ ಮಾಹಿತಿ ಒದಗಿಸುವುದು, ದಾಖಲೆಗಳನ್ನು ಸಿದ್ಧಗೊಳಿಸುವುದು ಮಾತ್ರ ನಿಂತಿಲ್ಲ.

ಏಕೆಂದರೆ ಈ ಕಂಪನಿಗಳು ಭಾರತದಲ್ಲಿ ತನ್ನ ಗ್ರಾಹಕವರ್ಗವನ್ನು ಹೆಚ್ಚಿಸಿಕೊಂಡರೂ ದೇಶ-ವಿದೇಶಗಳ ನಡುವಿನ ವ್ಯಾಪಾರ, ವಹಿವಾಟನ್ನು ಕಡಿಮೆ ಮಾಡಿಕೊಂಡಿಲ್ಲ. ಬದಲಾಗಿ ಹೊಸಹೊಸ ಒಪ್ಪಂದಗಳನ್ನು ಮಾಡಿಕೊಳ್ಳುವ ಮೂಲಕ ತಮ್ಮ ವ್ಯಾಪಾರ, ವಹಿವಾಟನ್ನು ಹೆಚ್ಚಿಸಿಕೊಳ್ಳುತ್ತಿವೆ. ಹೀಗಿರುವಾಗ ಸ್ಥಳೀಯ ಭಾಷೆಯಲ್ಲಿ ಮಾಹಿತಿಗಳನ್ನು ಮುದ್ರಿಸುವುದರಿಂದ ಶ್ರೀಮಂತ ಮತ್ತು

ಮಧ್ಯಮವರ್ಗವನ್ನು ತಮ್ಮತ್ತ ಆಕರ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಈ ಎರಡೂ ವರ್ಗಗಳು ಇಂಗ್ಲಿಶ್‌ನ್ನು ಪ್ರತಿಷ್ಠೆಯಾಗಿ ಸ್ವೀಕರಿಸಿವೆ. ಇದರಿಂದಾಗಿ ಈ ವರ್ಗಗಳನ್ನು ತಮ್ಮತ್ತ ಸೆಳೆಯಲು ಆ ವರ್ಗಗಳ ಭಾಷೆಯಲ್ಲಿಯೇ ಮಾಹಿತಿ ಒದಗಿಸುವುದು ಉತ್ತಮ ಎಂದು ಖಾಸಗಿ ಕ್ಷೇತ್ರ ನಂಬಿದೆ. ಇದರಿಂದಾಗಿ ಸರ್ಕಾರಿ ಕ್ಷೇತ್ರವು ಅದೇ ದಾರಿಯನ್ನು ಅನುಸರಿಸಬೇಕಾದ ಅನಿವಾರ್ಯತೆ ಉಂಟಾಗಿದೆ. ಇದರಿಂದಾಗಿ ರಾಜ್ಯದಲ್ಲಿ ಉತ್ಪಾದನೆಯಾಗುತ್ತಿರುವ ಎಲ್ಲಾ ಉತ್ಪನ್ನಗಳು ಮತ್ತು ಅವುಗಳ ಬಳಕೆಯ ವಿಧಾನಗಳ ಬಗೆಗೆ ಮಾಹಿತಿಯನ್ನು ಖಾಸಗಿ ಕ್ಷೇತ್ರದ ಜೊತೆಗೆ ಸರ್ಕಾರಿ ಕ್ಷೇತ್ರವೂ ಇಂಗ್ಲಿಶ್‌ನಲ್ಲಿ ನೀಡುತ್ತಿದೆ.

ಇಂತಹ ಆಲೋಚನೆ ಮತ್ತು ಅಗತ್ಯಗಳ ನಡುವೆ ವ್ಯವಹಾರ ನಡೆಸುತ್ತಿರುವ ಖಾಸಗಿ ಉತ್ಪಾದನಾ ಕ್ಷೇತ್ರ ಮತ್ತು ಅಲ್ಲಿ ದುಡಿಯುತ್ತಿರುವ ಉದ್ಯೋಗಿಗಳಿಗೆ ರಾಜ್ಯಸರ್ಕಾರ ಕನ್ನಡವನ್ನು ಭಾವನಾತ್ಮಕ ನೆಲೆಯಲ್ಲಿ ನೋಡಿ ಇಂಗ್ಲಿಶ್‌ನ್ನು ವ್ಯಾವಹಾರಿಕ ನೆಲೆಯಲ್ಲಿ ನೋಡಿ ಕನ್ನಡದ ಬಳಕೆಯ ವ್ಯಾಪ್ತಿಯನ್ನು ವಿಸ್ತರಿಸಲು ಮತ್ತು ಇಂಗ್ಲಿಶ್ ಬಳಕೆಯ ವ್ಯಾಪ್ತಿಯನ್ನು ನಿಯಂತ್ರಿಸಲು ಜಾರಿಗೆ ತಂದಿರುವ ಭಾಷಾನೀತಿಗಳು ಸಮಸ್ಯೆಯಾಗಿ ಪರಿಣಮಿಸಿದೆ. ಏಕೆಂದರೆ ಖಾಸಗಿ ಉದ್ಯಮ ಕ್ಷೇತ್ರ ಲಾಭವನ್ನೇ ಪ್ರಧಾನವಾಗಿಸಿಕೊಂಡು ಆರಂಭವಾಗಿದೆ. ಇದು ಪ್ರಾದೇಶಿಕ ಭಾಷೆ ಅಥವಾ ಸ್ಥಳೀಯ ಭಾಷೆಗಳನ್ನು ಆಡಳಿತದ, ವ್ಯವಹಾರದ ಭಾಷೆಯಾಗಿ ಬಳಸಿದರೆ ತನ್ನ ವ್ಯವಹಾರವನ್ನು ರಾಜ್ಯಕ್ಕೆ ಮಾತ್ರ ಸೀಮಿತಗೊಳಿಸಿಕೊಳ್ಳಬೇಕಾಗುತ್ತದೆ. ಇಲ್ಲವೆ ರಾಜ್ಯದೊಳಗಿನ ವ್ಯವಹಾರಕ್ಕೆ ಒಂದು ಭಾಷೆ, ರಾಜ್ಯದಾಚೆಗಿನ ವ್ಯವಹಾರಕ್ಕೆ ಮತ್ತೊಂದು ಭಾಷೆ ಬಳಸಬೇಕಾಗುತ್ತದೆ. ಹೀಗೆ ಒಂದೇ ಕೆಲಸಕ್ಕೆ ಎರಡು ಮೂರು ಭಾಷೆಗಳನ್ನು ಬಳಸುವುದು, ಅವುಗಳಲ್ಲಿ ದಾಖಲೆಗಳನ್ನು ಸಿದ್ಧಗೊಳಿಸುವುದು ಕಷ್ಟಕರ. ಜೊತೆಗೆ ಹೀಗೆ ರಾಜ್ಯದೊಳಗಿನ ವ್ಯವಹಾರಕ್ಕೆ ಒಂದು ಭಾಷೆ, ರಾಜ್ಯದ ಹೊರಗಿನ ವ್ಯವಹಾರಕ್ಕೆ ಒಂದು ಭಾಷೆ ಬಳಸಿದರೆ ಅದಕ್ಕೆ ತಕ್ಕನಾಗಿ ನೌಕರರನ್ನು ನೇಮಕ ಮಾಡಿಕೊಳ್ಳಬೇಕಾಗುತ್ತದೆ, ಹಾಗೆಯೇ ಅದಕ್ಕೆ ಅಗತ್ಯ ಪರಿಕರಗಳನ್ನು ಒದಗಿಸಬೇಕಾಗುತ್ತದೆ. ಇದಕ್ಕೆಲ್ಲಾ ಹೆಚ್ಚಿನ ಸಮಯ ಮತ್ತು ಹಣವನ್ನು ವ್ಯಯಿಸಬೇಕಾಗುತ್ತದೆ. ಇದನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ ಖಾಸಗಿ ವಲಯ ಇಂಗ್ಲಿಶ್‌ನ್ನು ತನ್ನ ವ್ಯವಹಾರದ ಭಾಷೆಯಾಗಿ ಬಳಸುತ್ತಿದೆ.

ಇದನ್ನು ನಿಯಂತ್ರಿಸುವ ಶಕ್ತಿ ರಾಜ್ಯಸರ್ಕಾರಗಳಿಗೆ ಇಲ್ಲ. ಏಕೆಂದರೆ ರಾಜ್ಯದಲ್ಲಿರುವ ಬಹುತೇಕ ದೊಡ್ಡದೊಡ್ಡ ಕಂಪನಿಗಳ ಮಾಲೀಕರು, ಆಡಳಿತಗಾರರು ಸ್ಥಳೀಯರಲ್ಲ. ಇವರು ದೇಶೀಯ ಮತ್ತು ವಿದೇಶದ ಬಂಡವಾಳಶಾಹಿಗಳು ಹಾಗೂ ಶ್ರೀಮಂತ ವರ್ಗದವರು. ಹೀಗಾಗಿ ಇವರ ನೀತಿ, ನಿಯಮ ಆಡಳಿತ ತಂತ್ರಗಳೇ ಬೇರೆ. ಇವರು ರೂಪಿಸುವ ನೀತಿ, ನಿಯಮ, ತಂತ್ರಗಳು ಅವರ ವ್ಯವಹಾರದ ಅನುಕೂಲಕ್ಕೆ ಪೂರಕವಾಗಿ ಇರುತ್ತವೆಯೇ ಹೊರತು ಸ್ಥಳೀಯ ಭಾಷೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಶಿಕ್ಷಣ, ಉದ್ಯೋಗ ಇತ್ಯಾದಿಗಳ ಅಭಿವೃದ್ಧಿಗೆ ಪೂರಕವಾಗಿ ಇರುವುದಿಲ್ಲ. ಇವರಿಗೆ ತಮ್ಮ ವ್ಯವಹಾರದ ವ್ಯಾಪ್ತಿಯ ವಿಸ್ತರಣೆ, ಲಾಭದ ಮಾರ್ಗ ಇವುಗಳು ಮುಖ್ಯವೇ ಹೊರತು ಭಾಷೆ, ಅದರ ಮೌಲ್ಯ, ಶ್ರೀಮಂತಿಕೆ, ಭಾಷೆಗಳನ್ನು ಉಳಿಸಿಕೊಳ್ಳುವುದರಿಂದ ಆಗುವ ಲಾಭ, ಕಳೆದುಕೊಳ್ಳುವುದರಿಂದ ಆಗುವ

ನಷ್ಟ ಇತ್ಯಾದಿ ವಿಷಯಗಳು ಮುಖ್ಯವಲ್ಲ. ಆದರೆ ಸರ್ಕಾರದ ಆಡಳಿತ ವೈಖರಿ, ನೀತಿ, ನಿಯಮಗಳು ಯೋಜನೆಗಳು, ಭಾಷಾನಿಲುವುಗಳು, ಇತ್ಯಾದಿ ಅಂಶಗಳು ಖಾಸಗಿ ಕ್ಷೇತ್ರಕ್ಕಿಂತ ಭಿನ್ನ. ಹೀಗಾಗಿ ಸರ್ಕಾರಿ ಕ್ಷೇತ್ರದ ಆಡಳಿತ ಮತ್ತು ಖಾಸಗಿ ಕ್ಷೇತ್ರದ ಆಡಳಿತದಲ್ಲಿ ಬಳಕೆಯಾಗುವ ಭಾಷೆಗಳ ನಡುವೆ ಭಿನ್ನತೆಗಳಿವೆ.

ಇಂತಹ ಸಂದರ್ಭದಲ್ಲಿ ಸರ್ಕಾರ ಸ್ಥಳೀಯ ಜನಸಮುದಾಯಗಳ ಒಳಿತಿಗಾಗಿ ಪ್ರಾದೇಶಿಕ ಭಾಷೆಯನ್ನು ಆಡಳಿತ ಭಾಷೆಯಾಗಿ ಬಳಸಬೇಕು ಎಂದು ಈ ಕಂಪನಿಗಳ ಮೇಲೆ ಭಾಷಾನೀತಿಯ ಮೂಲಕ ಒತ್ತಡ ಹೇರಿದರೆ ಇವುಗಳಿಗೆ ವ್ಯವಹಾರಿಕವಾಗಿ ಸಮಸ್ಯೆಗಳು ಉಂಟಾಗುತ್ತವೆ. ಇದರಿಂದ ಖಾಸಗಿ ಕ್ಷೇತ್ರದ ಆಡಳಿತ ವರ್ಗ ತನ್ನ ಉದ್ಯೋಗಿಗಳಿಗೆ ಸರ್ಕಾರದ ಭಾಷಾನೀತಿಯನ್ನು ಮೀರಿ ಇಂಗ್ಲಿಶ್‌ನ್ನು ತನ್ನ ವ್ಯವಹಾರದಲ್ಲಿ ಬಳಸುವಂತೆ ಒತ್ತಡ ಹೇರಿದೆ. ಇಂಗ್ಲಿಶ್‌ನ್ನು ಬಳಸದಿದ್ದರೆ ಜನತೆಗೆ ಉದ್ಯೋಗದ ಅವಕಾಶಗಳೇ ಇಲ್ಲ ಎಂಬಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಹೀಗಾಗಿ ಇಂಗ್ಲಿಶ್ ಕಲಿಯವುದು ಮತ್ತು ಬಳಸುವುದು ಅನಿವಾರ್ಯ ಆಗಿದೆ. ಹೀಗಾಗಿ ಖಾಸಗಿ ಕ್ಷೇತ್ರದ ಆಡಳಿತದಲ್ಲಿ ಕೆಲಸ ನಿರ್ವಹಿಸುತ್ತಿರುವ ನೌಕರರು ಇಂಗ್ಲಿಶ್‌ನ್ನು ತಮ್ಮ ವ್ಯವಹಾರದ ಭಾಷೆಯಾಗಿ ಬಳಸುತ್ತಿದ್ದಾರೆ. ಇಲ್ಲಿ ಖಾಸಗಿ ಕ್ಷೇತ್ರದಲ್ಲಿ ಬಳಕೆಯಾಗುತ್ತಿರುವ ಭಾಷೆಯ ಬಗೆಗೆ ಇಷ್ಟು ದೀರ್ಘವಾಗಿ ಚರ್ಚಿಸಿದ್ದರ ಉದ್ದೇಶ ಇಷ್ಟೆ. ಖಾಸಗಿ ಕ್ಷೇತ್ರದಲ್ಲಿ ಬಳಕೆಯಾಗುವ ಭಾಷೆಗೂ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಬಳಕೆಯಾಗುವ ಭಾಷೆಗೂ ಸಂಬಂಧವಿದೆ. ಹಾಗೆಯೇ ಈಗಾಗಲೇ ಚರ್ಚಿಸಿರುವ ಹಾಗೆ ವೈರುಧ್ಯಗಳೂ ಇವೆ. ಇವು ಕರ್ನಾಟಕದಲ್ಲಿನ ಭಾಷಾಸಮಸ್ಯೆಗಳು ತೀವ್ರಸ್ವರೂಪ ಪಡೆದುಕೊಳ್ಳಲು ಕಾರಣವಾಗಿವೆ. ಪರಿಣಾಮವಾಗಿ ಕರ್ನಾಟಕದ ಆಡಳಿತ, ಶಿಕ್ಷಣ, ಉದ್ಯೋಗ, ಬದುಕಿನ ಕ್ರಮಗಳಲ್ಲಿ ಬಿಕ್ಕಟ್ಟುಗಳು ಸೃಷ್ಟಿಯಾಗಿವೆ.

ಈ ಬಿಕ್ಕಟ್ಟುಗಳು ಏನೇ ಇದ್ದರೂ ಸರ್ಕಾರಿ ಅಧಿಕಾರಿಗಳು ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಭಾಷೆಗಳನ್ನು ಆಡಳಿತದಲ್ಲಿ ಬಳಸಬೇಕು. ಇದಕ್ಕೆ ಸಂಬಂಧಿಸಿದ ಹಾಗೆ ಖಾಸಗಿ ಕಂಪನಿಗಳು ಅಗತ್ಯ ಸಂದರ್ಭದಲ್ಲಿ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸಬೇಕು. ಅಂದರೆ ಈ ಕಂಪನಿಗಳ ವ್ಯವಹಾರ, ಉತ್ಪನ್ನ, ಅವುಗಳಿಗೆ ಸಂಬಂಧಪಟ್ಟ ದಾಖಲೆಗಳು, ಮಾಹಿತಿಗಳನ್ನು ಸರ್ಕಾರಕ್ಕೆ ಸಲ್ಲಿಸಬೇಕು. ಇಂತಹ ಸಂದರ್ಭದಲ್ಲಿ ಈ ದಾಖಲೆ, ಮಾಹಿತಿಗಳನ್ನು ಯಾವ ಭಾಷೆಯಲ್ಲಿ ಸಲ್ಲಿಸಬೇಕು? ಎಂಬುದೇ ಇಲ್ಲಿ ಪ್ರಶ್ನೆಯಿರುವುದು. ಏಕೆಂದರೆ ಇಲ್ಲಿ ಹಲವು ವಿವಿಧ ಸಂಸ್ಥೆಗಳು, ಕಛೇರಿಗಳು, ಇಲಾಖೆಗಳು ಇವೆ. ಹಾಗೆಯೇ ಇವುಗಳಲ್ಲಿ ಬಳಕೆಯಾಗುತ್ತಿರುವ ಭಾಷೆಗಳು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರು ವಿವಿಧ ಭಾಷೆಗಳಿಗೆ ಸೇರಿದವರಾಗಿದ್ದಾರೆ. ಹೀಗಿರುವಾಗ ಇಲ್ಲಿ ಯಾವುದೇ ಭಾಷೆಯಲ್ಲಿ ದಾಖಲೆಗಳನ್ನು, ಮಾಹಿತಿಗಳನ್ನು, ವರದಿಗಳನ್ನು ನೀಡಿದರೂ ಒಂದಲ್ಲ ಒಂದು ವರ್ಗಕ್ಕೆ ಸಮಸ್ಯೆಯಾಗಿಯೇ ಪರಿಣಮಿಸುತ್ತದೆ. ಹೀಗಾಗಿ ಈ ಕಂಪನಿಗಳು ಎಲ್ಲಾ ಮಾಹಿತಿಗಳನ್ನು ಇಂಗ್ಲಿಶ್‌ನಲ್ಲಿಯೇ ಸಾಮಾನ್ಯವಾಗಿ ಸಲ್ಲಿಸುತ್ತಿವೆ. ಆದರೆ ಕರ್ನಾಟಕದಲ್ಲಿ ಏಕೀಕರಣ ಆದ ನಂತರ ಕನ್ನಡವನ್ನು ಆಡಳಿತ ಭಾಷೆ ಮಾಡುವ ಉದ್ದೇಶದಿಂದ

ಕನ್ನಡದ ಬಳಕೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದೆ. ಜೊತೆಗೆ ಮಾತೃಭಾಷಾಮಾಧ್ಯಮ ಅಥವಾ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿತು ಸರ್ಕಾರಿ ನೌಕರಿಗೆ ಸೇರಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರು ಇದ್ದಾರೆ. ಇವರಿಗೆ ಇಂಗ್ಲಿಶ್‌ನಲ್ಲಿರುವ ಎಲ್ಲಾ ಮಾಹಿತಿ, ದಾಖಲೆ, ವರದಿಗಳನ್ನು ಸಮರ್ಥವಾಗಿ ಅರ್ಥೈಸುವ, ಅದನ್ನು ಬಳಸುವ ಸಾಮರ್ಥ್ಯವಿಲ್ಲ. ಇದರಿಂದಾಗಿ ಈ ರೀತಿಯ ಅಧಿಕಾರಿಗಳು ಇಂಗ್ಲಿಶ್‌ನಲ್ಲಿರುವ ವರದಿ, ದಾಖಲೆಗಳನ್ನು ಪರಿಶೀಲಿಸುವಾಗ, ಇಂಗ್ಲಿಶ್‌ನಲ್ಲಿ ಪತ್ರವ್ಯವಹಾರಗಳು ನಡೆದಾಗ ಅಧಿಕಾರಿಗಳು ಸಮಸ್ಯೆಗೆ ಒಳಗಾಗಿದ್ದಾರೆ.

ಏಕೆಂದರೆ ರಾಜ್ಯದಲ್ಲಿ ಒಂದು ಭಾಷೆ ಆಡಳಿತ ಭಾಷೆಯಾಗಿ ಬಳಕೆಯಾಗುತ್ತಿಲ್ಲ. ಇಲ್ಲಿ ಹಲವು ಭಾಷೆಗಳು ಆಡಳಿತ ಭಾಷೆಯಾಗಿ ಬಳಕೆಯಾಗುತ್ತಿವೆ. ಅಂದರೆ ರಾಜ್ಯಭಾಷೆಯಾಗಿ ಕನ್ನಡ, ರಾಷ್ಟ್ರಭಾಷೆಯಾಗಿ ಹಿಂದಿ, ಇಂಗ್ಲಿಶ್, ಅಲ್ಪಸಂಖ್ಯಾತರ ಅನುಕೂಲಕ್ಕಾಗಿ ಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತ ಭಾಷೆಯಾಗಿ ಬಳಕೆ ಮಾಡಬೇಕಿದೆ. ಇದರಲ್ಲಿ ಪ್ರಮುಖವಾಗಿ ಕನ್ನಡ ಮತ್ತು ಇಂಗ್ಲಿಶ್ ಭಾಷೆಗಳ ನಡುವಿನ ಬಿಕ್ಕಟ್ಟೇ ಕರ್ನಾಟಕದಲ್ಲಿ ಭಾಷಾಸಮಸ್ಯೆಯ ತೀವ್ರತೆಗೆ ಕಾರಣವಾಗಿರುವ ಅಂಶ. ಏಕೆಂದರೆ ಈಗಾಗಲೇ ಸ್ಪಷ್ಟಪಡಿಸಿ ಕೊಂಡಿರುವಂತೆ ಏಕೀಕರಣ ನಂತರದ ಕರ್ನಾಟಕದ ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಕೆಗೆ ತರುವಂತಹ ಒತ್ತಡಗಳು ತೀವ್ರತರದಲ್ಲಿದ್ದವು. ಇವುಗಳ ಪರಿಹಾರಕ್ಕಾಗಿ ಕರ್ನಾಟಕ ಏಕೀಕರಣ ಆದ ನಂತರ ಇಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಭಾಷಾಯೋಜನೆಗಳನ್ನು ರೂಪಿಸಿ ಅವುಗಳನ್ನು ಅನುಷ್ಟಾನಕ್ಕೆ ತರಲು ಭಾಷಾನೀತಿಗಳನ್ನು ಹೊರಡಿಸಲಾಗಿದೆ. ಇವುಗಳಲ್ಲಿ ಪ್ರಮುಖವಾದವನ್ನು ಆಡಳಿತದಲ್ಲಿ ಕನ್ನಡ ಭಾಷಾಬಳಕೆ ಮತ್ತು ಸಮಸ್ಯೆಗಳು ಎಂಬ ಭಾಗದಲ್ಲಿ ಉಲ್ಲೇಖಿಸಲಾಗಿದೆ. ಹೀಗೆ ಕರ್ನಾಟಕದಲ್ಲಿ ಕನ್ನಡವನ್ನು ಕರ್ನಾಟಕದ ಆಡಳಿತ ಭಾಷೆಯಾಗಿ ಬಳಕೆಗೆ ತರುವ ಪ್ರಯತ್ನಗಳು ಸಾಗುತ್ತಿರುವಾಗಲೇ ಕೇಂದ್ರಸರ್ಕಾರವೂ ದೇಶದ ಆಡಳಿತದಲ್ಲಿ ಹಿಂದಿಯನ್ನು ಬಳಕೆಗೆ ತರುವ ಪ್ರಯತ್ನ ಮಾಡಿದೆ. ಇದಕ್ಕೆ ವಿರೋಧಗಳು ವ್ಯಕ್ತವಾದಾಗ ಇಂಗ್ಲಿಶ್ ಇಲ್ಲವೆ ಹಿಂದಿಯನ್ನು ಬಳಸುವುದಕ್ಕೆ ಅವಕಾಶ ಕಲ್ಪಿಸಲಾಗಿದೆ.

ಹೀಗೆ ಭಾರತ ಸ್ವತಂತ್ರಗೊಂಡ ನಂತರ ರಾಜ್ಯದ ಆಡಳಿತದಲ್ಲಿ ಕನ್ನಡ, ಇಂಗ್ಲಿಶ್ ಮತ್ತು ಹಿಂದಿ ಭಾಷೆಗಳು ಬಳಕೆಗೆ ಸಂಬಂಧಿಸಿದ ಹಾಗೆ ಸಾಕಷ್ಟು ಚರ್ಚೆಗಳು ಆಗಿವೆ. ಇವುಗಳಲ್ಲಿ ರಾಜ್ಯಸರ್ಕಾರದ ಅಧೀನ ಸಂಸ್ಥೆ, ಕಚೇರಿಗಳ ಆಡಳಿತದಲ್ಲಿ ಕನ್ನಡ ಮತ್ತು ಇಂಗ್ಲಿಶ್ ಭಾಷೆಗಳ ನಡುವೆ ತೀವ್ರಪೈಪೋಟಿ ಇದ್ದರೆ ಕೇಂದ್ರಸರ್ಕಾರದ ಸಂಸ್ಥೆ, ಕಚೇರಿಗಳ ಆಡಳಿತದಲ್ಲಿ ಹಿಂದಿ ಮತ್ತು ಇಂಗ್ಲಿಶ್‌ನ ನಡುವೆ ತೀವ್ರ ಪೈಪೋಟಿ ಇದೆ. ಕೇಂದ್ರಸರ್ಕಾರದ ಈ ಪೈಪೋಟಿಗಳ ನಡುವೆಯೇ ರಾಜ್ಯದಲ್ಲಿ ಕನ್ನಡವನ್ನು ಬಳಕೆಗೆ ತರುವಂತೆ ಉದ್ಭವವಾಗಿರುವ ಹೋರಾಟಗಳ ಪರಿಣಾಮವಾಗಿ ಕರ್ನಾಟಕ ಏಕೀಕರಣ ಆದ ನಂತರ ಕರ್ನಾಟಕದಲ್ಲಿರುವ ಕೇಂದ್ರಸರ್ಕಾರಿ ಕಚೇರಿ, ಸಂಸ್ಥೆಗಳಲ್ಲಿ ಇಂಗ್ಲಿಶ್, ಹಿಂದಿಗಳ ಜೊತೆಗೆ ಕನ್ನಡ ಸೇರ್ಪಡೆಯಾಗಿದೆ. ಇದರಿಂದಾಗಿ ರಾಜ್ಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರಿಗೆ ವಿವಿಧ ಇಲಾಖೆಗಳ ನಡುವೆ ವ್ಯವಹರಿಸುವಾಗ ಇಂಗ್ಲಿಶ್, ಹಿಂದಿಗಳ ಜೊತೆಗೆ ಕನ್ನಡವನ್ನು

ಬಳಸುವುದು ಅನಿವಾರ್ಯ ಆಗಿದೆ. ಒಂದು ವೇಳೆ ಕನ್ನಡ ಅಥವಾ ಹಿಂದಿಯನ್ನು ಬಳಸಲು ಸಾಧ್ಯವಾಗದಿದ್ದರೂ ಇಂಗ್ಲಿಶ್ ಬಳಸುವುದು ಮಾತ್ರ ಅನಿವಾರ್ಯವಾಗಿದೆ.

ಇದರ ಪೂರೈಕೆಗಾಗಿ ಕರ್ನಾಟಕ ಸರ್ಕಾರ ಮಾತೃಭಾಷೆ ಅಥವಾ ಕನ್ನಡ ಭಾಷಾಮಾಧ್ಯಮದ ಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳಿಗೆ ಇಂಗ್ಲಿಶ್‌ನ್ನು ಒಂದು ಭಾಷೆಯಾಗಿ ಕಲಿಸುವ ವ್ಯವಸ್ಥೆ ಮಾಡಿವೆ. ಆದರೆ ಅಲ್ಲಿನ ಅಸಮರ್ಪಕ ಬೋಧನೆಯ ಕಾರಣದಿಂದಾಗಿ ರಾಜ್ಯದಲ್ಲಿನ ಮಕ್ಕಳು ಸಮರ್ಪಕವಾಗಿ ಇಂಗ್ಲಿಶ್ ಕಲಿಯಲು ಸಾಧ್ಯವಾಗಿಲ್ಲ. ಇದನ್ನು ಇಂಗ್ಲಿಶ್ ಭಾಷಾಕಲಿಕೆ ಮತ್ತು ಸಮಸ್ಯೆಗಳು ಎಂಬ ಭಾಗದಲ್ಲಿ ಈಗಾಗಲೇ ಚರ್ಚಿಸಲಾಗಿದೆ. ಹೀಗಿದ್ದೂ ರಾಜ್ಯರಾಜ್ಯಗಳು, ಕೇಂದ್ರ ಮತ್ತು ರಾಜ್ಯದೊಳಗಿನ ಆಡಳಿತದಲ್ಲಿ ಇಂಗ್ಲಿಶ್ ಭಾಷಾಬಳಕೆಯ ಮುಂದುವರಿಕೆಗೆ ಅವಕಾಶ ಮಾಡಿಕೊಡಲಾಗಿದೆ. ಅದಕ್ಕಾಗಿ ಸರ್ಕಾರಿ ಉದ್ಯೋಗಕ್ಕೆ ನೌಕರರನ್ನು ನೇಮಕ ಮಾಡಿಕೊಳ್ಳುವಾಗ ಇಂಗ್ಲಿಶ್ ಭಾಷಾಜ್ಞಾನವನ್ನು ಕಡ್ಡಾಯಗೊಳಿಸಲಾಗಿದೆ. ಹೀಗೆ ಒಂದು ಕಡೆ ಅಸಮರ್ಪಕವಾದ ಇಂಗ್ಲಿಶ್ ಭಾಷಾಕಲಿಸುವಿಕೆ, ಮತ್ತೊಂದು ಕಡೆ ಇಂಗ್ಲಿಶ್ ಭಾಷೆಯ ಕಡ್ಡಾಯ ಪರೀಕ್ಷೆ ಇವುಗಳ ನಡುವೆ ಸಿಲುಕಿ ಕರ್ನಾಟಕದಲ್ಲಿ ವಿದ್ಯಾರ್ಥಿಗಳು ಮಾತ್ರವಲ್ಲದೆ ಉದ್ಯೋಗಿಗಳೂ ಭಾಷಾಸಮಸ್ಯೆಯಲ್ಲಿ ಸಿಲುಕಿದ್ದಾರೆ. ಇದರಿಂದಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷಾಸಮಸ್ಯೆ ಬಗೆಹರಿಯಲಾಗದ ಬಿಕ್ಕಟ್ಟಾಗಿ ಪರಿಣಮಿಸಿದೆ. ಈ ಸಮಸ್ಯೆಗಳು ತೀವ್ರಸ್ವರೂಪ ಪಡೆಯಲು ಮತ್ತೊಂದು ಕಾರಣವೂ ಇದೆ. ಅದೆಂದರೆ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕನ್ನಡವನ್ನು, ಕನ್ನಡ ಭಾಷಾಶಿಕ್ಷಣವನ್ನು ಉತ್ತೇಜಿಸಲು ಆಡಳಿತ, ಶಿಕ್ಷಣ, ಉದ್ಯೋಗಗಳಲ್ಲಿ ಕನ್ನಡದ ಬಳಕೆ ಹೆಚ್ಚಿಸುವ ಸಲುವಾಗಿ ನಿಯಮಗಳನ್ನು ಜಾರಿಗೆ ತಂದಿವೆ. ಆದರೆ ಈಗಾಗಲೇ ಹೇಳಿದ ಹಾಗೆ ಏಕೀಕರಣದ ನಂತರ ಖಾಸಗಿ ಉದ್ಯಮ ಕ್ಷೇತ್ರ ಪ್ರಬಲವಾಗಿ ಬೆಳೆದು ಇಂಗ್ಲಿಶ್‌ನ್ನು ತನ್ನ ಆಡಳಿತದ, ವ್ಯವಹಾರದ ಭಾಷೆಯಾಗಿ ಬಳಸುತ್ತಿದೆ. ಇದರ ಜೊತೆಗೆ ಭಾರತ ಸಂಯುಕ್ತ ರಾಷ್ಟ್ರವಾಗಿದ್ದು ಇಲ್ಲಿನ ಪ್ರತಿಯೊಂದು ರಾಜ್ಯಗಳು ಭಾರತ ಸಂವಿಧಾನ ಮತ್ತು ಕೇಂದ್ರಸರ್ಕಾರದ ನಿಯಮಗಳಿಗೆ ಅಧೀನವಾಗಿರುತ್ತವೆ. ಇದರಿಂದ ಕರ್ನಾಟಕ ಸರ್ಕಾರ ಸಂವಿಧಾನದ ನಿಯಮಗಳು ಮತ್ತು ಕೇಂದ್ರಸರ್ಕಾರದ ಭಾಷಾನೀತಿ ಹಾಗೂ ಇತರ ಕಾನೂನುಗಳನ್ನು ಮೀರುವ ಹಾಗಿಲ್ಲ. ಅವುಗಳನ್ನು ಪಾಲನೆ ಮಾಡುವುದು ರಾಜ್ಯಸರ್ಕಾರಗಳ ಕರ್ತವ್ಯವಾಗಿರುತ್ತದೆ. ಹೀಗಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಶಿಕ್ಷಣದಲ್ಲಿ ಕನ್ನಡ ಕಲಿಕೆ ಮತ್ತು ಆಡಳಿತದಲ್ಲಿ ಕನ್ನಡದ ಬಳಕೆಗೆ ವಿಶೇಷ ಪ್ರಾತಿನಿಧ್ಯ ಕಲ್ಪಿಸಿದ್ದರೂ ಇಂಗ್ಲಿಶ್ ಭಾಷಾಕಲಿಕೆ ಮತ್ತು ಬಳಕೆಗೆ ವಿರೋಧ ಹೇರಿಲ್ಲ.

ಇದರಿಂದ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್ ಭಾಷಾಬಳಕೆ ಮುಂದುವರೆದಿದೆ. ಇದರಿಂದಾಗಿ ಕರ್ನಾಟಕದ ಆಡಳಿತದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಇಂಗ್ಲಿಶ್‌ನ್ನು ಬಳಸಬೇಕಿದೆ. ಇದರಿಂದಾಗಿ ಏಕೀಕರಣದ ನಂತರ ಕರ್ನಾಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರು ಈ ಅಧ್ಯಾಯದಲ್ಲಿ ಇದುವರೆಗೆ ಚರ್ಚಿಸಿದ ಅಂಶಗಳನ್ನು ಗಮನಿಸಿದಾಗ ಕನ್ನಡ, ಹಿಂದಿ, ಇಂಗ್ಲಿಶ್‌ಗಳ ಜೊತೆಗೆ ಭಾಷಾಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸಬೇಕಾಗಿದೆ. ಆದರೆ

ಇದಕ್ಕೆ ಪೂರಕವಾಗಿ ಕರ್ನಾಟಕದ ಶಿಕ್ಷಣದಲ್ಲಿ ಭಾಷೆಗಳನ್ನು ಕಲಿಸಲಾಗುತ್ತಿಲ್ಲ. ಇದರಿಂದಾಗಿ ಕರ್ನಾಟಕ ಸರ್ಕಾರ ೧೯೬೩ರಲ್ಲಿ ಕರ್ನಾಟಕ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತಂದು ಅನಂತರದಲ್ಲಿ ತನಗೆ ಸಂವಿಧಾನಬದ್ಧವಾಗಿ ದತ್ತವಾಗಿರುವ ಅಧಿಕಾರ ಬಳಸಿಕೊಂಡು ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕರ್ನಾಟಕದ ಆಡಳಿತದಲ್ಲಿ ಕನ್ನಡವನ್ನು ಸಂಪೂರ್ಣವಾಗಿ ಬಳಕೆಗೆ ತರುವ ಉದ್ದೇಶದಿಂದ ಹಂತಹಂತವಾಗಿ ಅಧಿಕೃತ ಜ್ಞಾಪನ, ಸುತ್ತೋಲೆ, ಆದೇಶಗಳನ್ನು ಹೊರಡಿಸಿವೆ. ಆ ಮೂಲಕ ಕರ್ನಾಟಕದ ಆಡಳಿತದಲ್ಲಿ ಎಲ್ಲಾ ವ್ಯವಹಾರಗಳನ್ನು ಕನ್ನಡದಲ್ಲಿ ಮಾಡುವಂತೆ ಆದೇಶಿಸಿದೆ. ಇದರಿಂದಾಗಿ ಕರ್ನಾಟಕದ ಆಡಳಿತದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರಿಗೆ ಒಂದು ಕಡೆ ಕನ್ನಡವನ್ನು ಬಳಸುವ ಒತ್ತಡವಿದ್ದರೆ ಮತ್ತೊಂದು ಕಡೆ ಇಂಗ್ಲಿಶ್ ಬಳಸುವ ಅನಿವಾರ್ಯತೆ ಇದೆ. ಇವುಗಳ ಜೊತೆಗೆ ಅಗತ್ಯ ಸಂದರ್ಭಗಳಲ್ಲಿ ಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸಬೇಕಿದೆ.

ಹೀಗೆ ಕರ್ನಾಟಕದಲ್ಲಿ ಸರ್ಕಾರಿ ನೌಕರರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರು ವಿವಿಧ ಉದ್ದೇಶಗಳಿಗಾಗಿ ಕನ್ನಡ, ಇಂಗ್ಲಿಶ್, ಹಿಂದಿ, ಅಲ್ಪಸಂಖ್ಯಾತರ ಭಾಷೆಗಳನ್ನು ಆಡಳಿತದಲ್ಲಿ ಬಳಸಬೇಕಿದೆ. ಆದರೆ ಕರ್ನಾಟಕದಲ್ಲಿ ಸರ್ಕಾರಿ ನೌಕರರಾಗಿ ಕರ್ತವ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ನೌಕರರಿಗೆ ಈ ಎಲ್ಲಾ ಭಾಷೆಗಳನ್ನು ಸರ್ಕಾರದ ಭಾಷಾನೀತಿಗಳ ಪ್ರಕಾರ ಆಡಳಿತದಲ್ಲಿ ಸಮರ್ಪಕವಾಗಿ ಬಳಸುವ ಸಾಮರ್ಥ್ಯವಿಲ್ಲ. ಕರ್ನಾಟಕದ ಆಡಳಿತದ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ನೌಕರರಲ್ಲಿ ಕೆಲವರಿಗೆ ಇಂಗ್ಲಿಶ್‌ನ್ನು ಆಡಳಿತದಲ್ಲಿ ಬಳಸುವ ಸಾಮರ್ಥ್ಯವಿದ್ದರೆ ಮತ್ತೆ ಕೆಲವರಿಗೆ ಕನ್ನಡವನ್ನು ಮಾತ್ರ ಆಡಳಿತದಲ್ಲಿ ಬಳಸುವ ಭಾಷಾಸಾಮರ್ಥ್ಯವಿದೆ. ಇಲ್ಲಿರುವ ಎಲ್ಲರಿಗೂ ಕನ್ನಡ ಮತ್ತು ಇಂಗ್ಲಿಶ್ ಎರಡೂ ಭಾಷೆಗಳನ್ನು ಆಡಳಿತದಲ್ಲಿ ಸಮರ್ಥವಾಗಿ ಬಳಸುವ ಸಾಮರ್ಥ್ಯವಿಲ್ಲ. ಆದರೆ ಸರ್ಕಾರದ ನಿಯಮಗಳ ಪ್ರಕಾರ ಈ ಎರಡೂ ಭಾಷೆಗಳನ್ನು ಆಡಳಿತದಲ್ಲಿ ಬಳಸುವುದು ಅನಿವಾರ್ಯ ಎಂಬಂತಹ ಪರಿಸ್ಥಿತಿ ಇದೆ. ಆದರೆ ನೌಕರರಿಗೆ ಈ ಭಾಷೆಗಳ ಸಮರ್ಥ ಜ್ಞಾನವಿಲ್ಲದೇ ಇರುವುದರಿಂದ ಕನ್ನಡವನ್ನು ಬಳಸಬೇಕಾದ ಅನಿವಾರ್ಯತೆ ಉಂಟಾದಾಗ ಕನ್ನಡ ಭಾಷಾಜ್ಞಾನವಿಲ್ಲದವರು ಮತ್ತು ಇಂಗ್ಲಿಶ್‌ನ್ನು ಬಳಸಬೇಕಾದ ಅನಿವಾರ್ಯತೆ ಉಂಟಾದಾಗ ಇಂಗ್ಲಿಶ್‌ನ್ನು ಆಡಳಿತದಲ್ಲಿ ಬಳಸಲು ಸಾಮರ್ಥ್ಯವಿಲ್ಲದವರು ಸಮಸ್ಯೆಗೆ ಒಳಗಾಗಿದ್ದಾರೆ. ಇಂತಹ ಸಂದರ್ಭಗಳಲ್ಲಿ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರು ಕರ್ನಾಟಕ ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಜನರಿಗೆ ಅನುಕೂಲವಾಗುವ ಭಾಷೆಯನ್ನು ಆಡಳಿತದಲ್ಲಿ ಬಳಸುವ ಬದಲಾಗಿ ತಮ್ಮ ಭಾಷಾಸಾಮರ್ಥ್ಯ, ಮನಸ್ಥಿತಿ, ಆಡಳಿತದಲ್ಲಿ ಭಾಷೆಗಳನ್ನು ಬಳಸಲು ಸಾಧ್ಯವಿರುವ ಪೂರಕ ಪರಿಕರ ಇತ್ಯಾದಿಗಳಿಗೆ ಅನುಗುಣವಾಗಿ ಆಡಳಿತದಲ್ಲಿ ಭಾಷೆಗಳನ್ನು ಬಳಸುತ್ತಿದ್ದಾರೆ. ಇದರಿಂದಾಗಿ ಸರ್ಕಾರ ಜನತೆಯ ಅನುಕೂಲಕ್ಕಾಗಿ ಜಾರಿಗೆ ತಂದಿರುವ ಭಾಷಾನೀತಿಗಳು ಸಮರ್ಪಕವಾಗಿ ಅನುಷ್ಠಾನಗೊಳ್ಳದೆ ಮುಂದುವರಿಯುತ್ತಿವೆ.

ಇವುಗಳನ್ನು ಹೊರತುಪಡಿಸಿ ಕರ್ನಾಟಕ ಆಡಳಿತದಲ್ಲಿ ಬಳಕೆಯಾಗುತ್ತಿರುವ ಭಾಷಾಸಮಸ್ಯೆಗಳ ವಿಚಾರವಾಗಿ ಗಮನಿಸುವುದಾದರೆ ಪ್ರಮುಖವಾಗಿ ಕೇಂದ್ರ ಸರ್ಕಾರದ ಅಧಿಕಾರಿಗಳು ರಾಜ್ಯಗಳಿಗೆ ಸಲ್ಲಿಸುವ ಪ್ರತಿಯೊಂದು ಮಾಹಿತಿ, ದಾಖಲೆ, ಪತ್ರಗಳು ಇಂಗ್ಲಿಶ್ ಇಲ್ಲವೆ ಹಿಂದಿಯಲ್ಲಿ ಇರುತ್ತವೆ. ಹಾಗೆಯೇ ರಾಜ್ಯದಿಂದ ಕೇಂದ್ರಕ್ಕೆ ಮತ್ತು ಇತರ ರಾಜ್ಯಗಳಿಗೆ ಮಾಹಿತಿಗಳನ್ನು, ದಾಖಲೆಗಳನ್ನು ಸಲ್ಲಿಸುವಾಗ, ಪತ್ರಗಳನ್ನು ಕೊಡುವಾಗ, ಅಧಿಕಾರಿಗಳೊಂದಿಗೆ ಮೌಖಿಕವಾಗಿ ವ್ಯವಹರಿಸುವಾಗ ಇಂಗ್ಲಿಶ್‌ನಲ್ಲೇ ವ್ಯವಹರಿಸಬೇಕು. ಇಲ್ಲಿ ರಾಜ್ಯಭಾಷೆಯನ್ನು ಬಳಕೆ ಮಾಡಿದರೆ ಅಲ್ಲಿನ ಅಧಿಕಾರಿಗಳಿಗೆ ಇಲ್ಲಿನ ವಿಚಾರಗಳು ಸಮರ್ಥವಾಗಿ ಮನವರಿಕೆಯಾಗದೆ ವ್ಯವಹಾರಗಳು ಸುಲಭವಾಗಿ ಮುಕ್ತಾಯವಾಗುವುದಿಲ್ಲ. ಇದರಿಂದ ರಾಜ್ಯದ ಆಡಳಿತದ ಉನ್ನತ ಹುದ್ದೆಯಲ್ಲಿ ಕರ್ತವ್ಯನಿರ್ವಹಿಸುವ ಅಧಿಕಾರಿಗಳು ಮತ್ತು ನೌಕರರಿಗೆ ಇಂಗ್ಲಿಶ್ ಭಾಷಾಜ್ಞಾನ ಅನಿವಾರ್ಯವಾಗಿದೆ. ಏಕೆಂದರೆ ರಾಜ್ಯರಾಜ್ಯಗಳು ಮತ್ತು ಕೇಂದ್ರಸರ್ಕಾರದ ಅಧಿಕಾರಿಗಳ ಜೊತೆಗೆ ಹೆಚ್ಚಿನದಾಗಿ ವ್ಯವಹರಿಸುವವರು ಇವರೇ ಆಗಿರುತ್ತಾರೆ. ಹೀಗಾಗಿ ಕರ್ನಾಟಕದ ಆಡಳಿತಾತ್ಮಕ ಕ್ಷೇತ್ರದ ಉನ್ನತ ಹುದ್ದೆಗಳಿಗೆ ಅಂದರೆ ಗೆಜೆಟೆಡ್ ಪ್ರೊಬೇಷನರಿ ಅಧಿಕಾರಿಗಳ ನೇಮಕಾತಿ ಪರೀಕ್ಷೆಯಲ್ಲಿ ಇಂಗ್ಲಿಶ್ ಭಾಷಾಪರೀಕ್ಷೆಯನ್ನು ಕಡ್ಡಾಯಗೊಳಿಸಲಾಗಿದೆ. ಹಾಗೆಯೇ ಕೇಂದ್ರ ಲೋಕಸೇವಾ ಆಯೋಗ ನಡೆಸುವ ಆಡಳಿತಾತ್ಮಕ ಹುದ್ದೆಗಳ ಪರೀಕ್ಷೆಯಲ್ಲಿಯೂ ಇಂಗ್ಲಿಶ್ ಭಾಷಾಪರೀಕ್ಷೆ ಕಡ್ಡಾಯವಾಗಿದೆ. ಈ ಭಾಷಾಪರೀಕ್ಷೆಗಳಲ್ಲಿ ಅಭ್ಯರ್ಥಿಗಳು ಉತ್ತೀರ್ಣವಾಗಲು ನಿರ್ದಿಷ್ಟಪಡಿಸಿರುವ ಕನಿಷ್ಟ ಅಂಕಗಳನ್ನು ಪಡೆಯುವುದು ಕಡ್ಡಾಯ. ಇಲ್ಲದಿದ್ದರೆ ಅಭ್ಯರ್ಥಿಗಳು ಈ ಹುದ್ದೆಗಳಿಂದಲೇ ವಂಚಿತರಾಗುತ್ತಾರೆ. ಹೀಗಿದ್ದೂ ಕರ್ನಾಟಕದಲ್ಲಿ ಗೆಜೆಟೆಡ್ ಪ್ರೊಬೇಷನರಿ ಹುದ್ದೆಗಳ ನೇಮಕಾತಿಗಾಗಿ ಇಂಗ್ಲಿಶ್ ಭಾಷಾ ಪರೀಕ್ಷೆಯನ್ನು ಕಡ್ಡಾಯಗೊಳಿಸಲಾಗಿದೆ. ಇದರಿಂದಾಗಿ ಕರ್ನಾಟಕದಲ್ಲಿ ಆಡಳಿತಾತ್ಮಕ ಹುದ್ದೆಗಳಿಗೆ ನಡೆದಿರುವ ಪರೀಕ್ಷೆಗಳಲ್ಲಿ "ಇಂಗ್ಲಿಶ್ ಭಾಷಾಜ್ಞಾನದ ಕೊರತೆಯಿಂದಾಗಿ ಬಹುತೇಕ ಗ್ರಾಮೀಣ ವಿದ್ಯಾರ್ಥಿಗಳು ಭಾರೀ ಕಡಿಮೆ ಅಂಕಗಳಿಂದ ಮುಂದಿನ ಹಂತಕ್ಕೆ ಅರ್ಹತೆ ಪಡೆದುಕೊಳ್ಳುವಲ್ಲಿ ವಿಫಲರಾಗಿದ್ದರೆ. ಅಭ್ಯರ್ಥಿಯೊಬ್ಬ ಕನ್ನಡದಲ್ಲಿ ೧೨೩ ಅಂಕಗಳಿಸಿದರೂ ಇಂಗ್ಲಿಶಿನಲ್ಲಿ ೪೩ ಅಂಕಗಳಿಸಿ ವಿಫಲರಾಗಿದ್ದರೆ, ಇನ್ನೊಬ್ಬ ಅಭ್ಯರ್ಥಿ ಕನ್ನಡದಲ್ಲಿ ೧೦೪ ಅಂಕಗಳಿಸಿದ್ದರೂ ಇಂಗ್ಲಿಶಿನಲ್ಲಿ ೪೪ ಅಂಕಗಳಿಸಿ ವಿಫಲರಾಗಿದ್ದಾರೆ.[೨೫]"

ಇಲ್ಲಿ ಇಂಗ್ಲಿಶ್ ಭಾಷಾಪರೀಕ್ಷೆಯನ್ನು ಕಡ್ಡಾಯಗೊಳಿಸಿರುವ ಉದ್ದೇಶ ಇದುವರೆಗೂ ಚರ್ಚಿಸಿದ ಹಾಗೆ ರಾಜ್ಯರಾಜ್ಯಗಳ ಹಾಗೂ ಕೇಂದ್ರದ ನಡುವಿನ ವ್ಯವಹಾರದಲ್ಲಿ ಇಂಗ್ಲಿಶ್ ಭಾಷಾಬಳಕೆ ಅನಿವಾರ್ಯವಾಗಿರುವುದರಿಂದ ಅದಕ್ಕೆ ಅನುಕೂಲವಾಗಲಿ ಎಂಬ ಕಾರಣಕ್ಕೆ. ಆದರೆ ಹೀಗಾಗಿ 'ರಾಜ್ಯ-ರಾಜ್ಯಗಳ ನಡುವೆ ನಡೆಯುವ ಪತ್ರ ವ್ಯವಹಾರ ಎಷ್ಟು? ಮತ್ತು ಕೇಂದ್ರ ಸರ್ಕಾರದ ನಡುವೆ ನಡೆಯುವ ಪತ್ರ ವ್ಯವಹಾರವೆಷ್ಟು? ರಾಜ್ಯದಿಂದ ಹೊರದೇಶಕ್ಕೆ ಹೋಗುವ ಪತ್ರಗಳ ಸಂಖ್ಯೆ ಎಷ್ಟು ಎನ್ನುವುದನ್ನು ಪಟ್ಟಿಮಾಡಿದಾಗ ಇವು ಶೇ.೫ನ್ನು ದಾಟುವುದಿಲ್ಲ. ಅಂದರೆ ಶೇ.೫ರ ಹಿತ ಶೇ.೯೫ರಷ್ಟು ಪತ್ರವ್ಯವಹಾರವನ್ನು ನಮ್ಮ ಭಾಷೆಯಲ್ಲಿ ಮಾಡುವ ಅವಕಾಶವನ್ನು ಬಲಿಕೊಡಬೇಕೆ? ಎನ್ನುವುದನ್ನು

ತೀವ್ರವಾಗಿ ಪರಿಶೀಲಿಸಬೇಕಾದ ಅಂಶ[೨೬] ಎನ್ನುತ್ತಾರೆ ಬಿ. ಪಾರ್ಥಸಾರಥಿಯವರು. ಇಲ್ಲಿ ಪಾರ್ಥಸಾರಥಿಯವರು ಗುರುತಿಸಿರುವ ಅಂಶ ಬಹಳ ಮುಖ್ಯವಾಗಿದೆ. ಏಕೆಂದರೆ ಕೇವಲ ಶೇ.೫ರಷ್ಟು ಜನಕ್ಕಾಗಿ ೯೫ರಷ್ಟನ್ನು ಬಲಿಕೊಡುವುದೇ ಅಲ್ಲಿ. ಇದು ರಾಜ್ಯದ ಎಲ್ಲಾ ಮಕ್ಕಳು ಇಂಗ್ಲಿಶ್ ಮತ್ತು ಇಂಗ್ಲಿಶ್ ಮಾಧ್ಯಮದ ಶಿಕ್ಷಣವನ್ನು ಕಲಿಯುವಂತೆ ಮಾಡಿದೆ. ಹೇಗೆಂದರೆ ರಾಜ್ಯದಲ್ಲಿರುವ ಎಲ್ಲರಿಗೂ ಸರ್ಕಾರಿ ನೌಕರಿಗೆ ಸೇರಬೇಕು, ಅದರಲ್ಲಿ ಆಡಳಿತಾತ್ಮಕ ಹುದ್ದೆಯನ್ನು ಪಡೆಯಬೇಕು ಎಂಬ ಆಸೆ ಇದ್ದೇಇದೆ. ಇದಕ್ಕಾಗಿ ಎಲ್ಲರು ಇಂಗ್ಲಿಶ್ ಕಲಿಯಲು ಆಸಕ್ತಿ ಹೊಂದಿದ್ದಾರೆ. ಹೀಗಾಗಿ ಕರ್ನಾಟಕದ ಶಿಕ್ಷಣದಲ್ಲಿ ಇಂಗ್ಲಿಶ್‌ನ ಕಲಿಕೆಯ ಬೇಡಿಕೆಯನ್ನು ಆಡಳಿತದಲ್ಲಿ ಬಳಸುವ ಭಾಷೆ ಹೆಚ್ಚಿಸಿದೆ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯವಾದ ಅಂಶವೆಂದರೆ ಕರ್ನಾಟಕದ ಆಡಳಿತಾತ್ಮಕ ಪರೀಕ್ಷೆಯಲ್ಲಿ ಇಂಗ್ಲಿಶ್ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾಗಿ ಸರ್ಕಾರಿ ನೌಕರರಾಗಿ ಸೇವೆ ಸಲ್ಲಿಸುತ್ತಿರುವ ಸಾಕಷ್ಟು ಜನ ಗೆಜೆಟೆಡ್ ಪ್ರೊಬೇಷನರಿ ಅಧಿಕಾರಿಗಳಿಗೆ ಆಡಳಿತದಲ್ಲಿ ಇಂಗ್ಲಿಶ್ ಬಳಸುವ ಸಾಮರ್ಥ್ಯ ಇಲ್ಲದಿರುವುದು. ಏಕೆಂದರೆ ಕರ್ನಾಟಕ ಏಕೀಕರಣಗೊಂಡ ನಂತದಲ್ಲಿ ಕನ್ನಡ ಭಾಷೆಯನ್ನು ಅಭಿವೃದ್ಧಿಪಡಿಸುವ ನಿಟ್ಟನಲ್ಲಿ ಕನ್ನಡಪರ ಭಾಷಾನೀತಿಗಳನ್ನು ಜಾರಿಗೆ ತಂದಿರುವುದರಿಂದ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಬರೆಯದೆ ಸೇವಾಜೇಷ್ಠತೆಯ ಆಧಾರದಲ್ಲಿ ಸಾಕಷ್ಟು ಜನ ಅಧಿಕಾರಿಗಳು ರಾಜ್ಯದ ಆಡಳಿತದಲ್ಲಿ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇವರು ಇಂಗ್ಲಿಶ್ ಇಲ್ಲದೆಯೇ ಆಡಳಿತ ನಿರ್ವಹಿಸಲು ಸಾಧ್ಯವಿದೆಯಾದರೆ ಕರ್ನಾಟಕದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಇಂಗ್ಲಿಶ್ ಭಾಷಾಪರೀಕ್ಷೆಯನ್ನು ಐಚ್ಛಿಕಗೊಳಿಸಿ ಸ್ಥಳೀಯ ಭಾಷೆಗಳನ್ನು ರಕ್ಷಿಸಬಹುದಾಗಿದೆ. ಆದರೆ ಸರ್ಕಾರಗಳು ಇಲ್ಲಿ ಇಂತಹ ಪ್ರಯತ್ನಗಳನ್ನು ಮಾಡದೆ ಇಂಗ್ಲಿಶ್ ಭಾಷಾಪರೀಕ್ಷೆಯನ್ನು ಮುಂದುವರಿಸಿವೆ. ಇದರಿಂದಾಗಿ ರಾಜ್ಯದಲ್ಲಿ ಇಂಗ್ಲಿಶ್ ಭಾಷಾಪರೀಕ್ಷೆಯ ಕಾರಣದಿಂದಾಗಿ ಪ್ರತಿಭಾವಂತ ಅಭ್ಯರ್ಥಿಗಳು ಇಂಗ್ಲಿಶ್ ಭಾಷೆಯ ಕಲಿಕೆಗೆ ಪೂರಕ ಭಾಷಾಪರಿಸರ ಲಭ್ಯವಾಗದೆ ಸರ್ಕಾರಿ, ಖಾಸಗಿ ಉದ್ಯೋಗಗಳನ್ನು ಕಳೆದುಕೊಂಡಿದ್ದಾರೆ. ಇನ್ನು ಈ ಪರೀಕ್ಷೆಗಳ ಸಂದರ್ಭದಲ್ಲಿ ಇಂಗ್ಲೀಶ್ ಭಾಷಾಪರೀಕ್ಷೆಯಲ್ಲಿ ಕೇಳುವ ಪ್ರಶ್ನೆಗಳಿಗೂ ಅಧಿಕಾರಿಗಳು ಆಡಳಿತದಲ್ಲಿ ಇಂಗ್ಲಿಶ್ ಬಳಸುವುದಕ್ಕೂ, ದಾಖಲೆಗಳನ್ನು ಸಿದ್ದಗೊಳಿಸುವುದಕ್ಕೂ ಸಂಬಂಧವೇ ಇಲ್ಲ. ಹೀಗಿದ್ದರೂ ಈಗಾಗಲೇ ಇಂಗ್ಲಿಶ್ ಭಾಷಾಕಲಿಕೆ ಸಮಸ್ಯೆಗಳು ಎಂಬ ಭಾಗದಲ್ಲಿ ಚರ್ಚಿಸಿರುವ ಹಾಗೆ ನಮ್ಮ ಶಿಕ್ಷಣ ಕ್ರಮದಲ್ಲಿ ಇಂಗ್ಲಿಶ್ ಭಾಷೆಯನ್ನು ಕಲಿಸುವಲ್ಲಿ ಇರುವ ಲೋಪಗಳು ಸರಿಪಡಿಸಿ ಸಮಸ್ಯೆಗಳನ್ನು ಸರಿಪಡಿಸಬೇಕಾದ ಅಥವಾ ಇಂಗ್ಲಿಶ್ ಭಾಷಾಪರೀಕ್ಷೆಯನ್ನು ಐಚ್ಛಿಕಗೊಳಿಸಬೇಕಾದ ಸರ್ಕಾರಗಳು ಇಂಗ್ಲಿಶ್ ಭಾಷೆಯನ್ನು ಸರಿಯಾಗಿ ಕಲಿಸುವ ಕ್ರಮಗಳನ್ನು ರೂಪಿಸದೆ ಮತ್ತು ಉದ್ಯೋಗಗಳಲ್ಲಿ ಇಂಗ್ಲಿಶ್ ಭಾಷಾಪರೀಕ್ಷೆಯನ್ನು ಕಡ್ಡಾಯಗೊಳಿಸುವ ಮೂಲಕ ಸ್ಥಳೀಯ ಭಾಷಿಕ ಸಮುದಾಯಗಳಲ್ಲಿ ಬಿಕ್ಕಟ್ಟುಗಳನ್ನು ಸೃಷ್ಟಿಸಿವೆ. ಇವುಗಳನ್ನು ಅರ್ಥಮಾಡಿಕೊಂಡು ಕನ್ನಡ ಭಾಷಾಮಾಧ್ಯಮದ ಕಲಿಕೆಗೆ ಮೀಸಲಾತಿಯನ್ನು ಕೊಡುವ ಬದಲಾಗಿ ಇಂಗ್ಲಿಶ್ ಭಾಷಾಪರೀಕ್ಷೆಯನ್ನು ಐಚ್ಛಿಕಗೊಳಿಸಿದ್ದರೆ ಕರ್ನಾಟಕದಲ್ಲಿ ಭಾಷಿಕ ಸಮುದಾಯಗಳ ಅರ್ಧದಷ್ಟು ಸಮಸ್ಯೆಗಳು ಬಗೆಹರಿಯುತ್ತಿದ್ದವು. ಆದರೆ

ಸರ್ಕಾರಗಳು ಇಂತಹ ಪ್ರಯತ್ನಗಳನ್ನು ಮಾಡದೆ ರಾಜ್ಯ ಮತ್ತು ಕೇಂದ್ರಸರ್ಕಾರದ ಆಡಳಿತಾತ್ಮಕ ಹುದ್ದೆಗಳಲ್ಲಿ ಕಾರ್ಯನಿರ್ವಹಣೆಗೆ ಇಂಗ್ಲಿಶ್ ಭಾಷಾಜ್ಞಾನ ಅನಿವಾರ್ಯ ಎಂಬ ಕಾರಣಕ್ಕೆ ಕರ್ನಾಟಕದ ಆಡಳಿತಾತ್ಮಕ ಹುದ್ದೆಗಳಲ್ಲಿ ಇಂಗ್ಲಿಶ್ ಭಾಷಾಪರೀಕ್ಷೆಯನ್ನು ಕಡ್ಡಾಯಗೊಳಿಸುವ ಮೂಲಕ ಮಾತೃಭಾಷಾಮಾಧ್ಯಮದಲ್ಲಿ ಕಲಿತ ಅಥವಾ ಇಂಗ್ಲಿಶ್ ಭಾಷಾಜ್ಞಾನವಿಲ್ಲದ ಅಭ್ಯರ್ಥಿಗಳನ್ನು ಆಡಳಿತಾತ್ಮಕ ಹುದ್ದೆಗಳಿಂದ ದೂರವಿಡಲಾಗಿದೆ. ಇನ್ನೊಂದು ಕಡೆಗೆ ಕರ್ನಾಟಕ ಏಕೀಕರಣದ ನಂತರ ಕನ್ನಡವನ್ನು ರಾಜ್ಯದ ಆಡಳಿತ ಭಾಷೆಯಾಗಿಸುವ ಮತ್ತು ಕನ್ನಡ ಭಾಷಾಮಾಧ್ಯಮದ ಶಿಕ್ಷಣವನ್ನು ಉತ್ತೇಜಿಸುವ ಉದ್ದೇಶದಿಂದ ಸರ್ಕಾರಿ ಹುದ್ದೆಗಳ ನೇಮಕಾತಿಯಲ್ಲಿ ಶೇ.೫ರಷ್ಟು ಮೀಸಲಾತಿ ಕಲ್ಪಿಸಲಾಗಿದೆ.

ಆದರೆ ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಈ ಉದ್ಯೋಗ ಮತ್ತು ವೃತ್ತಿಶಿಕ್ಷಣದಲ್ಲಿ ಶೇ.೫ರಷ್ಟು ಮೀಸಲಾತಿಯ ನೀತಿ ಯಶಸ್ವಿಯಾಗಿಲ್ಲ. ಏಕೆಂದರೆ ಕರ್ನಾಟಕ ಸರ್ಕಾರ ಆಡಳಿತದಲ್ಲಿ ಕನ್ನಡವನ್ನು ಬಳಕೆಗೆ ತರಲು ಮತ್ತು ಕನ್ನಡ ಭಾಷಾಮಾಧ್ಯಮದ ಶಿಕ್ಷಣವನ್ನು ಉತ್ತೇಜಿಸಲು ಉದ್ಯೋಗಗಳಲ್ಲಿ ಶೇ.೫ರಷ್ಟು ಮೀಸಲಾತಿ ಕಲ್ಪಿಸಿದ್ದರೂ ಈಗಾಗಲೇ ಚರ್ಚಿಸಿರುವ ಹಾಗೆ ಈ ಮೀಸಲಾತಿ ಕಲ್ಪನೆಯ ಅಡಿಯಲ್ಲಿ ಉದ್ಯೋಗ ಪಡೆಯಲು ಇದಕ್ಕೂ ಮೊದಲೇ ಇಂಗ್ಲಿಶ್ ಭಾಷಾಪರೀಕ್ಷೆಯಲ್ಲಿ ಉತ್ತೀರ್ಣವಾಗಿರಬೇಕಿದೆ. ಹಾಗೆಯೇ ವೃತ್ತಿಶಿಕ್ಷಣದಲ್ಲಿ ಮೀಸಲಾತಿ ಪಡೆಯಲು ಇಂಗ್ಲಿಶ್ ಭಾಷಾಮಾಧ್ಯಮದಲ್ಲಿರುವ ವಿಜ್ಞಾನದ ವಿಷಯಗಳನ್ನು ಕಲಿತು, ಅದರಲ್ಲಿ ಉನ್ನತ ದರ್ಜೆಯಲ್ಲಿ ಉತ್ತೀರ್ಣವಾಗಿ, ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಉತ್ತಮ ಸ್ಥಾನ ಪಡೆದಿದ್ದಾಗ ಮಾತ್ರ ವೃತ್ತಿಪರ ಶಿಕ್ಷಣದ ದಾಖಲಾತಿಗೆ ಅವಕಾಶವಿರುತ್ತದೆ. ಇಲ್ಲದಿದ್ದರೆ ಇಲ್ಲಿ ದಾಖಲಾತಿಗೆ ಅವಕಾಶವಿಲ್ಲ. ಹೀಗಾಗಿ ಬಹುತೇಕ ಕನ್ನಡ ಭಾಷಾಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳು ಈ ಹಂತಗಳನ್ನು ದಾಟಿ ಮೀಸಲಾತಿಯ ಲಾಭ ಪಡೆಯಲು ಸಾಧ್ಯವಾಗದೆ ಅದರಿಂದ ದೂರವೇ ಉಳಿದಿದ್ದಾರೆ. ಇದರಿಂದಾಗಿ ಪೋಷಕರು ತಮ್ಮ ಮಕ್ಕಳನ್ನು ಕನ್ನಡ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡುವ ಬದಲಾಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳಿಗೆ ದಾಖಲು ಮಾಡಿಸಿದ್ದಾರೆ. ಹೀಗಾಗಿ ಕರ್ನಾಟಕ ಸರ್ಕಾರ ಕನ್ನಡ ಭಾಷಾಮಾಧ್ಯಮದ ಶಿಕ್ಷಣವನ್ನು ಉತ್ತೇಜಿಸಲು ವೃತ್ತಿಪರ ಶಿಕ್ಷಣವನ್ನು ಕನ್ನಡ ಭಾಷಾಮಾಧ್ಯಮದಲ್ಲಿ ಬೋಧಿಸುವಂತಹ ವ್ಯವಸ್ಥೆ ನಿರ್ಮಾಣ ಮಾಡಬೇಕಿತ್ತು. ಆದರೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಇದುವರೆಗೆ ಪ್ರೌಢಶಿಕ್ಷಣದ ನಂತರದ ಎಲ್ಲಾ ವಿದ್ಯಾಭ್ಯಾಸವನ್ನು ಇಂಗ್ಲಿಶ್‌ನಿಂದ ಕನ್ನಡ ಅಥವಾ ಮಾತೃಭಾಷಾಮಾಧ್ಯಮವಾಗಿ ಬದಲಾಯಿಸುವ ಕೆಲಸ ಮಾಡಿಲ್ಲ.

ಇದರಿಂದಾಗಿ ಕರ್ನಾಟಕದ ಆಡಳಿತದಲ್ಲಿ ಇಂಗ್ಲಿಶ್ ಮುಂದುವರೆಯುತ್ತಿದೆ. ಏಕೆಂದರೆ ಯಾವುದೇ ಒಂದು ಪ್ರದೇಶದ ಶಿಕ್ಷಣದಲ್ಲಿ ಬಳಕೆಯಾಗುವ ಭಾಷೆಗೂ ಮತ್ತು ಆ ಪ್ರದೇಶ ಆಡಳಿತದಲ್ಲಿ ಬಳಕೆಯಾಗುವ ಭಾಷೆಗೂ ನಿಕಟ ಸಂಬಂಧವಿರುತ್ತದೆ. ಶಿಕ್ಷಣ ಮತ್ತು ಆಡಳಿತದಲ್ಲಿ ಬಳಕೆಯಾಗುವ ಭಾಷೆಯ ನಡುವೆ ಹೊಂದಾಣಿಕೆ ಇಲ್ಲದಿದ್ದರೆ ಅದು ಆ ಪ್ರದೇಶದ ಆಡಳಿತಕ್ಕೂ ಸಮಸ್ಯೆ ಶಿಕ್ಷಣಕ್ಕೂ ಸಮಸ್ಯೆ. ಏಕೀಕರಣ ನಂತರದ ಕರ್ನಾಟಕದಲ್ಲಿ ಆಗಿರುವುದು ಇದೇ ಸಮಸ್ಯೆ.

ಏಕೆಂದರೆ ಕರ್ನಾಟಕ ಏಕೀಕರಣ ಆದ ನಂತರ ಮಾತೃಭಾಷೆ ಮತ್ತು ಪ್ರಾದೇಶಿಕ ಭಾಷೆಗಳನ್ನು ಅಭಿವೃದ್ಧಿಪಡಿಸಲು ಅವುಗಳಿಗೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವ ಕೆಲಸ ಮಾಡಲಾಗಿದೆ. ಇದಕ್ಕಾಗಿ ಇಂಗ್ಲಿಶ್ ಭಾಷಾಮಾಧ್ಯಮದ ಶಾಲೆಗಳನ್ನು ನಿಯಂತ್ರಿಸುವ ಕೆಲಸ ಮಾಡಲಾಗಿದೆ. ಮತ್ತೊಂದು ಕಡೆ ಆಡಳಿತದಲ್ಲಿ ಇಂಗ್ಲಿಶ್ ಭಾಷೆಯ ಅನಿವಾರ್ಯತೆ ಇದೆ ಎಂಬ ಕಾರಣಕ್ಕಾಗಿ ಸರ್ಕಾರದ ಉನ್ನತ ಹುದ್ದೆಗಳಿಗೆ ಉದ್ಯೋಗಿಗಳನ್ನು ಭರ್ತಿ ಮಾಡಿಕೊಳ್ಳುವಾಗ ಇಂಗ್ಲಿಶ್ ಭಾಷಾಜ್ಞಾನ ಕಡ್ಡಾಯ ಎಂಬ ಷರತ್ತನ್ನು ಹಾಕಲಾಗಿದೆ. ಇದರಿಂದಾಗಿ ಇಂಗ್ಲಿಶ್ ಭಾಷಾಬಳಕೆ ಕಲಿಕೆ ಮತ್ತು ಬಳಕೆ ಅನಿವಾರ್ಯ ಎಂಬಂತಹ ಪರಿಸ್ಥಿತಿ ನಿರ್ಮಾಣ ಮಾಡಲಾಗಿದೆ. ಹೀಗಾಗಿ ಕರ್ನಾಟಕ ಸರ್ಕಾರದ ಉನ್ನತ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಅಧಿಕಾರಿಗಳು, ನೌಕರರು ಭಾಷಾಸಮಸ್ಯೆಗೆ ಒಳಗಾಗಿದ್ದಾರೆ.

ಇವುಗಳ ನಡುವೆ ಇದುವರೆಗೆ ಚರ್ಚಿಸಿದ ಹಾಗೆ ರಾಜ್ಯರಾಜ್ಯಗಳ ಮತ್ತು ಕೇಂದ್ರದ ನಡುವಿನ ವ್ಯವಹಾರದಲ್ಲಿ ಇಂಗ್ಲಿಶ್ ಬಳಸುವುದು ಅನಿವಾರ್ಯ ಆಗಿರುವುದರಿಂದ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರಿಗೆ ಇಂಗ್ಲಿಶ್ ಭಾಷಾಜ್ಞಾನ ಕಡ್ಡಾಯವಾಗಿದೆ. ಏಕೆಂದರೆ ಕೇಂದ್ರದಿಂದ ರಾಜ್ಯಕ್ಕೆ ರವಾನೆಯಾಗುವ ಎಲ್ಲಾ ಪತ್ರಗಳು, ದಾಖಲೆಗಳು ಇಂಗ್ಲಿಶ್ ಇಲ್ಲವೆ ಹಿಂದಿ ಭಾಷೆಯಲ್ಲಿ ಇವೆ. ಹಾಗೆಯೇ ರಾಜ್ಯದಲ್ಲಿರುವ ಕೇಂದ್ರಸರ್ಕಾರದ ಅಧೀನ ಸಂಸ್ಥೆಗಳಲ್ಲಿ ಇಂಗ್ಲಿಶ್ ಮತ್ತು ಹಿಂದಿಗಳೇ ಪ್ರಧಾನವಾಗಿವೆ. ಇಲ್ಲಿ ಕನ್ನಡ ಬಳಸಲು ಅವಕಾಶವಿದ್ದರೂ ಅದು ಪ್ರಧಾನ ಸ್ಥಾನ ಪಡೆದಿಲ್ಲ. ಇನ್ನು ರಾಜ್ಯದ ಮತ್ತು ಕೇಂದ್ರಸರ್ಕಾರದ ಉದ್ಯೋಗಗಳಿಗೆ ಅರ್ಜಿಗಳನ್ನು ಭರ್ತಿ ಮಾಡುವಾಗ ಆ ಅರ್ಜಿಯಲ್ಲಿ ಕೇಳಲಾಗಿರುವ ಎಲ್ಲಾ ಮಾಹಿತಿಗಳನ್ನು ಇಂಗ್ಲಿಶ್‌ನಲ್ಲಿಯೇ ಭರ್ತಿ ಮಾಡಬೇಕು ಎಂಬ ಷರತ್ತನ್ನು ವಿಧಿಸಲಾಗಿದೆ. ಈ ಷರತ್ತುನ್ನು ಹಾಕಿರುವುದರ ಹಿಂದಿನ ಉದ್ದೇಶ ಏನೇ ಇದ್ದರೂ ಇಂಗ್ಲಿಶ್‌ನ ಸಮರ್ಪಕ ತಿಳುವಳಿಕೆ ಇಲ್ಲದ ಜನರು ಸಮಸ್ಯೆಗಳಿಗೆ ಸಿಲುಕಿದ್ದಾರೆ. ಇನ್ನು ಖಾಸಗಿ ಕ್ಷೇತ್ರಗಳ ವ್ಯವಹಾರದಲ್ಲಿ ಮಾಹಿತಿಗಳನ್ನು, ಅರ್ಜಿ ನಮೂನೆಗಳನ್ನು ಭರ್ತಿಮಾಡುವಾಗ ಇಂಗ್ಲಿಶ್‌ಗೆ ಪ್ರಧಾನಸ್ಥಾನ. ಏಕೆಂದರೆ ಈ ದಾಖಲೆ ಪತ್ರಗಳನ್ನು ರಾಜ್ಯಸರ್ಕಾರದ ಅಧಿಕಾರಿಗಳು, ನೌಕರರು ಮಾತ್ರವಲ್ಲದೆ ಕೇಂದ್ರ ಸರ್ಕಾರದ ಅಧಿಕಾರಿಗಳು, ನೌಕರರು ಪರಿಶೀಲನೆಗೆ ಒಳಪಡಿಸುವುದರಿಂದ ಅವರಿಗೆ ಕನ್ನಡ ಅಥವಾ ಸ್ಥಳೀಯ ಭಾಷೆಯ ತಿಳುವಳಿಕೆ ಇಲ್ಲ ಎಂಬ ಕಾರಣಕ್ಕಾಗಿ ಈ ಎಲ್ಲಾ ಅರ್ಜಿಪತ್ರ, ನಮೂನೆ ಪತ್ರ, ಮನವಿ ಪತ್ರ ಇತ್ಯಾದಿಗಳು ಇಂಗ್ಲಿಶ್‌ನಲ್ಲಿ ಇರಬೇಕು ಎಂದು ಅಪೇಕ್ಷಿಸಲಾಗಿದೆ. ಇದರಿಂದಾಗಿ ಇಂಗ್ಲಿಶ್ ತಿಳುವಳಿಕೆ ಇಲ್ಲದ ಜನ ಸಮಸ್ಯೆಗೆ ಒಳಗಾಗಿದ್ದಾರೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಏಕೀಕರಣ ನಂತರದ ಕರ್ನಾಟಕದಲ್ಲಿ ಇಂಗ್ಲಿಶ್‌ನ್ನು ನಿಯಂತ್ರಿಸಿ ಕನ್ನಡವನ್ನು ಬಳಸಲು ಮಾಡಿರುವ ಪ್ರಯತ್ನಗಳನ್ನು ಇಂಗ್ಲಿಶ್ ಭಾಷಾಬಳಕೆ ವಿಫಲಗೊಳಿಸಿರುವುದು ಈ ಅಧ್ಯಯನದಿಂದ ತಿಳಿದುಬರುತ್ತದೆ.

ಒಟ್ಟಾರೆಯಾಗಿ ಆಡಳಿತದಲ್ಲಿ ಭಾಷಾಸಮಸ್ಯೆಗಳನ್ನು ಎದುರಿಸಿರುವುದು, ಎದುರಿಸುತ್ತಿರುವುದು ಪ್ರಬಲವಲ್ಲದ ಭಾಷಿಕ ಸಮುದಾಯಗಳೇ ಹೊರತು ಪ್ರಬಲ ಭಾಷಿಕ ಸಮುದಾಯಗಳಲ್ಲ. ಕರ್ನಾಟಕ

ಸರ್ಕಾರಗಳ ಭಾಷಾನೀತಿಗಳು ಪ್ರಬಲವಲ್ಲದ ಭಾಷಿಕ ಸಮುದಾಯಗಳ ಪರವಾಗಿ ಇದ್ದರೂ ಇವು ಇಲ್ಲಿನ ಪ್ರಬಲವಲ್ಲದ ಭಾಷಿಕ ಸಮುದಾಯಗಳ ಹಿತ ಕಾಪಾಡುವ ನಿಜವಾದ ಕಾಳಜಿಯಿಂದ ಜಾರಿಗೆ ತಂದ ಭಾಷಾನೀತಿಗಳಲ್ಲ. ಭಾರತ ಸಂವಿಧಾನ ಮತ್ತು ಕೇಂದ್ರಸರ್ಕಾರಗಳ ಭಾಷಾನೀತಿಗೆ ಅಧೀನವಾಗಿ ಕರ್ನಾಟಕದ ಭಾಷಾನೀತಿಯಲ್ಲಿ ಸೇರಿಸಲೇಬೇಕಾದ ಅನಿವಾರ್ಯತೆಗೆ ಒಳಗಾಗಿ ಜಾರಿಗೆ ತಂದಿರುವ ಭಾಷಾನೀತಿಗಳಾಗಿವೆ. ಇಲ್ಲಿನ ಸರ್ಕಾರಗಳಿಗೆ ಅಧಿಕಾರ ಪ್ರಧಾನವಾಗಿದೆಯೇ ಹೊರತು ಆಡಳಿತದಲ್ಲಿನ ಭಾಷಾಸಮಸ್ಯೆಗಳ ಪರಿಹಾರವಲ್ಲ. ಇದು ಏಕೀಕರಣ ನಂತರದ ಕರ್ನಾಟಕ: ಕನ್ನಡ ಭಾಷಾಬಳಕೆ ಮತ್ತು ಸಮಸ್ಯೆಗಳು ಹಾಗೂ ಭಾಷಾಅಲ್ಪಸಂಖ್ಯಾತರು: ಭಾಷೆಗಳ ಬಳಕೆ ಮತ್ತು ಸಮಸ್ಯೆಗಳು ಎಂಬ ಭಾಗಗಳಲ್ಲಿ ಚರ್ಚಿಸಿರುವ ಅಂಶಗಳಿಂದ ಸ್ಪಷ್ಟವಾಗುತ್ತದೆ.

ಹೀಗಾಗಿ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಜಾರಿಗೆ ತಂದಿರುವ ಭಾಷಾನೀತಿಗಳು ಪ್ರಬಲವಲ್ಲದ ಭಾಷಿಕ ಸಮುದಾಯಗಳಿಗೆ ತಮ್ಮ ಭಾಷೆಗಳನ್ನು ಆಡಳಿತದಲ್ಲಿ ಬಳಸಲು ಅವಕಾಶ ಕಲ್ಪಿಸಿವೆಯೇ ಹೊರತು ಪರಿಹಾರ ಒದಗಿಸಿಲ್ಲ. ಹೀಗಾಗಿ ಇದುವರೆಗೆ ಚರ್ಚಿಸಿದ ಹಾಗೆ ಏಕೀಕರಣ ನಂತರದ ಕರ್ನಾಟಕದ ಆಡಳಿತದಲ್ಲಿ ಭಾಷಾಅಲ್ಪಸಂಖ್ಯಾತರ ಹಿತ, ರಾಜ್ಯದ ಆಡಳಿತ, ದೇಶದ ಆಡಳಿತ, ಅನ್ಯರಾಜ್ಯಗಳ ನಡುವಿನ ವ್ಯವಹಾರದ ಅನುಕೂಲಕ್ಕಾಗಿ ಭಾಷಾಅಲ್ಪಸಂಖ್ಯಾತರ ಭಾಷೆ, ರಾಜ್ಯಭಾಷೆ, ರಾಷ್ಟ್ರ ಭಾಷೆ, ಅಂತರಾಷ್ಟ್ರೀಯ ಭಾಷೆಗಳ ಹೆಸರಿನಲ್ಲಿ ಹಲವು ಭಾಷೆಗಳನ್ನು ಬಳಸುವಂತೆ ಭಾಷಾನೀತಿಗಳನ್ನು ಜಾರಿಗೆ ತರಲಾಗಿದೆ. ಆದರೆ ಸರ್ಕಾರಗಳು ತಾವು ಜಾರಿಗೆ ತಂದ ಭಾಷಾನೀತಿಯನ್ನು ಅನುಷ್ಠಾನಕ್ಕೆ ತರಲು ಪೂರಕ ವ್ಯವಸ್ಥೆ ಕಲ್ಪಿಸದೇ ಇರುವುದು ಭಾಷಾಸಮಸ್ಯೆಗಳ ಪರಿಹಾರಕ್ಕೆ ಜಾರಿಗೆ ತಂದಿರುವ ಭಾಷಾನೀತಿಗಳೇ ಸಮಸ್ಯೆಗಳಾಗಿ ಪರಿಣಮಿಸಿ, ಆಡಳಿತದಲ್ಲಿ ಸಮಸ್ಯೆಗಳನ್ನು ಹುಟ್ಟುಹಾಕಿರುವುದು ಈ ಅಧ್ಯಯನದಿಂದ ತಿಳಿಯುತ್ತದೆ.

**ಟಿಪ್ಪಣಿಗಳು**

೧. ಎಚ್ಚೆಸ್ಕೆ, ಆಡಳಿತದಲ್ಲಿ ಕನ್ನಡ, ಪುಟ ೨೮
೨. ಎಚ್ಚೆಸ್ಕೆ, ಆಡಳಿತದಲ್ಲಿ ಕನ್ನಡ, ಪುಟ ೧೧
೩. ಸೋಮಶೇಖರಗೌಡ, ಭಾಷೆ ರಚನೆ ಮತ್ತು ಬಳಕೆ, ಪುಟ ೧೬೩
೪. ಧಾರವಾಡಕರ ರಾ.ಯ, ಕನ್ನಡ ಭಾಷಾಶಾಸ್ತ್ರ, ಪುಟ ೯೧
೫. ಎಚ್ಚೆಸ್ಕೆ, ಆಡಳಿತದಲ್ಲಿ ಕನ್ನಡ, ಪುಟ ೧೫
೬. ಮಹಾದೇವಯ್ಯ ಪಿ. (ಸಂ) ಅಶೋಕ ಕುಮಾರ ರಂಜೇರೆ, ಆಡಳಿತ ಕನ್ನಡ, ಪುಟ ೯
೭. ಮಹದೇವ ಬಣಕಾರ, ಆಂಗ್ಲರ ಅಡಳಿತದಲ್ಲಿ ಕನ್ನಡ, ಪುಟ ೨೩
೮. ಮಹಾದೇವಯ್ಯ ಪಿ. (ಸಂ) ಅಶೋಕ ಕುಮಾರ ರಂಜೇರೆ, ಆಡಳಿತ ಕನ್ನಡ, ಪುಟ ೧೫
೯. ಎಚ್ಚೆಸ್ಕೆ, ಕನ್ನಡದ ಸ್ಥಿತಿಗತಿ, ಪುಟ ೧೯
೧೦. ಹೇಮಲತಾ ಮಹಿಷಿ, ಪ್ರತಿಕ್ರಿಯೆ (ಲೇಖನಗಳ ಸಂಗ್ರಹ), ಪುಟ ೪
೧೧. ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ದಾಖಲೆ ನಂ.೫ (೧೧), ಪುಟ ೪೪
೧೨. ಪ್ರಸನ್ನ ಎ.ಎ., ಆಡಳಿತದಲ್ಲಿ ಕನ್ನಡ, ಪುಟ ೩೮
೧೩. ಅದೇ, ಪುಟ ೩೯
೧೪. ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ಪುಟ ೧೪
೧೫. ಪಾಟೀಲ ಪುಟ್ಟಪ್ಪ, (ಸಂ) ಗುರುಲಿಂಗ ಕಾಪಸೆ, ಕನ್ನಡ ಕಾವಲು, ಪುಟ ೩೨

೧೬. ರಂಗನಾಥ ಕಂಟನಕುಂಟೆ, ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ, ಪುಟ ೧೦೨
೧೭. ಬಡ್ಡಿ ಎಂ.ಎಂ., ಭಾರತದ ಸಂವಿಧಾನ, ಪುಟ ೯೯
೧೮. ಪಾಟೀಲ ಪುಟ್ಟಪ್ಪ, ನಾಡು-ನುಡಿ, ಪುಟ ೨೩
೧೯. ರಾಮಚಂದ್ರಪ್ಪ ಬರಗೂರು, ಕನ್ನಡ ಪ್ರಜ್ಞೆ, ಪುಟ ೧೭೨
೨೦. ಅದೇ, ಪುಟ ೧೭೩
೨೧. ರಾಜಭಾಷಾ ಆಯೋಗದ ೧೯೫೬, ಭಾರತ ಸರ್ಕಾರ, ವರದಿ ಪುಟ ೨
೨೨. ಅದೇ, ಪುಟ ೬೨
೨೩. ಅದೇ, ವರದಿ ಪುಟ ೪೫
೨೪. ಅದೇ, ಪುಟ ೪೬
೨೫. ಅದೇ, ಪುಟ ೬೧
೨೬. ರಂಗನಾಥ ಕಂಟನಕುಂಟೆ, ಜನರ ವ್ಯಾಕರಣ, ಪುಟ ೫೮

ಅಧ್ಯಾಯ-೬

## ನ್ಯಾಯಾಲಯ ಮತ್ತು ಭಾಷೆ

೬.೧ ನ್ಯಾಯಾಲಯಗಳಲ್ಲಿ ಭಾಷಾಬಳಕೆಯ ಸ್ವರೂಪ ಮತ್ತು ಸಮಸ್ಯೆಗಳು

೬.೨ ಸ್ವತಂತ್ರ ಭಾರತ: ನ್ಯಾಯಾಲಯಗಳಲ್ಲಿ ಭಾಷಾಬಳಕೆ ಮತ್ತು ಸಮಸ್ಯೆಗಳು

೬.೩ ಏಕೀಕರಣ ನಂತರದ ಕರ್ನಾಟಕ: ನ್ಯಾಯಾಲಯಗಳಲ್ಲಿ ಭಾಷಾಬಳಕೆ ಮತ್ತು ಸಮಸ್ಯೆಗಳು

ಅಧ್ಯಾಯ-೬

# ನ್ಯಾಯಾಲಯ ಮತ್ತು ಭಾಷೆ

## ೬.೧ ನ್ಯಾಯಾಲಯಗಳಲ್ಲಿ ಭಾಷಾಬಳಕೆಯ ಸ್ವರೂಪ ಮತ್ತು ಸಮಸ್ಯೆಗಳು

ವಿಶ್ವದ ಪ್ರತಿಯೊಂದು ರಾಷ್ಟ್ರವೂ ತನ್ನದೇ ಆದ ವಿಶಿಷ್ಟ ಸಂಪ್ರದಾಯ, ನಂಬಿಕೆಗಳು, ಆಚರಣೆ, ವಿಧಿವಿಧಾನ ಇತ್ಯಾದಿಗಳನ್ನು ಒಳಗೊಂಡಿವೆ. ಹಾಗೆಯೇ ಪ್ರತಿಯೊಂದು ರಾಷ್ಟ್ರದಲ್ಲೂ ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯವಾದ, ಜನಾಂಗಿಯವಾದ, ಲಿಂಗಾಧಾರಿತವಾದ ಅಸಮಾನತೆಗಳು ಇವೆ. ಇವುಗಳ ಆಧಾರದಲ್ಲಿ ಶೋಷಣೆಗಳು ನಡೆಯುತ್ತಿವೆ. ಇವುಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ವಿಶ್ವದ ಪ್ರತಿಯೊಂದು ರಾಷ್ಟ್ರಗಳು ಆಯಾ ದೇಶಗಳ ಜನರ ನಂಬಿಕೆ, ಆಚರಣೆ, ಸಂಪ್ರದಾಯ, ಜನರ ಜೀವನಶೈಲಿ ಇತ್ಯಾದಿಗಳಿಗೆ ಅನುಗುಣವಾಗಿ ಆಯಾ ಪ್ರದೇಶಗಳ ಶಾಂತಿ ಮತ್ತು ಸುವ್ಯವಸ್ಥೆ ಕಾಪಾಡುವ ನಿಟ್ಟಿನಲ್ಲಿ ಕೆಲವೊಂದು ನಿಯಮಗಳನ್ನು ರೂಪಿಸಿಕೊಂಡಿವೆ. ಇದರ ಮುಖ್ಯ ಉದ್ದೇಶ ಉತ್ತಮ ಸಮಾಜ ನಿರ್ಮಾಣ ಮತ್ತು ಆಯಾ ಪ್ರದೇಶಗಳ ಜನರ ಬದುಕು ನೆಮ್ಮದಿಯಾಗಿ ಇರುವಂತೆ ಮಾಡುವುದೇ ಆಗಿದೆ. ಆದರೂ ವಿಶ್ವದ ಎಲ್ಲಾ ಭಾಗಗಳಲ್ಲಿ ಆಯಾ ಪ್ರದೇಶದ ಕಾನೂನಿನ ಪ್ರಕಾರವಾಗಿ ಎಲ್ಲವು ನಡೆಯುತ್ತಿಲ್ಲ. ಮನುಷ್ಯನ ದುರಾಸೆ ಮತ್ತು ಅತಿರೇಕದ ವರ್ತನೆಯಿಂದಾಗಿ ಸಮಾಜದ ಶಾಂತಿ ಮತ್ತು ಸುವ್ಯವಸ್ಥೆ ಭಂಗವಾಗಿದೆ. ಈಗಲೂ ಆಗುತ್ತಿದೆ. ಇದರಿಂದ ಸಾಕಷ್ಟು ಅಮಾಯಕ, ಮುಗ್ಧ ಜನರಿಗೆ ಅನ್ಯಾಯವಾಗಿದೆ. ಇದನ್ನು ತಡೆಗಟ್ಟುವ ನಿಟ್ಟಿನಲ್ಲಿ ಮತ್ತು ಅನ್ಯಾಯಕ್ಕೆ ಒಳಗಾದ ಜನತೆಗೆ ನ್ಯಾಯ ಒದಗಿಸಿಕೊಡುವ ನಿಟ್ಟಿನಲ್ಲಿ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ.

ನ್ಯಾಯಾಲಯಗಳಿಗೆ ಭಾಷೆ, ಜಾತಿ, ಧರ್ಮ, ಮತ, ಪಂಥ, ವರ್ಗ, ವರ್ಣ, ವೃತ್ತಿಗಳ ವ್ಯತ್ಯಾಸವಿಲ್ಲದೆ ಅನ್ಯಾಯಕ್ಕೆ ಒಳಗಾಗಿದ್ದೇವೆ ಎಂಬ ಭಾವನೆಗೆ ಒಳಗಾದ ಮತ್ತು ಕಾನೂನಾತ್ಮಕ ನ್ಯಾಯ ಪಡೆಯಲು ಶಕ್ತವಿರುವ ಪ್ರತಿಯೊಬ್ಬ ವ್ಯಕ್ತಿ ಅಥವಾ ಜನಸಮುದಾಯಗಳು ಪ್ರವೇಶಿಸುತ್ತವೆ. ಹೀಗಾಗಿ ಯಾವುದೇ ಪ್ರದೇಶದ ಜನರು ಆಡಳಿತ, ಶಿಕ್ಷಣ ಇಲಾಖೆಗಳ ನಂತರ ಹೆಚ್ಚು ವ್ಯವಹರಿಸುವ ಕ್ಷೇತ್ರವೆಂದರೆ ನ್ಯಾಯಾಂಗವಾಗಿದೆ. ಆದುದರಿಂದ ಯಾವುದೇ ಒಂದು ಪ್ರದೇಶದ ಆಡಳಿತ, ಶಿಕ್ಷಣ ಮತ್ತು ನ್ಯಾಯಾಲಯಗಳಲ್ಲಿ ಬಳಕೆಯಾಗುವ ಭಾಷೆ ಅಥವಾ ಭಾಷೆಗಳು ಮೊದಲಿನಿಂದಲೂ ಮಹತ್ವ ಪಡೆದಿವೆ. ಏಕೆಂದರೆ 'ಭಾಷೆ ಭಾವಾಭಿವ್ಯಕ್ತಿಯ ಸಾಧನ, ಭಾಷೆಯು ಮಾನವನ ಸುಖ ಜೀವನಕ್ಕೆ, ಶಾಂತ ಸುವ್ಯಸ್ಥಿತ ಜೀವನಕ್ಕೆ, ನಾಗರೀಕ ಜೀವನಕ್ಕೆ ಬೇಕಾದ ಒಂದು ಉಪಯುಕ್ತ ಸಾಧನ. ಅನ್ಯಾಯವಾಗಿದೆಯೆಂದು ಅಥವಾ ಆಗಲಿರುವ ಅನ್ಯಾಯವನ್ನು ತಡೆಯಬೇಕೆಂದು ಪರಿಹಾರ ಕೋರಿ ಬರುವ ಪ್ರಜೆ ಹಸಿವೆಯಾದ ಮಗುವಿನಂತೆ. ಬಾಯಿಬಿಟ್ಟು ತನ್ನ ಆಪತ್ತು ಏನೆಂಬುದನ್ನು ತೋಡಿಕೊಳ್ಳಬೇಕು. ಅದನ್ನು ಅವನ ಭಾಷೆಯಲ್ಲಿಯೇ ಕೇಳಿ ಅವನ ಆಪತ್ತು (grievence) ಅವನಿಗಾದ ಅನ್ಯಾಯ (injury) ಏನೆಂದು ತಿಳಿದು ಅವನಿಗೆ ಬೇಕಾದ ಪರಿಹಾರ (relief) ಏನೆಂಬುದನ್ನು ನ್ಯಾಯಾಲಯ ತಿಳಿಯಬೇಕು. ಅವನಿಗೆ ಇರುವ ಸಂಕಟದ ಕಠೋರತೆಯನ್ನು ಅವನ

ಬಾಯಿಂದ ಬರುವ ಮಾತುಗಳು ವ್ಯಕ್ತಪಡಿಸುವಷ್ಟು ಸಮರ್ಥವಾಗಿ ಮತ್ತಾವ ದೇವಭಾಷೆಯೂ ಮಾಡಲಾರದು.[೧]

ಹೀಗಾಗಿ ನ್ಯಾಯಾಲಯಗಳಲ್ಲಿ ಆ ಪ್ರದೇಶದ ಜನರ ಭಾಷೆ ಅಥವಾ ಭಾಷೆಗಳು ಬಳಕೆಯಾಗಬೇಕು. ಇದರಿಂದ ಜನರು ತಮ್ಮ ದಾವೆಗಳ ಬಗ್ಗೆ ವಾದ ನಡೆಯುವಾಗ ವಾಸ್ತವ ಅಂಶಗಳು ಏನು? ಎಂಬುದು ತಿಳಿಯುತ್ತದೆ. ಇಲ್ಲದಿದ್ದರೆ ಕಕ್ಷಿದಾರನು ತನ್ನ ಮನದ ಅಳಲನ್ನು ಬೇರೆ ಭಾಷೆಯಲ್ಲಿ ತಿಳಿಸಬೇಕಾಗುತ್ತದೆ. ಇಲ್ಲವೆ ಬೇರೆಯವರ ಮೂಲಕ ತಿಳಿಸಬೇಕಾಗುತ್ತದೆ. ಹೀಗೆ ಬೇರೆ ಭಾಷೆ ಅಥವಾ ಬೇರೆಯವರ ಮೂಲಕ ತಿಳಿಸುವುದು 'ಪ್ರಿಯತಮೆಗೆ ನಿಮ್ಮ ಮುಗುಳ್ನಗೆಗಳನ್ನು ವಕೀಲನ ಮೂಲಕ ಕಳುಹಿಸಿಕೊಡಲು ಪ್ರಯತ್ನಿಸಿದ ಹಾಗೆ' ಎನ್ನುತ್ತಾರೆ ಕವಿ ರವೀಂದ್ರರು. ಇದರಿಂದ ಅನ್ಯಾಯಕ್ಕೆ ಒಳಗಾದ ಕಕ್ಷಿದಾರನು ತನಗಾದ ಅನ್ಯಾಯವನ್ನು ನ್ಯಾಯಾಧೀಶನಿಗಾಗಲಿ, ವಕೀಲನಿಗಾಗಲಿ ಸಮರ್ಥವಾಗಿ ವ್ಯಕ್ತಪಡಿಸಲು ಸಾಧ್ಯವಾಗದೆ ಮತ್ತೆ ಅನ್ಯಾಯಕ್ಕೆ ಒಳಗಾಗುವ ಸಾಧ್ಯತೆ ಇರುತ್ತದೆ. ಹೀಗಾಗಿ 'ಕನ್ನಡ ರಾಜರು ರಾಜಾಜ್ಞೆಗಳನ್ನು ಹೊರಡಿಸಲು, ಪ್ರಜೆಗಳ ಆಸ್ತಿಪಾಸ್ತಿ, ವಿವಾದಗಳನ್ನು, ಸೀಮಾ ವಿವಾದಗಳನ್ನು ತೀರ್ಮಾನಿಸಲು ಕನ್ನಡ ಭಾಷೆಯನ್ನು ಮತ್ತು ಲಿಪಿಯನ್ನು ಸುಮಾರು ಸಾವಿರದ್ಯೆನೂರು ವರ್ಷಗಳಷ್ಟು ಪೂರ್ವ ಕಾಲದಿಂದಲೂ ಉಪಯೋಗಿಸುತ್ತಾ ಬಂದಿದ್ದಾರೆ. ಕದಂಬರು, ಗಂಗರು, ಹೊಯ್ಸಳರು, ರಾಷ್ಟ್ರಕೂಟರು, ಚಾಲುಕ್ಯರು ಮತ್ತು ವಿಜಯನಗರದರಸರ ಕಾಲಗಳಿಗೆ ಸಂಬಂಧಿಸಿದ ಶಿಲಾಶಾಸನಗಳಲ್ಲಿ ನ್ಯಾಯತೀರ್ಮಾನ ಮಾಡಿದ ರಾಜಾಜ್ಞೆಯ ಮಾದರಿಗಳು'[೨] ಕನ್ನಡದಲ್ಲಿ ಸಿಕ್ಕುತ್ತವೆ.

ಏಕೆಂದರೆ 'ಕಾನೂನಿನ ಅಜ್ಞಾನ ಅಕ್ಷಮ್ಯ ಎನ್ನುವುದು ನ್ಯಾಯಾಡಳಿತದ ಒಂದು ಮೂಲತತ್ವವಾಗಿದ್ದರೆ, ನ್ಯಾಯಾಲಯಗಳ ಎಲ್ಲ ಕಾರ್ಯಕಲಾಪಗಳು ಮುಕ್ತವಾದ ವಾತಾವರಣದಲ್ಲಿ ನಡೆಯಬೇಕು ಎನ್ನುವುದು ಮತ್ತೊಂದು ಮಹತ್ವದ ತತ್ವವಾಗಿದೆ.[೩] ಇವುಗಳ ಪಾಲನೆಯಿಂದ ಕಕ್ಷಿದಾರನಿಗೆ ನ್ಯಾಯಾಲಯಗಳಲ್ಲಿ ತನ್ನ ದಾವೆಯ ವಿಚಾರದಲ್ಲಿ ಏನಾಗುತ್ತಿದೆ ಎಂಬುದರ ವಾಸ್ತವ ಅರಿವು ಇರುತ್ತದೆ. ಮತ್ತು ನ್ಯಾಯಾಲಯದ ಆಡಳಿತ, ನಡಾವಳಿಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಜನರ ಭಾಷೆ ನ್ಯಾಯಾಲಯಗಳಲ್ಲಿ ಬಳಕೆಯಾಗದಿದ್ದರೆ ನ್ಯಾಯಾಲಯಗಳಲ್ಲಿ ಏನಾಗುತ್ತಿದೆ ಎಂಬುದರ ಅರಿವು ಜನರಿಗೆ ಇಲ್ಲದೆ ಈಗಾಗಲೇ ಅನ್ಯಾಯಕ್ಕೆ ಒಳಗಾಗಿರುವ ಜನರಿಗೆ ಮತ್ತೆ ಅನ್ಯಾಯಾಕ್ಕೆ ಒಳಗಾಗುವ ಭಯ ಕಾಡುತ್ತದೆ. ಹೀಗಾಗಿ ಯಾವುದೇ ಒಂದು ಪ್ರದೇಶದ ನ್ಯಾಯಾಲಯಗಳಲ್ಲಿ ಬಳಕೆಯಾಗುವ ಭಾಷೆ ಆ ಪ್ರದೇಶದ ಜನರಿಗೆ ಅರ್ಥವಾಗುವ ಭಾಷೆಯಲ್ಲಿಯೇ ಇರಬೇಕು ಎಂಬುದು ಆಡಳಿತತಜ್ಞರ ಅಭಿಪ್ರಾಯ. ಇದನ್ನು ಸಮರ್ಥವಾಗಿ ಅರ್ಥಮಾಡಿಕೊಂಡಿದ್ದ ಸ್ವಾತಂತ್ರ್ಯಪೂರ್ವದ ಆಡಳಿತಗಾರರು ಸ್ಥಳೀಯ ಭಾಷೆಗಳನ್ನೇ ನ್ಯಾಯಾಲಯಗಳ ಭಾಷೆಯಾಗಿ ಬಳಸಿದ್ದಾರೆ. ಹೀಗಾಗಿ 'ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಕನ್ನಡ ಪ್ರದೇಶದಲ್ಲಿದ್ದ ನ್ಯಾಯಾಲಯಗಳಲ್ಲಿ ಕನ್ನಡವೇ ಬಳಕೆಯಲ್ಲಿತ್ತೆಂದು ಅನೇಕ ದಾಖಲೆಗಳಿಂದ ತಿಳಿದುಬರುತ್ತದೆ. ವಾದಗಳು, ಮನವಿಪತ್ರಗಳು, ಅಮಲ್ದಾರಿ ಅರ್ಜಿಗಳು, ಮೇಲರ್ಜಿಗಳು, ನ್ಯಾಯಾಲಯದ ವಿವಿಧ ಕಾರ್ಯವಾಹಿಗಳು; ಅಂದರೆ

ಸೂಚನಾ ಪತ್ರಗಳು ಹಾಜರಾಗಲು ಆಜ್ಞೆ ಮಾಡುವ ಪತ್ರಗಳು, ಜಫ್ತಿ ಮಾಡಲು ಅಧಿಕಾರ ಕೊಡುವುದು (ಜಫ್ತಿ ಹುಕುಂಗಳು), ನ್ಯಾಯಾಲಯದ ಆದೇಶಗಳು, ತೀರ್ಪುಗಳು, ನ್ಯಾಯನಿರ್ಣಯಗಳು ಇತ್ಯಾದಿ ಸಂಪೂರ್ಣ ಕನ್ನಡದಲ್ಲಿರುವುದು ಕಂಡುಬರುತ್ತದೆ[೪].'

ಇದೇ ತತ್ವನ್ನು ಹಲವು ಇಂಗ್ಲಿಶ್ ಅಧಿಕಾರಿಗಳು ಒಪ್ಪಿಕೊಂಡಿದ್ದರು. ಇದರಲ್ಲಿ 'ಮಾರ್ಕ್‌ಕಬ್ಬನ್ ಮೈಸೂರು ಕಮಿಷನರ್ ಆಗಿದ್ದಾಗ ಹಲವಾರು ಸುಧಾರಣೆಗಳನ್ನು ತಂದಿದ್ದ. ಇದರಲ್ಲಿ ಮುಖ್ಯವಾಗಿ ಕನ್ನಡಬಲ್ಲ ಅಧಿಕಾರಿಗಳನ್ನು ವಿಭಾಗಾಧಿಕಾರಿಗಳನ್ನಾಗಿ ನೇಮಿಸಿರುವುದು, ಪ್ರತಿಯೊಂದು ತಾಲ್ಲೂಕು ಕಛೇರಿಗಳಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಬಳಸಿರುವುದು ಸೇರಿವೆ. ಇವನು ಮತ್ತೂ ಮುಂದುವರೆದು ತಾನು ಹೊರಡಿಸಿದ ಸುತ್ತೋಲೆಯಲ್ಲಿ ಸಂಬಂಧಪಟ್ಟ ಅಧಿಕಾರಿಗಳಿಗೆ ನ್ಯಾಯಾಲಯಗಳಲ್ಲಿ ಕನ್ನಡ ಭಾಷೆ ಕಡ್ಡಾಯ ಎಂದು ಆದೇಶಿಸಿದ್ದಾನೆ. ಹೀಗಾಗಿ 'ಈತನ ಕಾಲದಲ್ಲಿ ನ್ಯಾಯಾಲಯಗಳಲ್ಲಿ ಕಛೇರಿ ವಲಯದಲ್ಲಿ ಕನ್ನಡವೇ ಅಧಿಕೃತ ಭಾಷೆಯಾಗಿತ್ತು'[೬] ಎನ್ನುತ್ತಾರೆ ಪಿ ಮಹಾದೇವಯ್ಯನವರು. ಹಾಗಾದರೆ ಭಾರತದ ನ್ಯಾಯಾಲಯಗಳಲ್ಲಿ, ಸ್ಥಳೀಯ ಭಾಷೆ ಅಥವಾ ಭಾಷೆಗಳ ಬದಲಾಗಿ ಇಂಗ್ಲಿಶ್‌ನ ಬಳಕೆ ಆರಂಭವಾಗಿದ್ದು ಯಾವಾಗ ಎಂಬ ಪ್ರಶ್ನೆ ಉದ್ಭವಿಸುತ್ತವೆ. ಇದಕ್ಕೆ ಸಂಬಂಧಿಸಿದ ಹಾಗೆ ನಾವು ಗಮನಿಸುವುದಾದರೆ "ನ್ಯಾಯಾಲಯಗಳಲ್ಲಿ ಪಾರ್ಸಿ ಭಾಷೆಯ ಉಪಯೋಗವು ೧೮೩೭ ರಿಂದ ನಿಂತು ಹೋಯಿತು. ಭಾರತದಲ್ಲಿಯೇ ದೊಡ್ಡ ಸಂಸ್ಥಾನಗಳಾದ ಬರೋಡ, ಗ್ವಾಲಿಯರ್, ಹೈದರಾಬಾದ್, ಜಮ್ಮು ಮತ್ತು ಕಾಶ್ಮೀರ ಮತ್ತು ಪಾಟಿಯಾಲಾಗಳಲ್ಲಿಯೂ ಹಾಗೂ ಇನ್ನು ಅನೇಕ ಕಡೆಗಳಲ್ಲಿಯೂ ೧೯೫೦ನೇಯ ಇಸವಿಯವರೆಗೂ ಅಂದರೆ, ಭಾರತ ಒಕ್ಕೂಟದಲ್ಲಿ ಈ ರಾಜ್ಯಗಳು ಸೇರುವವರೆಗೂ ಪರಮಾಧಿಕಾರವನ್ನು ಹೊಂದಿದ್ದ ನ್ಯಾಯಾಲಯಗಳು ಸಹಿತವಾಗಿ ಎಲ್ಲಾ ನ್ಯಾಯಾಲಯಗಳು ಪ್ರಾಂತೀಯ ಭಾಷೆಗಳಲ್ಲಿಯೇ ತಮ್ಮ ವ್ಯವಹಾರ ನಡೆಸುತ್ತಿದ್ದುವೇ ಹೊರತು ಇಂಗ್ಲಿಷ್ ಭಾಷೆಯಲ್ಲಲ್ಲ. ನಿಜಸ್ಥಿತಿಯೆಂದರೆ ಆಳರಸರ ಅನೇಕ ಸಂಸ್ಥಾನಗಳು ಮಾಯವಾಗಿ ಸ್ವತಂತ್ರ ಭಾರತದಲ್ಲಿ ವಿಲೀನಗೊಂಡಾಗ ಆ ಸಂಸ್ಥಾನ ಪ್ರದೇಶಗಳನ್ನೊಳಗೊಂಡು ರಚಿತವಾದ ಹೊಸ ರಾಜ್ಯಗಳ ಜನತೆಯು, ಸ್ವಾತಂತ್ರ್ಯಾನಂತರದಲ್ಲಿ ಇಂಗ್ಲೀಷು ಭಾಷೆಯ ಪದಚ್ಯುತಿಯನ್ನು ಹೊಂದುವ ಬದಲು ಸಂವಿಧಾನದ ೩೪೮ನೇ ಅನುಚ್ಛೇದದ ಬಲದಿಂದ ಪ್ರಾಂತೀಯ ಭಾಷೆಗಳೇ ಪದಚ್ಯುತಿಯನ್ನು ಹೊಂದಿ ತಮ್ಮ ಸ್ಥಾನವನ್ನು ಇಂಗ್ಲಿಷ್ ಭಾಷೆಗೆ ಒಪ್ಪಿಸಿ ಕೊಡುವಂತಾಯಿತಲ್ಲ, ಎಂಬ ಒಂದು ದೂರನ್ನು ನಮ್ಮವರೆಗೆ ತಲುಪಿಸಿದ್ದಾರೆ'[೭] ಎನ್ನುತ್ತಾರೆ ರಾಜಭಾಷಾ ಆಯೋಗದವರು.

ಇದುವರೆಗಿನ ಎಲ್ಲಾ ಅಂಶಗಳನ್ನು ಸ್ವಲ್ಪ ಸೂಕ್ಷ್ಮವಾಗಿ ಗಮನಸಿದರೆ ಇಲ್ಲಿ ಕೆಲವು ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಇವುಗಳಲ್ಲಿ ಮುಖ್ಯವಾಗಿ ಸ್ವಾತಂತ್ರ್ಯಪೂರ್ವ ಭಾರತದ ಎಲ್ಲಾ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳೇ ಆಡಳಿತ ಭಾಷೆಯಾಗಿದ್ದವೇ? ಪ್ರಾದೇಶಿಕ ಭಾಷೆಗಳೇ ಆಡಳಿತದ, ನ್ಯಾಯಾಲಯಗಳ ಭಾಷೆಯಾಗಿದ್ದರೆ ೧೯೨೪ರಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿದ್ದ ಗಾಂಧೀಜಿಯವರು "ಪ್ರಾಂತೀಯ ಸರಕಾರಗಳು ನ್ಯಾಯಾಲಯಗಳ ಹಾಗೂ

ಶಾಸನಸಭೆಗಳ ಅಧಿಕೃತ ಭಾಷೆ ಒಂದು ನಿರ್ದಿಷ್ಟ ಅವಧಿಯೊಳಗೆ ಪ್ರಾಂತ್ಯದ ಭಾಷೆಯಾಗಬೇಕು. ಈ ವಿಚಾರಗಳನ್ನು ಸ್ವೀಕರಿಸಬಹುದು ಅಥವಾ ಜಾರಿಗೆ ತರಲು ನಮಗೆ ಅಧಿಕಾರವಿಲ್ಲದಿರಬಹುದು. ಆದರೆ ನಮ್ಮಲ್ಲಿ ಸಂಕಲ್ಪವಿದೆಯೇ? ಆ ಇಚ್ಚೆಯನ್ನಾದರೂ ಬೆಳೆಸಿಕೊಳ್ಳೋಣ ಎಂದು ಕರೆಯಿತ್ತಿದ್ದು ಏಕೆ?"[೭] ಭಾರತ ಸಂವಿಧಾನ ರಚನಾಕಾರರು "ಸಂಸತ್ತಿನವರು ಕಾನೂನಿನ ಮೂಲಕ ಬೇರೆ ರೀತಿ ನಿಯಮವನ್ನೇರ್ಪಡಿಸುವವರೆಗೆ, ಸಂಸತ್ತಿನಲ್ಲೆ ಆಗಲಿ ಅಥವಾ ರಾಜ್ಯಗಳ ವಿಧಾನಮಂಡಲಗಳಲ್ಲಾಗಲಿ ಮಂಡಿಸಲ್ಪಡುವ ಎಲ್ಲಾ ವಿಧೇಯಕಗಳ ಅಥವಾ ಸೂಚಿಸಲ್ಪಡುವ ಎಲ್ಲಾ ತಿದ್ದುಪಾಟುಗಳ ಅಧಿಕೃತ ಗ್ರಂಥಪಾಠಗಳೂ ಮತ್ತು ರಾಷ್ಟ್ರಪತಿಯವರಿಂದಾಗಲಿ ಅಥವಾ ರಾಜ್ಯಪಾಲರಿಂದಾಗಲಿ ಅಥವಾ ರಾಜಪ್ರಮುಖರಿಂದಾಗಲಿ ಉದ್ಘೋಷಿಸಲ್ಪಡುವ ಅಧಿನಿಯಮಗಳು, ಅಧ್ಯಾದೇಶಗಳು, ಮೊದಲಾದವುಗಳ ಗ್ರಂಥಪಾಠಗಳೂ ಸಂವಿಧಾನದ ಮೇರೆಗಿರತಕ್ಕ, ಅಥವಾ ಯಾವುದೇ ಒಂದು ಕಾನೂನಿನ ಮೇರೆಗಿರತಕ್ಕ ಎಲ್ಲಾ ಆಜ್ಞೆಗಳ, ನಿಬಂಧನೆಗಳ, ರೆಗ್ಯುಲೇಷನ್‌ಗಳ ಮತ್ತು ಉಪನಿಬಂಧನೆಗಳ ('ಬೈಲಾಗಳ') ಎಂದರೆ, ಸಂಸತ್ತಿನವರಿಂದ ಅಥವಾ ರಾಜ್ಯದ ವಿಧಾನಮಂಡಲದವರಿಂದ ರಚಿತವಾದ ಎಲ್ಲಾ ಕಾನೂನುಗಳ ಮತ್ತು ಆಡಳಿತ ಸಂಬಂಧವಾದ ಎಲ್ಲಾ ನಿಬಂಧನೆಗಳು, ರೆಗ್ಯೂಲೇಷನ್‌ಗಳು ಮೊದಲಾದವುಗಳ ಗ್ರಂಥಪಾಠಗಳೂ ಇಂಗ್ಲಿಷು ಭಾಷೆಯಲ್ಲಿ ಇರತಕ್ಕುದೆಂಬುದಾಗಿ ಸಂವಿಧಾನದ ೩೪೮(೧) (b) ಅನುಚ್ಛೇದದಲ್ಲಿ ವಿಧಾಯಕ ಮಾಡಿರುವುದು ಏಕೆ?"[೮] ಎಂಬುವು ಸೇರಿವೆ.

ಈ ಎಲ್ಲಾ ಪ್ರಶ್ನೆಗಳನ್ನು ಸ್ವಲ್ಪಸೂಕ್ಷ್ಮವಾಗಿ ಗಮನಿಸಿದಾಗ ಭಾರತದ ಸ್ವಾತಂತ್ರ್ಯಪೂರ್ವದ ಎಲ್ಲಾ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳು ಬಳಕೆಯಲ್ಲಿ ಇರಲಿಲ್ಲ. ಆಡಳಿತ ಭಾಷೆ ಮತ್ತು ಸಮಸ್ಯೆಗಳು ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಕೆಳಹಂತದ ಆಡಳಿತ ಮತ್ತು ಮೇಲ್ದರ್ಜೆಯ ಆಡಳಿತ ಭಾಷೆಯಲ್ಲಿ ವ್ಯತ್ಯಾಸಗಳು ಇದ್ದ ಹಾಗೆ ಕೆಳಹಂತದ ನ್ಯಾಯಾಲಯಗಳು ಉನ್ನತ ಮಟ್ಟದ ನ್ಯಾಯಾಲಯಗಳಲ್ಲಿ ಬಳಕೆಯಾಗುತ್ತಿದ್ದ ಭಾಷೆಗಳಲ್ಲಿ ವ್ಯತ್ಯಾಸವಿದೆ. ಇದಕ್ಕೆ ಕಾರಣಗಳು ಮತ್ತು ಇದರಿಂದ ಉದ್ಭವಿಸಿದ್ದ ಸಮಸ್ಯೆಗಳು ನ್ಯಾಯಾಲಯಗಳಲ್ಲಿ ಬಳಕೆಯಾಗುತ್ತಿದ್ದ ಭಾಷೆಯ ಮೇಲೆ ತನ್ನದೇ ಆದ ಪ್ರಭಾವ ಬೀರಿವೆ. ಏಕೆಂದರೆ ನ್ಯಾಯಾಲಯಗಳಲ್ಲಿ ತೀರ್ಪನ್ನು ನೀಡುವಾಗ ದಾಖಲೆಗಳನ್ನು ಆಧರಿಸುತ್ತವೆ. ದಾಖಲೆಗಳು ಆ ಪ್ರದೇಶದ ಆಡಳಿತ ಭಾಷೆಯಲ್ಲಿ ಇರುತ್ತವೆ. ಆಡಳಿತ ಭಾಷೆ ಆ ಪ್ರದೇಶದ ಶಿಕ್ಷಣದಲ್ಲಿ ಬಳಕೆಯಾಗುವ ಭಾಷೆಯನ್ನು ಆಧರಿಸಿರುತ್ತದೆ. ಹೀಗಾಗಿ ಒಂದು ಪ್ರದೇಶದ ಶಿಕ್ಷಣ, ಆಡಳಿತ ಮತ್ತು ನ್ಯಾಯಾಲಯಗಳಲ್ಲಿ ಬಳಕೆಯಾಗುವ ಭಾಷೆಯ ನಡುವೆ ಸಂಬಂಧ ಇದೆ. ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿರುವ ಹಾಗೆ ಸ್ವಾತಂತ್ರ್ಯಪೂರ್ವದ ಆಡಳಿತ ಮತ್ತು ಶಿಕ್ಷಣದಲ್ಲಿ ಬಳಕೆಯಾಗುತ್ತಿದ್ದ ಭಾಷೆಗಳು ನ್ಯಾಯಾಲಯಗಳ ಮೇಲೂ ಪರಿಣಾಮ ಬೀರಿ ನ್ಯಾಯಾಲಯದ ಭಾಷೆಯನ್ನು ಬದಲಾಯಿಸಿವೆ. ಹೀಗಾಗಿ ಸ್ವಾತಂತ್ರ್ಯಪೂರ್ವದ ಭಾರತದ ನ್ಯಾಯಾಲಯಗಳಲ್ಲಿ ಏಕಭಾಷೆಯು ನ್ಯಾಯಾಲಯದ ಭಾಷೆಯಾಗಿ ಬಳಕೆಯಾಗಿಲ್ಲ. ಆಡಳಿತ, ಶಿಕ್ಷಣದಲ್ಲಿ ಹಲವು ಭಾಷೆಗಳು ಬಳಕೆಯಾದ ಹಾಗೆ ನ್ಯಾಯಾಲಯದಲ್ಲೂ ಹಲವು ಭಾಷೆಗಳು

ಬಳಕೆಯಾಗಿವೆ. ಹೀಗಾಗಿ ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿ ಕನ್ನಡದ ಜೊತೆಗೆ ಇತರ ಭಾಷೆಗಳು ನ್ಯಾಯಾಲಯಗಳ ಭಾಷೆಯಾಗಿ ಬಳಕೆಯಾಗಿವೆ. ಕನ್ನಡ ಮಾತ್ರ ನ್ಯಾಯಾಲಯದ ಭಾಷೆಯಾಗಿ ಬಳಕೆಯಾಗಿಲ್ಲ. ಕನ್ನಡದ ಪರವಾದ ಮೇಲಿನ ಎಲ್ಲಾ ಚಿಂತನೆಗಳು ಏಕೀಕರಣ ನಂತರದ ಕರ್ನಾಟಕದಲ್ಲಿ ಕನ್ನಡವನ್ನು ನ್ಯಾಯಾಲಯದ ಭಾಷೆಯಾಗಿಸುವ ಸಂದರ್ಭದಲ್ಲಿ ಕನ್ನಡವನ್ನು ನ್ಯಾಯಾಲಯದ ಭಾಷೆಯಾಗಿ ಬಳಸಲು ಸಾಧ್ಯವಿಲ್ಲ. ಕನ್ನಡ ನ್ಯಾಯಾಲಯಗಳಲ್ಲಿ ಬಳಸುವಷ್ಟು ಅಭಿವೃದ್ಧಿ ಹೊಂದಿಲ್ಲ ಎಂಬ ಕಾರಣಕ್ಕೆ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಸದೆ ಇಂಗ್ಲಿಶ್ ಮುಂದುವರಿಸುತ್ತಿದ್ದ ನ್ಯಾಯಾಧೀಶರು, ವಕೀಲರು ಮತ್ತು ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸುವ ಇತರ ಸಿಬ್ಬಂದಿಗೆ ಕನ್ನಡಕ್ಕೆ ನ್ಯಾಯಾಲಯದ ಭಾಷೆಯಾಗಿ ಬಳಕೆಯಾಗುವ ಸಾಮರ್ಥ್ಯ ಇದೆ ಎಂದು ಮನವರಿಕೆ ಮಾಡಿಕೊಡುವ ಸಂದರ್ಭದಲ್ಲಿ ಹುಟ್ಟಿರುವ ಚಿಂತನೆಗಳಾಗಿವೆ.

ವಾಸ್ತವವಾಗಿ ಏಕೀಕರಣ ಪೂರ್ವ ಕರ್ನಾಟಕದ ನ್ಯಾಯಾಲಯಗಳಲ್ಲಿ ಬಳಕೆಯಾಗುತ್ತಿದ್ದ ಭಾಷೆ ಮತ್ತು ಏಕೀಕರಣ ನಂತರದ ಕರ್ನಾಟಕದ ನ್ಯಾಯಾಲಯಗಳಲ್ಲಿ ಭಾಷೆಗಳನ್ನು ಬಳಸುತ್ತಿರುವ ಉದ್ದೇಶ, ಸ್ವರೂಪ ಮತ್ತು ಸಮಸ್ಯೆಗಳು ಬೇರೆಬೇರೆಯೇ ಆಗಿವೆ. ಇವೇ ಒಂದು ಸಂಶೋಧನಾ ಪ್ರಬಂಧ ಸಿದ್ಧಗೊಳಿಸುವಷ್ಟು ವಿಸ್ತಾರವಾಗಿವೆ. ಈ ಅಧ್ಯಯನ ಈಗಾಗಲೇ ತುಂಬಾ ವಿಸ್ತಾರವಾಗಿ ಬೆಳೆದಿದ್ದು ಅವೆಲ್ಲವನ್ನು ಇಲ್ಲಿ ಚರ್ಚಿಸುವುದರಿಂದ ಅಧ್ಯಯನಕ್ಕೆ ಒಂದು ಚೌಕಟ್ಟು ಒದಗಿಸಿಕೊಳ್ಳಲು ಕಷ್ಟವಾಗುತ್ತದೆ. ಈ ಕಾರಣಕ್ಕೆ ಈ ಅಧ್ಯಯನವನ್ನು ಏಕೀಕರಣ ನಂತರದ ಕರ್ನಾಟಕಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ. ಮತ್ತು ಈ ರೀತಿ ಏಕೀಕರಣ ನಂತರದ ಕರ್ನಾಟಕಕ್ಕೆ ಸೀಮಿತಗೊಳಿಸಿ ಕೊಳ್ಳುವುದರ ಹಿಂದೆ ಇನ್ನೊಂದು ಉದ್ದೇಶವೂ ಇದೆ. ಅದೇನೆಂದರೆ ಏಕೀಕರಣ ಪೂರ್ವ ಕರ್ನಾಟಕದ ನ್ಯಾಯಾಲಯಗಳಲ್ಲಿ ಬಳಕೆಯಾಗಿರುವ ಭಾಷೆ ಅಥವಾ ಭಾಷೆಗಳು ಸಾಮಾನ್ಯ ಜನರ ಬದುಕು, ಭಾಷೆ, ಸಾಹಿತ್ಯ, ಸಂಸ್ಕೃತಿ, ಜೀವನಕ್ರಮಗಳಲ್ಲಿ ತೀವ್ರಸ್ವರೂಪದ ಬಿಕ್ಕಟ್ಟುಗಳನ್ನು ಸೃಷ್ಟಿಸಿಲ್ಲ. ಏಕೆಂದರೆ ರಾಜರುಗಳ ಕಾಲದಲ್ಲಿ ಒಂದು ಹಂತದವರಗೆ ನ್ಯಾಯಾಲಯಗಳೇ ಇರಲಿಲ್ಲ. ಎಲ್ಲವು ಗ್ರಾಮಗಳ ಮಟ್ಟದಲ್ಲೇ ಊರುಗಳ ಗೌಡ, ಪಟೇಲ, ಶಾನುಭೋಗರ ಹಂತದಲ್ಲಿ ಅನಧಿಕೃತವಾಗಿ ಇತ್ಯರ್ಥಗೊಳ್ಳುತ್ತಿದ್ದವು. ಇದರಿಂದ ಬ್ರಿಟೀಷ್ ಆಡಳಿತಶಾಹಿ ಆರಂಭಗೊಳ್ಳುವವರೆಗೂ ವಿವಾದಗಳು ನ್ಯಾಯಾಲಯಗಳ ಹಂತ ತಲುಪಿರುವುದು ವಿರಳವಾಗಿದೆ. ಹೀಗಾಗಿ ಏಕೀಕರಣ ಪೂರ್ವ ಕರ್ನಾಟಕದ ನ್ಯಾಯಾಲಯಗಳಲ್ಲಿ ಬಳಕೆಯಾಗಿದ್ದ ಭಾಷೆ ಅಥವಾ ಭಾಷೆಗಳು ಕರ್ನಾಟಕದ ಜನಸಮುದಾಯಗಳಿಗೆ ಬಹುದೊಡ್ಡ ಸಮಸ್ಯೆಯಾಗಿ ಪರಿಣಮಿಸಿರಲಿಲ್ಲ.

### ೬.೨ ಸ್ವತಂತ್ರ ಭಾರತ: ನ್ಯಾಯಾಲಯಗಳಲ್ಲಿ ಭಾಷಾಬಳಕೆ ಮತ್ತು ಸಮಸ್ಯೆಗಳು

ಸ್ವತಂತ್ರ ಭಾರತದಲ್ಲಿ ಬಳಸಬೇಕಾದ ಭಾಷೆಯ ಸಂಬಂಧವಾಗಿ ನಡೆದಿರುವ ಚರ್ಚೆ ಮತ್ತು ತೆಗೆದುಕೊಂಡಿರುವ ನಿರ್ಧಾರಗಳನ್ನು ಗಮನಿಸಿದಾಗ ಪ್ರಧಾನವಾಗಿ ಕಾಣಿಸುವುದು ಮೂರು ಕ್ಷೇತ್ರಗಳು– ೧.ಆಡಳಿತ, ೨.ಶಿಕ್ಷಣ ಮತ್ತು ೩.ನ್ಯಾಯಾಲಯಗಳು. ಹೀಗಾಗಿ ಪ್ರಸ್ತುತ ಅಧ್ಯಯವನ್ನು ಈ ಮೂರು ಕ್ಷೇತ್ರಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಇದುವರೆಗೆ ಚರ್ಚಿಸಿದ ಹಾಗೆ ಸ್ವತಂತ್ರಪೂರ್ವ

ಭಾರತದಲ್ಲಿ ಇಡೀ ದೇಶಕ್ಕೆ ಅನ್ವಯವಾಗುವ ಹಾಗೆ ಒಂದು ಭಾಷೆಯನ್ನು ಕಲಿತು, ಬಳಸಬೇಕಾದ ಅನಿವಾರ್ಯತೆ ಇರಲಿಲ್ಲ. ಆಯಾ ಪ್ರದೇಶಗಳ ಆಡಳಿತ, ಶಿಕ್ಷಣದಲ್ಲಿ ಬಳಕೆಯಾಗುತ್ತಿದ್ದ ಭಾಷೆ ಅಥವಾ ಭಾಷೆಗಳನ್ನು ಜನ ಕಲಿತು, ಬಳಸುತ್ತಿದ್ದದರು. ಯಾವುದೇ ಭಾಷೆಯನ್ನು ಜನರು ಕಡ್ಡಾಯವಾಗಿ ಕಲಿತು, ಬಳಸಬೇಕಾದ ಅನಿವಾರ್ಯತೆ ಇರಲಿಲ್ಲ. ಏಕೆಂದರೆ ಆಗ ಆಡಳಿತ ನಡೆಯುತ್ತಿದ್ದುದು ರಾಜತ್ವದಿಂದಾಗಿ, ರಾಜರು ಎಲ್ಲಾ ಪ್ರಕರಣಗಳನ್ನು ಅರಮನೆಗಳಲ್ಲಿ ಇತ್ಯರ್ಥ ಮಾಡುತ್ತಿರಲಿಲ್ಲ. ಎಲ್ಲ ಪ್ರಕರಣಗಳು ಗ್ರಾಮ, ಹೋಬಳಿಗಳ ಹಂತದಲ್ಲಿಯೇ ಸ್ಥಳೀಯ ಗ್ರಾಮಗಳ ಹಿರಿಯರು ಮತ್ತು ಮುಖಂಡರ ನೇತೃತ್ವದಲ್ಲಿ ಪಂಚಾಯ್ತಿ ಕಟ್ಟೆಗಳು ಏರ್ಪಟ್ಟು ಸಂಬಂಧಪಟ್ಟ ವ್ಯಕ್ತಿಗಳನ್ನು ಪಂಚಾಯ್ತಿ ಕಟ್ಟೆಗೆ ಕರೆಸಿ ಸ್ಥಳೀಯ ಭಾಷೆಯಲ್ಲಿ ಬಗೆಹರಿಸಿದ್ದಾರೆ. ತುಂಬಾ ಗಂಭೀರ ಪ್ರಕರಣಗಳು ಮಾತ್ರ ಅರಮನೆಗಳ ಹಂತ ತಲುಪಿವೆ.

ಹೀಗಾಗಿ ಅಂದು ಜನರು ಪೋಲೀಸ್ ಸ್ಟೇಷನ್, ಕೋರ್ಟ್‌ಗೆ ಅಲೆಯುವ ಪರಿಸ್ಥಿತಿ ನಿರ್ಮಾಣವಾಗಿಲ್ಲ. ಇವು ಅಂದು ಅಷ್ಟು ಪ್ರಮುಖವಾಗಿಯೂ ಇಲ್ಲ. ನ್ಯಾಯಾಲಯಗಳು ದೇಶದಲ್ಲಿ ಪ್ರಮುಖ ಸ್ಥಾನ ಪಡೆದಿರುವುದು ಮತ್ತು ಸಮಸ್ಯೆಗಳನ್ನು ಹುಟ್ಟುಹಾಕಿರುವುದು ಬ್ರಿಟೀಷರು ಭಾರತದಲ್ಲಿ ಪೋಲೀಸ್ ಸ್ಟೇಷನ್, ಕೋರ್ಟ್‌ಗಳನ್ನು ಸ್ಥಾಪಿಸಿದ ನಂತರದಲ್ಲಿ. ಇಲ್ಲಿ ಸ್ಥಳೀಯ ಭಾಷೆಗಳನ್ನು ಬಳಸಿದ್ದರೆ ಭಾಷಾಸಮಸ್ಯೆ ತೀವ್ರವಾಗುತ್ತಿರಲಿಲ್ಲ. ಅಧಿಕೃತವಾಗಿ ನ್ಯಾಯಾಲಯಗಳು ಆರಂಭವಾದಾಗ ದೇಶದ ಆಡಳಿತ, ಶಿಕ್ಷಣದಲ್ಲಿ ಇಂಗ್ಲಿಶ್ ಬಳಕೆಯಾಗುತ್ತಿದ್ದುದರಿಂದ ನ್ಯಾಯಾಲಯಗಳಲ್ಲೂ ಇಂಗ್ಲಿಶ್ ಬಳಕೆಯನ್ನು ಮುಂದುವರಿಸಲಾಗಿದೆ. ಇದರಿಂದ ಉದ್ಭವವಾಗಿರುವ ಸಮಸ್ಯೆ ಆರಂಭದಲ್ಲಿ ಅಷ್ಟು ತೀವ್ರವಾಗಿಲ್ಲ. ಇದು ತೀವ್ರ ಸ್ವರೂಪ ಪಡೆದುಕೊಂಡಿರುವುದು ಭಾರತ ಸ್ವತಂತ್ರಗೊಂಡು ಸಂವಿಧಾನವನ್ನು ಒಪ್ಪಿಕೊಂಡ ನಂತರದಲ್ಲಿ. ಅಂದರೆ ಇಡೀ ದೇಶಕ್ಕೆ ಅನ್ವಯವಾಗುವ ಹಾಗೆ ಒಂದು ಸರ್ಕಾರ (ಕೇಂದ್ರಸರ್ಕಾರ) ಒಂದು ನ್ಯಾಯಾಲಯ (ಸುಪ್ರೀಂಕೋರ್ಟ್) ಸ್ಥಾಪನೆಯಾದ ನಂತರದಲ್ಲಿ. ಏಕೆಂದರೆ ದೇಶದ ಎಲ್ಲಾ ಭಾಷೆಗಳನ್ನು ಕೇಂದ್ರಸರ್ಕಾರ ಮತ್ತು ನ್ಯಾಯಾಲಯದಲ್ಲಿ ಬಳಸಬೇಕೆಂದರೆ ಇಲ್ಲಿ ಕೆಲಸ ಮಾಡುವ ಅಧಿಕಾರಿಗಳು ಮತ್ತು ನೌಕರರಿಗೆ ದೇಶದಲ್ಲಿರುವ ಎಲ್ಲಾ ಭಾಷೆಗಳನ್ನು ಕಲಿಸಬೇಕು. ಇದು ಸಾಧ್ಯವಾಗುವ ಕೆಲಸವಲ್ಲ ಎಂಬ ಕಾರಣಕ್ಕಾಗಿ ಸಂವಿಧಾನ ರಚನಾಕಾರರು ಸಂವಿಧಾನವ ೩೪೮ನೇ ಅನುಚ್ಛೇದದಲ್ಲಿ ದೇಶದ ಸರ್ವೋಚ್ಚ ಮತ್ತು ನ್ಯಾಯಾಲಯಗಳಲ್ಲಿ ಬಳಸಬೇಕಾದ ಭಾಷೆಗೆ ಸಂಬಂಧಿಸಿದಂತೆ ಕೆಲವು ನಿಯಮಗಳನ್ನು ಅಳವಡಿಸಿದ್ದಾರೆ. ಇವುಗಳಲ್ಲಿ ಮುಖ್ಯವಾಗಿ–

ಎ) ಸರ್ವೋಚ್ಚ ನ್ಯಾಯಾಲಯದಲ್ಲಿ ಮತ್ತು ಪ್ರತಿಯೊಂದು ಉಚ್ಚ ನ್ಯಾಯಾಲಯದಲ್ಲಿ ನಡೆಯತಕ್ಕ ಎಲ್ಲ ವ್ಯವಹರಣೆಗಳೂ;

ಬಿ) ೧) ಸಂಸತ್ತಿನ ಯಾವುದಾದರೊಂದು ಸದನದಲ್ಲಿ ಅಥವಾ ಒಂದು ರಾಜ್ಯದ ವಿಧಾನಮಂಡಲದ ಸದನದಲ್ಲಿ ಅಥವಾ ಅದರ ಯಾವುದಾದರೊಂದು ಸದನದಲ್ಲಿ ಮಂಡಿಸಬೇಕಾದ ಎಲ್ಲಾ ವಿಧೇಯಕಗಳ ಅಥವಾ ಅವುಗಳಿಗೆ ಸೂಚಿತವಾಗಬೇಕಾದ ತಿದ್ದುಪಡಿಗಳು;

೨) ಸಂಸತ್ತಿನಿಂದ ಅಥವಾ ಒಂದು ರಾಜ್ಯದ ವಿಧಾನ ಮಂಡಲದಿಂದ ಅನುಮೋದಿತವಾದ ಎಲ್ಲ ಅಧಿನಿಯಮಗಳ ಮತ್ತು ರಾಷ್ಟ್ರಪತಿಯಿಂದ ಅಥವಾ ಒಂದು ರಾಜ್ಯದ ರಾಜ್ಯಪಾಲರಿಂದ ಘೋಷಿತವಾದ ಎಲ್ಲ ಆಜ್ಞಾದೇಶಗಳು; ಮತ್ತು

೩) ಸಂವಿಧಾನದ ಮೇರೆಗೆ ಅಥವಾ ಸಂಸತ್ತಿನಿಂದ ಅಥವಾ ಒಂದು ರಾಜ್ಯದ ವಿಧಾನಮಂಡಲದಿಂದ ರಚಿತವಾದ ಯಾವುದಾದರೂ ಕಾನೂನು ಮೇರೆಗೆ ಸಾದರಪಡಿಸಲಾದ ಎಲ್ಲ ಆದೇಶಗಳ, ನಿಯಮಗಳ ಮತ್ತು ಉಪಬಂಧಗಳು ಇಂಗ್ಲಿಷ್ ಭಾಷೆಯಲ್ಲಿರತಕ್ಕದ್ದು" ಎಂಬುವು ಸೇರಿವೆ.

ಇದಕ್ಕೆ ಪೂರಕವೆಂಬಂತೆ ಭಾರತದ ಭಾಷಾಸಮಸ್ಯೆಯ ಪರಿಹಾರಕ್ಕಾಗಿ ನೇಮಕವಾದ ೧೯೫೬ರ ರಾಜಭಾಷಾ ಆಯೋಗವು ತನ್ನ ವರದಿಯಲ್ಲಿ ನಮ್ಮ ದೇಶದಲ್ಲಿ ಸುಸಂಘಟಿತವಾದ ನ್ಯಾಯಾಂಗ ವ್ಯವಸ್ಥೆ ಇದೆ. ಈ ನ್ಯಾಯಾಂಗ ವ್ಯವಸ್ಥೆಯಲ್ಲಿ ಭಾರತದ ಉಚ್ಚತಮ ನ್ಯಾಯಾಲಯವು (ಸುಪ್ರೀಂಕೋರ್ಟ್) ದೇಶದ ಇತರ ಎಲ್ಲಾ ನ್ಯಾಯಾಲಯಗಳಿಗೂ ಮೇಲ್ಪಟ್ಟ ನ್ಯಾಯಸ್ಥಾನವಾಗಿದೆ. ಇತರ ಕೋರ್ಟುಗಳ ತೀರ್ಪುಗಳ ಮೇಲೆ ಈ ಸುಪ್ರೀಂಕೋರ್ಟಿನಲ್ಲಿ ಮೇಲರ್ಜಿಯನ್ನು ಹೂಡಲು ಅವಕಾಶವುಂಟು. ನ್ಯಾಯವ್ಯವಹಾರಗಳಲ್ಲಿ ವಿಶೇಷವಾದ ಅಂತಿಮ ಪರಿಹಾರಗಳನ್ನು "ಸುಪ್ರೀಂಕೋರ್ಟಿ"ನಿಂದ ಪಡೆಯುವುದಕ್ಕೆ ಬೇಕಾದ ವ್ಯವಸ್ಥೆಯಿದೆ. ಈ ಉಚ್ಚತಮ ನ್ಯಾಯಾಲಯವು ನಿರ್ದಿಷ್ಟವಾದ ಒಂದೇ ಭಾಷೆಯಲ್ಲಿ ವ್ಯವಹರಿಸಿದರೆ ಮಾತ್ರವೇ ಸುಸಂಘಟಿತವಾದ ಸಂಸ್ಥೆಯಾಗಿ ಕೆಲಸ ಮಾಡುವುದು ಸಾಧ್ಯವೆಂಬುದು ಸ್ವತಸ್ಸಿದ್ಧ. ಏಕೆಂದರೆ ದೇಶದಲ್ಲಿ ಪ್ರಚಲಿತವಾಗಿರುವ ಎಲ್ಲಾ ಪ್ರಾದೇಶಿಕ ಭಾಷೆಗಳೂ "ಸುಪ್ರೀಂಕೋರ್ಟಿ"ನ ನ್ಯಾಯಾಧಿಪತಿಗಳಿಗೆ ತಿಳಿದಿರಬೇಕೆಂದು ನಿಯಮವನ್ನೇರ್ಪಡಿಸುವುದಂತೂ ಸಾಧ್ಯವೇ ಇಲ್ಲ. ನ್ಯಾಯಾಲಯಗಳು ಶಾಸನಗಳ ಅಧಿಕೃತ ಪಾಠಗಳ ಆಧಾರದ ಮೇಲೆ ಮಾತ್ರ ತೀರ್ಪುಗಳನ್ನು ಕೊಡಬಹುದು. ಒಂದು ಕಾನೂನಿಗೆ ಭಾಷಾಂತರದ ಆಧಾರದ ಮೇಲೆ ನ್ಯಾಯಾಲಯದವರು ಅರ್ಥವಿವರಣೆ ಮಾಡಬೇಕೆಂದು ಸೂಚಿಸುವುದು ಯುಕ್ತವಲ್ಲ[೧೦]" ಎನ್ನುತ್ತಾರೆ.

ಆದರೆ ಸುಪ್ರೀಂಕೋರ್ಟ್‌ನ ನ್ಯಾಯಾಧೀಶರಿಗೆ ಪ್ರಾದೇಶಿಕ ಭಾಷೆಗಳನ್ನು ಕಲಿಯುವಂತೆ ನಿಯಮವನ್ನೇರ್ಪಡಿಸಲು ಸಾಧ್ಯವೇ ಇಲ್ಲ ಎಂಬ ಕಾರಣಕ್ಕಾಗಿ ದೇಶದ ಎಲ್ಲರು ಇಂಗ್ಲಿಶ್‌ನಲ್ಲಿ ದಾವೆಗಳನ್ನು ಸಿದ್ಧಪಡಿಸುವ, ದಾಖಲೆಗಳನ್ನು ಒದಗಿಸುವ, ವಾದಗಳನ್ನು ಮಂಡಿಸುವ, ವಕೀಲರು, ನ್ಯಾಯಾಧೀಶರನ್ನು ಸಿದ್ಧಗೊಳಿಸುವ ಅನಿವಾರ್ಯ ಪರಿಸ್ಥಿತಿ ನಿರ್ಮಾಣ ಮಾಡುವುದು, ಇಂಗ್ಲಿಶ್‌ನಲ್ಲಿ ತೀರ್ಪು ನೀಡುವುದು ಸರಿಯಾದ ಕ್ರಮವೇ ಎಂದು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ದೇಶದ ಸರ್ವೋಚ್ಚ ನ್ಯಾಯಾಲಯವೊಂದರಲ್ಲಿ ನ್ಯಾಯಾಧೀಶರಾಗಿ ಕೆಲಸ ಮಾಡುವವರಿಗೆ ಪ್ರಾದೇಶಿಕ ಭಾಷೆಗಳನ್ನು ಕಲಿತು ಬಳಸುವಂತೆ ನಿಯಮಗಳನ್ನು ಏರ್ಪಡಿಸಲು ಸಾಧ್ಯವಿಲ್ಲ ಎಂಬ ಕಾರಣಕ್ಕಾಗಿ ಇಡೀ ದೇಶದ ಎಲ್ಲಾ ರಾಜ್ಯಗಳ ಭಾಷಿಕರು ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಬಳಸಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಇದು ಕೇವಲ ನ್ಯಾಯಾಲಯಗಳಲ್ಲಿ ಕೆಲಸ ಮಾಡುವವರಿಗೆ ಅಥವಾ ನ್ಯಾಯಾಲಯಗಳಿಗೆ ಪ್ರವೇಶಿಸುವವರಿಗೆ ಮಾತ್ರ ಸಮಸ್ಯೆಯಲ್ಲ. ಇದು ದೇಶದ ಶಿಕ್ಷಣ, ಆಡಳಿತಗಳ

ಮೇಲೂ ತನ್ನದೇ ಆದ ವ್ಯತಿರಿಕ್ತ ಪರಿಣಾಮ ಬೀರಿದೆ. ಪ್ರಾದೇಶಿಕವಾಗಿ ಅದನ್ನು ಬಳಸುವಂತೆ ದಾಖಲೆಗಳನ್ನು ಸಿದ್ಧಗೊಳಿಸುವಂತೆ ಹೇಳುವುದು ಯುಕ್ತವೇ? ಎನ್ನುವುದನ್ನು ಪರಿಶೀಲನೆಗೆ ಒಳಪಡಿಸಬೇಕಾದ ಅಗತ್ಯ ಇದೆ. ಏಕೆಂದರೆ ಸುಪ್ರೀಂಕೋರ್ಟ್‌ನ ನ್ಯಾಯಾಧೀಶರಿಗೆ ಪ್ರಾದೇಶಿಕ ಭಾಷೆಗಳನ್ನು ಕಲಿಯುವಂತೆ ನಿಮಯವನ್ನೇರ್ಪಡಿಸಲು ಸಾಧ್ಯವಿಲ್ಲವೆಂದು ಇಂಗ್ಲಿಶ್‌ನ್ನು ಮುಂದುವರಿಸುತ್ತಿರುವುದರಿಂದ ಇಡೀ ದೇಶದ ಶಿಕ್ಷಣ, ಆಡಳಿತ, ಉದ್ಯೋಗ, ಜನಜೀವನದಲ್ಲಿ ಇಂಗ್ಲಿಶ್ ಬಳಕೆಯಾಗಲು ಕಾರಣವಾಗಿದೆ. ಇದು ಇಂಗ್ಲಿಶ್ ಭಾಷಾಬಳಕೆಯ ಸಾಮರ್ಥ್ಯವಿಲ್ಲದ ಜನ ಭಾಷಿಕವಾಗಿ ತೊಂದರೆಗೆ ಒಳಗಾಗಿದ್ದಾರೆ.

ಹೀಗಾಗಿ "ಇಂಗ್ಲಿಶ್ ಭಾಷೆಯು ಭಾರತ ಸರ್ಕಾರಿ ವ್ಯವಹಾರಗಳಲ್ಲಿ ಕಳೆದ ೨೫೦ ವರ್ಷಗಳಿಂದಲೂ ಬಳಕೆಯಾಗುತ್ತಿದ್ದು ರಾಷ್ಟ್ರದ ಏಕತೆಯನ್ನು ರಕ್ಷಿಸುವಲ್ಲಿ ಹಾಗೂ ಆಡಳಿತ ಹಾಗೂ ನ್ಯಾಯಾಂಗ ಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸುವಲ್ಲಿ ಅತೀ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಇಂಗ್ಲಿಷ್ ಭಾಷೆಯು ನಮ್ಮ ದೇಶದ ನ್ಯಾಯಾಲಯಗಳ ಭಾಷೆಯಾಯಿತು ನಿಜ. ಆದರೆ ಇಂಗ್ಲಿಷ್ ಬಲ್ಲವರು ಮಾತ್ರವೇ ಇದನ್ನು ಅರ್ಥಮಾಡಿಕೊಳ್ಳಬಹುದಿತ್ತು ಅಷ್ಟೇ. ಭಾರತೀಯರ ಒಟ್ಟು ಸಂಖ್ಯೆಯಲ್ಲಿ ಇಂಗ್ಲಿಷ್ ತಿಳಿದ ಅಕ್ಷರಸ್ಥರ ಸಂಖ್ಯೆಯು ಶೇಕಡ ೧೦ಕ್ಕಿಂತಲೂ ಹೆಚ್ಚಿಲ್ಲ. ಅಂದಮೇಲೆ, ದೇಶದ ಕಾನೂನುಗಳನ್ನು ಬಹುಸಂಖ್ಯಾತರು ಅರ್ಥಮಾಡಿಕೊಳ್ಳಲು ಆಗಲಿಲ್ಲ. ಇಂಗ್ಲಿಷ್ ಭಾಷೆಯನ್ನೇ ಅವಲಂಬಿಸಬೇಕಾಗಿದ್ದುದರಿಂದ ಇಂಗ್ಲಿಷ್‌ಬಾರದ ಜನರಿಗೆ ಸಿವಿಲ್ ಅನ್ಯಾಯಗಳನ್ನೇ ಪರಿಹರಿಸಿಕೊಳ್ಳಲಾಗಲಿ ಮತ್ತು ಅಪರಾಧಿಗಳನ್ನು ಶಿಕ್ಷಿಸುವ ವಿಚಾರದಲ್ಲಿ ನ್ಯಾಯಾಲಯಗಳಲ್ಲಿ ಏನು ನಡೆಯುತ್ತಿದೆಯೆಂಬುದು ತಿಳಿಯುತ್ತಿರಲಿಲ್ಲ. ಸ್ವಾತಂತ್ರ್ಯ ಬಂದ ತರುವಾಯ ದೇಶದ ಕಾನೂನುಗಳ ಭಾಷೆಯಾಗಿ ಮತ್ತು ನ್ಯಾಯಾಡಳಿತ ಭಾಷೆಯಾಗಿ ಪ್ರಾದೇಶಿಕ ಭಾಷೆಗಳಿಗೆ ಮನ್ನಣೆ ನೀಡಬೇಕೆಂಬ ಅಭಿಪ್ರಾಯಕ್ಕೆ ಬೆಂಬಲ ದೊರೆಯಿತು. ನ್ಯಾಯಾಲಯಗಳ ಶ್ರೇಣಿಯಲ್ಲಿ ಜಿಲ್ಲಾ ನ್ಯಾಯಾಲಯದ ಹಂತದವರೆಗೂ ಪ್ರಾದೇಶಿಕ ಭಾಷೆಗಳೇ ನ್ಯಾಯಾಡಳಿತ ಭಾಷೆಯಾಗಿರಬೇಕೆಂಬ ತತ್ವವನ್ನು ಕೇಂದ್ರ ಹಾಗೂ ರಾಜ್ಯಸರ್ಕಾರಗಳೆರಡೂ ಒಪ್ಪಿಕೊಂಡಿವೆ"[೧೧] ಎನ್ನುತ್ತಾರೆ ನ್ಯಾಯಾಧೀಶರಾದ ಎ.ಚಿದಂಬರಂರವರು.

ದೇಶದ ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಬಳಕೆಯಾಗುತ್ತಿರುವ ಸಂದರ್ಭದಲ್ಲಿಯೇ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾದ ನಂತರ ರಾಜ್ಯದ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳನ್ನು ಬಳಕೆಗೆ ತಂದುಕೊಳ್ಳಲು "ಸಂವಿಧಾನದ ೩೪೩ ಸಿ (೨) ಅನುಚ್ಛೇದದ ಪ್ರಕಾರ ಸರ್ಕಾರಿ ಉದ್ದೇಶಗಳಿಗಾಗಿ ಆಡಳಿತ ಇಲಾಖೆಗಳು ಮತ್ತು ನ್ಯಾಯಾಲಯಗಳಲ್ಲಿ ಇಂಗ್ಲಿಷಿನ ಬದಲಾಗಿ ಪ್ರಾದೇಶಿಕ ಭಾಷೆಗಳನ್ನು ಬಳಸಲು ಕ್ರಮಕೈಗೊಳ್ಳಲಾಗಿದೆ. ಸಿವಿಲ್ ಪ್ರಕ್ರಿಯಾ ಸಂಹಿತೆಯ ೧೩೭ನೇ ಪ್ರಕಾರ ಮತ್ತು ದಂಡ ಪ್ರಕ್ರಿಯಾ ಸಂಹಿತೆಯ ಸದ್ಯದ ೨೭೨ನೇ ಪ್ರಕಾರಣವೂ ರಾಜ್ಯ ಸರ್ಕಾರವು ನ್ಯಾಯಾಲಯ ವ್ಯವಹಾರಗಳನ್ನು ಪ್ರಾದೇಶಿಕ ಭಾಷೆಯಲ್ಲಿಯೇ ನಡೆಸಲು ಉಪಬಂಧಿಸುತ್ತದೆ.[೧೨]" ಈ ಅಧಿಕಾರವನ್ನು ಬಳಸಿಕೊಂಡು ರಾಜ್ಯಗಳ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳನ್ನು ಬಳಸಬೇಕು

ಎಂದು ಆಯಾ ರಾಜ್ಯಸರ್ಕಾರಗಳು ನಿಯಮಗಳನ್ನು ಮಾಡಿವೆ. ಈ ಪ್ರಕಾರ ಕರ್ನಾಟಕ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಕೆಗೆ ತರುವ ಉದ್ದೇಶದಿಂದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಹಲವು ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಇವುಗಳಲ್ಲಿ ೧೯೭೪ರಲ್ಲಿ ತಾಲ್ಲೂಕು ಮಟ್ಟದ ಕ್ರಿಮಿನಲ್ ಕೋರ್ಟ್‌ಗಳಲ್ಲಿ, ೧೯೭೮ರಲ್ಲಿ ತಾಲ್ಲೂಕು ಮಟ್ಟದ ಸಿವಿಲ್ ನ್ಯಾಯಾಲಯಗಳಲ್ಲಿ, ೧೯೭೯ರಲ್ಲಿ ಸೆಷನ್ಸ್ ಕೋರ್ಟ್‌ಗಳಲ್ಲಿ ಮತ್ತು ೧೯೮೦ರಲ್ಲಿ ಉಚ್ಚನ್ಯಾಯಾಲಯದ ಪರಿಧಿಯಲ್ಲಿ ಬರುವ ಎಲ್ಲಾ ಸಿವಿಲ್ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಸುವುದಕ್ಕೆ ಸಂಬಂಧಿಸಿದ ಹಾಗೆ ಜಾರಿಗೆ ತಂದಿರುವ ಭಾಷಾನೀತಿಗಳು ಸೇರಿವೆ. ಹೀಗೆ ರಾಜ್ಯಗಳಲ್ಲಿ ಒಂದು ಕಡೆ ಪ್ರಾದೇಶಿಕ ಭಾಷೆಗಳ ಬಳಕೆ, ಅವುಗಳಿಗೆ ಪೂರಕವಾದ ಸಿದ್ಧತೆಗಳ ಕೊರತೆ, ಮತ್ತೊಂದು ಕಡೆ ದೇಶದ ನ್ಯಾಯಾಲಯಗಲ್ಲಿ ಇಂಗ್ಲಿಶ್ ಬಳಕೆಗೆ ಪೂರಕವಾದ ಭಾಷಾಯೋಜನೆಗಳು ಮತ್ತು ನೀತಿಗಳು ಒಟ್ಟುಗೂಡಿ ನ್ಯಾಯಾಲಯಗಳ ಭಾಷಾಸಮಸ್ಯೆಗಳನ್ನು ತೀವ್ರಗೊಳಿಸಿವೆ. ಆ ಎಲ್ಲವುಗಳು ಈಗಾಗಲೇ ಹೇಳಿರುವ ಹಾಗೆ ವಿಸ್ತಾರವಾದ ವ್ಯಾಪ್ತಿಯನ್ನು ಒಳಗೊಂಡಿದ್ದು ಪ್ರತ್ಯೇಕ ಸಂಶೋಧನಾ ಪ್ರಬಂಧಕ್ಕೆ ವಿಷಯವಾಗುವಷ್ಟು ಇವೆ. ಹೀಗಾಗಿ ಇಲ್ಲಿ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸದೆ ಕರ್ನಾಟಕದ ಭಾಷಾಪರಿಸರ, ನ್ಯಾಯಾಲಯಗಳಲ್ಲಿ ಭಾಷಾಬಳಕೆ ಮತ್ತು ಸಮಸ್ಯೆಗಳನ್ನು ಕುರಿತು ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಚರ್ಚಿಸುವ ಪ್ರಯತ್ನವನ್ನಷ್ಟೇ ಮಾಡಲಾಗುತ್ತಿದೆ.

**೬.೩ ಏಕೀಕರಣ ನಂತರದ ಕರ್ನಾಟಕ: ನ್ಯಾಯಾಲಯಗಳಲ್ಲಿ ಭಾಷಾಬಳಕೆ ಮತ್ತು ಸಮಸ್ಯೆಗಳು**

ಹಿಂದಿನ ಅಧ್ಯಾಯಗಳಲ್ಲಿ ಈಗಾಗಲೇ ಸ್ಪಷ್ಟವಾಗಿರುವಾಗ ಹಾಗೆ ಕರ್ನಾಟಕ ಏಕೀಕರಣದ ಉದ್ದೇಶವೇ ಕರ್ನಾಟಕದ ಎಲ್ಲ ಕ್ಷೇತ್ರಗಳಲ್ಲಿ ಕನ್ನಡವನ್ನು ಬಳಕೆಗೆ ತರುವುದಾಗಿದೆ. ಜೊತೆಗೆ ಈ ಅಧ್ಯಾಯದ ಪ್ರಾರಂಭದಲ್ಲಿ ಚರ್ಚಿಸಿರುವ ಹಾಗೆ ಸ್ಥಳೀಯ ಭಾಷೆ ಅಥವಾ ಭಾಷೆಗಳು ನ್ಯಾಯಾಲಯಗಳಲ್ಲಿ ಬಳಕೆಯಾಗುವುದರಿಂದ ಜನಸಮುದಾಯಗಳು ಸಮಸ್ಯೆಗಳಿಗೆ ಒಳಗಾಗುವುದಿಲ್ಲ. ಈ ಕಾರಣಕ್ಕಾಗಿ ಕರ್ನಾಟಕ ಏಕೀಕರಣವಾದ ನಂತರ ಕನ್ನಡವನ್ನು ಕರ್ನಾಟಕದ ನ್ಯಾಯಾಲಯಗಳ ಭಾಷೆಯನ್ನಾಗಿಸುವ ಪ್ರಯತ್ನಗಳು ನಡೆದಿವೆ. ಇದಕ್ಕೆ ಸಂಬಂಧಿಸಿದ ಹಾಗೆ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಹೊರಡಿಸಿರುವ ಭಾಷಾನೀತಿಗಳಲ್ಲಿ ಪ್ರಮುಖವಾದವುಗಳನ್ನು ಈಗಾಗಲೇ ಮೇಲ್ಭಾಗದಲ್ಲಿ ಉಲ್ಲೇಖಿಸಲಾಗಿದೆ. ಆದರೂ ಕರ್ನಾಟಕದ ನ್ಯಾಯಾಲಯಗಳಲ್ಲಿ ಕನ್ನಡ ಜನರ ಬೇಡಿಕೆಗೆ ಅನುಗುಣವಾಗಿ ಬಳಕೆಯಾಗಿಲ್ಲ. ಇದಕ್ಕೆ ಕಾರಣಗಳನ್ನು ಕಂಡುಕೊಳ್ಳುವಾಗ ದೇಶದ ನ್ಯಾಯಾಲಯಗಳಲ್ಲಿ ಬಳಸಬೇಕಾದ ಭಾಷೆಯ ಬಗೆಗೆ ನಡೆದಿರುವ ಕೆಲವು ಪ್ರಮುಖ ಚರ್ಚೆಗಳನ್ನು ಇಲ್ಲಿ ಗಮನಿಸಬೇಕಿದೆ.

ಭಾರತ ಸ್ವತಂತ್ರಗೊಂಡ ನಂತರ ಭಾರತದ ಭಾಷಾಸಮಸ್ಯೆಯನ್ನು ಬಿಡಿಸಲು ನೇಮಕವಾದ ಭಾಷಾಸಮಿತಿ ಮತ್ತು ಆಯೋಗಗಳಲ್ಲಿ ೧೯೫೬ರ ರಾಜಭಾಷಾ ಆಯೋಗದ ವರದಿಗೆ ಅಗ್ರಸ್ಥಾನವಿದೆ. ಇವುಗಳಲ್ಲಿ ಗ್ರಾಮಗಳಲ್ಲಿ ಉದ್ಭವವಾಗುವ ಸಣ್ಣಪುಟ್ಟ ವಿವಾದಗಳ ಸಂಬಂಧದಲ್ಲಿ, ಗ್ರಾಮ ಪಂಚಾಯ್ತಿಗಳಿಗೂ ಹಾಗೂ ಗ್ರಾಮೀಣ ನ್ಯಾಯಸಭೆ (ಬೆಂಚ್)ಗಳಿಗೂ ಪರಿಮಿತವಾದ ಕೆಲವೊಂದು

ವ್ಯಾವಹಾರಿಕ(ಸಿವಿಲ್) ಮತ್ತು ಅಪರಾಧಿಕ (ಕ್ರಿಮಿನಲ್) ಅಧಿಕಾರಗಳನ್ನು ಕೊಡಲಿವೆ. ಗ್ರಾಮ ಪಂಚಾಯ್ತಿಗಳಲ್ಲಾದ ವ್ಯಾವಹಾರಿಕ(ಸಿವಿಲ್) ಮತ್ತು ಅಪರಾಧಿಕ (ಕ್ರಿಮಿನಲ್) ನ್ಯಾಯಾಂಗದ ರಚನೆಯಲ್ಲಿ ಸಿವಿಲ್ ನ್ಯಾಯಾಧೀಶರು (ಜಡ್ಜ್), ವಿಚಾರಣೆ ನಡೆಸುವ ನ್ಯಾಯಾಲಯವು ಮತ್ತು ಮ್ಯಾಜಿಸ್ಟ್ರೇಟರ್ ಕ್ರಿಮಿನಲ್ ವ್ಯವಹರಣೆ ನಡೆಸುವ ನ್ಯಾಯಾಲಯವು ಆಡಳಿತದ ಪ್ರಾಥಮಿಕ ಘಟಕವಾಗಿರುತ್ತದೆ. ಸಿವಿಲ್ ವ್ಯವಹರಣೆ ನಡೆಸುವ ನ್ಯಾಯಾಧೀಶರುಗಳು ಸಾಧಾರಣವಾಗಿ ಒಂದು ನಿಷ್ಕೃಷ್ಟವಾದ ಹಣದ ಮೊಬಲಗಿಗೆ ಸಂಬಂಧಿಸಿದ ವ್ಯಾವಹಾರಿಕ ವಿವಾದಗಳನ್ನು ಬಗೆಹರಿಸುವುದಕ್ಕೆ ಅಧಿಕಾರವನ್ನು ಹೊಂದಿರುತ್ತಾರೆ. ತಾಲ್ಲೂಕು ಅಥವಾ ತಹಸಿಲ್ ಮಟ್ಟದಲ್ಲಿ ಸಿವಿಲ್ ಮತ್ತು ಕ್ರಿಮಿನಲ್ ವ್ಯಾಜ್ಯಗಳ ವಿಚಾರಣೆ ನಡೆಸುವ ನ್ಯಾಯಾಲಯಗಳಿಗೆ ಮೇಲ್ಪಟ್ಟು ಜಿಲ್ಲಾ ಮಟ್ಟದಲ್ಲಿ ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ನ್ಯಾಯಾಲಯಗಳಿರುತ್ತವೆ. ಕೆಲವು ಸಂದರ್ಭಗಳಲ್ಲಿ ಡಿಸ್ಟ್ರಿಕ್ಟ್ ಕೋರ್ಟ್‌ಗಳು ಮೂಲ ನ್ಯಾಯಾಲಯಗಳ ಕರ್ತವ್ಯವನ್ನು ಮಾಡುತ್ತವೆ. ಮತ್ತು ಇತರೆ ಸಂದರ್ಭಗಳಲ್ಲಿ ಡಿಸ್ಟ್ರಿಕ್ಟ್ ನ್ಯಾಯಾಲಯಗಳು ವ್ಯಾವಹಾರಿಕ ನ್ಯಾಯಾಧೀಶ(ಸಿವಿಲ್ ಜಡ್ಜ್)ರುಗಳ ತೀರ್ಪುಗಳ ವಿರುದ್ಧ ವ್ಯಾವಹಾರಿಕ ವಿಷಯಗಳಲ್ಲಿ ಮೇಲರ್ಜಿಗಳನ್ನು ಪರ್ಯಾಲೋಚಿಸುವ ಅಧಿಕಾರವನ್ನು ಹೊಂದಿರುತ್ತವೆ; ಮತ್ತು ಮೇಲರ್ಜಿ ವಿಚಾರಣಾಧಿಕಾರಿಗಳ ಜೊತೆ ಸೆಷನ್ಸ್ ಕೋರ್ಟುಗಳಾಗಿ, ಅಂತಹ ನ್ಯಾಯಾಲಯಗಳಿಂದ ವಿಚಾರಿಸಲ್ಪಡಬಹುದಾದಂತಹ ಕಕ್ಷಿಗಳನ್ನು ವಿಚಾರಣೆ ಮಾಡಲು ಅಧಿಕಾರವನ್ನು ಹೊಂದಿರುತ್ತವೆ[೧೩] ಎಂಬುವು ಸೇರಿವೆ.

ಈ ಎಲ್ಲಾ ಹಂತದ ನ್ಯಾಯಾಲಯಗಳಲ್ಲಿ ಬಳಕೆಯಾಗುತ್ತಿರುವ ಭಾಷೆಯ ಸ್ವರೂಪ ಮತ್ತು ಸಮಸ್ಯೆಗಳು ಬೇರೆಬೇರೆಯಾಗಿವೆ. ಏಕೆಂದರೆ ಈ ಎಲ್ಲಾ ಹಂತದಲ್ಲಿ ನ್ಯಾಯಾಧೀಶರಾಗಿ ಕೆಲಸಮಾಡುತ್ತಿರುವ ನ್ಯಾಯಾಧೀಶರು, ವಾದವನ್ನು ಮಂಡಿಸುವ ವಕೀಲರು, ಕ್ಷಕಿದಾರರು, ಆರೋಪಿಗಳು ಬಳಸುವ ಭಾಷೆ, ದಾವೆಗಳಿಗೆ ಸಲ್ಲಿಸುವ ದಾಖಲೆಗಳಲ್ಲಿ ಬಳಕೆಯಾಗಿರುವ ಭಾಷೆ ಏಕರೂಪದಲ್ಲಿ ಇಲ್ಲ. ಒಂದೊಂದು ಹಂತದ ನ್ಯಾಯಾಲಯ, ಪ್ರದೇಶದ ನ್ಯಾಯಾಲಯಗಳಲ್ಲಿ ಬಳಕೆಯಾಗಿರುವ, ಬಳಕೆಯಾಗುತ್ತಿರುವ, ದಾಖಲೆಗಳಲ್ಲಿರುವ, ಕಕ್ಷಿದಾರರು, ಆರೋಪಿಗಳು ವಿಚಾರಣೆಯ ಸಂದರ್ಭದಲ್ಲಿ ಬಳಸಿರುವ ಮತ್ತು ಬಳಸುತ್ತಿರುವ ಭಾಷೆಗಳಲ್ಲಿ ವ್ಯತ್ಯಾಸವಿದೆ. ಸರ್ಕಾರಗಳು ದೇಶದ ನ್ಯಾಯಾಲಯಗಳಲ್ಲಿ ಬಳಸಬೇಕಾದ ಭಾಷೆಯ ಬಗೆಗೆ ನಿಖರವಾದ ಆದೇಶವನ್ನು ಹೊರಡಿಸದೆ ಹಲವು ಭಾಷೆಗಳ ಬಳಕೆಗೆ ಅನುಮತಿ ನೀಡಿವೆ. ಹೀಗಾಗಿ ಇಲ್ಲಿಯು ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿರುವಂತೆ ಒಂದು ಪ್ರದೇಶದ ಪ್ರಬಲ ಭಾಷೆಗಳಿಗೆ ಪ್ರಧಾನ ಸ್ಥಾನವಿದೆ. ಈ ಕಾರಣಕ್ಕಾಗಿ ಕರ್ನಾಟಕದ ನ್ಯಾಯಾಲಯಗಳಲ್ಲಿ ಮೊದಲ ಆದ್ಯತೆ ಮತ್ತು ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಾಗುತ್ತಿರುವ ಭಾಷೆ ಇಂಗ್ಲಿಶ್ ಆಗಿದೆ. ಕರ್ನಾಟಕ ಸರ್ಕಾರ ತನ್ನ ಅಧಿಕಾರವನ್ನು ಬಳಸಿಕೊಂಡು ಕರ್ನಾಟಕದ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಸಬೇಕು ಎಂದು ಭಾಷಾನೀತಿಯನ್ನು ಜಾರಿಗೆ ತಂದ ನಂತರದಲ್ಲಿ ಮತ್ತು ಕನ್ನಡ ಭಾಷೆಯ ಬಗೆಗೆ ಅಭಿಮಾನವನ್ನು ಹೊಂದಿರುವ ವ್ಯಕ್ತಿಗಳು ಕರ್ನಾಟಕದ ನ್ಯಾಯಾಲಯಗಳಿಗೆ ನ್ಯಾಯಾಧೀಶರಾಗಿ ನೇಮಕವಾದ ನಂತರ

ಹಾಗೂ ಕನ್ನಡದಲ್ಲಿ ಶಿಕ್ಷಣ ಕಲಿತವರು ವಕೀಲರಾಗಿ ಕಾರ್ಯನಿರ್ವಹಿಸಲು ಆರಂಭಿಸಿದ ನಂತರದಲ್ಲಿ ಕರ್ನಾಟಕದ ನ್ಯಾಯಾಲಯಗಳಲ್ಲಿ ಕನ್ನಡದ ಬಳಕೆಯ ಪ್ರಮಾಣ ಸ್ವಲ್ಪ ವೃದ್ಧಿಸಿದೆ.

ಕರ್ನಾಟಕದ ಸರ್ಕಾರ ಈ ರೀತಿಯ ಭಾಷಾನೀತಿಗಳನ್ನು ಜಾರಿಗೆ ತರುವ ಪೂರ್ವದಲ್ಲಿ ಮತ್ತು ನ್ಯಾಯಾಧೀಶರು ಮತ್ತು ವಕೀಲರ ಭಾಷಾಬದಲಾವಣೆಯ ಪ್ರಕ್ರಿಯೆಗಳು ನಡೆಯದಿರುವಾಗ ಕರ್ನಾಟಕದ ನ್ಯಾಯಾಲಯಗಳಲ್ಲಿ ಕನ್ನಡ ಬಳಕೆಯಾಗುತ್ತಿರಲಿಲ್ಲವೆಂದು ಅರ್ಥವಲ್ಲ. ಈಗಾಗಲೇ ಚರ್ಚಿಸಿರುವ ಹಾಗೆ ರಾಜತ್ವದ ಆಡಳಿತ ಮತ್ತು ಆಂಗ್ಲರ ಆಡಳಿತದಲ್ಲಿ ಬೇರೆಬೇರೆ ಭಾಷೆಗಳು ನ್ಯಾಯಾಲಯದ ಭಾಷೆಯಾಗಿ ಬಳಕೆಯಾಗಿದ್ದರೂ ಅವುಗಳ ಪ್ರಮಾಣ ಕಡಮೆಯಿತ್ತು. ಭಾರತ ಸಂವಿಧಾನವನ್ನು ಒಪ್ಪಿಕೊಂಡ ನಂತರ ಮತ್ತು ದೇಶದ ಸರ್ವೋಚ್ಚ ನ್ಯಾಯಾಲಯದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೆ ಒಂದು ಸ್ಪಷ್ಟ ನಿರ್ಧಾರಕ್ಕೆ ಬಂದ ನಂತರದಲ್ಲಿ ದೇಶದ ನ್ಯಾಯಾಲಯಗಳ ಭಾಷಾಸಮಸ್ಯೆ ತೀವ್ರವಾಗಿದೆ. ಏಕೆಂದರೆ ದೇಶದಲ್ಲಿ ಎಲ್ಲ ರಾಜ್ಯಗಳಿಗು ಅನ್ವಯವಾಗುವ ಹಾಗೆ ಒಂದು ಸರ್ಕಾರ (ಕೇಂದ್ರ ಸರ್ಕಾರ) ಮತ್ತು ಒಂದು ನ್ಯಾಯಾಲಯ (ಸುಪ್ರೀಂ ಕೋರ್ಟ್) ಸ್ಥಾಪನೆಯಾದ ಸಂದರ್ಭದಲ್ಲಿಯೇ ದೇಶದಲ್ಲಿ ಭಾಷಾವಾರು ರಾಜ್ಯಗಳು ರಚನೆಯಾಗಿವೆ. ಭಾಷಾವಾರು ರಾಜ್ಯಗಳಲ್ಲಿ ಜನರಿಗೆ ಭಾಷೆಯ ಮಹತ್ವದ ಅರಿವಾಗಿ ತಮ್ಮ ಮಾತೃಭಾಷೆಗಳನ್ನು ರಕ್ಷಿಸಿಕೊಳ್ಳುವ ಪ್ರಯತ್ನ ಮಾಡಿವೆ. ಇಂತಹ ಪ್ರಯತ್ನ ಮಾಡಿರುವ ಭಾಷಿಕ ಸಮುದಾಯಗಳಲ್ಲಿ ಕನ್ನಡವು ಒಂದು. ರಾಜ್ಯಗಳಲ್ಲಿ ಕರ್ನಾಟಕವೂ ಒಂದು.

ಈಗಾಗಲೇ ಚರ್ಚಿಸಿರುವ ಹಾಗೆ ಯಾವುದೇ ಒಂದು ಪ್ರದೇಶದ ನ್ಯಾಯಾಲಯಗಳಲ್ಲಿ ಸ್ಥಳೀಯ ಭಾಷೆ ಅಥವಾ ಭಾಷೆಗಳು ನ್ಯಾಯಾಲಯದ ಭಾಷೆಗಳಾಗಿ ಬಳಕೆಯಾಗಬೇಕಾದರೆ ಅವು ಮೊದಲು ಆ ಪ್ರದೇಶದ ಆಡಳಿತ ಭಾಷೆಯಾಗಿರಬೇಕು. ಹಾಗೆಯೇ ಶಿಕ್ಷಣದ ಭಾಷೆಯಾಗಿರಬೇಕು. ಈ ಎರಡರಲ್ಲೂ ಬಳಕೆಯಾಗದ ಭಾಷೆ ನ್ಯಾಯಾಲಯದ ಭಾಷೆಯಾಗಿ ಬಳಕೆಯಾಗಲು ಸಾಧ್ಯವಿಲ್ಲ. ಏಕೆಂದರೆ ನ್ಯಾಯಾಲಯಗಳ ತೀರ್ಪು ಸರ್ಕಾರಗಳು ಮಾಡಿರುವ ಶಾಸನ ಅಥವಾ ಕಾನೂನುಗಳಿಗೆ ಒಳಪಟ್ಟಿರುತ್ತವೆ. ಹಾಗೆಯೇ ಅವುಗಳ ಆಧಾರ ಅಥವಾ ಉಲ್ಲೇಖದಲ್ಲಿಯೇ ಇರುತ್ತವೆ. ಹೀಗಾಗಿ ಒಂದು ಪ್ರದೇಶದ ನ್ಯಾಯಾಲಯಗಳಲ್ಲಿ ಸ್ಥಳೀಯ ಭಾಷೆ ಅಥವಾ ಭಾಷೆಗಳು ಬಳಕೆಯಾಗಲು ಆ ಪ್ರದೇಶದ ಶಾಸನಸಭೆಯ ನಿರ್ಣಯಗಳು ಆ ಪ್ರದೇಶದ ಭಾಷೆಯಲ್ಲಿಯೇ ಆಗಬೇಕು. ಆದರೆ ಕರ್ನಾಟಕ ಸರ್ಕಾರ ಕನ್ನಡಿಗರ ಅನುಕೂಲಕ್ಕಾಗಿ ೧೯೭೩ರಲ್ಲಿ ಕೆಳಹಂತದ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಸಬೇಕು ಎಂದು ಭಾಷಾನೀತಿ ಜಾರಿಗೆ ತಂದಾಗ ರಾಜ್ಯದ ಸಚಿವಾಲಯದ ನಿರ್ಣಯಗಳು ಇಂಗ್ಲಿಶ್‌ನಲ್ಲಿ ಇದ್ದವು. ಹಾಗೆಯೇ ಶಿಕ್ಷಣದಲ್ಲಿ ಇಂಗ್ಲಿಶ್ ಮುಂದುವರಿಯುತಿತ್ತು. ಇವು ರಾಜ್ಯದ ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಮುಂದುವರಿಯಲು ಪ್ರಧಾನ ಕಾರಣವಾಗಿವೆ.

ಇವುಗಳಲ್ಲಿ ಬದಲಾವಣೆ ತರುವ ಮೂಲಕ ರಾಜ್ಯದ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಕೆಗೆ ತರಬೇಕು. ಆದರೆ ರಾಜ್ಯದ ಆಡಳಿತ, ಶಿಕ್ಷಣದಲ್ಲಿ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿರುವ ಹಾಗೆ ಕನ್ನಡವನ್ನು ಸಮರ್ಪಕವಾಗಿ ಬಳಕೆಗೆ ತರದೆ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಸಬೇಕು ಎಂದು

ಭಾಷಾನೀತಿಯನ್ನು ಜಾರಿಗೆ ತಂದಿರುವುದು ಹಲವು ಸಮಸ್ಯೆಗಳನ್ನು ಹುಟ್ಟುಹಾಕಿದೆ. ಹೀಗಾಗಿ ಇವುಗಳನ್ನು ಸರಿಪಡಿಸುವ ಮೂಲಕವಾಗಿಯೇ ಕರ್ನಾಟಕದ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಕೆಗೆ ತರಬೇಕು. ಈ ಬದಲಾವಣೆಗಳನ್ನು ಮಾಡದೇ ಕರ್ನಾಟಕದ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಕೆಗೆ ತರುವುದು ಅಸಾಧ್ಯದ ಕೆಲಸ ಅನಿಸುತ್ತದೆ. ಇದರಿಂದಾಗಿ ಸಂವಿಧಾನದಲ್ಲಿ ಇಂಗ್ಲಿಶ್‌ನಲ್ಲಿ ಕಾನೂನುಗಳ ರಚನೆಗೆ ಅನುಮತಿ ನೀಡಿರುವುದು ಮತ್ತು ಕೇಂದ್ರಸರ್ಕಾರದ ನಿರ್ಣಯ, ಶಾಸನಗಳನ್ನು ಪ್ರಾದೇಶಿಕ ಭಾಷೆಗಳಲ್ಲಿ ತರದೇ ಇರುವುದು ದೇಶದ ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಮುಂದುವರಿಯಲು ಕಾರಣವಾಗಿದೆ. ಇದರಿಂದ ಕೇಂದ್ರಸರ್ಕಾರದ ಪ್ರತಿಯೊಂದು ನಿರ್ಣಯ, ಶಾಸನಗಳು ಪ್ರಾದೇಶಿಕ ಭಾಷೆಯಲ್ಲಿ ಮುದ್ರಣಗೊಳ್ಳುವಂತೆ ಕೇಂದ್ರಸರ್ಕಾರ ವ್ಯವಸ್ಥೆ ಮಾಡಬೇಕು. ಈ ವ್ಯವಸ್ಥೆ ಮಾಡುವುದಕ್ಕೆ ಸರ್ಕಾರಕ್ಕೆ ಆರ್ಥಿಕವಾಗಿ ಸ್ವಲ್ಪ ಹೆಚ್ಚುವರಿಯಾಗಬಹುದು. ಆದರೆ ದೇಶದ ಭಾಷಿಕ ಸಮುದಾಯಗಳ ಹಿತ ಕಾಪಾಡುವ ದೃಷ್ಟಿಯಲ್ಲಿ ಇದು ದುಬಾರಿಯಾದುದೇನೂ ಅಲ್ಲ. ಆದರೆ ಸರ್ಕಾರಗಳು ಇಂತಹ ಪ್ರಯತ್ನ ಮಾಡದೆ ದೇಶದ ಆಡಳಿತ, ಶಿಕ್ಷಣ, ನ್ಯಾಯಾಲಯಗಳಲ್ಲಿ ಇಂಗ್ಲಿಶ್‌ನ ಕಲಿಕೆ ಮತ್ತು ಬಳಕೆಯನ್ನು ತಡೆಯುವುದು, ಪ್ರಾದೇಶಿಕ ಭಾಷೆ ಅಥವಾ ಭಾಷೆಗಳನ್ನು ಮಾತ್ರ ಬಳಸುವಂತೆ ಭಾಷಾನೀತಿ ತರುವಂತೆ ಒತ್ತಡಗಳನ್ನು ಹೇರುವುದು ಭಾಷಾ ಸಂಕುಚಿತತನವನ್ನು ತೋರಿಸುತ್ತದೆ. ಇದು ಇಂಗ್ಲಿಶ್ ಬಳಸಲಾಗದ ವ್ಯಕ್ತಿಗಳು ಆಡುವ ಮಾತು. ವಿದ್ಯಾವಂತರು ಇಂತಹ ಮಾತುಗಳನ್ನು ಆಡುವುದು ಸರಿಯಲ್ಲ. ದೇಶ ಅಭಿವೃದ್ಧಿ ಹೊಂದಲು, ದೇಶದ ಎಲ್ಲಾ ಭಾಗಗಳ ಜನರು ಸಂಪರ್ಕಕ್ಕೆ ಒಳಗಾಗಲು ಇಂಗ್ಲಿಶ್ ಅಗತ್ಯ ಇದೆ. ಇಂಗ್ಲಿಶ್ ಹೊರತುಪಡಿಸಿ ಇಂದು ದೇಶದ ಯಾವುದೇ ಭಾಷೆಗೂ ಈ ಸಾಮರ್ಥ್ಯ ಇಲ್ಲ. ಹೀಗಾಗಿ ದೇಶದ ಆಡಳಿತ, ಶಿಕ್ಷಣ, ಉದ್ಯೋಗ, ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಬಳಸುವುದನ್ನು ತಡೆಯುವುದರಲ್ಲಿ ಅರ್ಥವಿಲ್ಲ ಎಂದು ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಭಾಷಾಬಳಕೆ ಮುಂದುವರಿಸುವುದರ ಬಗೆಗೆ ಮಾತನಾಡುತ್ತಿದ್ದಾರೆ.

"ನಮ್ಮ ದೇಶದಲ್ಲಿ ಏಕಪ್ರಕಾರವಾದ ಅಥವಾ ಸಮಗ್ರವಾದ ಕಾನೂನು, ನ್ಯಾಯಾಲಯ ವ್ಯವಸ್ಥೆ ಇದೆ. ನಮ್ಮಲ್ಲಿ ಸಂಯುಕ್ತ ಸಂಸ್ಥಾನಗಳಲ್ಲಿರುವಂತೆ ರಾಜ್ಯ ನ್ಯಾಯಾಲಯಗಳು ಮತ್ತು ಫೆಡರಲ್ ನ್ಯಾಯಾಲಯಗಳೆಂಬ ನ್ಯಾಯಾಲಯ ವಿಭಾಗಗಳಿಲ್ಲ. ಭಾರತದಲ್ಲಿ ಯಾವುದೇ ಅಧೀನ ನ್ಯಾಯಾಲಯದ ನಿರ್ಣಯವನ್ನು ಯುಕ್ತ ಸಂದರ್ಭಗಳಲ್ಲಿ ಉಚ್ಚತಮ (ಸುಪ್ರೀಂ) ನ್ಯಾಯಾಲಯದವರೆಗೂ ಒಯ್ಯಬಹುದು. ಪ್ರತಿಯೊಂದು ರಾಜ್ಯದಲ್ಲಿ ಈ ನ್ಯಾಯಾಲಯಗಳೂ ಅಲ್ಲದೆ ಔದ್ಯಮಿಕ ನ್ಯಾಯಮಂಡಲಿ, ಕಂದಾಯ ನ್ಯಾಯ ಮಂಡಲಿ, ಕಂದಾಯ ಅಪೀಲು ನ್ಯಾಯಮಂಡಲಿಗಳಂತೆ ಅನೇಕ ನ್ಯಾಯಮಂಡಲಿಗಳಿವೆ. ಈ ನ್ಯಾಯಾಲಯಗಳ ಭಾಷೆ ವಿಷಯದಲ್ಲಿ ಈ ಏಕರೂಪತೆ ಇಲ್ಲದ ಪಕ್ಷದಲ್ಲಿ ನ್ಯಾಯಾಲಯಗಳ ಮತ್ತು ನ್ಯಾಯಮಂಡಲಿಗಳ ಈ ಸಮಗ್ರ ವ್ಯವಸ್ಥೆಯು ಯೋಗ್ಯರೀತಿಯಲ್ಲಿ ಕಾರ್ಯನಿರ್ವಹಣೆ ಮಾಡುವುದು ಸಾಧ್ಯವಾಗಲಾರದು."[೧೪] ರಾಜ್ಯದಲ್ಲಿನ ಕೆಳನ್ಯಾಯಾಲಯಗಳ ತೀರ್ಪನ್ನು ರಾಜ್ಯದ ಉಚ್ಚನ್ಯಾಯಾಲಯದಲ್ಲಿಯೂ ರಾಜ್ಯ ಉಚ್ಚನ್ಯಾಯಾಲಯದ ತೀರ್ಪನ್ನು ದೇಶದ ಉಚ್ಚನ್ಯಾಯಾಲಯ (ಸುಪ್ರೀಂಕೋರ್ಟ್)ದಲ್ಲಿಯೂ

ಪ್ರಶ್ನಿಸಬಹುದು. ರಾಜ್ಯದ ಭಾಷಾನೀತಿಯ ಪ್ರಕಾರವಾಗಿ ರಾಜ್ಯದ ನ್ಯಾಯಾಲಯಗಳು ಮೇಲೆ ಹೇಳಿದ ಹಾಗೆ ಕೆಳಹಂತದಲ್ಲಿ ಕನ್ನಡ ಭಾಷೆಯನ್ನು ಬಳಸಿದಾಗ ಅಗತ್ಯ ಸಂದರ್ಭಗಳಲ್ಲಿ ಉನ್ನತ ಹಂತಕ್ಕೆ ವರದಿಯನ್ನು ಸಲ್ಲಿಸಬೇಕಾಗುತ್ತದೆ. ಇದೂ ಕೂಡ ರಾಜ್ಯದ ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಮುಂದುವರೆಸಲು ಒಂದು ಕಾರಣವಾಗಿದೆ.

ಇದುವರಗೆ ಚರ್ಚಿಸಿದ ಹಾಗೆ ನ್ಯಾಯಾಲಯಗಳಲ್ಲಿ ಸ್ಥಳೀಯ ಭಾಷೆ ಅಥವಾ ಭಾಷೆಗಳು ಬಳಕೆಯಾಗಲು ನ್ಯಾಯಾಧೀಶರು, ವಕೀಲರು ಆ ಭಾಷೆಯನ್ನು ಬಳಸುವಂತಿರಬೇಕು. ಶಾಸನಗಳು ಆ ಭಾಷೆಯಲ್ಲಿ ರಚನೆಯಾಗಬೇಕು, ಆಡಳಿತ ಮತ್ತು ಶಿಕ್ಷಣ ಸಹ ಅದೇ ಭಾಷೆಯಲ್ಲಿ ನಡೆಯುತ್ತಿರಬೇಕು. ಇವುಗಳ ಜೊತೆಗೆ ಬೆರಳಚ್ಚುಗಾರರು, ಇತ್ತೀಚಿನ ದಿನಗಳಲ್ಲಿ ಕಂಪ್ಯೂಟರ್‌ನಂತಹ ಯಂತ್ರಗಳನ್ನು ಬಳಸುವ ಆಪರೇಟರ್‌ಗಳಿಗೆ ಆ ಭಾಷೆಯನ್ನು ಬಳಸುವ ತಿಳುವಳಿಕೆ ಇರಬೇಕು. ಆ ತಿಳುವಳಿಕೆಗಳನ್ನು ಕೊಡುವ ಕೆಲಸ ಸರ್ಕಾರಗಳಿಂದ ಆಗಬೇಕು. ಇದು ಶಿಕ್ಷಣದ ಮೂಲಕವೇ ಆಗಬೇಕಾಗುತ್ತದೆ. ಕರ್ನಾಟಕದ ಶಿಕ್ಷಣ ಪದ್ಧತಿಯಲ್ಲಿ "೧೯೧೪-೧೬ ಅವಧಿಯಲ್ಲಿ ನಮ್ಮ ರಾಜ್ಯದಲ್ಲಿ ೩೨೨ ಮಾಧ್ಯಮಿಕ ಶಾಲೆಗಳು ಇಂಗ್ಲಿಷ್ ಮಾಧ್ಯಮದಲ್ಲಿದ್ದರೆ, ೧೭೨ ಮಾಧ್ಯಮಿಕ ಶಾಲೆಗಳು ಕನ್ನಡ ಮಾಧ್ಯಮದಲ್ಲಿದ್ದವು. ಇಂಗ್ಲಿಷ್ ಮಾಧ್ಯಮದಲ್ಲಿ ೫೩,೯೭೬ ಮತ್ತು ಕನ್ನಡ ಮಾಧ್ಯಮದಲ್ಲಿ ೧೯,೭೭೧ ವಿದ್ಯಾರ್ಥಿಗಳು ಓದಿತ್ತಿದ್ದರು. ೧೯೨೧-೨೨ರ ಮಾಹಿತಿಯಂತೆ ನಮ್ಮ ರಾಜ್ಯದ ೨೬ ಸಂಸ್ಥೆಗಳಲ್ಲಿ ೫ ಸಂಸ್ಥೆಗಳು ಮಾತ್ರ ಕನ್ನಡ ಮಾಧ್ಯಮ ಪ್ರೌಢಶಾಲೆಗಳನ್ನು ನಡೆಸುತ್ತಿದ್ದವು. ೮೦೬೯ ಜನರು ಮಾತ್ರ ಕನ್ನಡ ಮಾಧ್ಯಮ ಪ್ರೌಢಶಾಲೆಗಳಲ್ಲಿ ಓದುತ್ತಿದ್ದರು."[೧೫] ಇದರಿಂದಾಗಿ ಇವರುಗಳೆಲ್ಲಾ ಸ್ವಾತಂತ್ರ್ಯ ಬರುವ ಹೊತ್ತಿಗೆ ಕನ್ನಡ ಬಳಸುವ ಬದಲಾಗಿ ಇಂಗ್ಲಿಶ್ ಭಾಷೆಯನ್ನು ಕರಗತ ಮಾಡಿಕೊಂಡಿದ್ದರು. ಸ್ವಾತಂತ್ರ್ಯಾನಂತರದ ಭಾರತ ಮತ್ತು ಕರ್ನಾಟಕದಲ್ಲಿ ಇಂಗ್ಲಿಶ್ ಭಾಷೆಯ ಬಳಕೆಗೆ ಅವಕಾಶ ದೊರಕಿದ್ದು ಮತ್ತು ಇಂಗ್ಲಿಶ್ ಭಾಷೆಯ ಬಳಕೆಯಿಂದ ರಾಜ್ಯದಲ್ಲಿ ಮಾತ್ರವಲ್ಲದೆ ರಾಜ್ಯದ ಹೊರಗೂ ಹೆಚ್ಚಿನ ಉನ್ನತ ಉದ್ಯೋಗದ ಅವಕಾಶಗಳು ದೊರಕಿದ್ದು ಸಹಜವಾಗಿಯೇ ಇವರು ಇಂಗ್ಲಿಶ್ ಭಾಷೆಯನ್ನು ಹೆಚ್ಚು ಬಳಕೆ ಮಾಡುವಂತೆ ಮಾಡಿತು. ಇದರಿಂದಾಗಿ ಭಾರತ ಸ್ವಾತಂತ್ರ ಪೂರ್ವದ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳು ನ್ಯಾಯಾಲಯದ ಭಾಷೆಗಳಾಗಿ ಬಳಕೆಯಾಗುತ್ತಿದ್ದರೂ ಅನಂತರದಲ್ಲಿ ಪ್ರಾದೇಶಿಕ ಭಾಷೆಗಳ ಬಳಕೆ ಕಡಿಮೆಯಾಗುತ್ತಾ ಸಾಗಿದೆ.

"ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಯನ್ನು ಬಳಸಲು ಒತ್ತಾಯಿಸುವುದರ ಬಹುಮುಖ್ಯ ಕಾರಣವೆಂದರೆ ನ್ಯಾಯಾಲಯಗಳಲ್ಲಿ ತಮ್ಮ ದಾವೆಗಳ ಬಗ್ಗೆ ವಾದ ನಡೆಯುವಾಗ ವಾಸ್ತವವಾಗಿ ಏನಾಗುತ್ತಿದೆ ಎಂಬುದರ ಅರಿವು ಕಕ್ಷಿದಾರರಿಗೆ ಇರಬೇಕು. ಕೇವಲ ಇದಷ್ಟೇ ಅಲ್ಲ ಕಕ್ಷಿಗಾರರಲ್ಲದಿರುವ ಜನಗಳಿಗೂ ಸಹ ದೇಶದ ನ್ಯಾಯಾಲಯಗಳಲ್ಲಿ ಏನು ನಡೆಯುತ್ತಿದೆ ಮತ್ತು ನ್ಯಾಯಾಡಳಿತವು ಹೇಗಾಗುತ್ತಿದೆ ಎಂಬುದನ್ನು ತಿಳಿದುಕೊಳ್ಳುವ ಹಕ್ಕಿದೆ.[೧೬] "ನ್ಯಾಯದ ದೃಷ್ಟಿಯಿಂದ, ಪ್ರಜಾಪ್ರಭುತ್ವದ ಯಶಸ್ವಿಗಾಗಿ, ಶ್ರೀಸಾಮಾನ್ಯರ ಹಿತರಕ್ಷಣೆಗಾಗಿ ಆಡಳಿತ ಹಾಗೂ ಕೋರ್ಟುಕಚೇರಿಗಳ ಭಾಷೆ ಪ್ರಧಾನವಾಗಿ ಕನ್ನಡವಾಗಬೇಕು, ಕೋರ್ಟುಗಳಲ್ಲಿ ಸಂಪೂರ್ಣವಾಗಿ ಕನ್ನಡ ಜಾರಿಗೆ ಬರುವ ತನಕ

ಕಕ್ಷಿದಾರರಿಗೆ ವಂಚನೆ ಮಾಡಿದಂತಾಗುತ್ತದೆ; ಶೋಷಕರಿಗೆ ಅವಕಾಶವಿತ್ತಂತ್ತಾಗುತ್ತದೆ. ನಾಡಿನ ಉನ್ನತ ನ್ಯಾಯಾಲಯವೊಂದರಲ್ಲಿ ವಕೀಲನೊಬ್ಬ ಆಂಗ್ಲಭಾಷೆಯಲ್ಲಿ ಔಚಿತ್ಯದ ಎಲ್ಲೆ ಮೀರಿ ವಾದ ಮಾಡುತ್ತಿದ್ದನಂತೆ. ನ್ಯಾಯಮೂರ್ತಿಗಳು ಬೇಸರಗೊಂಡು 'ನಿಮ್ಮ ವಾದದಲ್ಲಿ ಪಿಷ್ಟಪೇಷಣನೇ ಅತಿಯಾಗಿದೆ. ಅನವಶ್ಯಕವಾಗಿ ಏನೇನೋ ಹೇಳುತ್ತಿರಿ. ಐದು ನಿಮಿಷದಲ್ಲಿ ಮುಗಿಸಬಹುದಾದ್ದಕ್ಕೆ ಅರ್ಧಗಂಟೆ ತೆಗೆದುಕೊಂಡಿದ್ದೀರಿ ನನ್ನ ಸಮಯವೂ ಹಾಳು ಎಂದರಂತೆ. ಆಗ ವಕೀಲ 'ಸ್ವಾಮಿ, ನನ್ನ ಕಕ್ಷಿದಾರನಿಗೆ ನನ್ನ ವಾದವೂ ಅರ್ಥವಾಗುವುದಿಲ್ಲ, ನಿಜ. ಆದರೆ ನನ್ನ ಉದ್ದವಾದ ಅಬ್ಬರದಿಂದ ಅವನಿಗೆ ತೃಪ್ತಿಯಾಗುತ್ತದೆ. ನನ್ನ ವಾದದ ಫಲಾಫಲಗಳೇನೇ ಇರಲಿ, ನನ್ನ ಜೀವಿಕೆಗೆ ಮಾತ್ರ ನನ್ನ ಆಡಂಬರದ ಅಗತ್ಯವಿದೆ' ಎಂದು ವಿನಮ್ರವಾಗಿ ಉತ್ತರಿಸಿದನಂತೆ."[೧೭] ಇದು ಕಕ್ಷಿದಾರನ ಭಾಷೆಯಲ್ಲಿ ವಾದಮಾಡಲಾಗದ ವಕೀಲನೊಬ್ಬ ಕಕ್ಷಿದಾರನನ್ನು ತೃಪ್ತಗೊಳಿಸಲು ಅನುಸರಿಸಿದ ಮಾರ್ಗವಾಗಿದೆ. ಈ ದೀರ್ಘವಾದ ವಾದದಲ್ಲಿ ಕಕ್ಷಿದಾರನು ತನ್ನ ಪರವಾಗಿ ವಾದ ಮಾಡುತ್ತಿರುವ ವಕೀಲನು ಬಹಳ ಸಮರ್ಥವಾಗಿ ತನ್ನ ಕಾರ್ಯವನ್ನು ನಿರ್ವಹಿಸುತ್ತಿದ್ದಾನೆ ಎಂದು ಭಾವಿಸಿದರೂ ಅದು ಸಮರ್ಥವಾಗಿದೆಯೇ ಅಥವಾ ಇಲ್ಲವೇ ಎಂದು ಅರ್ಥಮಾಡಿಕೊಳ್ಳುವ ಶಕ್ತಿ ಅವನಿಗೆ ಇರುವುದಿಲ್ಲ. ಕಕ್ಷಿದಾರನ ಭಾಷೆಯಲ್ಲಿ ವಾದ ಮಾಡಲಾಗದ ವಕೀಲನೊಬ್ಬ ಅನುಸರಿಸಿದ ತಂತ್ರ ಇದಾಗಿದೆ.

ಇದರಿಂದಾಗಿ ಕಕ್ಷಿದಾರನು ತನ್ನ ದಾವೆಯ ಪರವಾಗಿ ವಾದವನ್ನು ಮಾಡುವ ವಕೀಲನು ಸರಿಯಾಗಿ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾನೆಯೇ ಅಥವಾ ಇಲ್ಲವೇ ಎಂದು ಅರ್ಥಮಾಡಿಕೊಳ್ಳಲಾಗದೆ, ವಕೀಲರು ವಾದದ ಆಧಾರದ ಮೇಲೆ ನ್ಯಾಯಾಧೀಶನು ನೀಡಿದ ತೀರ್ಪನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಕಕ್ಷಿದಾರನಿಗೆ ತನ್ನ ದಾವೆಯ ಪರವಾಗಿ ನ್ಯಾಯಾಲಯದಲ್ಲಿ ನಡೆದ ವಿಚಾರಣೆಯ ಸತ್ಯಾಸತ್ಯತೆಗಳು ಪ್ರತ್ಯಕ್ಷವಾಗಿ ತಿಳಿಯುವುದೇ ಇಲ್ಲ. ಕೊನೆಗೆ ನ್ಯಾಯಾಲಯದ ತೀರ್ಪು ಕೂಡ ವ್ಯಕ್ತಿಯ ಭಾಷೆಯಲ್ಲಿ ಬರುವುದಿಲ್ಲ. ಇದು ಕೂಡ ಇಂಗ್ಲಿಶ್ ಭಾಷೆಯಲ್ಲಿಯೇ ಇದೆ. ಇದರಿಂದಾಗಿ ನ್ಯಾಯಾಲಯವು ನೀಡಿದ ತೀರ್ಪನ್ನು ಕಕ್ಷಿದಾರ ಸ್ವತಂತ್ರವಾಗಿ ಓದಿ ಅರ್ಥಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಇದು ಕರ್ನಾಟಕದಲ್ಲಿ ಅವಿದ್ಯಾವಂತರ ಸಮಸ್ಯೆ ಮಾತ್ರವಲ್ಲ. ಕನ್ನಡ ಮಾಧ್ಯಮದಲ್ಲಿ ಕಲಿತ ಇಂಗ್ಲಿಶ್‌ನ ಸಮರ್ಥಜ್ಞಾನವಿಲ್ಲದ ಶಿಕ್ಷಿತನು ಅನುಭವಿಸುತ್ತಿರುವ ಸಮಸ್ಯೆಯಾಗಿದೆ. ಇಂತಹ ಸಮಸ್ಯೆಗಳನ್ನು ತಪ್ಪಿಸುವ ಉದ್ದೇಶದಿಂದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಈ ಹಿಂದೆ ಹೇಳಿದ ಹಾಗೆ ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಆದರೂ ಕರ್ನಾಟಕದ ನ್ಯಾಯಾಲಯಗಳಲ್ಲಿ ಈಗಲೂ ಕನ್ನಡ ಆಡಳಿತ ಭಾಷೆಯಾಗಿ ಬಳಕೆಯಾಗುತ್ತಿಲ್ಲ. ಇದಕ್ಕೆ ಇದುವರೆಗೆ ಚರ್ಚಿಸಿದ ಅಂಶಗಳು ಪ್ರಧಾನವಾಗಿ ಕಾರಣವಾಗಿವೆ.

'ಇವುಗಳ ಜತೆಗೆ ಕರ್ನಾಟಕ ಸರ್ಕಾರದ ಭಾಷಾನೀತಿಯ ಪ್ರಕಾರ ಕನ್ನಡವನ್ನು ನ್ಯಾಯಾಲಯಗಳಲ್ಲಿ ಬಳಸಲು ನ್ಯಾಯಾಧೀಶರಿಗೆ ಕನ್ನಡದಲ್ಲಿ ತೀರ್ಪುಕೊಡುವ ಭಾಷಾಸಾಮರ್ಥ್ಯ ಇರಬೇಕಾಗುತ್ತದೆ. ಇದಕ್ಕಾಗಿ ಕನ್ನಡದಲ್ಲಿ ಕಾನೂನು ಓದಿಕೊಂಡಿರಬೇಕಾಗುತ್ತದೆ. ೧೯೭೩ರಲ್ಲಿ

ಕರ್ನಾಟಕ ಸರ್ಕಾರ ಕರ್ನಾಟಕದ ಕೆಳನ್ಯಾಯಾಲಯಗಳಲ್ಲಿ ಕನ್ನಡ ಭಾಷೆಯನ್ನು ಬಳಕೆಗೆ ತರಬೇಕು ಎಂದು ಭಾಷಾನೀತಿಯನ್ನು ಜಾರಿಗೊಳಿಸಿದಾಗ ಕರ್ನಾಟಕದ ಕೆಳ ನ್ಯಾಯಾಲಯಗಳಲ್ಲಿ ಕಾರ್ಯವನ್ನು ನಿರ್ವಹಿಸುತ್ತಿದ್ದ ನ್ಯಾಯಾಧೀಶರುಗಳಿಗೆ ಕನ್ನಡ ಭಾಷೆಯಲ್ಲಿ ತೀರ್ಪನ್ನು ನೀಡುವ ಭಾಷಾಸಾಮರ್ಥ್ಯವಿರಲಿಲ್ಲ. ನ್ಯಾಯಾಲಯಗಳಲ್ಲಿ ದಾವೆಯ ಪರವಾಗಿ ಮತ್ತು ವಿರುದ್ಧವಾಗಿ ವಾದವನ್ನು ಮಂಡಿಸುವ ವಕೀಲರುಗಳಿಗೂ ಕೂಡ ಕನ್ನಡದಲ್ಲಿ ವಾದಿಸುವ ಭಾಷಾಸಾಮರ್ಥ್ಯ ಇರಲಿಲ್ಲ. ಆಡಳಿತ ಇಂಗ್ಲಿಶ್‌ನಲ್ಲಿ ಇದ್ದುದರಿಂದ ನ್ಯಾಯಾಲಯಗಳಗೆ ಸಲ್ಲಿಕೆಯಾಗುತ್ತಿದ್ದ ದಾಖಲೆಗಳು ಕನ್ನಡದಲ್ಲಿರದೆ ಇಂಗ್ಲಿಶ್‌ನಲ್ಲಿದ್ದವು. ಈ ಹಂತದ ನ್ಯಾಯಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ನ್ಯಾಯಾಧೀಶರು, ವಕೀಲರು ಮತ್ತು ಇವರ ಅಧೀನದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಟೆನೋಗ್ರಾಫರ್‌ಗಳು ಇಂಗ್ಲಿಶ್ ಬಳಸುತ್ತಿದ್ದರು. ಹಾಗೆಯೇ ನ್ಯಾಯಾಲಯಗಳಲ್ಲಿ ತೀರ್ಪಿನ ಮುದ್ರಣಕ್ಕೆ ಬಳಸುತ್ತಿದ್ದ ಯಂತ್ರಗಳು ಇಂಗ್ಲಿಶ್ ಭಾಷೆಯಲ್ಲಿ ಇದ್ದವು. ಹೀಗಾಗಿ ಕರ್ನಾಟಕ ಸರ್ಕಾರವು ಬಹುಸಂಖ್ಯಾತರಾದ ಕನ್ನಡಿಗರ ಒತ್ತಾಯಕ್ಕೆ ಮಣಿದು ಕನ್ನಡವನ್ನು ನ್ಯಾಯಾಲಯಗಳಲ್ಲಿ ಬಳಸುವಂತೆ ಭಾಷಾನೀತಿಯನ್ನು ಜಾರಿಗೆ ತಂದಿದ್ದಾಗಲು ಅದು ಕಾರ್ಯರೂಪಕ್ಕೆ ಬರದೆ ರಾಜ್ಯದ ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಮುಂದುವರಿದೆ.

ಹೀಗಾಗಿ ಬ್ರಿಟೀಷರು ತಮ್ಮ ಕಾಲದ ನ್ಯಾಯಾಲಯಗಳಲ್ಲಿ ಇಂಗ್ಲಿಷ್‌ನ್ನು ಹೇರಿದರೆಂಬುದಕ್ಕೆ ನಂಬಲರ್ಹವಾದ ಆಧಾರರಗಳು ಒಂದೂ ಸಿಗುತ್ತಿಲ್ಲ; ನ್ಯಾಯಾಲಯದ ಭಾಷೆ ಪ್ರಜೆಗಳ ಭಾಷೆಯೇ ಆಗಲೂ ಆಗಿತ್ತು ಎಂಬುದಕ್ಕೆ ಸಾಕಷ್ಟು ಆಧಾರಗಳು ಸಿಕ್ಕುತ್ತವೆ. ೧೮೦೭ನೇ ಇಸವಿ ಜುಲೈ ೧೯ರಂದು ವಿ.ಪಿ.ಬ್ರೂಸ್ ಎಂಬ ಬಳ್ಳಾರಿ ಜಿಲ್ಲಾ ಜಡ್ಜರು ಕೊಟ್ಟ ಅಸಲು ತೀರ್ಪು ಮತ್ತು ಡಿಕ್ರಿಯ ತೆಲುಗು ಅನುವಾದ ಈಗಲೂ ನೋಡಲು ಸಿಗುತ್ತದೆ. ಇದು ಅಪವಾದ; ಅಪರೂಪವಾಗಿದ್ದಿಲ್ಲ. ಅದೇ ನಿಯಮವಾಗಿತ್ತು. ಇಂಗ್ಲಿಷು ನ್ಯಾಯಾಧೀಶರು ಕನ್ನಡದಲ್ಲಿ ಆರೋಪಿಗಳ ಹೇಳಿಕೆಯನ್ನು ಬರೆದುಕೊಂಡ ದಾಖಲೆಗಳು ಇವೆ. ಇಂತಹ ಪರಿಸ್ಥಿತಿ ಕರ್ನಾಟಕದ ಇತರ ಭಾಗಗಳಲ್ಲೂ ಇರುವುದನ್ನು ಕಾಣುತ್ತೇವೆ. ದಕ್ಷಿಣ ಕನ್ನಡದ ಜಿಲ್ಲಾ ನ್ಯಾಯಾಲಯದ ಕೇಂದ್ರ ರೆಕಾರ್ಡ್ ರೂಮಿನಲ್ಲಿರುವ ಹಳೆಯ ದಸ್ತಾವೇಜುಗಳನ್ನು ತೆಗೆದು ನೋಡಿದರೆ ಡಿಕ್ರಿ ಮತ್ತು ತೀರ್ಪುಗಳು ಕನ್ನಡದಲ್ಲಿ ಇವೆ. ಮುಂಬೈ ಕರ್ನಾಟಕದ ಕೋರ್ಟುಗಳಲ್ಲಿ ದಾವಾ ಅರ್ಜಿಸಹಿತ ಕನ್ನಡದಲ್ಲಿ ಇರುವುದನ್ನು ಯಾರುಬೇಕಾದರೂ ಈಗಲೂ ದಿಟ ಮಾಡಿಕೊಳ್ಳಬಹುದು.

ಇವರು ಇನ್ನೂ ಸ್ವಲ್ಪ ಮುಂದುವರೆದು ಶಿವಮೊಗ್ಗ ಜಿಲ್ಲೆಯ ಹಳೆಯ ಕೋರ್ಟಿನ ತೀರ್ಪುಗಳು, ಮದ್ರಾಸ್ ಹೈಕೋರ್ಟಿನ ಸುತ್ತೋಲೆಗಳು ಕನ್ನಡದಲ್ಲಿರುವುದನ್ನು ಗುರುತಿಸುತ್ತಾರೆ. ಬಳ್ಳಾರಿಯಲ್ಲಿ ಕನ್ನಡ ಮತ್ತು ತೆಲುಗು, ಕಾಸರಗೋಡಿನಲ್ಲಿ ಕನ್ನಡ ಮತ್ತು ಮಲಯಾಳ ಅಧಿಕೃತ ನ್ಯಾಯಾಲಯದ ಭಾಷೆಗಳೆಂದು ಘೋಷಿಸಲಾಗಿದೆ. ೧೯೫೩ರವರೆಗೆ ಬಳ್ಳಾರಿ ಜಿಲ್ಲೆಗೆ ಬರುತ್ತಿದ್ದ ಆಂಧ್ರ ತಮಿಳು ಮ್ಯಾಜಿಸ್ಟ್ರೇಟರುಗಳು ಕನ್ನಡವನ್ನು ಕಲಿತು ಕನ್ನಡದಲ್ಲೇ ಸಾಕ್ಷತ್ವವನ್ನು ಬರೆದುಕೊಳ್ಳಬೇಕಾಗಿತ್ತು! ಈಗಲೂ ಮುಂಬೈ ಕರ್ನಾಟಕದ ಜಿಲ್ಲೆಗಳಲ್ಲಿ ಜಿಲ್ಲಾ ನ್ಯಾಯಾಲಯಗಳಲ್ಲಿ ಸಹಸಾಕ್ಷಿಗಳ ಹೇಳಿಕೆಯನ್ನು

ಕನ್ನಡದಲ್ಲೇ ಬರೆದುಕೊಳ್ಳುತ್ತಾರೆ. ನಿವೃತ್ತ ಶ್ರೇಷ್ಠನ್ಯಾಯಮೂರ್ತಿ ಶ್ರೀ ಎಂ.ಸಿ.ಭಾಗಲಾರವರು "ಮುಂಬೈ ಹೈಕೋರ್ಟು ಅಧಿಕಾರದಲ್ಲಿ ಮರಾಠಿ, ಗುಜರಾತಿ ಮತ್ತು ಕನ್ನಡ ಮಾತನಾಡುವ ಮೂರು ಪ್ರದೇಶಗಳಾಗಿದ್ದವು. ಆಯಾ ಪ್ರದೇಶದ ಬಹುಸಂಖ್ಯಾತರ ಭಾಷೆಯೇ ನ್ಯಾಯಾಲಯದ ಭಾಷೆಯಾಗಿತ್ತು. ಎಲ್ಲಾ ದಸ್ತಾವೇಜುಗಳು ಸಾಕ್ಷತ್ವವೂ ಆಯಾ ಭಾಷೆಯಲ್ಲಿಯೇ ಇರುತ್ತಿತ್ತು ಎಂಬುದಾಗಿ ಹೇಳುತ್ತಾ ಇದರಿಂದ ನ್ಯಾಯ ಪರಿಪಾಲನೆಯಲ್ಲಿ ಯಾವ ತೊಂದರೆಯು ನಮಗಾಗಲಿಲ್ಲ" ಎಂದು ಹೇಳಿರುವುದನ್ನು ಗುರುತಿಸುತ್ತಾರೆ[೧೮]. ಇದೇ ರೀತಿಯ ಅಭಿಪ್ರಾಯವನ್ನು ಆಂಗ್ಲರ ಆಡಳಿತದಲ್ಲಿ ಕನ್ನಡ ಎಂಬ ಪುಸ್ತಕದಲ್ಲಿ ಮಹದೇವ ಬಣಕಾರರೂ ಗುರುತಿಸುತ್ತಾರೆ.

ಹಾಗಾದರೆ ಕರ್ನಾಟಕದ ನ್ಯಾಯಾಲಯಗಳಲ್ಲಿ ಇಂಗ್ಲಿಶ್ ಭಾಷೆಯು ನ್ಯಾಯಾಲಯದ ಭಾಷೆಯಾಗಿದ್ದು ಯಾವಾಗ? ಮತ್ತು ಯಾರಿಂದ ಎಂಬ ಪ್ರಶ್ನೆಗಳು ಸಹಜವಾಗಿಯೇ ಉದ್ಭವವಾಗುತ್ತವೆ. ಅದಕ್ಕೆ "ಬ್ರಿಟೀಷರ ಕಾಲದಲ್ಲಿ ಕೆಳನ್ಯಾಯಾಲಯಗಳ ವ್ಯವಹಾರಭಾಷೆ ಆಯಾಪ್ರಾಂತೀಯ ಭಾಷೆಯೇ ಆಗಿತ್ತು. ಸ್ವಾತಂತ್ರ್ಯದನಂತರವೂ ಕೂಡ ಮದ್ರಾಸ್, ಆಂಧ್ರ, ಕೇರಳ ಮತ್ತು ಮಹಾರಾಷ್ಟ್ರದ ಕೆಳನ್ಯಾಯಾಲಯಗಳಲ್ಲಿ ಆಯಾ ಪ್ರಾಂತೀಯ ಭಾಷೆಗಳೇ ವ್ಯವಹಾರದ ಭಾಷೆಯಾಗಿತ್ತು. ಆದರೆ ಕರ್ನಾಟಕದಲ್ಲಿ ಮಾತ್ರ ಸ್ವಾತಂತ್ರ್ಯ ಪೂರ್ವದಲ್ಲಿ ಇದ್ದ ಪರಿಸ್ಥಿತಿ ಬದಲಾಗಿ ಇಂಗ್ಲಿಷೇ ನ್ಯಾಯಾಲಯಗಳ ಭಾಷೆಯೆಂಬುದಾಗಿ ಘೋಷಿಸಲಾಯಿತು!! ಇದು ವ್ಯಾಖ್ಯಾನಬೇಕಾಗದ ಸುಸ್ಪಷ್ಟ ಸ್ವತಃ ಸಿದ್ಧಸಂಗತಿ" ಎಂದಿದ್ದಾರೆ[೧೯]. ಅಂದರೆ ಕರ್ನಾಟಕದ ನ್ಯಾಯಾಲಯಗಳಲ್ಲಿ ಹಿಂದೆ ಇದ್ದಂತಹ ಪರಿಸ್ಥಿತಿ ಬದಲಾಗಲು ಅದರ ಹಿಂದಿರುವ ಕಾರಣಗಳೇನು ಎಂಬುದನ್ನು ಬಹಳ ಸೂಕ್ಷ್ಮವಾಗಿ ಗಮನಿಸಬೇಕಿದೆ. ಅದನ್ನು ಗಮನಿಸದ ಹೊರತು ಕರ್ನಾಟಕದ ನ್ಯಾಯಾಲಯಗಳ ಭಾಷಾಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ.

ಇಲ್ಲಿ ಉಲ್ಲೇಖಿಸಿರುವ ಹಾಗೆ ಆಂಗ್ಲರ ಆಡಳಿತದ ಅವಧಿಯಲ್ಲಿ ನ್ಯಾಯಾಲಯಗಳಲ್ಲಿ ಕನ್ನಡ ಭಾಷೆ ಬಳಕೆಯಲ್ಲಿತ್ತು ಅಂದ ಮಾತ್ರಕ್ಕೆ ಸಂಪೂರ್ಣವಾಗಿ ಬಳಕೆಯಲ್ಲಿತ್ತು ಎಂದು ಅರ್ಥವಲ್ಲ. ಆಗಲೂ ಕೂಡ ಕನ್ನಡ ಮತ್ತು ಇತರ ಪ್ರಾದೇಶಿಕ ಭಾಷೆಗಳ ಜೊತೆಗೆ ಇಂಗ್ಲಿಶ್ ಭಾಷೆಯೂ ನ್ಯಾಯಾಲಯದ ಭಾಷೆಯಾಗಿ ಬಳಕೆಯಾಗಿದೆ. ಆದರೆ ಸ್ವಾತಂತ್ರ್ಯಾನಂತರದ ಕರ್ನಾಟಕದಲ್ಲಿ ಅದು ಮೇಲೆ ಗುರುತಿಸಿದ ಕಾರಣಗಳಿಂದಾಗಿ ನ್ಯಾಯಾಲಯಗಳಲ್ಲಿ ಹಂತಹಂತವಾಗಿ ಪ್ರಾದೇಶಿಕ ಭಾಷೆಗಳ ಬಳಕೆ ಕಡಿಮೆಯಾಗಿ ಇಂಗ್ಲಿಶ್‌ನ ಬಳಕೆ ಹೆಚ್ಚಾಗಿದೆ. ಇಂತಹ ಸಂದರ್ಭದಲ್ಲಿ ಕರ್ನಾಟಕ ಸರ್ಕಾರ ಕರ್ನಾಟಕದ ಆಡಳಿತ, ಶಿಕ್ಷಣ, ನ್ಯಾಯಾಲಯಗಳಲ್ಲಿ, ಉದ್ಯೋಗಗಳಲ್ಲಿ ಕನ್ನಡವನ್ನು ಬಳಕೆಗೆ ತರುವ ಪ್ರಯತ್ನ ಮಾಡಿದೆ. ಹೀಗಾಗಿ ನ್ಯಾಯಾಲಯಗಳಲ್ಲಿ ಕನ್ನಡ ಮತ್ತು ಇಂಗ್ಲಿಶ್ ಎರಡೂ ಭಾಷೆಗಳನ್ನು ಬಳಸಬೇಕಿದೆ. ಆದರೆ ಕರ್ನಾಟಕದ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನ್ಯಾಯಾಧೀಶರುಗಳಿಗೆ ಈ ಎರಡೂ ಭಾಷೆಗಳಲ್ಲಿ ತೀರ್ಪು ಕೊಡುವ ಭಾಷಾಸಾಮರ್ಥ್ಯ ಇಲ್ಲ. ಹೀಗಾಗಿ ಕರ್ನಾಟಕದ ನ್ಯಾಯಾಲಯಗಳಲ್ಲಿ ತೀರ್ಪುಗಳು ನ್ಯಾಯಾಧೀಶರ ಭಾಷಾಸಾಮರ್ಥ್ಯ, ಭಾಷೆ, ಅದರ ಮಹತ್ವ, ಜನರಿಗೆ ಅರ್ಥವಾಗದ ಭಾಷೆಯಲ್ಲಿ ತೀರ್ಪು ನೀಡಿದರೆ ಅದು ಸ್ಥಳೀಯ

ಜನರ ಮೇಲೆ ಬೀರುವ ಪರಿಣಾಮ ಇತ್ಯಾದಿಗಳ ಬಗೆಗೆ ನ್ಯಾಯಾಧೀಶರಿಗೆ ಇರುವ ತಿಳುವಳಿಕೆ, ನ್ಯಾಯಾಧೀಶರ ಘನತೆ, ಪ್ರತಿಷ್ಠೆ, ಮನಃಸ್ಥಿತಿ ಇತ್ಯಾದಿಗಳನ್ನು ಆಧರಿಸಿ ನಿರ್ಧರಿತವಾಗಿದೆಯೇ ಹೊರತು ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ ಭಾಷಾನೀತಿಯ ಆಧಾರದಲ್ಲಿ ಅಲ್ಲ. ವಕೀಲರು ಕೂಡ ಜನಸಾಮಾನ್ಯರಿಗೆ ಅರ್ಥವಾಗದ ಭಾಷೆಯನ್ನೇ ನ್ಯಾಯಾಲಯದಲ್ಲಿ ಬಳಸುತ್ತಿದ್ದಾರೆ. ಸರ್ಕಾರದ ಭಾಷಾನೀತಿ ಪ್ರಕಾರ ರಾಜ್ಯದ ನ್ಯಾಯಾಲಯಗಳಲ್ಲಿ ಕನ್ನಡದಲ್ಲಿ ವಾದ ಮಾಡಿದರೆ ತಾವು ಹೇಳುವ ವಿಷಯಗಳನ್ನು ನ್ಯಾಯಾಧೀಶರಿಗೆ ಮನದಟ್ಟು ಮಾಡಿಕೊಡಲು ಸಾಧ್ಯವಾಗುವುದಿಲ್ಲ. ನ್ಯಾಯಾಧೀಶರಿಗೆ ನಾವು ಹೇಳುವ ವಿಷಯಗಳು ಸಮರ್ಥವಾಗಿ ಮನದಟ್ಟಾಗದಿದ್ದರೆ ನಮ್ಮ ಪರವಾಗಿ ತೀರ್ಪು ಹೊರಬರುವುದು ಕಷ್ಟ. ತಮ್ಮ ಪರವಾದ ತೀರ್ಪು ಬರಬೇಕೆಂದರೆ ನ್ಯಾಯಾಧೀಶರ ಭಾಷೆಯನ್ನೇ ನಾವು ಬಳಸಬೇಕು ಎಂಬ ಭಾವನೆ ವಕೀಲರಲ್ಲಿದೆ.

ಹಾಗೆಯೇ ನ್ಯಾಯಾಧೀಶರು ಕೂಡ ಪ್ರತಿಷ್ಠೆಗಾಗಿ ವಕೀಲರಿಂದ ಇದನ್ನೇ ನಿರೀಕ್ಷಿಸುತ್ತಿದ್ದಾರೆ. ಇದಕ್ಕೆ ಮುಖ್ಯ ಕಾರಣ ಭಾರತ ಸ್ವತಂತ್ರಗೊಂಡ ನಂತರದಲ್ಲಿಯೂ ಇಂಗ್ಲೀಶರ ಕಾಲದ ನ್ಯಾಯಪದ್ಧತಿಯನ್ನೇ ಮುಂದುವರಿಸಿರುವುದು. ಭಾರತ ಸ್ವತಂತ್ರಗೊಂಡ ನಂತರ ಇಂಗ್ಲಿಶ್ ನ್ಯಾಯ ಪದ್ಧತಿಯನ್ನು ಬದಲಾಯಿಸಿ ಭಾರತೀಯ ನ್ಯಾಯಪದ್ಧತಿ ಅಳವಡಿಸುವ ಮೂಲಕ ಭಾಷಿಕ ಬದಲಾವಣೆಗಳನ್ನು ಮಾಡಬೇಕಾದ ಸರ್ಕಾರಗಳು ಇಂಗ್ಲಿಶ್ ಪದ್ಧತಿಯನ್ನೇ ಅಭಿವೃದ್ಧಿ ಮಾದರಿ ಎಂಬಂತೆ ಭಾವಿಸಿರುವುದು. ಹೀಗಾಗಿ ದೇಶದ ನ್ಯಾಯಾಲಯಗಳಲ್ಲಿ ಬಹುಜನರ ಜನಭಾಷೆಗಳು ಬಳಕೆಯಾಗದೆ ಬೆರಳೆಣಿಕೆಯಷ್ಟಿರುವ ನ್ಯಾಯಾಧೀಶರ ಭಾಷೆಗಳು ನ್ಯಾಯಾಲಯಗಳಲ್ಲಿ ಬಳಕೆಯಾಗುತ್ತಿವೆ. ಹೊಸದಾಗಿ ಸೇರ್ಪಡೆಯಾಗುವ ನ್ಯಾಯಾಧೀಶರು ಮತ್ತು ವಕೀಲರನ್ನು ಇದಕ್ಕೆ ಪೂರಕವಾಗಿಯೇ ಸಿದ್ಧಗೊಳಿಸಲಾಗಿದೆ. ಈಗಲೂ ಇದೇ ಪರಿಸ್ಥಿತಿ ಮುಂದುವರಿಯುತ್ತಿದೆ. ಹೀಗಾಗಿ ಕಾನೂನಿನ ವಿದ್ಯಾಭ್ಯಾಸದ ಮಟ್ಟಿಗೆ ಶ್ರೇಷ್ಠ ನ್ಯಾಯಾಲಯ ಮತ್ತು ಉಚ್ಚನ್ಯಾಯಾಲಯಗಳು ಇಂಗ್ಲೀಷ್ ಉಪಯೋಗಿಸುವುದನ್ನು ಬಿಟ್ಟುಬಿಡುವವರೆಗೆ ಅನೇಕ ವರ್ಷಗಳು ಲಾ ತರಗತಿಗಳ ಶಿಕ್ಷಣ ಮಾಧ್ಯಮವು ಇಂಗ್ಲೀಷ್‌ನಲ್ಲೇ ನಡೆಯುವುದು ಅತ್ಯಗತ್ಯವಾಗಿದೆ. ಅಲ್ಲದೆ ನಮ್ಮ ಕ಼ಾನೂನುಗಳನ್ನು ಮತ್ತು ನಮ್ಮ ನ್ಯಾಯಸ್ಥಾನದ ಆಡಳಿತ ಪದ್ಧತಿಯನ್ನು ಗಮನಿಸಿ ಮುಂದಿನ ಎಲ್ಲಾ ಕಾಲದಲ್ಲೂ ಲಾ ಗ್ರಾಜುಯೇಟುಗಳು ಇಂಗ್ಲೀಷ್ ಭಾಷಾಜ್ಞಾನವನ್ನು ಕಡ್ಡಾಯವಾಗಿ ಪಡೆಯತಕ್ಕದೆಂದು ಏರ್ಪಡಿಸತಕ್ಕುದು[೨೦]" ಎನ್ನುತ್ತಾರೆ ಸರ್ದಾರ್ ತೇಜ್‌ಸಿಂಗ್.

ಸರ್ದಾರ್ ತೇಜ್‌ಸಿಂಗ್ ಹೇಳುವಂತೆ ಎಲ್ಲ ಕಾಲಕ್ಕು ಲಾ ಗ್ರಾಜುಯೇಟ್‌ಗಳಿಗೆ ಇಂಗ್ಲಿಶ್‌ನಲ್ಲಿ ಕಲಿಸಿದರೆ ದೇಶದ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳನ್ನು ಬಳಕೆಗೆ ತರಲು ಸಾಧ್ಯವೇ? ಪ್ರಾದೇಶಿಕ ಭಾಷೆಗಳನ್ನು ನ್ಯಾಯಾಲಯಗಳಲ್ಲಿ ಬಳಕೆಗೆ ತರದೆ ದೇಶದ ಭಾಷಿಕ ಸಮುದಾಯಗಳ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವೇ? ಎಂಬುದು ಚರ್ಚೆಗೆ ಒಳಗಾಗಬೇಕಿರುವ ವಿಷಯವಾಗಿದೆ. ಇದುವರೆಗೆ ಚರ್ಚಿಸಿದ ಹಾಗೆ ಕರ್ನಾಟಕದ ನ್ಯಾಯಾಲಯಗಳಲ್ಲಿ ಸರ್ಕಾರದ ಭಾಷಾನೀತಿಯ ಪ್ರಕಾರವಾಗಿ ಕನ್ನಡ ಬಳಕೆಯಾಗದೇ ಸಮಸ್ಯೆಗಳು ಹುಟ್ಟಿಕೊಳ್ಳಲು ಮುಖ್ಯ ಕಾರಣವಾಗಿರುವುದು

ಭಾರತ ಸ್ವತಂತ್ರಗೊಂಡ ನಂತರ ಆಡಳಿತ, ಶಿಕ್ಷಣ, ಉದ್ಯೋಗ, ವ್ಯವಹಾರಗಳಲ್ಲಿ ಬೇರೆಬೇರೆ ಭಾಷೆಗಳನ್ನು ಬಳಸಬೇಕಿರುವುದು. ಇವು ನ್ಯಾಯಾಲಯಗಳಲ್ಲಿ ಬಳಕೆಯಾಗುವ ಭಾಷೆಯ ಮೇಲೆ ತನ್ನದೇ ಆದ ಪ್ರಭಾವ ಬೀರಿ ಭಾಷಾಸಮಸ್ಯೆಯನ್ನು ಸೃಷ್ಟಿಸಿವೆ. ಈ ಸಮಸ್ಯೆಗಳು ನ್ಯಾಯವನ್ನು ಅರಸಿ ನ್ಯಾಯಾಲಯ ಪ್ರವೇಶಿಸಿರುವ ಸಾಮಾನ್ಯ ಜನರಿಗೆ ಮಾತ್ರ ಎದುರಾಗಿರುವುವಲ್ಲ. ನ್ಯಾಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯಾಧೀಶರು, ವಕೀಲರು ಮತ್ತು ಇತರ ನೌಕರರು ಇವುಗಳ ಪರಿಣಾಮವನ್ನು ಎದುರಿಸಿದ್ದಾರೆ. ಏಕೆಂದರೆ ಇದುವರೆಗೆ ಚರ್ಚಿಸಿದ ಹಾಗೆ, ಯಾವುದೇ ದಾವೆಗಳಿಗೆ ಮೌಖಿಕವಾಗಿ ಪಡೆಯುವ ಸಾಕ್ಷಿಗಳಾಗಿರಬಹುದು ಅಥವಾ ದಾಖಲೆಗಳ ರೂಪದಲ್ಲಿ ಪಡೆಯುವ ಸಾಕ್ಷಿಗಳಾಗಿರಬಹುದು. ಅವುಗಳಲ್ಲಿ ಏಕರೂಪದ ಭಾಷೆಗಳ ಬಳಕೆ ಇಲ್ಲ. ಇಲ್ಲಿ ಹಲವು ಭಾಷೆಗಳನ್ನಾಡುವ ಜನರು ಸಾಕ್ಷಿಗಳಾಗಿ ಬಳಕೆಯಾಗುವುದರಿಂದ ಮತ್ತು ಹಲವು ಭಾಷೆಗಳಲ್ಲಿರುವ ದಾಖಲೆಗಳನ್ನು ಸಾಕ್ಷಿರೂಪವಾಗಿ ಬಳಸುವ ಅನಿವಾರ್ಯತೆ ನಿರ್ಮಾಣವಾಗಿರುವುದರಿಂದ ಏಕೀಕರಣ ನಂತರದ ಕರ್ನಾಟಕದ ನ್ಯಾಯಾಲಯಗಳಲ್ಲಿ ಕನ್ನಡ ಮತ್ತು ಇತರ ಭಾಷಿಕರ ಭಾಷಾಸಮಸ್ಯೆಗಳು ಹಾಗೇ ಉಳಿದು ನ್ಯಾಯಾಲಯಗಳಲ್ಲಿ ಹೊಸ ಸಮಸ್ಯೆಗಳು ಹುಟ್ಟಿರುವುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

**ಟಿಪ್ಪಣಿಗಳು**

೧. ಚನ್ನಬಸಪ್ಪ ಕೋ., (ಪ್ರ.ಸಂ) ಶೇಷಗಿರಿ ರಾವ್ ಎಲ್.ಎಚ್., ಕನ್ನಡದ ಅಳಿವು ಉಳಿವು, ಪುಟ ೯೨

೨. ಕಂಠೀರಾವ್, (ಪ್ರ.ಸಂ) ಶೇಷಗಿರಿ ರಾವ್ ಎಲ್.ಎಚ್., ಕನ್ನಡದ ಅಳಿವು ಉಳಿವು, ಪುಟ ೯೬

೩. ಹೇಮಲತ ಮಹಿಷಿ, (ಪ್ರ.ಸಂ) ಶೇಷಗಿರಿ ರಾವ್ ಎಲ್.ಎಚ್., ಕನ್ನಡದ ಅಳಿವು ಉಳಿವು, ಪುಟ ೮೨

೪. ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ಪುಟ ೫೨೯

೫. ಮಹಾದೇವಯ್ಯ ಪಿ., (ಸಂ) ಅಶೋಕ ಕುಮಾರ ರಂಜೇರೆ, ಆಡಳಿತ ಕನ್ನಡ, ಪುಟ ೧೭

೬. ರಾಜಭಾಷಾ ಆಯೋಗದ ವರದಿ-೧೯೫೬, ಭಾರತ ಸರ್ಕಾರ, ಪುಟ ೨೨೯

೭. ಸರಿತಾ ಕುಸುಮಾಕರ ದೇಸಾಯಿ, (ಪ್ರ.ಸಂ) ಶೇಷಗಿರಿ ರಾವ್ ಎಲ್.ಎಚ್., ಕನ್ನಡದ ಅಳಿವು ಉಳಿವು, ಪುಟ ೬೫

೮. ರಾಜಭಾಷಾ ಆಯೋಗದ ವರದಿ, ೧೯೫೬, ಭಾರತ ಸರ್ಕಾರ, ಪುಟ ೨೧೫

೯. ಬಡ್ಡಿ ಎಂ.ಎಂ., ಭಾರತ ಸಂವಿಧಾನ, ಪುಟ ೧೦೦

೧೦. ರಾಜಭಾಷಾ ಆಯೋಗದ ವರದಿ, ೧೯೫೬, ಭಾರತ ಸರ್ಕಾರ, ಪುಟ ೨೧೮

೧೧. ಚಿದಂಬರಂ ಎ., ಆಡಳಿತ ಭಾಷೆ ಸಮಸ್ಯೆಗಳ ವಿಶ್ಲೇಷಣೆ, ಪುಟ ೫೪

೧೨. ಸರಿತಾ ಕುಸುಮಾಕರ ದೇಸಾಯಿ, (ಪ್ರ.ಸಂ) ಶೇಷಗಿರಿ ರಾವ್ ಎಲ್.ಎಚ್., ಕನ್ನಡದ ಅಳಿವು ಉಳಿವು, ಪುಟ ೬೪

೧೩. ರಾಜಭಾಷಾ ಆಯೋಗದ ವರದಿ-೧೯೫೬, ಭಾರತ ಸರ್ಕಾರ, ಪುಟ ೨೨೨

೧೪. ವೆಂಕಟೇಶ್ ಎನ್.ಡಿ, ಆಡಳಿತ ಭಾಷೆ ಸಮಸ್ಯೆಗಳ ವಿಶ್ಲೇಷಣೆ, ಪುಟ ೬೫

೧೫. ರಾಮಚಂದ್ರಪ್ಪ ಬರಗೂರು, ಕನ್ನಡ ಪ್ರಜ್ಞೆ, ಪುಟ ೧೪೭

೧೬. ಜವರೇಗೌಡ ದೇ., ಕನ್ನಡ ಚಿಂತನೆ, ಪುಟ ೧೫೦

೧೭. ಅದೇ, ಪುಟ ೧೫೦

೧೮. ಚನ್ನಬಸಪ್ಪ ಕೋ., (ಪ್ರ.ಸಂ) ಶೇಷಗಿರಿ ರಾವ್ ಎಲ್.ಎಚ್., ಕನ್ನಡದ ಅಳಿವು ಉಳಿವು, ಪುಟ ೯೧

೧೯. ಅದೇ, ಪುಟ ೯೨

೨೦. ರಾಜಭಾಷಾ ಆಯೋಗದ ವರದಿ-೧೯೫೬, ಭಾರತ ಸರ್ಕಾರ, ಪುಟ ೨೨೨

## ಅಧ್ಯಾಯ–೭

## ಸಮಾರೋಪ

ಈ ಅಧ್ಯಾಯದಲ್ಲಿ ಅಧ್ಯಯನದ ಆಶಯ ಮತ್ತು ಫಲಿತಗಳ ಚರ್ಚೆ ಪ್ರಧಾನವಾಗಿದೆ. ಇದರ ಜೊತೆಯಲ್ಲಿ ಅಧ್ಯಯನದಲ್ಲಿ ಎದುರಾದ ತೊಡಕುಗಳು ಮತ್ತು ಅವುಗಳನ್ನು ಬಿಡಿಸಿಕೊಂಡ ಬಗೆ ತಿಳಿಸಿ ಈ ಅಧ್ಯಯನ ವಿಷಯಕ್ಕೆ ಪೂರಕವಾಗಿ ನಡೆಸಬಹುದಾದ ಸಂಶೋಧನಾ ಸಾಧ್ಯತೆಗಳನ್ನು ಚರ್ಚಿಸಲಾಗಿದೆ. ಈ ಪ್ರಬಂಧದಲ್ಲಿ ಒಟ್ಟು ಏಳು ಅಧ್ಯಾಯಗಳಿದ್ದು, ಮೊದಲನೆ ಅಧ್ಯಾಯದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಪ್ರಸ್ತಾವನೆ ನೀಡಲಾಗಿದೆ. ಈ ಭಾಗದಲ್ಲಿ ಭಾಷೆಯ ವ್ಯಾಖ್ಯಾನ, ಭಾಷೆ ರೂಪುಗೊಳ್ಳುವ ಬಗೆ, ಭಾಷೆಯ ಮಹತ್ವವನ್ನು ಕುರಿತು ಚರ್ಚಿಸಲಾಗಿದೆ. ಇದರ ನಂತರ ಬಹುಭಾಷಿಕ ಪರಿಸರದಲ್ಲಿ ಭಾಷೆಗಳ ಬಳಕೆಯ ಸ್ವರೂಪ, ಸಮಸ್ಯೆಗಳು ಉದ್ಭವವಾಗುವ ಬಗೆ ಹಾಗೂ ಅವುಗಳ ಪರಿಣಾಮವನ್ನು ಗುರುತಿಸಲಾಗಿದೆ. ಆ ಮೂಲಕ ಭಾಷಾಸಮಸ್ಯೆಗಳ ಪರಿಹಾರಕ್ಕೆ ರೂಪಿಸಿರುವ ಭಾಷಾಯೋಜನೆ ಮತ್ತು ಜಾರಿಗೆ ತಂದಿರುವ ಭಾಷಾನೀತಿಗಳು, ಅವುಗಳ ಸ್ವರೂಪ ಮತ್ತು ಸಮಸ್ಯೆಗಳನ್ನು ಗುರುತಿಸಲಾಗಿದೆ. ಅನಂತರದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಸ್ವರೂಪ ಮತ್ತು ವೈಧಾನಿಕತೆಯನ್ನು ತಿಳಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಕರ್ನಾಟಕದ ಭೂಪ್ರದೇಶ ಮತ್ತು ಕನ್ನಡ ಭಾಷೆಯ ಸಂಬಂಧದ ಬಗೆಗೆ ವಿವಿಧ ವಿದ್ವಾಂಸರುಗಳು ನಡೆಸಿರುವ ಚಿಂತನೆಗಳನ್ನು ಗಮನಿಸಲಾಗಿದೆ. ಅನಂತರದಲ್ಲಿ ಏಕೀಕರಣಪೂರ್ವ ಕರ್ನಾಟಕ ಭೂಪ್ರದೇಶದಲ್ಲಿ ಅಂದರೆ ರಾಜರುಗಳು ಮತ್ತು ಆಂಗ್ಲರ ಆಡಳಿತದಲ್ಲಿನ ಭಾಷಾಕಲಿಕೆ ಮತ್ತು ಬಳಕೆಯ ಸ್ವರೂಪ ಹಾಗೂ ಸಮಸ್ಯೆಗಳನ್ನು ಗುರುತಿಸಲಾಗಿದೆ. ಇವು ಕರ್ನಾಟಕ ಏಕೀಕರಣ ಹೋರಾಟಕ್ಕೆ ಕಾರಣವಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷೆಗಳ ಕಲಿಕೆ ಮತ್ತು ಬಳಕೆಯ ಮೇಲೆ ಬೀರಿರುವ ಪರಿಣಾಮಗಳನ್ನು ಪ್ರಧಾನವಾಗಿ ಚರ್ಚಿಸಲಾಗಿದೆ. ಅನಂತರದಲ್ಲಿ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷಾಸಮಸ್ಯೆಗಳ ಪರಿಹಾರಕ್ಕೆ ಸರ್ಕಾರಗಳಿಂದ ನೇಮಕವಾದ ಸಮಿತಿ/ಆಯೋಗಗಳು ನೀಡಿರುವ ವರದಿ, ಆ ವರದಿಗಳ ಆಧಾರದಲ್ಲಿ ಸರ್ಕಾರಗಳು ಹೊರಡಿಸಿರುವ ಆದೇಶ, ಸುತ್ತೋಲೆ, ಅಧಿಕೃತ ಜ್ಞಾಪನಗಳನ್ನು ಉಲ್ಲೇಖಿಸಲಾಗಿದೆ. ಆ ಮೂಲಕ ಕರ್ನಾಟಕದಲ್ಲಿನ ಭಾಷಾಯೋಜನೆ ಮತ್ತು ಭಾಷಾನೀತಿಗಳ ಸ್ವರೂಪ, ಉದ್ದೇಶ, ಮತ್ತು ಮಿತಿಗಳನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಇದರ ಮೂಲಕ ಭಾಷಾನೀತಿಗಳಿಂದ ಉದ್ಭವವಾದ ಸಮಸ್ಯೆ ಮತ್ತು ಅದಕ್ಕೆ ಕಾರಣವಾಗಿರುವ ಅಂಶಗಳನ್ನು ಕಂಡುಕೊಳ್ಳಲಾಗಿದೆ.

ಮೂರನೇ ಅಧ್ಯಾಯದಲ್ಲಿ ಶಿಕ್ಷಣದಲ್ಲಿ ಭಾಷೆಗಳನ್ನು ಕಲಿಸುವ ಉದ್ದೇಶಗಳನ್ನು ಸ್ಪಷ್ಟಪಡಿಸಿಕೊಳ್ಳುತ್ತಾ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷೆಗಳನ್ನು ಕಲಿಸುವುದಕ್ಕೆ ಸಂಬಂಧಿಸಿದ ಹಾಗೆ ರೂಪಿಸಿರುವ ಯೋಜನೆಗಳು, ಜಾರಿಗೊಳಿಸಲಾಗಿರುವ ನೀತಿಗಳು, ಭಾಷಾನೀತಿಗಳನ್ನು ಜಾರಿಗೊಳಿಸಿರುವುದರಿಂದ ಉದ್ಭವಿಸಿರುವ ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಇದರಲ್ಲಿ ಸರ್ಕಾರದ ಭಾಷಾನೀತಿಯ ಪ್ರಕಾರ ಭಾಷೆಗಳನ್ನು ಕಲಿಯಲು ಇರುವ ಸಮಸ್ಯೆಗಳು ಮತ್ತು

ಕಲಿಯುತ್ತಿರುವುದರಿಂದ, ಕಲಿಸುತ್ತಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ಮುಖ್ಯವಾಗಿ ಚರ್ಚಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಶಿಕ್ಷಣ ಮತ್ತು ಭಾಷಾಮಾಧ್ಯಮದ ವಿಚಾರವಾಗಿ ಚರ್ಚಿಸಲಾಗಿದ್ದು ಮೊದಲಿಗೆ ಮಾತೃಭಾಷಾಮಾಧ್ಯಮದ ಪರ ಮತ್ತು ವಿರೋಧವಾಗಿ ನಡೆದಿರುವ ಚರ್ಚೆಗಳನ್ನು ಗಮನಿಸಲಾಗಿದೆ. ಅನಂತರದಲ್ಲಿ ಸರ್ಕಾರ ಭಾಷಾಮಾಧ್ಯಮದ ವಿಚಾರವಾಗಿ ಜಾರಿಗೆ ತಂದಿರುವ ಭಾಷಾನೀತಿಗಳು, ಈ ಪ್ರಕಾರ ಮಕ್ಕಳು ಶಾಲೆಗಳಲ್ಲಿ ಕಲಿಯಲು ಇರುವ ಸಮಸ್ಯೆಗಳು ಮತ್ತು ಕಲಿಯುತ್ತಿರುವುದರಿಂದ, ಕಲಿಸುತ್ತಿರುವುದರಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ತಿಳಿಸಲಾಗಿದೆ. ಹಾಗೆಯೇ ಈ ಸಮಸ್ಯೆಗಳ ಉದ್ಭವಕ್ಕೆ ಕಾರಣವಾಗಿರುವ ಅಂಶಗಳು ಮತ್ತು ಅವುಗಳ ಪರಿಣಾಮವನ್ನು ವಿಶ್ಲೇಷಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಆಡಳಿತ ಭಾಷೆಯ ಸ್ವರೂಪದ ಬಗೆಗೆ ನಡೆದಿರುವ ಚಿಂತನೆಗಳನ್ನು ಗಮನಿಸುತ್ತಾ ಏಕೀಕರಣ ನಂತರ ಕರ್ನಾಟಕದ ಆಡಳಿತದಲ್ಲಿ ಭಾಷಾಸಮಸ್ಯೆಯ ತೀವ್ರತೆಗೆ ಅಡಿಪಾಯ ಹಾಕಿರುವ ರಾಜತ್ವದ ಆಡಳಿತ ಮತ್ತು ಆಂಗ್ಲರ ಆಡಳಿತದ ಭಾಷಾಬಳಕೆಯ ಸ್ವರೂಪ ಮತ್ತು ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ. ಇವುಗಳನ್ನು ಗಮನದಲ್ಲಿ ಇರಿಸಿಕೊಂಡು ಏಕೀಕರಣ ನಂತರ ಕರ್ನಾಟಕದ ಆಡಳಿತದಲ್ಲಿ ಬಳಕೆಯಾಗುತ್ತಿರುವ ಭಾಷಾಸ್ವರೂಪ, ಅವುಗಳ ಅನಿವಾರ್ಯತೆ ಹಾಗೂ ಅವುಗಳಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಹೀಗೆ ಚರ್ಚಿಸುವಾಗ ಕರ್ನಾಟಕ ಆಡಳಿತದಲ್ಲಿ ವಿವಿಧ ಭಾಷೆಗಳನ್ನು ಬಳಸಲು ಇರುವ ಉದ್ದೇಶ, ಇದಕ್ಕೆ ಅನುಗುಣವಾಗಿ ಭಾಷೆಗಳನ್ನು ಬಳಸಲು ಇದ್ದ ಮತ್ತು ಇರುವ ಸಮಸ್ಯೆಗಳು ಹಾಗೂ ಬಳಸುವುದರಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ. ಆರನೇ ಅಧ್ಯಾಯದಲ್ಲಿ ನ್ಯಾಯಾಲಯಗಳಲ್ಲಿ ಬಳಕೆಯಾಗುವ ಭಾಷೆ ಮತ್ತು ಸಮಸ್ಯೆಗಳ ಬಗೆಗೆ ಚರ್ಚಿಸಲಾಗಿದ್ದು ಇಲ್ಲಿ ನ್ಯಾಯಾಲಯಗಳಲ್ಲಿ ಭಾಷಾಬಳಕೆಯ ಸ್ವರೂಪ, ಸರ್ಕಾರಗಳ ನಿಯಮಗಳು, ಅವುಗಳ ಪಾಲನೆಯಿಂದ ಉದ್ಭವವಾಗಿರುವ ಸಮಸ್ಯೆಗಳನ್ನು ನ್ಯಾಯಾಲಯದ ವಿವಿಧ ಹುದ್ದೆಗಳಲ್ಲಿ ಕೆಲಸ ಮಾಡುತ್ತಿರುವ ನೌಕರರು ಮತ್ತು ಜನರಿಗೆ ಅನುಗುಣವಾಗಿ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ಈಗಾಗಲೇ ಹೇಳಿರುವ ಹಾಗೆ ಅಧ್ಯಯನದ ಒಟ್ಟು ಆಶಯ ಮತ್ತು ಫಲಿತಗಳು ಪ್ರಧಾನವಾಗಿದ್ದು ಅಧ್ಯಯನದ ಫಲಿತಗಳು ಈ ಕೆಳಕಂಡಂತೆ ಇವೆ.

೧. ಸಾಮಾನ್ಯವಾಗಿ ಭಾಷಾಸಮಸ್ಯೆಗಳು ಉದ್ಭವವಾಗುವುದು ಒಂದು ಭಾಷಾಸಮುದಾಯ ಇನ್ನೊಂದು ಭಾಷಾಸಮುದಾಯದ ಮೇಲೆ ಆಕ್ರಮಣ ಮಾಡಿ ಅಧೀನಕ್ಕೆ ಒಳಗಾದ ಸಮುದಾಯದ ಭಾಷಾಕಲಿಕೆ ಮತ್ತು ಬಳಕೆಯ ಸ್ಥಾನವನ್ನು ತಾನು ಆಕ್ರಮಿಸಿದಾಗ, ಇಲ್ಲವೆ ಆಕ್ರಮಣ ಮಾಡಿದ ಸಮುದಾಯ ಅಧೀನಕ್ಕೆ ಒಳಗಾದ ಸಮುದಾಯದ ಮೇಲೆ ತನ್ನ ಭಾಷೆಯನ್ನು ಕಲಿಯುವಂತೆ, ಬಳಸುವಂತೆ ಒತ್ತಡ ಹೇರಿದಾಗ. ಇಂತಹ ಸಮಸ್ಯೆಗಳ ಪರಿಹಾರಕ್ಕೆ ಅಂದರೆ ಜನಸಮುದಾಯಗಳ ಮೇಲೆ ಆಗುವ ಭಾಷಾಆಕ್ರಮಣವನ್ನು ತಡೆಗಟ್ಟುವ ಮತ್ತು ಭಾಷಾಕಲಿಕೆ ಹಾಗೂ ಬಳಕೆಯ ಅನಿವಾರ್ಯತೆಯನ್ನು ಪೂರೈಸುವ

ಉದ್ದೇಶದಿಂದ ರೂಪಿಸುವ ಕಾರ್ಯತಂತ್ರವೇ ಭಾಷಾಯೋಜನೆ. ಭಾಷಾಯೋಜನೆಗಳ ಆಧಾರದಲ್ಲಿ ಸರ್ಕಾರಗಳು ಹೊರಡಿಸುವ ಜ್ಞಾಪನ, ಆದೇಶ, ಸುತ್ತೋಲೆಗಳೇ ಭಾಷಾನೀತಿಗಳು.

ಭಾಷಾಸಮಸ್ಯೆಗಳಿಗೆ ಪರಿಹಾರ ಹುಡುಕುವ ಉದ್ದೇಶದಿಂದ ಕಾರ್ಯನಿರ್ವಹಿಸುವ ಸಮಿತಿ ಅಥವಾ ಆಯೋಗದ ಮೇಲೆ ಮತ್ತು ಭಾಷಾನೀತಿಯನ್ನು ಹೊರಡಿಸುವ ಸರ್ಕಾರಗಳ ಮೇಲೆ ಯಾವುದೇ ರೀತಿಯ ಒತ್ತಡಗಳು ಇರಬಾರದು. ಒಂದು ವೇಳೆ ಒತ್ತಡಗಳು ಇದ್ದಾಗ ಸಮಿತಿ ಅಥವಾ ಆಯೋಗಗಳು ಆ ಪ್ರದೇಶದಲ್ಲಿ ಬಳಕೆಯಲ್ಲಿರುವ ಭಾಷಾಸಮಸ್ಯೆಗಳನ್ನು ಸರಿಯಾಗಿ ಗ್ರಹಿಸದೆ, ಪೂರ್ವಾಗ್ರಹಕ್ಕೆ ಒಳಗಾಗಿ ಒತ್ತಡವನ್ನು ಉಂಟುಮಾಡಿದ ಅಥವಾ ಆ ಪ್ರದೇಶದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಔದ್ಯೋಗಿಕವಾಗಿ ಪ್ರಬಲವಾಗಿರುವ ಸಮುದಾಯಗಳ ಭಾಷೆಗೆ ಹೆಚ್ಚಿನ ಪ್ರಾತಿನಿಧ್ಯ ಕಲ್ಪಿಸಿ, ಉಳಿದ ಭಾಷೆಗಳನ್ನು ಕಡೆಗಣಿಸುತ್ತವೆ. ಇದನ್ನೇ ಆಧಾರವಾಗಿಸಿ ಸರ್ಕಾರಗಳು ನೀತಿಗಳನ್ನು ಹೊರಡಿಸುವುದರಿಂದ ಒಂದು ವರ್ಗಕ್ಕೆ ಅನುಕೂಲವಾದ ಭಾಷಾನೀತಿಗಳು ಮತ್ತೊಂದು ವರ್ಗಕ್ಕೆ ಸಮಸ್ಯೆಯಾಗಿ ಪರಿಣಮಿಸುವುದು ಈ ಅಧ್ಯಯನದಿಂದ ತಿಳಿಯುತ್ತದೆ.

೨. ಬಹುಭಾಷೆಗಳು ಬಳಕೆಯಲ್ಲಿರುವ ಪ್ರದೇಶದಲ್ಲಿ ಒಂದೊಂದು ಸಮುದಾಯದ ಭಾಷಾಸಮಸ್ಯೆಗಳ ಸ್ವರೂಪ ಬೇರೆಬೇರೆ ಇರುತ್ತವೆ. ಹೀಗಾಗಿ ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ತೆಗೆದುಕೊಳ್ಳಬೇಕಾದ ಕ್ರಮಗಳು ಬೇರೆಬೇರೆ ಇರುತ್ತವೆ. ಇವುಗಳನ್ನು ಪರಿಹರಿಸಲು ಪ್ರಜಾಪ್ರಭುತ್ವದ ಸಿದ್ಧಾಂತಗಳನ್ನು ಒಪ್ಪಿಕೊಂಡು ಆಡಳಿತ ನಡೆಸುವ ಸರ್ಕಾರಗಳು ಎಲ್ಲಾ ಸಮುದಾಯಗಳ ಭಾಷಾಸಮಸ್ಯೆಗಳನ್ನು ಸಮನಾಗಿ ಸ್ವೀಕರಿಸಬೇಕು. ಆದರೆ ಕರ್ನಾಟಕದಲ್ಲಿನ ಆಡಳಿತ ನಡೆಸಿರುವ ಸರ್ಕಾರಗಳು ಪ್ರಜಾಪ್ರಭುತ್ವದ ಸಿದ್ಧಾಂತಗಳನ್ನು ಮೇಲ್ನೋಟಕ್ಕೆ ಒಪ್ಪಿಕೊಂಡು ಭಾಷಾನೀತಿಗಳನ್ನು ಜಾರಿಗೆ ತಂದು ಅವುಗಳ ಕಲಿಕೆ ಮತ್ತು ಬಳಕೆಗೆ ಸೂಕ್ತ ವ್ಯವಸ್ಥೆ ಕಲ್ಪಿಸದೆ ಆಂತರಿಕವಾಗಿ ನಿರಾಕರಿಸಿವೆ. ಇದು ಪ್ರಬಲ ಭಾಷಿಕ ಸಮುದಾಯಗಳ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಪೂರಕವಾಗಿದ್ದು ಆಡಳಿತ, ಶಿಕ್ಷಣ, ಉದ್ಯೋಗ ಸೇರಿದಂತೆ ಇತರ ಕ್ಷೇತ್ರಗಳಲ್ಲಿ ಬಳಕೆಗೆ ಅವಕಾಶ ಕಲ್ಪಿಸಿವೆ. ಇದಕ್ಕಾಗಿ ಸರ್ಕಾರಗಳು ಭಾಷಾಸಮಸ್ಯೆಗೆ ಪರಿಹಾರ ಸೂಚಿಸಲು ನೇಮಕಮಾಡುವ ಸಮಿತಿ ಅಥವಾ ಆಯೋಗಗಳಿಗೆ ಮೊದಲೇ ಷರತ್ತುಗಳನ್ನು ಹಾಕಿ ವರದಿ ಸಲ್ಲಿಸುವಂತೆ ತಿಳಿಸಿವೆ.

ಇದರಿಂದ ಭಾಷಾಸಮಸ್ಯೆಗಳಿಗೆ ಪರಿಹಾರ ಸೂಚಿಸಲು ನೇಮಕವಾಗುವ ಸಮಿತಿಗಳು ಒಂದು ಚೌಕಟ್ಟಿಗೆ ಒಳಗಾಗಿ ಆ ಪ್ರದೇಶದಲ್ಲಿ ಬಳಕೆಯಲ್ಲಿರುವ ಎಲ್ಲಾ ಸಮುದಾಯಗಳ ಭಾಷಾಸಮಸ್ಯೆಗಳನ್ನು ಸರಿಯಾಗಿ ಗ್ರಹಿಸದೆ, ಯಾವ ಸಮುದಾಯ ತನ್ನ ಭಾಷಾಕಲಿಕೆ ಮತ್ತು ಬಳಕೆಗೆ ಪೂರಕವಾಗಿ ಭಾಷಾನೀತಿಗಳನ್ನು ಹೊರಡಿಸಬೇಕು ಎಂದು ಒತ್ತಡವನ್ನು ಉಂಟುಮಾಡಿವೆಯೋ ಅಂತಹ ಸಮುದಾಯಗಳ ಪರವಾಗಿ, ಇಲ್ಲವೇ ಆ ಪ್ರದೇಶದಲ್ಲಿ

ರಾಜಕೀಯವಾಗಿ ಆರ್ಥಿಕವಾಗಿ, ಸಾಂಖಿಕವಾಗಿ ಪ್ರಬಲವಾಗಿರುವ ಸಮುದಾಯಗಳ ಭಾಷಾಕಲಿಕೆ ಮತ್ತು ಬಳಕೆಗೆ ವಿಶೇಷ ಪ್ರಾತಿನಿಧ್ಯ ನೀಡಿ ವರದಿ ಸಲ್ಲಿಸಿವೆ. ಇವುಗಳ ಆಧಾರದಲ್ಲಿ ಸರ್ಕಾರಗಳು ಆದೇಶಗಳನ್ನು ಹೊರಡಿಸುವ ಮೂಲಕ ಆ ಭಾಷೆ ಅಥವಾ ಭಾಷೆಗಳ ಕಲಿಕೆ ಮತ್ತು ಬಳಕೆಯನ್ನು ಕಡ್ಡಾಯಗೊಳಿಸಿವೆ. ಹಾಗೆಯೇ ಪ್ರಬಲವಲ್ಲದ ಸಮುದಾಯಗಳ ಭಾಷಾಕಲಿಕೆ ಮತ್ತು ಬಳಕೆಯನ್ನು ಐಚ್ಛಿಕಗೊಳಿಸಿವೆ. ಇದರಿಂದ ಐಚ್ಛಿಕಗೊಳಿಸಲ್ಪಟ್ಟ ಸಮುದಾಯಗಳ ಜನರು ಸಮಸ್ಯೆಗಳಿಗೆ ಸಿಲುಕಿ ತಮ್ಮ ಅಸ್ತಿತ್ವದ ಉಳಿವಿಗಾಗಿ ಪ್ರಬಲ ಭಾಷಾಸಮುದಾಯಗಳ ಎದುರಿಗೆ ಪೈಪೋಟಿ ನಡೆಸಬೇಕಾದ ಅನಿವಾರ್ಯತೆ ಉಂಟಾಗಿರುವುದನ್ನು ಈ ಅಧ್ಯಯನ ಸ್ಪಷ್ಟಪಡಿಸುತ್ತದೆ.

೩. ಸರ್ಕಾರಗಳು ಒಂದು ಪ್ರದೇಶದಲ್ಲಿ ಬಳಕೆಯಾಗುತ್ತಿರುವ ಪ್ರಬಲ ಭಾಷೆಗಳ ಪರವಾಗಿ ಯೋಜನೆಗಳನ್ನು ರೂಪಿಸುವಂತೆ ಹೇಳಿ, ಅವುಗಳ ಕಲಿಕೆ ಮತ್ತು ಬಳಕೆಗೆ ಸಂಬಂಧಿಸಿದಂತೆ ಸುತ್ತೋಲೆ, ಜ್ಞಾಪನ ಆದೇಶಗಳನ್ನು ಹೊರಡಿಸಿದರೆ ಅದಕ್ಕನುಗುಣವಾಗಿ ಆ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಪೂರಕವಾದ ವಾತಾವರಣ ನಿರ್ಮಾಣ ಮಾಡಬೇಕು. ಹಾಗೆಯೇ ಅಗತ್ಯ ಪರಿಕರಗಳನ್ನು ಒದಗಿಸಬೇಕು. ಇಲ್ಲದಿದ್ದರೆ ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ಸರ್ಕಾರಗಳು ಜಾರಿಗೊಳಿಸಿದ ಭಾಷಾನೀತಿಗಳೇ ಸಮಸ್ಯೆಗಳಾಗಿ ಪರಿಣಮಿಸಿ ಆ ಪ್ರದೇಶದ ಭಾಷಾಸಮಸ್ಯೆಯನ್ನು ಮತ್ತಷ್ಟು ತೀವ್ರಗೊಳಿಸುವುದು ಈ ಅಧ್ಯಯನದಿಂದ ತಿಳಿಯುತ್ತದೆ.

೪. ಕರ್ನಾಟಕದಲ್ಲಿ ರೂಪಿತವಾಗಿರುವ ಭಾಷಾಯೋಜನೆ ಮತ್ತು ಭಾಷಾನೀತಿಗಳನ್ನು ಗಮನಿಸಿದಾಗ ಕರ್ನಾಟಕ ಏಕೀಕರಣ ಹೋರಾಟದ ಉದ್ದೇಶಕ್ಕೆ ಅನುಗುಣವಾಗಿ ಕನ್ನಡವನ್ನು ಕರ್ನಾಟಕದ ಆಡಳಿತ, ಶಿಕ್ಷಣ, ನ್ಯಾಯಾಲಯ, ಉದ್ಯೋಗ ಸೇರಿದಂತೆ ಎಲ್ಲಾ ಕ್ಷೇತ್ರಗಳಲ್ಲಿ ಬಳಕೆಗೆ ತರುವ ಪ್ರಯತ್ನ ಮಾಡಲಾಗಿರುವುದು ಸ್ಪಷ್ಟವಾಗುತ್ತದೆ. ಆದರೆ ಇದಕ್ಕೆ ಹಲವು ಮಿತಿಗಳಿದ್ದು ಕರ್ನಾಟಕ ಸರ್ಕಾರ ಸರ್ವಸ್ವತಂತ್ರವಲ್ಲ. ಇದು ಭಾರತ ಸಂವಿಧಾನದ ನಿಯಮಗಳು ಮತ್ತು ಕೇಂದ್ರಸರ್ಕಾರದ ಭಾಷಾನೀತಿಗೆ ಅಧೀನವಾಗಿ ಭಾಷಾನೀತಿಗಳನ್ನು ಜಾರಿಗೆ ತರಬೇಕಾಗಿರುವುದರಿಂದ ಕರ್ನಾಟಕದ ಆಡಳಿತ, ಶಿಕ್ಷಣ, ಉದ್ಯೋಗ ಇತ್ಯಾದಿ ಕ್ಷೇತ್ರಗಳಲ್ಲಿ ಕನ್ನಡವನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತರಲು ಸಾಧ್ಯವಾಗದಿರುವ ವಿಚಾರ ಈ ಅಧ್ಯಯನದಿಂದ ತಿಳಿಯುತ್ತದೆ.

೫. ಏಕೀಕರಣ ನಂತರದ ಕರ್ನಾಟಕದಲ್ಲಿ ಸರ್ಕಾರಗಳು ವಿವಿಧ ಕಾರಣಗಳಿಂದ ಹಲವು ಭಾಷೆಗಳನ್ನು ಕಲಿಸಬೇಕಿದೆ ಮತ್ತು ಬಳಸಬೇಕಿದೆ. ಹಾಗೆಯೇ ವಿದ್ಯಾರ್ಥಿಗಳು ಮತ್ತು ಜನರು ಕಲಿಯಬೇಕಿದೆ ಮತ್ತು ಬಳಸಬೇಕಿದೆ. ಆದರೆ ಇದಕ್ಕನುಗುಣವಾದ ಸಮರ್ಪಕ ಸಿದ್ಧತೆ ಮತ್ತು ಪರಿಕರಗಳ ಕೊರತೆಯಿಂದಾಗಿ ಸರ್ಕಾರಗಳ ಭಾಷಾನೀತಿಯ ಪ್ರಕಾರ ಭಾಷೆಗಳ ಅನುಷ್ಠಾನ ಆಗಿಲ್ಲ. ಬದಲಾಗಿ ಕರ್ನಾಟಕ ಸರ್ಕಾರ ಭಾಷಾಕಲಿಕೆ ಮತ್ತು ಬಳಕೆಗೆ

ಸಂಬಂಧಿಸಿದಂತೆ ಜಾರಿಗೆ ತಂದಿರುವ ಭಾಷಾನೀತಿಗಳೇ ಸಮಸ್ಯೆಗಳ ರೂಪ ಪಡೆದಿರುವುದನ್ನು ಈ ಅಧ್ಯಯನ ಸ್ಪಷ್ಟಪಡಿಸುತ್ತದೆ.

೬. ಬದುಕಿನ ಭಾಗವಾಗಿದೆ ಎಂದು ನಂಬಿಸಲಾಗಿರುವ ಭಾಷೆಯಲ್ಲಿ ಕಲಿಯದಂತೆ ನಿಯಂತ್ರಿಸುವುದು ಮತ್ತು ಬದುಕಿನ ಭಾಗವಲ್ಲ ಎಂದು ನಂಬಿಸಲಾಗಿರುವ ಭಾಷೆಯನ್ನು ಭಾವನಾತ್ಮಕ ಅಥವಾ ಅಭಿಮಾನದ ನೆಲೆಯಲ್ಲಿ ನೋಡಿ ಆ ಭಾಷೆಯಲ್ಲಿ ಕಲಿಯುವಂತೆ ಒತ್ತಡ ಹೇರುವುದು ಎರಡೂ ಸಮಸ್ಯೆಗಳ ಉದ್ಭವಕ್ಕೆ ಕಾರಣವಾಗುತ್ತವೆ. ಹೀಗಾಗಿಯೇ ಕರ್ನಾಟಕದಲ್ಲಿ ಬದುಕಿನ ಭಾಗವಾಗಿದೆ ಎಂದು ನಂಬಿಸಲಾಗಿರುವ ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆಯನ್ನು ನಿಯಂತ್ರಿಸುವುದು ಮತ್ತು ಬದುಕಿನ ಭಾಗ ಅಲ್ಲ ಎಂದು ನಂಬಲಾಗಿರುವ ಕನ್ನಡ ಅಥವಾ ಇತರ ಮಾತೃಭಾಷಾಮಾಧ್ಯಮದ ಕಲಿಕೆಯನ್ನು ಕಡ್ಡಾಯಗೊಳಿಸುವುದು ಎರಡೂ ಸಮಸ್ಯೆಗಳ ರೂಪ ಪಡೆದಿರುವುದು ಈ ಅಧ್ಯಯನದಿಂದ ತಿಳಿಯುತ್ತದೆ.

೭. ಯಾವುದೇ ಒಂದು ಪ್ರದೇಶದಲ್ಲಿ ರೂಪಿಸುವ ಭಾಷಾಯೋಜನೆಗಳು ಮತ್ತು ಜಾರಿಗೆ ತರಲಾಗುವ ಭಾಷಾನೀತಿಗಳ ಪ್ರಕಾರ ಭಾಷೆಗಳು ಅನುಷ್ಠಾನವಾಗಲು ಆ ಭಾಷೆಗಳನ್ನು ಆ ಪ್ರದೇಶದ ಜನ ತಮ್ಮ ದಿನನಿತ್ಯದ ಬದುಕಿನಲ್ಲಿ ಬಳಸುತ್ತಿರಬೇಕು ಮತ್ತು ಅಲ್ಲಿನ ಆಡಳಿತ, ಶಿಕ್ಷಣ, ಉದ್ಯೋಗ ಮುಂತಾದ ಕ್ಷೇತ್ರಗಳಲ್ಲಿ ಬಳಕೆಯಾಗುವ ಭಾಷೆಗಳ ನಡುವೆ ಹೊಂದಾಣಿಕೆ ಇರಬೇಕು. ಭಾಷಾಯೋಜನೆಗಳನ್ನು ರೂಪಿಸುವಾಗ ಅಥವಾ ನೀತಿಗಳನ್ನು ಜಾರಿಗೊಳಿಸುವಾಗ ಒಂದಕ್ಕೂ ಮತ್ತೊಂದಕ್ಕು ಸಂಬಂಧವೇ ಇಲ್ಲದಂತೆ ಇದ್ದರೆ ಅವುಗಳು ಸಮರ್ಪಕವಾಗಿ ಅನುಷ್ಠಾನವಾಗುವುದಿಲ್ಲ. ಬದಲಾಗಿ ಹೀಗೆ ರೂಪಿಸಿದ ಯೋಜನೆಗಳು ಅಥವಾ ಜಾರಿಗೊಳಿಸಲಾದ ಭಾಷಾನೀತಿಗಳೇ ಅಲ್ಲಿನ ಜನತೆ, ಆಡಳಿತಗಾರರು ಮತ್ತು ವಿದ್ಯಾರ್ಥಿಗಳಿಗೆ ಸಮಸ್ಯೆಗಳಾಗಿ ಪರಿಣಮಿಸುತ್ತವೆ. ಏಕೀಕರಣ ನಂತರದ ಕರ್ನಾಟಕದಲ್ಲಿ ಆಗಿರುವ' ಸಮಸ್ಯೆ ಇದೇ. ಇಲ್ಲಿನ ಆಡಳಿತ, ಶಿಕ್ಷಣ, ಉದ್ಯೋಗಗಳಲ್ಲಿ ಬಳಕೆಯಾಗುತ್ತಿರುವ ಭಾಷೆಗಳ ನಡುವೆ ಹೊಂದಾಣಿಕೆ ಇಲ್ಲ. ಇಲ್ಲಿ ಒಂದೊಂದು ಭಾಷೆಗಳನ್ನು ಕಲಿಸುತ್ತಿರುವ ಮತ್ತು ಬಳಸುತ್ತಿರುವ ಉದ್ದೇಶಗಳು ಬೇರೆಬೇರೆ ಇವೆ. ಇದರಿಂದ ಸಮಸ್ಯೆಗಳ ಸ್ವರೂಪ ಬೇರೆಬೇರೆಯಾಗಿವೆ. ಇವುಗಳು ಈ ಅಧ್ಯಯನದಿಂದ ತಿಳಿಯುತ್ತದೆ.

೮. ಏಕೀಕರಣ ನಂತರದ ಕರ್ನಾಟಕದಲ್ಲಿ ಹಲವು ಭಾಷೆಗಳ ಕಲಿಕೆ ಮತ್ತು ಬಳಕೆ ಅನಿವಾರ್ಯವಾಗಿದೆ. ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಶ್ ಭಾಷೆಗಳ ಪಾತ್ರ ಪ್ರಧಾನವಾದುದು. ಆದರೆ ಕರ್ನಾಟಕದಲ್ಲಿರುವ ಎಲ್ಲಾ ಶಾಲೆಗಳಲ್ಲಿ ಈ ಎರಡೂ ಭಾಷೆಗಳ ಕಲಿಕೆಗೆ ಪೂರಕ ವಾತಾವರಣ ಇಲ್ಲ. ಇದು ಇಂಗ್ಲಿಶ್ ಭಾಷೆಯ ವಿಚಾರದಲ್ಲಿ ಸ್ವಲ್ಪ ಹೆಚ್ಚಾಗಿಯೇ ಇದೆ. ಇದರಿಂದಾಗಿ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಅನುತ್ತೀರ್ಣಗೊಂಡು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಹೀಗಾಗಿ ಯಾವ ಭಾಷೆಯಿಲ್ಲದೆ ಬದುಕಿಲ್ಲ ಎಂದು

ನಂಬಲಾಗಿದೆಯೋ ಅಂತಹ ಭಾಷೆಯೇ ವಿದ್ಯಾರ್ಥಿಗಳ ಬದುಕಿಗೆ ಆಧಾರವಾಗದೆ ಅವರ ಕಲಿಕೆಯ ಹಕ್ಕನ್ನು ಕಸಿದುಕೊಂಡಿದೆ. ಹಾಗೆಯೇ ಪ್ರತಿಭಾವಂತ ವಿದ್ಯಾರ್ಥಿಗಳ ಉದ್ಯೋಗದ ಆಸೆಗಳನ್ನು ನಾಶಗೊಳಿಸಿ, ಅವರನ್ನು ಭಯದ ನೆರಳಿನಲ್ಲಿಟ್ಟಿದೆ. ಇದು ಕರ್ನಾಟಕದಲ್ಲಿ ಶಿಕ್ಷಿತರ ಸಂಖ್ಯೆ ಹೆಚ್ಚಾದಂತೆಲ್ಲಾ ಭಾಷಾಅಸಮಾನತೆಗೆ ಕಾರಣವಾಗಿ ಸಮಸ್ಯೆಗಳನ್ನು ತೀವ್ರಗೊಳಿಸುತ್ತಿದೆ.

ಈ ಎಲ್ಲಾ ಫಲಿತಗಳನ್ನು ಆಧರಿಸಿ ಕೆಲವು ವಿಚಾರಗಳನ್ನು ಹೇಳುವುದಾದರೆ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ಸರ್ಕಾರಗಳು ಭಾಷಾನೀತಿಗಳನ್ನು ಜಾರಿಗೆ ತಂದಿವೆ. ಈ ಭಾಷಾನೀತಿಗಳಿಂದ ಭಾಷಾಸಮಸ್ಯೆಗಳು ಪರಿಹಾರ ಆಗಿರುವುದಕ್ಕಿಂತ ಹೊಸ ಸಮಸ್ಯೆಗಳ ಉದ್ಭವ ಆಗಿರುವುದು ಈ ಅಧ್ಯಯನದಿಂದ ತಿಳಿಯುತ್ತದೆ. ಏಕೆಂದರೆ ಕರ್ನಾಟಕ ಏಕೀಕರಣ ಆಗಿರುವುದು ಈಗಾಗಲೇ ಸ್ಪಷ್ಟಪಡಿಸಿಕೊಂಡಿರುವ ಹಾಗೆ ಕನ್ನಡವನ್ನು ಕರ್ನಾಟಕದ ಎಲ್ಲಾ ಕ್ಷೇತ್ರಗಳಲ್ಲಿ ಬಳಕೆಗೆ ತರಬೇಕು ಎಂಬ ಉದ್ದೇಶದಿಂದ ಆರಂಭವಾಗಿರುವ ಹೋರಾಟದಿಂದ. ಇದರಿಂದ ಕರ್ನಾಟಕ ಏಕೀಕರಣದ ಆದ ನಂತರ ಇಲ್ಲಿ ಆಡಳಿತ ನಡೆಸಿರುವ ಸರ್ಕಾರಗಳ ಮೇಲೆ ಸಹಜವಾಗಿಯೇ ಕನ್ನಡವನ್ನು ಬಳಕೆಗೆ ತರುವ ಒತ್ತಡವಿತ್ತು. ಇದರಿಂದಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಕರ್ನಾಟಕದ ಎಲ್ಲಾ ಕ್ಷೇತ್ರಗಳಲ್ಲಿ ಕನ್ನಡವನ್ನು ಬಳಕೆಗೆ ತರುವ ಪ್ರಯತ್ನಗಳನ್ನು ಮಾಡಿವೆ. ಇದರಲ್ಲಿ ಸಂಪೂರ್ಣ ಯಶಸ್ಸನ್ನು ಕಾಣಲಾಗದಿದ್ದರು ಸುಧಾರಣೆಯಂತೂ ಕಂಡಿದೆ. ಹೀಗೆ ಕರ್ನಾಟಕದ ಎಲ್ಲಾ ಕ್ಷೇತ್ರಗಳಲ್ಲಿ ಕನ್ನಡವನ್ನು ಬಳಕೆಗೆ ತರುವ ಪ್ರಯತ್ನಗಳು ಸಾಗುತ್ತಿರುವ ಹೊತ್ತಿಗಾಗಲೇ ಭಾರತ ಸ್ವತಂತ್ರಗೊಂಡಿದ್ದುದರಿಂದ ದೇಶದ ಆಡಳಿತದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗೆಗೆ ಸುದೀರ್ಘ ಚರ್ಚೆಗಳು ನಡೆದು ಇಂಗ್ಲಿಶ್ ಮತ್ತು ಹಿಂದಿ ಭಾಷೆಗಳ ಬಳಕೆಗೆ ಅವಕಾಶ ಕಲ್ಪಿಸಲಾಗಿದೆ. ಇದರಿಂದಾಗಿ ರಾಜ್ಯದ ಆಡಳಿತದಲ್ಲಿ ಇಂಗ್ಲಿಶ್‌ನ್ನು ಮುಂದುವರೆಸುವ ಮತ್ತು ಹಿಂದಿಯನ್ನು ಹೊಸದಾಗಿ ಬಳಸುವು ಅನಿವಾರ್ಯತೆ ಉಂಟಾಗಿದೆ.

ಇವುಗಳ ಜೊತೆಗೆ ಭಾರತ ಸಂವಿಧಾನದಲ್ಲಿ ಭಾಷಾಅಲ್ಪಸಂಖ್ಯಾತರ ಭಾಷಾಕಲಿಕೆ ಮತ್ತು ಬಳಕೆ ಸಂಬಂಧಿಸಿದ ಹಾಗೆ ಅಳವಡಿಸಿರುವ ನಿಯಮಗಳು ಇವೆ. ಇವುಗಳನ್ನು ಮೀರಿ ರಾಜ್ಯಸರ್ಕಾರ ಭಾಷಾನೀತಿಯನ್ನು ಜಾರಿಗೊಳಿಸಲು ಸಾಧ್ಯವಿಲ್ಲ. ಇದರಿಂದಾಗಿ ಏಕೀಕರಣದ ನಂತರ ಕರ್ನಾಟಕದ ಶಿಕ್ಷಣದಲ್ಲಿ ಹಲವು ಭಾಷೆಗಳನ್ನು ಕಲಿಸುವುದು ಮತ್ತು ಆಡಳಿತ, ವ್ಯವಹಾರಗಳಲ್ಲಿ ಬಳಸುವುದು ಅನಿವಾರ್ಯವಾಗಿದೆ. ಇವುಗಳ ಜೊತೆಗೆ ಕರ್ನಾಟಕದ ಬಹುಸಂಖ್ಯಾತರಾದ ಕನ್ನಡಿಗರ ಭಾಷೆ, ಸಾಹಿತ್ಯ, ಸಂಸ್ಕೃತಿ. ಸೇರಿದಂತೆ ಅವರ ಅಸ್ಥಿತ್ವಕ್ಕೆ ಇಂಗ್ಲಿಶ್ ಪೆಟ್ಟುನೀಡುತ್ತಿದೆ. ಇದರಿಂದ ರಾಜ್ಯದಲ್ಲಿ ಇಂಗ್ಲಿಶ್ ಭಾಷಾಮಾಧ್ಯಮದ ಕಲಿಕೆ ಮತ್ತು ಬಳಕೆಯನ್ನು ನಿಯಂತ್ರಿಸಬೇಕು, ಕನ್ನಡ ಭಾಷಾಮಾಧ್ಯಮದ ಕಲಿಕೆ ಮತ್ತು ಬಳಕೆಯನ್ನು ಹೆಚ್ಚಿಸಬೇಕು ಎಂಬ ಒತ್ತಡಗಳು ಹೆಚ್ಚಾಗಿವೆ. ಇಂತಹ ಒತ್ತಡಗಳ ಕರ್ನಾಟಕ ಏಕೀಕರಣ ಆದ ನಂತರ ಖಾಸಗಿ ಕ್ಷೇತ್ರ ಪ್ರಬಲವಾಗಿ ಬೆಳೆದು, ಅದರಲ್ಲೂ ಜಾಗತೀಕರಣದ ಉಗಮ ಆದ ನಂತರ ಕರ್ನಾಟಕದಲ್ಲಿ ಖಾಸಗಿ ಉದ್ಯಮ ಕ್ಷೇತ್ರ ಮತ್ತಷ್ಟು

ಪ್ರಬಲವಾಗಿ ಬೆಳೆದು ಇಂಗ್ಲಿಶ್ ಭಾಷೆಯ ಬೇಡಿಕೆಯನ್ನು ಹೆಚ್ಚಿಸಿದೆ. ಇದರಿಂದಾಗಿ ಇಂಗ್ಲಿಶ್ ಭಾಷಾಕಲಿಕೆ ಅನಿವಾರ್ಯವಾಗಿದೆ. ಅದಕ್ಕೆ ಪೂರಕವಾಗಿ ರಾಜ್ಯಶಿಕ್ಷಣ ಕ್ರಮದಲ್ಲಿ ಇಂಗ್ಲಿಶ್‌ನ್ನು ಕಲಿಸಲಾಗುತ್ತಿದ್ದರೂ ಅದರಲ್ಲಿ 'ಶಿಕ್ಷಣ ಮತ್ತು ಭಾಷೆ' ಎಂಬ ಅಧ್ಯಾಯದಲ್ಲಿ ಚರ್ಚಿಸಿರುವ ಹಾಗೆ ಸಾಕಷ್ಟು ಸಮಸ್ಯೆಗಳು ಇವೆ.

ಇವುಗಳ ನಡುವೆಯೇ ಕರ್ನಾಟಕ ಸರ್ಕಾರ ಭಾರತ ಸಂವಿಧಾನದಲ್ಲಿ ಭಾಷಾಅಲ್ಪಸಂಖ್ಯಾತ ಭಾಷೆಗಳ ಕಲಿಕೆ ಮತ್ತು ಬಳಕೆಗೆ ಸಂಬಂಧಿಸಿದಂತೆ ಅಳವಡಿಸಿರುವ ನಿಯಮಗಳನ್ನು ಪಾಲನೆ ಮಾಡಲು ಭಾಷಾನೀತಿಗಳನ್ನು ಹೊರಡಿಸಿ ಅವುಗಳ ಕಲಿಕೆ ಮತ್ತು ಬಳಕೆಗೆ ವ್ಯವಸ್ಥೆ ಮಾಡಬೇಕಾಗಿದೆ. ಹೀಗೆ ಕರ್ನಾಟಕ ಏಕೀಕರಣ ಆದ ನಂತರದ ಕರ್ನಾಟಕದಲ್ಲಿ ಒಂದು ಕಡೆ ರಾಜ್ಯದ ಆಡಳಿತದ ಎಲ್ಲಾ ಹಂತಗಳಲ್ಲಿ ಕನ್ನಡವನ್ನೇ ಬಳಕೆಗೆ ತರಬೇಕು ಎಂಬ ಒತ್ತಡಗಳು ಒಂದು ಕಡೆ, ದೇಶದ ಆಡಳಿತದಲ್ಲಿ ಇಂಗ್ಲಿಶ್ ಮತ್ತು ಹಿಂದಿಯನ್ನು ಬಳಕೆಗೆ ತಂದಿರುವುದರಿಂದ ಅವುಗಳ ಕಲಿಕೆ ಮತ್ತು ಬಳಕೆಗೆ ವ್ಯವಸ್ಥೆ ಮಾಡಬೇಕಿರುವುದು ಮತ್ತೊಂದು ಕಡೆ ಇವುಗಳ ನಡುವೆ ಏಕೀಕರಣದ ನಂತರ ಕರ್ನಾಟಕದಲ್ಲಿರುವ ಎಲ್ಲಾ ಮಕ್ಕಳಿಗೂ ಶಿಕ್ಷಣ ಕೊಡುವುದು ಕಡ್ಡಾಯವಾಗಿರುವುದರಿಂದ ಮತ್ತು ಆ ಶಿಕ್ಷಣವನ್ನು ಮಾತೃಭಾಷಾಮಾಧ್ಯಮದಲ್ಲಿ ಅಥವಾ ಕನ್ನಡದಲ್ಲಿಯೇ ಕಲಿಸಬೇಕು ಎಂಬ ನಿಯಮವನ್ನು ಅಳವಡಿಸಿರುವುದರಿಂದ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷೆಗಳ ಕಲಿಕೆ ಮತ್ತು ಬಳಕೆಯ ಸಮಸ್ಯೆಗಳು ತೀವ್ರಗೊಂಡಿವೆ.

ಇವುಗಳನ್ನು ಪರಿಹರಿಸುವ ಉದ್ದೇಶದಿಂದ ಕರ್ನಾಟಕ ಏಕೀಕರಣ ಆದ ನಂತರದ ಈ ಪ್ರಬಂಧದಲ್ಲಿ ಇದುವರೆಗೆ ಉಲ್ಲೇಖಿಸಿರುವ ಹಾಗೆ ಹಲವು ಯೋಜನೆಗಳನ್ನು ರೂಪಿಸಲಾಗಿದೆ. ಹಾಗೆಯೆ ಭಾಷಾನೀತಿಗಳನ್ನು ಜಾರಿಗೆ ತರಲಾಗಿದೆ. ಆದರೆ ಈ ಭಾಷಾಯೋಜನೆಗಳನ್ನು ರೂಪಿಸುವುದರ ಹಿಂದೆ ಮತ್ತು ಭಾಷಾನೀತಿಗಳನ್ನು ಜಾರಿಗೆ ತರುವುದರ ಹಿಂದೆ ಈಗಾಗಲೇ ಚರ್ಚಿಸಿರುವ ಹಾಗೆ ರಾಜಕೀಯವಾದ, ಆರ್ಥಿಕವಾದ, ಭಾವನಾತ್ಮಕವಾದ, ಅಭಿಮಾನದ, ಭಾಷಾಸಮುದಾಯಗಳ ಅಸ್ಥಿತ್ವದ ಬಗೆಗಿನ ಒತ್ತಡಗಳು ಇರುವುದರಿಂದ ಕರ್ನಾಟಕದಲ್ಲಿನ ಭಾಷಾಸಮಸ್ಯೆಗಳಿಗೆ ಸೂಕ್ತಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಆದರೂ ಹಲವು ಭಾಷೆಗಳನ್ನು ಕಲಿಯುವಂತೆ ಬಳಸುವಂತೆ ಒತ್ತಡಗಳನ್ನು ಸೃಷ್ಟಿಸಲಾಗಿದೆ. ಹೀಗಾಗಿ ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ಜಾರಿಗೆ ತರಲಾಗಿರುವ ಭಾಷಾನೀತಿಗಳೇ ಸಮಸ್ಯೆಗಳಾಗಿ ಪರಿಣಮಿಸಿ ಹೊಸಸ್ವರೂಪ ಪಡೆದುಕೊಂಡಿವೆ. ಇವುಗಳ ಬಗೆಗೆ ಕರ್ನಾಟಕದಲ್ಲಿ ಇದುವರೆಗೆ ಅಧ್ಯಯನದ ಕೆಲಸ ಆಗಿರಲಿಲ್ಲ. ಹೀಗಾಗಿ ಅಧ್ಯಯನದ ಉದ್ದೇಶದಲ್ಲಿ ಸ್ಪಷ್ಟಪಡಿಸಿರುವ ಹಾಗೆ ಈ ಅಧ್ಯಯನ ಕೈಗೊಳ್ಳಲಾಗಿದೆ.

ಈ ಪ್ರಬಂಧದ ವಿಷಯಕ್ಕೆ ಸಂಬಂಧಿಸಿದ ಹಾಗೆ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನ ಕಾರ್ಯ ಆರಂಭಿಸಿದಾಗ ಪ್ರಸ್ತುತ ಅಧ್ಯಯನದ ವಿಷಯವಾದ 'ಕರ್ನಾಟಕದಲ್ಲಿ ಭಾಷಾಯೋಜನೆ ಮತ್ತು ಭಾಷಾನೀತಿ: ಸಮಸ್ಯೆ, ಸಾಧ್ಯತೆಗಳು' ಎಂಬ ವಿಷಯದ ಆಳ ತುಂಬಾ ವಿಸ್ತಾರವಾದುದು ಎಂಬುದು ತಿಳಿಯಿತು. ಈ ವಿಷಯ ಕುರಿತು ಸಂಪೂರ್ಣವಾಗಿ ಅಧ್ಯಯನ ಮಾಡಿ ಪ್ರಬಂಧ

ಸಿದ್ಧಪಡಿಸುವುದರಿಂದ ಅಧ್ಯಯನಕ್ಕೆ ಒಂದು ಚೌಕಟ್ಟನ್ನು ಒದಗಿಸಿಕೊಳ್ಳುವುದು ಕಷ್ಟವಾಗುತ್ತದೆ ಎಂದು ಮನವರಿಕೆಯಾಯಿತು. ಆಗ ಈ ಪ್ರಬಂಧವನ್ನು ಏಕೀಕರಣ ನಂತರದ ಕರ್ನಾಟಕದಲ್ಲಿ ರೂಪಿತವಾದ ಭಾಷಾಯೋಜನೆಗಳು ಮತ್ತು ಜಾರಿಯಾದ ಭಾಷಾನೀತಿಗಳಿಗೆ ಸೀಮಿತಗೊಳಿಸಿ ಕೊಳ್ಳಲಾಯಿತು. ಆದರೂ ಏಕೀಕರಣ ನಂತರದ ಕರ್ನಾಟಕದಲ್ಲಿ ಉದ್ಭವವಾಗಿರುವ ಭಾಷಾಸಮಸ್ಯೆಗಳಿಗೆ ಏಕೀಕರಣ ಪೂರ್ವ ಕರ್ನಾಟಕದಲ್ಲಿನ ಭಾಷಾಕಲಿಕೆ ಮತ್ತು ಬಳಕೆಯ ತನ್ನದೇ ಆದ ಪರಿಣಾಮ ಬೀರಿದೆ. ಇದರಿಂದ ಈ ಅಧ್ಯಯನದಲ್ಲಿ ಏಕೀಕರಣ ಪೂರ್ವ ಕರ್ನಾಟಕದ ಭಾಷಾಕಲಿಕೆ ಮತ್ತು ಬಳಕೆಯನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಏಕೀಕರಣ ನಂತರದ ಕರ್ನಾಟಕದ ಭಾಷಾಸಮಸ್ಯೆಯನ್ನೇ ಪ್ರಧಾನವಾಗಿಸಿ ಅಧ್ಯಯನ ಆರಂಭಿಸಿದಾಗ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷೆಗಳನ್ನು ಕಲಿಸುವುದಕ್ಕೆ ಬಳಸುವುದಕ್ಕೆ ಸಂಬಂಧಿಸಿದಂತೆ ಜಾರಿಗೆ ತಂದ ಭಾಷಾನೀತಿಗಳು, ಆ ಪ್ರಕಾರ ಭಾಷೆಗಳನ್ನು ಕಲಿಸಲು, ಬಳಸಲು ಎದುರಾದ ತೊಡಕುಗಳು. ವಿವಿಧ ಇಲಾಖೆಗಳಲ್ಲಿನ ಭಾಷಾಬಳಕೆಯ ಸ್ವರೂಪ, ಅಲ್ಲಿನ ಸಮಸ್ಯೆಗಳು ಬೇರೆಬೇರೆ ಇದ್ದವು. ಹೀಗಾಗಿ ಕರ್ನಾಟಕ ಏಕೀಕರಣದ ನಂತರದ ಕರ್ನಾಟಕದಲ್ಲಿನ ಎಲ್ಲಾ ಇಲಾಖೆಗಳ ಭಾಷಾಬಳಕೆಯ ಸ್ವರೂಪ ಮತ್ತು ಬಳಕೆಯ ಸಮಸ್ಯೆಗಳನ್ನು ಒಟ್ಟುಗೂಡಿಸಿ ಪ್ರಬಂಧವನ್ನು ಸಿದ್ದಗೊಳಿಸುವುದು ಪ್ರಬಂಧಕ್ಕೆ ಒಂದು ಚೌಕಟ್ಟನ್ನು ಒದಗಿಸಿಕೊಳ್ಳುವ ಉದ್ದೇಶದಿಂದ ಕಷ್ಟವಾಯಿತು. ಇದರಿಂದಾಗಿ ಜನರು ಹೆಚ್ಚು ಸಂಪರ್ಕದಲ್ಲಿರುವ ಹೆಚ್ಚು ಸಮಸ್ಯೆಗೆ ಒಳಗಾಗಿರುವ ಕ್ಷೇತ್ರಗಳಾದ ಶಿಕ್ಷಣ, ಆಡಳಿತ ಮತ್ತು ನ್ಯಾಯಾಲಯಗಳಲ್ಲಿ ಬಳಕೆಯಾಗುವ ಭಾಷೆಗಳ ಸ್ವರೂಪ ಮತ್ತು ಅಲ್ಲಿನ ಸಮಸ್ಯೆಗಳನ್ನು ಮಾತ್ರ ಕೇಂದ್ರೀಕರಿಸಿಕೊಂಡು ಅಧ್ಯಯನಕ್ಕೆ ಎದುರಾದ ತೊಡಕನ್ನು ಬಿಡಿಸಿಕೊಳ್ಳಲಾಯಿತು.

ಆದರೂ ಶಿಕ್ಷಣದಲ್ಲಿ ಭಾಷೆಗಳನ್ನು ಕಲಿಸುವುದಕ್ಕೆ ಸಂಬಂಧಿಸಿದ ಹಾಗೆ ರೂಪಿಸಲಾಗಿರುವ ಭಾಷಾಯೋಜನೆಗಳು ಮತ್ತು ಜಾರಿಗೊಳಿಸಲಾಗಿರುವ ಭಾಷಾನೀತಿಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ತೊಡಗಿದಾಗ ಶಿಕ್ಷಣದಲ್ಲಿ ಭಾಷೆಗಳ ಕಲಿಸುವಿಕೆಯ ಸ್ವರೂಪ, ಅಲ್ಲಿನ ಸಮಸ್ಯೆಗಳ ವಿಂಗಡನೆಯ ಬಗೆಗೆ ಮತ್ತೆ ತೊಡಕುಗಳು ಎದುರಾದವು. ಅದರಲ್ಲಿ ಪ್ರಮುಖವಾಗಿ ಮಗುವಿನ ಕಲಿಕಾ ಹಂತದ ಆಧಾರವಾಗಿ ಇರುವ ಭಾಷಾಬಳಕೆಯ ಸ್ವರೂಪ ಮತ್ತು ಸಮಸ್ಯೆಗಳನ್ನು ಗುರುತಿಸಬೇಕೆ? ಅಥವಾ ಪ್ರಥಮ ಭಾಷೆ, ದ್ವಿತೀಯ ಭಾಷೆ ಮತ್ತು ತೃತೀಯ ಭಾಷೆಯಾಗಿ ಭಾಷೆಗಳನ್ನು ಕಲಿಸುತ್ತಿರುವುದರಿಂದ ನಿರ್ಮಾಣವಾಗಿರುವ ಭಾಷಾಕಲಿಸುವಿಕೆಯ ಸ್ವರೂಪ ಮತ್ತು ಸಮಸ್ಯೆಗಳ ರೀತಿಯಲ್ಲಿ ವಿಂಗಡಿಸಿಕೊಳ್ಳಬೇಕೆ ಎಂದು. ವಿವಿಧ ಹಂತಗಳ ಭಾಷಾಕಲಿಸುವಿಕೆ, ಅದರ ಸ್ವರೂಪ ಮತ್ತು ಸಮಸ್ಯೆಗಳನ್ನು ಪ್ರತ್ಯೇಕವಾಗಿಸಿಕೊಂಡು ಪ್ರಥಮ ಭಾಷೆ, ದ್ವಿತೀಯ ಭಾಷೆ ಮತ್ತು ತೃತೀಯ ಭಾಷೆಗಳ ಕಲಿಕೆ ಅಥವಾ ಕಲಿಸುವಿಕೆಯ ಸ್ವರೂಪ ಮತ್ತು ಸಮಸ್ಯೆಗಳನ್ನು ಕುರಿತು ಅಧ್ಯಯನಕ್ಕೆ ತೊಡಗಿದರೆ ಇದೇ ಒಂದು ಸಂಶೋಧನಾ ಪ್ರಬಂಧ ಆಗುವಷ್ಟು ವಿಸ್ತಾರವಾಗಿದ್ದರಿಂದ ಅದನ್ನು ಗೌಣ ಮಾಡಿ

ಪ್ರಸ್ತುತ ಪ್ರಬಂಧದಲ್ಲಿ ಪ್ರಥಮ ಭಾಷಾಕಲಿಕೆ, ದ್ವಿತೀಯ ಭಾಷಾಕಲಿಕೆ ಮತ್ತು ತೃತೀಯ ಭಾಷಾಕಲಿಕೆಗಳನ್ನು ಪ್ರಧಾನವಾಗಿಸಿಕೊಳ್ಳಲಾಗಿದೆ.

ಇದರಲ್ಲಿಯೂ ಪ್ರಥಮ ಭಾಷೆಯಾಗಿ ಮಾತೃಭಾಷಾಕಲಿಕೆ ಮತ್ತು ಸಮಸ್ಯೆಗಳು ಹಾಗೂ ದ್ವಿತೀಯ ಭಾಷಾಕಲಿಕೆಯಲ್ಲಿ ಇಂಗ್ಲಿಶ್ ಭಾಷಾಕಲಿಕೆ ಮತ್ತು ಸಮಸ್ಯೆಗಳನ್ನು ಪ್ರಧಾನವಾಗಿಸಿಕೊಳ್ಳಲಾಗಿದೆ. ಉಳಿದ ಭಾಷೆಗಳ ಕಲಿಕೆ ಮತ್ತು ಸಮಸ್ಯೆಗಳನ್ನು ಗೌಣ ಮಾಡಲಾಗಿದೆ. ಏಕೆಂದರೆ ಮೇಲೆ ಪ್ರಧಾನವಾಗಿಸಿಕೊಳ್ಳಲಾಗಿರುವ ಭಾಷೆಗಳನ್ನು ಕಲಿಸುವ ಉದ್ದೇಶ ಮತ್ತು ಏಕೀಕರಣ ನಂತರದ ಕರ್ನಾಟಕದಲ್ಲಿ ಉದ್ಭವವಾಗಿರುವ ಭಾಷಾಸಮಸ್ಯೆಗಳ ನಡುವೆ ಒಂದು ರೀತಿಯ ನಿಕಟ ಸಂಬಂಧವಿದೆ. ಇದರರ್ಥ ಉಳಿದವುಗಳ ನಡುವೆ ನಿಕಟ ಸಂಬಂಧ ಇಲ್ಲವೆಂದು ಅರ್ಥವಲ್ಲ. ಅವುಗಳ ನಡುವೆಯೂ ಇದೆ. ಆದರೆ ಅವು ಏಕೀಕರಣ ನಂತರದ ಕರ್ನಾಟಕದಲ್ಲಿ ಅಂತಹ ತೀವ್ರಸ್ವರೂಪದ ಸಮಸ್ಯೆಗಳನ್ನು ಹುಟ್ಟುಹಾಕಿಲ್ಲ. ಜೊತೆಗೆ ಅವುಗಳ ಬಗೆಗೆ ಇಲ್ಲಿ ಚರ್ಚೆ ಮಾಡದೆ ಇರುವುದು ಅವುಗಳನ್ನು ಕಡೆಗಣಿಸುವ ಉದ್ದೇಶದಿಂದಲ್ಲ. ಬದಲಾಗಿ ಅಧ್ಯಯನದ ವ್ಯಾಪ್ತಿಯನ್ನು ಮಿತಗೊಳಿಸಿಕೊಳ್ಳುವ ಉದ್ದೇಶದಿಂದ. ಮುಂದೆ ಇವುಗಳ ಬಗೆಗೆಯೇ ಅಧ್ಯಯನ ಕೈಗೊಳ್ಳಬಹುದು. ಹಾಗೆಯೇ ಈ ಪ್ರಬಂಧದಲ್ಲಿ ಏಕೀಕರಣ ನಂತರದ ಕರ್ನಾಟಕದಲ್ಲಿನ ಶಿಕ್ಷಣ, ಆಡಳಿತ, ನ್ಯಾಯಾಂಗ ಇಲಾಖೆಗಳನ್ನು ಕೇಂದ್ರೀಕರಿಸಿಕೊಂಡು ಅಧ್ಯಯನ ಪೂರ್ಣಗೊಳಿಸಿರುವ ಹಾಗೆ ಬ್ಯಾಂಕಿಂಗ್, ಅಂಚೆಕಚೇರಿ, ರೈಲ್ವೇ, ಮಾಧ್ಯಮಗಳು, ಪೋಲೀಸ್, ಸರ್ಕಾರೇತರ ಸಂಘಸಂಸ್ಥೆಗಳು, ಖಾಸಗಿ ಕ್ಷೇತ್ರದ ಉದ್ಯಮ ಕ್ಷೇತ್ರಗಳಲ್ಲಿನ ಭಾಷಾಬಳಕೆ ಮತ್ತು ಸಮಸ್ಯೆಗಳು ಬಗೆಗೆ ಅಧ್ಯಯನ ಕೈಗೊಳ್ಳಬಹುದಾಗಿದೆ.

ಇದುವರೆಗೆ ಈ ಪ್ರಬಂಧದಲ್ಲಿ ಚರ್ಚಿಸಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನದ ಕೊನೆಯಲ್ಲಿ ಕೆಲವು ವಿಚಾರಗಳನ್ನು ಹೇಳುವುದಾದರೆ ಏಕೀಕರಣ ನಂತರದ ಕರ್ನಾಟಕದಲ್ಲಿ ರೂಪಿತವಾಗಿರುವ ಭಾಷಾಯೋಜನೆ ಮತ್ತು ಜಾರಿಯಾಗಿರುವ ಭಾಷಾನೀತಿಗಳು ಇಲ್ಲಿನ ಬಹುಸಂಖ್ಯಾತರಾದ ಕನ್ನಡಿಗರು ಮತ್ತು ರಾಜಕೀಯವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಪ್ರಬಲವಾಗಿರುವ ಸಮುದಾಯಗಳ ಪರವಾಗಿ ಇವೆ. ಆದರೂ ಇವುಗಳ ಕಲಿಕೆ ಮತ್ತು ಬಳಕೆಗೆ ಪೂರಕ ಸಿದ್ಧತೆ ಮತ್ತು ಅಗತ್ಯ ಪರಿಕರಗಳ ಕೊರತೆ, ವೈಜ್ಞಾನಿಕ ಕ್ಷೇತ್ರದಲ್ಲಿ ಆಗಿರುವ ಬದಲಾವಣೆಗಳು, ಇವುಗಳ ಪರಿಣಾಮವಾಗಿ ಕಾಲದಿಂದ ಕಾಲಕ್ಕೆ ಭಾಷಾಬೇಡಿಕೆಯಲ್ಲಿ ಉಂಟಾಗಿರುವ ಬದಲಾವಣೆಗಳು ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ಜಾರಿಗೆ ತಂದಿರುವ ಭಾಷಾನೀತಿಗಳು ಸಂಪೂರ್ಣವಾಗಿ ಅನುಷ್ಠಾನಗೊಳ್ಳದಿರಲು ಕಾರಣವಾಗಿವೆ. ಇದರ ನಡುವೆಯು ಕರ್ನಾಟಕದಲ್ಲಿ ಆಡಳಿತ ನಡೆಸಿರುವ ಸರ್ಕಾರಗಳು ತಾನು ಜಾರಿಗೆ ತಂದಿರುವ ಭಾಷಾನೀತಿಯ ಪ್ರಕಾರ ರಾಜ್ಯದ ಜನತೆ, ಅಧಿಕಾರಿಗಳು, ನೌಕರರು ಭಾಷೆಗಳನ್ನು ಕಲಿಯುವಂತೆ, ಬಳಸುವಂತೆ ಒತ್ತಡ ಉಂಟುಮಾಡಿವೆ. ಇದರಿಂದಾಗಿ ಏಕೀಕರಣ ನಂತರದ ಕರ್ನಾಟಕದಲ್ಲಿ ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ಜಾರಿಗೆ ತರಲಾಗಿರುವ ಭಾಷಾನೀತಿಗಳು ಇಲ್ಲಿನ ಜನರ ಶಿಕ್ಷಣ, ಉದ್ಯೋಗ, ಬದುಕುಗಳಿಗೆ ಮಾರಕವಾಗಿ ಪರಿಣಮಿಸಿವೆ. ಇದರಿಂದ ಏಕೀಕರಣ ನಂತರದ

ಕರ್ನಾಟಕದಲ್ಲಿನ ಭಾಷಾಸಮಸ್ಯೆಗಳು ಏಕೀಕರಣ ಪೂರ್ವ ಕರ್ನಾಟಕದ ಭಾಷಾಸಮಸ್ಯೆಗಳಿಗಿಂತ ಭೀಕರವಾಗಿ ಕಾಣುತ್ತಿವೆ. ಹೀಗಾಗಿ ಇವುಗಳನ್ನು ಸರಿಪಡಿಸುವ ಕಾರ್ಯ ಆರಂಭಗೊಳ್ಳಬೇಕು. ಇಲ್ಲದಿದ್ದರೆ ಭಾಷಾಸಮಸ್ಯೆಗಳ ಪರಿಹಾರಕ್ಕಾಗಿ ರೂಪಿಸಲಾಗಿರುವ ಭಾಷಾಯೋಜನೆ ಮತ್ತು ಜಾರಿಗೊಳಿಸಲಾಗಿರುವ ಭಾಷಾನೀತಿಗಳು ಜನರ ಬದುಕಿಗೆ ಮಾರಕವಾಗಿ ಜನಸಮುದಾಯಗಳ ಅಸ್ತಿತ್ವವನ್ನು ನಾಶಗೊಳಿಸುತ್ತವೆ. ಆದುದರಿಂದ ಏಕೀಕರಣ ನಂತರದ ಕರ್ನಾಟಕದಲ್ಲಿನ ಭಾಷಾಸಮಸ್ಯೆಗಳಿಗೆ ಹೊಸ ಆಲೋಚನಾ ಕ್ರಮದಲ್ಲಿ ಪರಿಹಾರಗಳನ್ನು ಹುಡುಕಿ ಬಗೆಹರಿಸಬೇಕಾದ ತುರ್ತು ಇದೆ.

* * * * *

# ಗ್ರಂಥಸೂಚಿ


**ಪ್ರಾಥಮಿಕ ಆಕರಗಳು (ಕನ್ನಡ)**

೧. *ಆಡಳಿತದಲ್ಲಿ ಕನ್ನಡ: ಪ್ರಮುಖ ಆದೇಶಗಳು–ಸುತ್ತೋಲೆಗಳು*, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು

೨. *ಆಡಳಿತ ಕನ್ನಡ: ಕಾರ್ಯಶಿಬಿರ ಕೈಪಿಡಿ*, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೯

೩. *ಆಡಳಿತ ಕನ್ನಡ ಅನುಷ್ಠಾನ: ಆದೇಶಗಳ ಸಂಕಲನ*, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೧೯೯೩

೪. *ರಾಜಭಾಷಾ ಆಯೋಗದ ವರದಿ*, ಆದರ್ಶ ಮುದ್ರಣಾಲಯ, ಹುಬ್ಬಳ್ಳಿ, ೧೯೫೬

೫. *ಶಿಕ್ಷಣ ಮತ್ತು ಮಾಧ್ಯಮ– ವರದಿ*, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೧

**ಪ್ರಾಥಮಿಕ ಆಕರಗಳು (ಇಂಗ್ಲಿಶ್)**

*1.* *Education and national development: Report of the education commission 1964-66*, NCERT, New Delhi, 1970

*2.* *Report of the Commissioner for linguistic minorities (seventh report)*, Ministry of Home Affairs, Government of India, 1965

**ಪೂರಕ ಆಕರಗಳು (ಕನ್ನಡ)**

೧. ಅರ್ಜುನ ತಾ. ಕೋರಟಕರ, *ಭಾಷೆ ಬದುಕು ಸಾಹಿತ್ಯ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭

೨. ಅನಂತಮೂರ್ತಿ.ಯು.ಆರ್, *ಕನ್ನಡ–ಕರ್ನಾಟಕ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,೨೦೧೦

೩. ಅಶೋಕಕುಮಾರ ರಂಜೇರೆ ಮತ್ತು ಇತರರು, (ಸಂ) *ಆಡಳಿತ ಕನ್ನಡ*, ಕನ್ನಡ ವಿಶ್ವವಿದ್ಯಾಲಯ ಹಂಪಿ ಮತ್ತು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು, ೨೦೧೦

೪. ಅಶೋಕಕುಮಾರ ರಂಜೇರೆ, (ಸಂ) *ಶಿಕ್ಷಣದಲ್ಲಿ ಭಾಷಾಮಾಧ್ಯಮದ ವಾಗ್ವಾದಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩

೫. ಎಚ್ಚೆಸ್ಕೆ, *ಆಡಳಿತ ಕನ್ನಡ*, ಚೇತನ ಬುಕ್ ಹೌಸ್, ಮೈಸೂರು, ೧೯೯೧

೬. ಎಚ್ಚೆಸ್ಕೆ, *ಕನ್ನಡದ ಸ್ಥಿತಿ–ಗತಿ*, ಚೇತನ ಬುಕ್ ಹೌಸ್, ಮೈಸೂರು, ೧೯೯೬

೭. ಕಾಳೇಗೌಡ ನಾಗವಾರ ಮತ್ತು ನಟರಾಜ್ ಹುಳಿಯಾರ್, *ಭಾಷೆ ಮತ್ತು ಇತಿಹಾಸ: ರಾಂ ಮನೋಹರ ಲೋಹಿಯಾ ಬರಹಗಳು*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮

೮. ಕೆರಿಮನಿ.ಸಿ.ವಿ, *ಚೆಲುವ ಕನ್ನಡ*, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೨

೯. ಕೃಷ್ಣ ಕೊಲ್ಹಾರಕುಲಕರ್ಣಿ, *ಅಖಂಡ ಕರ್ನಾಟಕದ ಹೆಜ್ಜೆಗಳು*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೧೦. ಕೆಂಪೇಗೌಡ.ಕೆ, *ಕನ್ನಡ ಭಾಷಾ ಚರಿತ್ರೆ*, ನವಭಾರತಿ ಪ್ರಕಾಶನ, ಬೆಂಗಳೂರು, ೨೦೦೭

೧೧. ಗವಿಮಠ ಬಿ.ಎಸ್, *ಬೆಳಗಾವಿ: ಕನ್ನಡ–ಕನ್ನಡಿಗ*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೧೧

೧೨. ಗುರುಲಿಂಗ ಕಾಪಸೆ, *ಕನ್ನಡ ಕಾವಲು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

೧೩. ಗೋಪಾಲ ಹೆಚ್.ಎಸ್, *ಕರ್ನಾಟಕ ಏಕೀಕರಣದ ಇತಿಹಾಸ*, ಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬
೧೪. ಗೋವಿಂದರಾಜು.ಸಿ.ಆರ್, *ಕನ್ನಡ ಚಳವಳಿಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೧೫. ಗೋವಿಂದರಾಜು.ಸಿ.ಆರ್, *ಗೋಕಾಕ್ ವರದಿ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,೨೦೦೬
೧೬. ಚಂದ್ರಶೇಖರ ಪಾಟೀಲ, *ಕನ್ನಡ ಕನ್ನಡ ಬರ್ರಿ ನಮ್ಮ ಸಂಗಡ*, ಕ.ರಾ.ರ.ಸಾ.ಸಂ ಕೇಂದ್ರ ಕನ್ನಡ ಕ್ರಿಯಾ ಸಮಿತಿ, ಬೆಂಗಳೂರು, ೨೦೦೨
೧೭. ಚಂದ್ರಶೇಖರ ಪಾಟೀಲ, *ಕನ್ನಡ ಕನ್ನಡ ಬರ್ರಿ ನಮ್ಮ ಸಂಗಡ*, ಕಣ್ವ ಪ್ರಕಾಶನ, ಬೆಂಗಳೂರು,೨೦೦೯
೧೮. ಚಂದ್ರಶೇಖರ.ರಾ.ನಂ, *ಕನ್ನಡ ಹೋರಾಟಗಳು*, ಕನ್ನಡ ಗೆಳೆಯರ ಬಳಗ, ಬೆಂಗಳೂರು, ೧೯೯೯
೧೯. ಚಂದ್ರಶೇಖರ್.ಎಸ್, *ವಸಾಹತು ಕಾಲೀನ ಕರ್ನಾಟಕ*, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬
೨೦. ಚಂದ್ರಹಾಸಗುಪ್ತ.ಅ.ರಾ, (ಸಂ), ಆಡಳಿತದಲ್ಲಿ ಕನ್ನಡ-2, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
೨೧. ಚಿದಾನಂದಮೂರ್ತಿ.ಎಂ, *ಭಾಷಾವಿಜ್ಞಾನದ ಮೂಲತತ್ವಗಳು*, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೯೮
೨೨. ಛಾಯಾಪತಿ ಟಿ.ಎಸ್, *ಆಡಳಿತ ಭಾಷೆ ಕನ್ನಡ*, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೬
೨೩. ಜಯತೀರ್ಥ ರಾಜಪುರೋಹಿತ, *ಕನ್ನಡ ತೀರ್ಪುಗಳು*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೭
೨೪. ಜಯತೀರ್ಥ ರಾಜಪುರೋಹಿತ, (ಸಂ) *ಆಡಳಿತ ಭಾಷೆ ಸಮಸ್ಯೆಗಳ ವಿಶ್ಲೇಷಣೆ*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೭೮
೨೫. ಜವರೇಗೌಡ.ದೇ, *ಕನ್ನಡ ಚಿಂತನೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭
೨೬. ಜಾಣಗೆರೆ ವೆಂಕಟರಾಮಯ್ಯ, *ಕನ್ನಡ ಚಳವಳಿ ಇತಿಹಾಸ*, ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧
೨೭. ನಾಗರಾಜ.ಡಿ.ಆರ್, *ಸಂಸ್ಕೃತಿ ಕಥನ*, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨
೨೮. ನಾಗರಾಜರಾವ್.ಎಂ.ಜಿ, *ಡಾ: ರಂ.ಶ್ರೀ.ಮುಗಳಿಯವರು ಕಂಡಂತೆ ಕನ್ನಡನಾಡು-ನುಡಿ-ಸಂಸ್ಕೃತಿ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬
೨೯. ನಾರಾಯಣ.ಕೆ.ವಿ, *ಭಾಷೆಯ ಸುತ್ತಮುತ್ತ*, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು,೧೯೯೮
೩೦. ನಾರಾಯಣ.ಕೆ.ವಿ, *ನಮ್ಮೊಡನೆ ನಮ್ಮನುಡಿ*, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫
೩೧. ನಾರಾಯಣ.ಕೆ.ವಿ, *ಕನ್ನಡ ಜಗತ್ತು: ಅರ್ಧ ಶತಮಾನ*, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೭
೩೨. ನಾರಾಯಣ.ಕೆ.ವಿ, *ಭಾಷೆ: ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ-1*, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯
೩೩. ನಾರಾಯಣ.ಕೆ.ವಿ, *ಕನ್ನಡ ಆಡುನುಡಿಯ ಸೊಲ್ಲರಿಮೆ: 1*, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು,೨೦೧೧
೩೪. ನಾರಾಯಣಘಟ್ಟ.ಎ.ಆರ್, *ಶಿಕ್ಷಣ ಮಾಧ್ಯಮ: ಸಮಗ್ರ ಚಿಂತನೆ*, ಗೀತಾಕುಟೀರ, ಬೆಂಗಳೂರು,೧೯೯೩

೩೫. ನಾಯಿಕ್.ಜೆ.ಪಿ, (ಅನು. ಮಹಾಬಲೇಶ್ವರ ರಾವ್) *ಶಿಕ್ಷಣ ಆಯೋಗ: ಪೂರ್ವೋತ್ತರ*, ಐಬಿಹೆಚ್ ಪ್ರಕಾಶನ, ಬೆಂಗಳೂರು, ೧೯೮೭
೩೬. ಪಾಟೀಲ ಪುಟ್ಟಪ್ಪ, *ನಾಡು-ನುಡಿ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭
೩೭. ಪಾರ್ಥಸಾರಥಿ.ಬಿ, *ಕನ್ನಡದಲ್ಲಿ ಆಡಳಿತ*, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬
೩೮. ಪೂರ್ಣಿಮ ಟಿ.ಸಿ, *ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡ ಅಭಿವೃದ್ಧಿ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩
೩೯. ಪ್ರಸನ್ನ.ಎ.ವಿ, *ಆಡಳಿತದಲ್ಲಿ ಕನ್ನಡ*, ಕನ್ನಡ ನುಡಿ-ಕನ್ನಡ ಗಡಿ ಜಾಗೃತಿ ಜಾಥಾ, ಬೆಂಗಳೂರು,೨೦೦೬
೪೦. ಬಡ್ಡಿ.ಎಂ.ಎಂ, *ಭಾರತದ ಸಂವಿಧಾನ*, ಅಳಕವಾಡಿ ಬುಕ್ ಡಿಪೊ, ಧಾರವಾಡ, ೧೯೮೬
೪೧. ಬರಗೂರು ರಾಮಚಂದ್ರಪ್ಪ, *ಕನ್ನಡ ಪ್ರಜ್ಞೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೭
೪೨. ಬಂಜಗೆರೆ ಜಯಪ್ರಕಾಶ್, *ಕರ್ನಾಟಕತ್ವ: ಸಮಾಜೋ ಆರ್ಥಿಕ ತಳಹದಿ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬
೪೩. ಮರುಳಯ್ಯ.ಸಾ.ಶಿ, *ಕನ್ನಡ ಭಾಷಾಲೋಕ ಮತ್ತು ಪೂರಕ ಸಾಹಿತ್ಯ*, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೭
೪೪. ಮಹದೇವ ಬಣಕಾರ, *ಆಂಗ್ಲರ ಆಡಳಿತದಲ್ಲಿ ಕನ್ನಡ*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೬
೪೫. ಮಹಾದೇವಯ್ಯ.ಪಿ, *ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯
೪೬. ಮಹಾದೇವಯ್ಯ.ಪಿ, *ಕನ್ನಡ ನುಡಿ: ಬಳಕೆಯ ನೆಲೆಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪
೪೭. ಮಂಜುನಾಥ ಬೇವಿನಕಟ್ಟಿ, (ಸಂ) *ಕನ್ನಡ ಸಾರ್ವಭೌಮತ್ವ ಕನಸಿನ ಆಯಾಮಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦
೪೮. ಮಾಸ್ತಿ ವೆಂಕಟೇಶ ಅಯ್ಯಂಗಾರ್, *ಕನ್ನಡದ ಸೇವೆ ತಾಯ್ನುಡಿಯ ತಮ್ಮಡಿ ಕನ್ನಡ ಲೆಂಕ*, ಜೀವನ ಕಾರ್ಯಾಲಯ, ಬೆಂಗಳೂರು, ೧೯೭೩
೪೯. ಮುರಿಗೆಪ್ಪ ಎ., (ಸಂ) *ಗಡಿ ಕನ್ನಡಿಗರ ಕಥೆ-ವ್ಯಥೆ*, ಕನ್ನಡ ನುಡಿ-ಕನ್ನಡ ಗಡಿ ಜಾಗೃತಿ ಜಾಥಾ, ಬೆಂಗಳೂರು, ೨೦೦೬
೫೦. ಮೋಹನ್‌ಕೃಷ್ಣ ರೈ ಕೆ, *ತುಳುನಾಡು ಕನ್ನಡನುಡಿ: ತುಳು ಕರ್ನಾಟಕದ ನಾಡು-ನುಡಿ ಚಿಂತನೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨
೫೧. ರಂಗನಾಥ ಕಂಟನಕುಂಟೆ, *ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ*, ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು, ೨೦೦೯
೫೨. ರಂಗನಾಥ ಕಂಟನಕುಂಟೆ, *ಜನರ ವ್ಯಾಕರಣ*, ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು,೨೦೧೧
೫೩. ರಂಗನಾಥ ಕಂಟನಕುಂಟೆ, *ಸೇನೆಯಿಲ್ಲದ ಕದನ: ಭಾಷೆ, ಸಮಾಜ ಮತ್ತು ಪ್ರಭುತ್ವಗಳ ನಂಟು ಕುರಿತ ಲೇಖನಗಳು*, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೧೪
೫೪. ರಹಮತ್ ತರೀಕೆರೆ, *ನುಡಿಸಂತರ ಸಾಹಿತ್ಯ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೧೨
೫೫. ರಾಜಕುಮಾರ ಕೆ, (ಸಂ) *ಮಹಿಷಿ ವರದಿ ಮತ್ತು ಸರ್ಕಾರಿ ಆಜ್ಞೆ*, ಸಿರಿಗನ್ನಡ ಪ್ರಕಾಶನ, ಬೆಂಗಳೂರು, ೧೯೯೬

೫೬. ರಾಜಕುಮಾರ ಕೆ, *ಕನ್ನಡಿಗರಿಗೆ ಉದ್ಯೋಗ*, ಕನ್ನಡ ನುಡಿ-ಕನ್ನಡ ಗಡಿ ಜಾಗೃತಿ ಜಾಥಾ, ಬೆಂಗಳೂರು, ೨೦೦೬

೫೭. ರಾಘವೇಂದ್ರ ರಾವ್, (ಸಂ) *ಕನ್ನಡ ಅಧ್ಯಯನ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೫೮. ರಾಧಾಕೃಷ್ಣ .ಕೆ, *ಭಾಷಾ ಸಮಸ್ಯೆಯ ಕುರಿತು*, ಸೋಶಿಯಲಿಸ್ಟ್ ಯುನಿಟ ಸೆಂಟರ್ ಆಫ್ ಇಂಡಿಯಾ, ಬೆಂಗಳೂರು, ೧೯೮೨

೫೯. ರೋಮಿಲಾ ಥಾಪರ್, (ಸಂ) (ಅನು.ಆರ್.ಡಿ. ಹೆಗಡೆ) *ಭಾರತದಲ್ಲಿ ಶಿಕ್ಷಣ: ಸವಾಲು ಸಾಧ್ಯತೆ*, ಚಿಂತನ ಪುಸ್ತಕ, ಬೆಂಗಳೂರು, ೨೦೦೮

೬೦. ಸಾಂಬಮೂರ್ತಿ, (ಸಂ) *ಭಾಷಾ ತಂತ್ರಜ್ಞಾನ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೯

೬೧. ಸಾರಾ ಅಬೂಬಕ್ಕರ್, *ಸಾಹಿತ್ಯಕ್ಕೊಂದು ದಾರಿದೀಪ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,೨೦೧೨

೬೨. ಸುದರ್ಶನ.ಸ.ರ, (ಸಂ), *ಶಿಕ್ಷಣ ಮಾಧ್ಯಮ: ಕನ್ನಡಪರ ಆಂದೋಲನ ಮತ್ತು ವರದಿಗಳು*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೬೩. ಸುದರ್ಶನ.ಸ.ರ, *ಶಿಕ್ಷಣದಲ್ಲಿ ಕನ್ನಡ*, ಕನ್ನಡ ನುಡಿ-ಕನ್ನಡ ಗಡಿ ಜಾಗೃತಿ ಜಾಥಾ, ಬೆಂಗಳೂರು, ೨೦೦೬

೬೪. ಸೋಮಶೇಖರಗೌಡ, ಭಾಷೆ ರಚನೆ ಬಳಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೦

೬೫. ಶಂಕರ ಭಟ್.ಡಿ.ಎನ್, *ಭಾಷೆಯ ಬಗೆಗೆ ನೀವೇನು ಬಲ್ಲಿರಿ?*, ಭಾಷಾ ಪ್ರಕಾಶನ, ಮೈಸೂರು,೨೦೦೨

೬೬. ಶೇಷಗಿರಿ ರಾವ್.ಎಲ್.ಎಸ್, (ಸಂ), *ಕನ್ನಡದ ಅಳಿವು-ಉಳಿವು*, ಕನ್ನಡ ಭಾಷಾ ಅಭಿವೃದ್ಧಿಯ ಸಮೀಕ್ಷಾ ಪ್ರಕಾಶನ, ಬೆಂಗಳೂರು, ೧೯೯೪

೬೭. ಶ್ರೀವತ್ಸ ಎಸ್. ವಟಿ, *ಹಲ್ಮಿಡಿ ಶಾಸನ: ಒಂದು ಪರಿಚಯ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧

೬೮. ಹೇಮಲತಾ ಮಹಿಷಿ, *ಪ್ರತಿಕ್ರಿಯೆ*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭

೬೯. ಹಂಪ ನಾಗರಾಜಯ್ಯ, *ಮೂಲ ಚೂಲ*, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು,೨೦೦೬

೭೦. ಹೊಸಮನಿ.ಎಸ್.ಬಿ, *ಆಡಳಿತದಲ್ಲಿ ಕನ್ನಡ*, ಎಸ್.ಬಿ.ಹೆಚ್. ಪ್ರಕಾಶನ, ಶಿವಮೊಗ್ಗ, ೧೯೯೭

**ಪೂರಕ ಆಕರಗಳು (ಇಂಗ್ಲಿಶ್)**

1. Annamalai.E (ed) *Language Planning, Central Institute of Indian Languages*, Manasagangotri, Mysore, 1986
2. Bhatnagar, Y.C, *Foreign language teaching in India*, Ajanta Publications, Delhi,1988
3. Cohn, Bernard S, *Colonialism and its forms of knowledge*, Oxford university press, London, 1996
4. Coulmas, Florian (ed) *A language policy for the european community*, Mouton de Gruyter, New York, 1991

5. Cooper, L. Robert, *Language planning and social change*, Cambridge university press, Cambridge, 1989
6. Govindaraju, C.R *Movement for united Karnataka: Cultural Dimensions*, Prasaranga, Kannada University, Hampi, 2009
7. Gupts, RS (ed) *Language and the state*, Creative books, New Delhi, 1995
8. Fairclough, Norman, *Language and power*, Longman, London, 1989
9. Fishman, Joshua A (ed) *Contributions to the Sociology of Language*, Mouton publishers, The Hague, Netherlands, 1977
10. Kamal K., Sridhar, *English in Indian bilingualism*, Manohar publications, New Delhi, 1989
11. Krishnamurti, BH, *Language, education and society*, Sage publications, New Delhi, 1998
12. Lee, Victor (ed) *Language Development*, Croom Helm Ltd., London, 1979
13. Pattanayak, Debi Prasanna (ed) *Multilingualism in India*, Orient Longman, New Delhi, 2007
14. Schiffman, F. Harold, *Linguistic culture and language policy*, Routledge, London, 1998
15. Spolsky, Bernard, *Language and education in multilingual settings*, Multilingual matters ltd., England, 1986
16. Spring, Joel, *American Education: An introduction to social and political aspects*, Longman, New York and London, 1991
17. Thambanda,. Vijay Poonacha *Conflicting identities in Karnataka*, Kannada University, Hampi, 2004
18. Volosinov.V.N, (tr. By Ladislav Matejka and Titunik,I.R) *Marxism and the philosophy of language*, Harvard university press, London, 1998

ಲೇಖನಗಳು (ಕನ್ನಡ)

೧. ಶ್ರೀದೇವಿ ಕಳಸದ, "ಪ್ರಾಥಮಿಕ ಶಿಕ್ಷಣದ ಗೊಂದಲ: ಯಾವ ಮಾಧ್ಯಮ ಉತ್ತಮ?, ವಿಕೆ ಎಜುಕೇಷನ್ (ವಿಜಯ ಕರ್ನಾಟಕ), ಜೂನ್ ೪, ೨೦೧೨
೨. ವಿಕ್ರಂ ಹತ್ವಾರ್, "ಒಳ ಅರಿವಿನ ಹರಿವಿನ 'ಕನ್ನಡ'" ಮುಕ್ತಛಂದ (ಪ್ರಜಾವಾಣಿ), ನವೆಂಬರ್ ೯, ೨೦೧೫

ಲೇಖನಗಳು (ಇಂಗ್ಲಿಶ್)

1. Antony, Shinie, "Language matters: No country for mother tongue?", Sunday Herald, Deccan Herald, June 17, 2012

**ಅಧ್ಯಯನ ಪತ್ರಿಕೆಗಳು**


೧. ನುಡಿನಾಡಿ-೩, ತ್ರೈಮಾಸಿಕ, ಕನ್ನಡ ಭಾಷಾಧ್ಯಯನ ವೇದಿಕೆ, ಮಾರ್ಚ್ ೨೦೧೧

೨. ನುಡಿನಾಡಿ ೪-೫, ತ್ರೈಮಾಸಿಕ, ಕನ್ನಡ ಭಾಷಾಧ್ಯಯನ ವೇದಿಕೆ, ಜುಲೈ, ಅಕ್ಟೋಬರ್ ೨೦೧೧

೩. ನಮ್ಮ ಕನ್ನಡ, ಕನ್ನಡ ಭಾಷಾಧ್ಯಯನ ವಿಭಾಗ, ಹಂಪಿ, ಸಂಚಿಕೆ ೬೦, ೨೦೦೫

೪. ಜನದನಿ, ಮಾಸಪತ್ರಿಕೆ, ಜನಶಕ್ತಿಯ ಅನುಭವ ಮಂಟಪ, ಬೆಂಗಳೂರು, ಆಗಸ್ಟ್ ೨೦೧೧

೫. ಮಾತೃಭಾಷಾ ಮಾಧ್ಯಮ, ಸುಪ್ರೀಂ ಕೋರ್ಟ್ ತೀರ್ಪು-ಕನ್ನಡ ಉಳಿವು, ಜನವರಿ ೨೦೧೫

೬. ಕನ್ನಡ ಅಧ್ಯಯನ, ಅರ್ಧವಾರ್ಷಿಕ, ಬೆಂಗಳೂರು ವಿಶ್ವವಿದ್ಯಾಲಯ ಕಾಲೇಜು ಕನ್ನಡ ಅಧ್ಯಾಪಕರ ಒಕ್ಕೂಟ, ನವೆಂಬರ್ ೨೦೧೩-ಜೂನ್ ೨೦೧೪ (ಸಂಯುಕ್ತ ಸಂಚಿಕೆ)

೭. ಇಂಗ್ಲಿಷ್ ಕಲಿಕೆ: ಪರ-ವಿರೋಧದಾಚೆಗಿನ ಪ್ರಶ್ನೆಗಳು, ಕರ್ನಾಟಕ ವಿಮೋಚನಾ ರಂಗ

ಅನುಬಂಧ–೧

## THE FIRST PHASE: BEFORE 1956

A perusal of the documents from 20 regions that comprise the present day Karnataka indicates the existence of three different kinds of schools: Vernacular schools, English schools, and Anglo-Vernacular schools. The vernacular schools taught the regional language and other subjects in the same language. Similarly the English schools taught English and other subjects in English. Both these types of schools existed in almost all the regions. Although several common elements in the curriculum adopted in the different regions could be identified, there were differences in the curriculum from one region to another. Only languages having their own script had found a place in formal education at the time of unification. The aim of this education system was to spread "...European knowledge throughout all class of people and this was to be imparted to the upper classes through the medium of English and to the masses through their own spoken languages."[3] Even at that time the social status was the deciding factor in the choice of type of education.

## THE SECOND PHASE: 1956 to 1982

Karnataka adopted a uniform curriculum and syllabus for all its regions/districts in the state from 1959-60, and by the end of 1962-63 all the schools had totally switched over to the new uniform curriculum. Karnataka established the following pattern of language choice for education in schools since the linguistic reorganization of states in 1956.

1. I to IV Standards: The students would study only one language, that is, the mother tongue. Maximum 100 marks with a minimum of 40 percent for pass.
2. V to VII Standards: One more language out of the following ten languages -- Kannada, Urdu, English, Marathi, Hindi, Telugu, Tamil, Malayalam, Gujarati, or Sindhi. Maximum 100 marks with a 40 minimum of 40 percent for pass, and this minimum was reduced to 35 percent for students from the VII Standard. The students from the III Standard to VII Standard could also study Hindi, or composite Kannada, but this was not obligatory. A composite course may be defined roughly as the higher standard of its counterpart at the ordinary level. A composite course carried, generally speaking, more marks than the ordinary level and the students may have more than one paper for the final examination in the subject concerned.
3. VIII, IX, and X Standards:
4. 
    i. **First language**: Any one of the following languages Kannada, Telugu, Tamil, Hindi, Urdu, Marathi, English or Sanskrit, or a composite course of one of the following languages consisting of three periods per week: Hindi, Urdu, Tamil, Telugu and Marathi and two periods of one of the following languages: Sanskrit,

Arabic, Persian, or Hindi. The First language consisted of Papers I and II carrying 100 marks and 50 marks each respectively, together with the total of 150 marks.

ii. **Second language**: Those who had taken English as the first language would study Kannada, Hindi, Urdu, Tamil, Telugu or Marathi as the Second language. Those who had not taken English language as the First language would study it as the Second language. It consisted of two papers with 50 marks each.

iii. **Third language**: Those who learned Kannada as the First language would study Sanskrit or Hindi as the Third language. Those who learned Kannada as the Second language would study Hindi as the Third language. Those who studied Kannada either as the First or Second language would study Kannada as the Third language. The Third language consisted of only one paper carrying 50 marks. This was compulsorily taught, but it would not count for a pass. It was left to the students either to appear or not to appear for the examination in that paper.

This pattern of language choice was practiced for nearly two decades in Karnataka. The late sixties and the early seventies witnessed strong opposition to Hindi since it was perceived as a threat to the existence, use, and development of Kannada. This had forced the Kannada mother tongue speakers to lean towards English. However, many among them also felt that Kannada faced a threat to its continuation as the dominant school language from Sanskrit. It was found that the students from the Kannada majority or other minority mother tongue groups also opted for Sanskrit as a subject of study in the schools. Students availing Sanskrit as first language scored more marks in the final examinations than their Kannada counterparts. It was perceived by many that the easy instructional materials used in the Sanskrit classes, and a liberal evaluation system that helped students to obtain higher marks in the final examinations contributed to its popularity among the parents as well as the students. Choice of Sanskrit as a language of preference was normally perceived to be associated with the students coming from the Brahmin communities, but there were also others who began to adopt this language for the purposes of scoring higher marks in the final examinations conducted by the State Board.

It was possible to pass the SSLC State Board examination without passing the Kannada course in the scheme outlined above. It was but inevitable, then, that this scheme created and widened the incompatibility between the policy of language choice for administration and the languages chosen for the purposes of education.

The State government employees lacked adequate knowledge of Kannada to use it as an effective medium of administration. This was found to be an impediment in using Kannada in the administration of the state at all levels. At the political level, there was a growing desire to use Kannada in as many departments of the government as possible. This pressured the State Government to create avenues to enable its employees to acquire a working

knowledge of the State Official language through other formal or non-formal means.

Linguistic movements initiated by various political parties, groups of Kannada teachers, students, college and university professors, literary critics, playwrights, and creative writers created an awakening among the Kannada speaking majority to seek a place of pride or pre-eminent place for Kannada in the affairs of the State. Their dream was to restore the primacy and the lost glory of their language as the only medium of governance in the linguistically re-organized Kannada state. This awakening in favor of using Kannada as the language of administration was a consequence of many factors including linguistic movements, political agitations, and the general political awakening among the backward classes. This description of the linguistic situation in Karnataka can be easily applied to many other linguistically re-organized Indian states also.

Spread of literacy mainly in Kannada, and the spread of general education among the people, had led to a new awakening. The large-scale migration of people, mainly from adjacent Tamil Nadu, for jobs that opened up through fast industrialization of the state was perceived to be curtailing the job opportunities for the Kannada majority. All these needed an avenue for the expression of their anger and disgust among the people4. The language choice in education provided an avenue to meet the challenge thrown up by industrialization and consequent migration of people from other linguistic groups. The government decided to delete Sanskrit from the first language list in 1979 and included it in the second/third language list. But the government that took this decision did not remain in power to implement its decision5. The subsequent government reconsidered the stand of the previous government, and decided to maintain the status quo6. Pro-Kannada groups protested against this decision.

**THE THIRD PHASE: 1982 - 1988**

This agitation against retaining Sanskrit in the first language list made the government to think afresh about the language choice in school education. For this purpose the Government of Karnataka constituted a committee (July 5, 1980) with Prof. V.K. Gokak as the Chairman, and placed the following questions before it.

1. Should Sanskrit remain as the subject for study in the school syllabus?
2. If so, how to retain it without it being offered an alternative to Kannada?
3. Would it be proper to have Kannada as a compulsory subject as per the Three Language Formula, and should the option of selecting the remaining two languages be left to students themselves?

The Committee recommended (January 27, 1981) that:

1. Kannada should be introduced as a compulsory subject for all children from 3rd Standard.

